# ಕನ್ನಡದಲ್ಲಿ ಅರ್ಥಶಾಸ್ತ್ರ ಅಧ್ಯಯನದ ಪಠ್ಯ ಸಾಮಗ್ರಿಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಫಕೀರಪ್ಪ ವಜ್ರಬಂಡಿ

ಮಾರ್ಗದರ್ಶಕರು
ಡಾ. ವಿಠಲರಾವ್ ಟಿ. ಗಾಯಕ್ವಾಡ್
ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೫

# ಕನ್ನಡದಲ್ಲಿ ಅರ್ಥಶಾಸ್ತ್ರ ಅಧ್ಯಯನದ ಪಠ್ಯ ಸಾಮಗ್ರಿಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು

**ಫಕೀರಪ್ಪ ವಜ್ರಬಂಡಿ**

ಮಾರ್ಗದರ್ಶಕರು

**ಡಾ.ವಿಠಲರಾವ್ ಟಿ.ಗಾಯಕ್ವಾಡ್**

ಪ್ರಾಧ್ಯಾಪಕರು




ಭಾಷಾಂತರ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೫

# ಪ್ರಮಾಣ ಪತ್ರ

**ಡಾ.ವಿಠಲರಾವ್ ಟಿ.ಗಾಯಕ್ವಾಡ್** ಅವರ ಮಾರ್ಗದರ್ಶನದಲ್ಲಿ **ಕನ್ನಡದಲ್ಲಿ ಅರ್ಥಶಾಸ್ತ್ರ ಅಧ್ಯಯನದ ಪಠ್ಯ ಸಾಮಗ್ರಿಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ **ಭಾಷಾಂತರ ಅಧ್ಯಯನ** ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಮತ್ತು ಇತರೆ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**ಫಕೀರಪ್ಪ ವಜ್ರಬಂಡಿ**
ಸಂಶೋಧಕರು
**ಭಾಷಾಂತರ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೧-೧೧-೨೦೧೫

# ಮಾರ್ಗದರ್ಶಕರ ದೃಢೀಕರಣ ಪತ್ರ

**ಫಕೀರಪ್ಪ ವಜ್ರಬಂಡಿ** ಅವರು ನನ್ನ ಮಾರ್ಗದರ್ಶನದಲ್ಲಿ **ಕನ್ನಡದಲ್ಲಿ ಅರ್ಥಶಾಸ್ತ್ರ ಅಧ್ಯಯನದ ಪಠ್ಯ ಸಾಮಗ್ರಿಗಳು** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಭಾಷಾಂತರ ಅಧ್ಯಯನ ವಿಭಾಗಕ್ಕೆ** ಪಿಎಚ್.ಡಿ.ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ವಿಠಲರಾವ್ ಟಿ.ಗಾಯಕ್ವಾಡ್**
ಮಾರ್ಗದರ್ಶಕರು
**ಭಾಷಾಂತರ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೧-೧೧-೨೦೧೫.

# ಪರಿವಿಡಿ

# ಅಧ್ಯಾಯ ಒಂದು

## ಪ್ರವೇಶ

೧.೧. ಪೀಠಿಕೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಪ್ರಾಮುಖ್ಯತೆ

೧.೪. ಅಧ್ಯಯನದ ವಿಧಾನ

೧.೫. ಅಧ್ಯಾಯಗಳ ವಿನ್ಯಾಸ

## ಅಧ್ಯಾಯ ಒಂದು

# ಪ್ರವೇಶ

ಪ್ರಾಚೀನ ಮತ್ತು ಅರ್ವಾಚೀನ ಕಾಲಾದಲ್ಲಿ 'ಅರ್ಥಶಾಸ್ತ್ರ'ದ ಬಳಕೆ ಗಂಭೀರವಾಗಿ ಇರುವುದನ್ನು ಸಂಶೋಧಕರು ಗುರುತಿಸಿದ್ದಾರೆ. ವಿವಿಧ ಶಾಸನಗಳಲ್ಲಿ, ಗ್ರಂಥಗಳಲ್ಲಿ, ತಾಳೆ ಓಲೆಗಳಲ್ಲಿ ಅವುಗಳ ಕುರುಹುಗಳು ದೊರಕಿರುವುದನ್ನು ಉಲ್ಲೇಖಿಸಿರುವುದು ತಿಳಿದು ಬರುತ್ತದೆ. ವಸಾಹತು ಕಾಲಘಟ್ಟಗಳಲ್ಲಿ ಪಾಶ್ಚಾತ್ಯ ಆರ್ಥಿಕ ಚಿಂತನೆಗಳಿಂದಾಗಿ ಭಾರತೀಯ ಆರ್ಥಿಕ ಚಿಂತನೆಗಳು ವಿಸ್ಮೃತಿಗೆ ಒಳಗಾಗಿರುವಂತೆ ಕಂಡುಬರುತ್ತದೆ. ಕಾಲಕ್ರಮೇಣ ಪಾಶ್ಚಾತ್ಯರು ತಮ್ಮ ವಿಚಾರಧಾರೆಗಳನ್ನು ಭಾರತೀಯರಲ್ಲಿ ಬೇರೂರಿರುವಂತೆ ಮಾಡಿದ್ದಾರೆ. ತಮ್ಮ ತಮ್ಮ ಆಲೋಚನಾ ಕ್ರಮಗಳನ್ನು ಪಠ್ಯಗಳ ರೂಪದಲ್ಲಿ ಪ್ರಕಟಿಸಿ ಪಸರಿಸಿದರು. ಪಠ್ಯಗಳು ಅವರ ಮೂಲಭಾಷೆಗಳಲ್ಲಿದ್ದಂತೆ ಕಂಡುಬಂದರೂ, ಬಹುತೇಕ 'ಇಂಗ್ಲಿಷ್' ಭಾಷೆಯಲ್ಲಿದ್ದವು. ಭಾರತೀಯ ಇಂಗ್ಲಿಷ್ ಭಾಷೆಯ ಮೂಲಕ ಶಿಕ್ಷಣ ಪಡೆಯುವ ಅನಿವಾರ್ಯತೆಯನ್ನುಂಟು ಮಾಡಿದರು. ವಸಾಹತು ಸಂದರ್ಭದ ಆಡಳಿತಗಾರರು ಇಂಗ್ಲಿಷ ಕಲಿಯುವಂತೆ ಮಾಡಿದರು. ಶಿಕ್ಷಣ ಕ್ಷೇತ್ರದಲ್ಲಿ ಅಂದಿನಿಂದ ಇಂದಿನವರೆಗೂ 'ಇಂಗ್ಲಿಷ್' ಭಾಷೆ ತನ್ನ ಛಾಪನ್ನು ಅಚ್ಚೊತ್ತಿದೆ. ಕನ್ನಡದಲ್ಲಿ ಲಭ್ಯವಿರುವ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳನ್ನು ಭಾಷಾಂತರದ ನೆಲೆಯಲ್ಲಿಯೇ ಅಧ್ಯಯನ ಕೈಗೊಳ್ಳಲಾಗಿದೆ. ಅರ್ಥಶಾಸ್ತ್ರ ಪಠ್ಯಸಾಮಗ್ರಿ ಯಾವುದೇ ಭಾಷೆಯಿಂದ ಕನ್ನಡಕ್ಕೆ ಬಂದಿರಬಹುದು. ಅಂದರೆ ಇಂಗ್ಲಿಷ್ ಅಥವಾ ಇತರ ಭಾಷೆಯಿಂದ ಕನ್ನಡಕ್ಕೆ ನೇರವಾಗಿ ಭಾಷಾಂತರಗೊಂಡಿರಬಹುದು ಇಲ್ಲವೆ ಇಂಗ್ಲಿಷ್ ಮತ್ತು ಇತರ ಭಾಷೆಗಳಲ್ಲಿ ರೂಪುಗೊಂಡಿರುವ ಪಠ್ಯಗಳನ್ನು ಓದಿನ ಗ್ರಹಿಕೆಯಿಂದ ರಚಿತವಾಗಿರಲೂಬಹುದು ಕನ್ನಡದಲ್ಲಿನ ಮರುಬರವಣಿಗೆ ಯಾಗಿರಲೂಬಹುದು. ಈಗಾಗಲೇ ರಚಿತವಾಗಿರುವ ಪಠ್ಯಗಳನ್ನಾಧರಿಸಿ ರೂಪಾಂತರವಾಗಿ ಯಾದರೂ ಪಠ್ಯಸಾಮಗ್ರಿಗಳು ಸಿದ್ಧಗೊಂಡಿರಬಹುದು. ಒಟ್ಟಾರೆಯಾಗಿ 'ಭಾಷಾಂತರ' ಎಂದು ಗ್ರಹಿಸಿ ಅಧ್ಯಯನ ಕೈಗೊಳ್ಳಲಾಗಿದೆ. ವಿಭಿನ್ನ ಪ್ರಾದೇಶಿಕ ಹಿನ್ನೆಲೆಯುಳ್ಳ ಬರಹಗಾರರು ಅರ್ಥಶಾಸ್ತ್ರವನ್ನು ಕನ್ನಡೀಕರಿಸುವಾಗ ತಮ್ಮದೆ ಆದ ತಂತ್ರಗಾರಿಕೆ ಬಳಸಿರುವುದು ಕಂಡುಬರುತ್ತದೆ. ಭಾಷೆಯನ್ನು ಟಂಕಿಸಿ ವಿದ್ಯಾರ್ಥಿಗಳ ಗ್ರಹಿಕೆಗೆ ನಿಲುಕುವಂತೆ ಮಾಡುವಲ್ಲಿ ಶ್ರಮಿಸಿರುವುದು ಕಂಡುಬರುತ್ತದೆ. ಅರ್ಥಶಾಸ್ತ್ರವನ್ನು

ಕನ್ನಡೀಕರಿಸುವಾಗ ಅನೇಕ ಇಂಗ್ಲಿಷ್ ಪದಗಳಿಗೆ ಸಂವಾದಿಯಾಗುವ ಕನ್ನಡದ ಪದಗಳನ್ನೊಳಗೊಂಡ ಪದಕೋಶ ಗಳಿಲ್ಲದಿರುವುದು ಒಂದು ದೊಡ್ಡ ಸಮಸ್ಯೆಯೆ ಸರಿ. ಆದರೂ ಬರಹಗಾರರು ತಮ್ಮ ತಮ್ಮ ಅನುಭವಗಳ ಮೂಸೆಯಲ್ಲಿ ಅದ್ದಿ-ತಿದ್ದಿ ರೂಪಿಸಲು ಪ್ರಯತ್ನಿಸಿದ್ದಾರೆ. ಕನ್ನಡ ಪಠ್ಯ ಸಾಮಗ್ರಿಗಳ ರಚನಾಕಾರರಿಗೆ ವಿಶ್ವವಿದ್ಯಾಲಯಗಳಂಥ ಉನ್ನತ ಸಂಸ್ಥೆಗಳು ಮಾರ್ಗದರ್ಶಿಯಾಗಬೇಕಿತ್ತು. ಸಾಮಾನ್ಯ ಪದ ಪ್ರಯೋಗಕ್ಕೆ, ವಿಷಯ ನಿರೂಪಣೆ ಮತ್ತು ವಿಷಯ ವಿಶ್ಲೇಷಣೆಗಳಂಥ ವಿಚಾರ ಗಳಿಗಾಗಿ ತರಬೇತಿಗಳನ್ನು ಆಯೋಜಿಸುವ ಅಗತ್ಯವಿದೆ. ಈ ಯಾವ ಉಪಯುಕ್ತ ಮಾಹಿತಿ/ಮಾರ್ಗದರ್ಶನ ಇರದಿದ್ದರೂ ತಮ್ಮ ತಮ್ಮ ಸ್ವಆಸಕ್ತಿಯಿಂದ ಭಾಷಾ ಂತರ ಪ್ರಕ್ರಿಯೆಯಲ್ಲಿ ತೊಡಗಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ಅರ್ಥಶಾಸ್ತ್ರ ಪಠ್ಯಗಳನ್ನು ಅನುವಾದಿಸು ವವರಲ್ಲಿ ಯಾರೂ ವೃತ್ತಿಪರ ಅನುವಾದಕರಲ್ಲ. ಅವರೆಲ್ಲ ಪ್ರವೃತ್ತಿಯ ಬರಹಗಾರರಾಗಿದ್ದಾರೆ. ಹಾಗೆಂದು ಭಾವಿಸಿದರೂ ಇವರ ಪಠ್ಯಗಳನ್ನು ಭಾಷಾಂತರದ ಹಿನ್ನೆಲೆಯಿಂದ ಗುರುತಿಸಿ ಅಧ್ಯಯನ ಕೈಗೊಳ್ಳಲಾಗಿದೆ.

## ೧.೧ ಪೀಠಿಕೆ

'ಆರ್ಥಿಕ ಚಿಂತನೆಯ ಇತಿಹಾಸ ಎಂದಿನಿಂದ ಆರಂಭವಾಯಿತು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ದಾಖಲೆಗಳ ಅಭಾವ, ಮಾಹಿತಿಗಳ ಅಲಭ್ಯತೆ ಇದಕ್ಕೆ ಪ್ರಮುಖ ಕಾರಣ. ಆದರೆ ಪುರಾತನ ಹೀಬ್ರೂ, ಗ್ರೀಕ್ ಮತ್ತು ಭಾರತೀಯ ತತ್ವಜ್ಞಾನಿಗಳಿಂದ ಆರ್ಥಿಕ ಚಿಂತನೆ ಆರಂಭವಾಗಿದೆ' ಎಂಬುದಾಗಿ ಪ್ರಭಾಕರ ಬಿ. ಶಿಶಿಲ ಇವರು ತಮ್ಮ ಪಾಶ್ಚಾತ್ಯ ಆರ್ಥಿಕ ಚಿಂತನೆ ಮತ್ತು ಭಾರತೀಯ ಆರ್ಥಿಕ ಚಿಂತನೆ ೨೦೦೩:೪ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಅರ್ಥಶಾಸ್ತ್ರವು ಮಾನವನಷ್ಟೇ ಪುರಾತನವಾಗಿದೆ. ಆದರೂ ಬಹುಕಾಲದವರೆಗೆ ಅದಕ್ಕೆ ತನ್ನದೇ ಆದ ಒಂದು ಸ್ವತಂತ್ರವಾದ ಅಸ್ತಿತ್ವವಿರಲಿಲ್ಲ. ಯುರೋಪ ಖಂಡದ ಕೈಗಾರಿಕೆ ಕ್ರಾಂತಿಯ ಪೂರ್ವದಲ್ಲಿ ಅರ್ಥಶಾಸ್ತ್ರವು ಇತರ ಸಾಮಾಜಿಕ ಶಾಸ್ತ್ರಗಳಾದ ರಾಜ್ಯಶಾಸ್ತ್ರ, ನೀತಿಶಾಸ್ತ್ರ ಮತ್ತು ತತ್ವಶಾಸ್ತ್ರಗಳೊಂದಿಗೆ ವಿಲೀನವಾಗಿತ್ತು ಎಂಬುದಾಗಿ ಬಸವಾ ಕೆ.ಡಿ. ಇವರು ಅರ್ಥಶಾಸ್ತ್ರ ಪರಿಚಯ ೨೦೦೦:೧ರಲ್ಲಿ ಹೇಳಿದ್ದಾರೆ. ಪುರಾತನ ಕಾಲದಿಂದಲೂ ಪ್ರಪಂಚದಾದ್ಯಂತ ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳನ್ನು ಒಟ್ಟೊಟ್ಟಿಗೆ ಅಧ್ಯಯನ ಮಾಡುವ ಪರಿಪಾಠ ರೂಢಿಯಲ್ಲಿತ್ತು. ಅದನ್ನು "ರಾಜಕೀಯ ಅರ್ಥಶಾಸ್ತ್ರ" (Political Economics) ಎಂದು ಕರೆಯಲಾಗುತ್ತಿತ್ತು ಎಂಬುದಾಗಿ ಕೆಂಪಯ್ಯ ಜಿ.ಎಸ್. ಇವರು ಮೂಲ ಆರ್ಥಿಕ ಸಿದ್ಧಾಂತ, ೨೦೧೦:೧ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಭಾರತದಲ್ಲಿ ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿದ್ದ ಕೌಟಿಲ್ಯ ಅಥವಾ ಚಾಣಕ್ಯನು 'ಅರ್ಥಶಾಸ್ತ್ರ' (Arthashastra) ಎಂಬ ಗ್ರಂಥವನ್ನು ಕ್ರಿ.ಪೂ.೪ನೇ ಶತಮಾನದಲ್ಲಿ ರಚಿಸಿದ್ದಾನೆ. ಅದು 'ಕೌಟಿಲ್ಯನ ಅರ್ಥಶಾಸ್ತ್ರ' ಎಂದೇ ಪ್ರಸಿದ್ಧಿಯಾಗಿದೆ. ಅದರಲ್ಲಿ ರಾಜನೀತಿ ಮತ್ತು ಅರ್ಥಶಾಸ್ತ್ರ ಸಮನ್ವಯಗೊಂಡಿದೆ ಎಂಬುದಾಗಿ ಗಂಗಾಧರ ಪಿ.ಎಸ್. ಇವರು ರಾಜ್ಯಶಾಸ್ತ್ರ ೨೦೦೯:೧೭ರಲ್ಲಿ ತಿಳಿಸಿದ್ದಾರೆ. ಇವನ ಗ್ರಂಥ ಮುಂದೆ ಅನೇಕರಿಗೆ ಸ್ಫೂರ್ತಿ ನೀಡಿದ್ದರಿಂದ ಅರ್ಥಶಾಸ್ತ್ರದ ಬಗ್ಗೆ ಪ್ರಥಮ ಗ್ರಂಥ(ಕ್ರಿ.ಪೂ. ೩೮೪-೩೩೨)ಭಾರತದಲ್ಲಿ

ರಚಿತವಾಯಿತೆಂದು ನಾವು ಹೆಮ್ಮೆಪಟ್ಟುಕೊಂಡರೆ ತಪ್ಪೇನಿಲ್ಲ ಎಂಬುದನ್ನು ಪ್ರಭಾಕರ ಬಿ. ಶಿಶಿಲ. ಇವರು ಆರಂಭಿಕ ಅರ್ಥಶಾಸ್ತ್ರ ೧೯೮೬:೧–೨ರಲ್ಲಿ ತಿಳಿಸಿದ್ದಾರೆ. ಗ್ರೀಕ ದೇಶದ ಹೆಸರಾಂತ ತತ್ವಜ್ಞಾನಿಯಾಗಿದ್ದ ಅರಿಸ್ಟಾಟಲ್‌ನು ಅರ್ಥಶಾಸ್ತ್ರವನ್ನು ತನ್ನ 'ಪಾಲಿಟಿಕ್ಸ್' (Politics) ಗ್ರಂಥದಲ್ಲಿ ವಿಶ್ಲೇಷಿಸಿದ್ದಾನೆ. ಅದೇ ದೇಶದ ಮತ್ತೊಬ್ಬ ತತ್ವಜ್ಞಾನಿ ಜೆನೋಫಾನ್ "ಅರ್ಥಶಾಸ್ತ್ರವು ಗೃಹ ನಿರ್ವಹಣೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಅಭ್ಯಾಸ ಮಾಡುವ ವಿಜ್ಞಾನ" (The Art of Household Management) ಎಂದು ಅಭಿಪ್ರಾಯ ಪಟ್ಟಿದ್ದಾನೆ ಇದನ್ನು ಗೂಡೂರ ಭೀಮಸೇನ 'ಅರ್ಥಶಾಸ್ತ್ರ ಮೂಲಾಂಶಗಳು' ೧೯೯೯:೨ರಲ್ಲಿ ದಾಖಲಿಸಿದ್ದಾರೆ. 'ಅರ್ಥಶಾಸ್ತ್ರ' (Economics) ಎಂಬ ಪದನಾಮವನ್ನು ಗ್ರೀಕ ಭಾಷೆಯ 'ಇಕೋಸ್' (Oikos) ಮತ್ತು 'ನೋಮೊಸ್' (Nomos)ಎಂಬ ಎರಡು ಪದಗಳಿಂದ ಪಡೆಯಲಾಗಿದೆ ಎಂಬುದನ್ನು ಕೃಷ್ಣಮೂರ್ತಿ ಎಚ್. ಆರ್. ಹೋಸಬೀಡು. ಇವರು 'ಮೂಲ ಆರ್ಥಿಕ ಸಿದ್ಧಾಂತ' ೨೦೦೯:೨ರಲ್ಲಿ ಹೇಳಿರುತ್ತಾರೆ.

ಅರ್ಥಶಾಸ್ತ್ರದ ಅಭ್ಯಾಸವು ಬಹಳ ಹಿಂದಿನ ಕಾಲದಿಂದಲೂ ಇತ್ತೆಂದು ತಿಳಿದು ಬಂದರೂ ಈಗಿನ ಯುಗದ ಅರ್ಥಶಾಸ್ತ್ರದ ನಿಜವಾದ ಅಭ್ಯಾಸವು ೧೭೭೬ರಲ್ಲಿ ಆರಂಭವಾಯಿತೆನ್ನಬಹುದು ಆ ವರ್ಷದಲ್ಲಿ ಆಡಂ ಸ್ಮಿತ್ ಎಂಬ ಅರ್ಥಶಾಸ್ತ್ರಜ್ಞನು 'ರಾಷ್ಟ್ರಗಳ ಸಂಪತ್ತು' (Wealth of Nations) ಎಂಬ ಪ್ರಥಮ ಗ್ರಂಥ ಪ್ರಕಟಿಸಿದನು. ಅಂದಿನಿಂದ ಇಲ್ಲಿಯವರೆಗೂ ಎಲ್ಲಾ ದೇಶಗಳಲ್ಲಿಯೂ ಅರ್ಥಶಾಸ್ತ್ರ ಅಭ್ಯಾಸವು ಬಲಿತುಕೊಂಡಿದೆ ಎಂದು ಎಸ್.ಎನ್.ಸಿ. ರಾವ್ ಮತ್ತು ಎಸ್.ಎನ್.ನಾಯಕ. ಇವರು ಅರ್ಥಶಾಸ್ತ್ರ ೧೯೮೬:೧ರಲ್ಲಿ ಹೇಳಿರುತ್ತಾರೆ. ಪ್ರಪ್ರಥಮ ಬಾರಿಗೆ ಅಲ್‌ಫ್ರೆಡ್ ಮಾರ್ಷಲ್ ೧೮೯೦ರಲ್ಲಿ 'ಅರ್ಥಶಾಸ್ತ್ರ' ಎಂಬ ಪದವನ್ನು ಸ್ವತಂತ್ರವಾಗಿ ಬಳಸಿದನು ಇದನ್ನು ಕೃಷ್ಣಮೂರ್ತಿ ಹೆಚ್.ಆರ್. 'ಮೂಲ ಆರ್ಥಿಕ ಸಿದ್ಧಾಂತ' ೨೦೦೯:೨ರಲ್ಲಿ ಪ್ರಸ್ತಾಪಿಸಿದ್ದಾರೆ. ಅದು ಸ್ವತಂತ್ರ ಶಾಖೆಯಾಗಿ ಸುಮಾರು ೨೦೦ ವರ್ಷಗಳಾಗಿವೆ. 'ನಮ್ಮ ನಾಡಿನಲ್ಲಿ ಅರ್ಥಶಾಸ್ತ್ರದ ಅಧ್ಯಯನ ಹಾಗೂ ಅಧ್ಯಾಪನಕ್ಕೆ ಸುಮಾರು ಎಪ್ಪತ್ತರ ದಶಕದವರೆಗೂ ಇಂಗ್ಲಿಷ್ ಭಾಷೆಯೇ ಏಕೈಕ ಸಾಧನವಾಗಿತ್ತು ಎಂದು ಬಿ. ಎಮ್. ಕುಮಾರಸ್ವಾಮಿ ಇವರು 'ಆರ್ಥಿಕ ಚಿಂತನೆ ಬೆಳವಣಿಗೆ' ೧೯೭೦:Xರಲ್ಲಿ ಹೇಳಿರುತ್ತಾರೆ. ಇದೆ ಸಂದರ್ಭದಲ್ಲಿ ಕೇಂದ್ರ ಸರಕಾರ 'ಪ್ರಾದೇಶಿಕ ಭಾಷೆ ಶಿಕ್ಷಣ ಮಾಧ್ಯಮವಾಗಬೇಕು' ಎಂಬ ಧೋರಣೆ ತಳೆಯಿತು. ರಾಜ್ಯ ಸರಕಾರಗಳ ಬೆಂಬಲದಿಂದ ಜಾರಿಗೆ ತಂದಿತು. ಆಗ ಮೈಸೂರು ರಾಜ್ಯದಲ್ಲಿ ಮೂರು ಸಾಮಾನ್ಯ ವಿಶ್ವವಿದ್ಯಾಲಯಗಳಿದ್ದವು. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವುಗಳು ತಮ್ಮ ತಮ್ಮ ವ್ಯಾಪ್ತಿಯ ಪದವಿ ಮತ್ತು ಸ್ನಾತಕೋತ್ತರ ತರಗತಿಗಳ ಜೋತೆಗೆ ಪಿಯುಸಿ ತರಗತಿಗಳಿಗೆ ಕನ್ನಡ ಮಾಧ್ಯಮದಲ್ಲಿ ಪಠ್ಯಪುಸ್ತಕಗಳನ್ನು ಪ್ರಕಟಿಸಿರುತ್ತವೆ. ಈಗ 'ಪ್ರಕಟವಾಗುತ್ತಿರುವ ಗ್ರಂಥಗಳು ಎಲ್ಲಂದದಲ್ಲಿ ಪರಿಪೂರ್ಣವಾಗಿರಲಿಕ್ಕಿಲ್ಲ. ಆದರೆ ಉಚ್ಚ ವ್ಯಾಸಂಗಕ್ಕಾಗಿ ಪಠ್ಯಪುಸ್ತಕಗಳನ್ನು ಪ್ರಥಮತ: ಕನ್ನಡದಲ್ಲಿ

ರಚಿಸಿ ಪ್ರಕಟಿಸುವ ಕಾರ್ಯಕ್ಕೆ ನಾವು ಕೈ ಇಕ್ಕಿದ್ದೇವೆಂಬ ಸಂತೋಷ ನಮ್ಮದಾಗಿದೆ' ಇದನ್ನು ಮಾಳವಾಡ ಸ. ಸ. (ಸಂ) ಇವರು ಅರ್ಥಶಾಸ್ತ್ರ ಪರಿಚಯ ೧೯೬೬:iರಲ್ಲಿ ಹೇಳಿರುತ್ತಾರೆ. ಇದನ್ನೆ ಕುಲಪತಿ ಅಪ್ಪಾಸಾಹೇಬ ಅಡಕೆ ಮುನ್ನುಡಿಯಲ್ಲಿ ಹೇಳಿದ್ದಾರೆ. ಪ್ರಾಯೋಗಿಕವಾಗಿ ಕೆಲವು ನಿರ್ದಿಷ್ಟ ಪಠ್ಯ ವಿಷಯಗಳಿಗೆ ಮಾತ್ರ ಸಂಬಂಧಿಸಿದಂತೆ ಕನ್ನಡ ಮಾಧ್ಯಮವು ಇಂಗ್ಲಿಷ್ ಮಾಧ್ಯಮದ ಜೋತೆಗೆ ಆರಂಭವಾಯಿತು ಎಂಬುದನ್ನು ಬಿ.ಎಮ್. ಕುಮಾರಸ್ವಾಮಿ ಇವರು 'ಆರ್ಥಿಕ ಚಿಂತನೆಯ ಬೆಳವಣಿಗೆ' ೧೯೭೦:iiರಲ್ಲಿ ಹೇಳಿರುತ್ತಾರೆ. ಆ ವೇಳೆಯಲ್ಲಿ ಅರ್ಥಶಾಸ್ತ್ರವನ್ನು ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುವುದು ಐಚ್ಛಿಕವಾಗಿತ್ತು. ಶಿಕ್ಷಣದ ಎಲ್ಲಾ ಶ್ರೇಣಿಗಳಲ್ಲಿಯೂ ಮಾತೃಭಾಷೆ ಮಾಧ್ಯಮವಾದಾಗ ಶಿಕ್ಷಣದ ಧ್ಯೇಯೋದ್ಧೇಶಗಳು ಸಫಲವಾಗಲು ಸಾಧ್ಯ. ಕಳೆದ ಎರಡು ದಶಕಗಳಲ್ಲಿ ಈ ದಿಸೆಯಲ್ಲಿ ಗುರುತರವಾದ ಪ್ರಯತ್ನಗಳು ನಡೆದು ಪದವಿಪೂರ್ವ, ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣದ ಹಂತದಲ್ಲಿ ಕನ್ನಡ ಮಾಧ್ಯಮ ಜನಪ್ರಿಯವಾಗುತ್ತಿರುವುದು ಹರ್ಷದಾಯಕ ಸಂಗತಿ ಇದು ವೀರಯ್ಯ ಕೆ. ಎಂ. ಇವರು 'ಅರ್ಥಶಾಸ್ತ್ರ ಸಿದ್ಧಾಂತ' ೧೯೯೮:iರಲ್ಲಿ ದಾಖಲಿಸಿದ್ದಾರೆ. ಶಿಕ್ಷಣದ ಮಾಧ್ಯಮ ಮತ್ತು ಅಧ್ಯಯನ ಸಾಮಗ್ರಿಗಳು ವಿದ್ಯಾರ್ಥಿಯ ಮಾನಸಿಕ ವಿಕಾಸ, ಭವಿಷತ್ ಬದುಕಿನ ಮುನ್ನೋಟಗಳು, ವೃತ್ತಿಪರಿಣಿತೆಯ ಪರಿಕಲ್ಪನೆ, ವ್ಯವಹಾರಿಕ ಬದುಕಿನ ಕುಶಲತೆ ಮುಂತಾದವುಗಳೆಲ್ಲ ಹರಳುಗೊಂಡು ಜೀವನಾದರ್ಶವನ್ನು ಕಟ್ಟಿಕೊಡುವ ಸಂದರ್ಭವದು ಎಂಬುದನ್ನು ಬೋರೆಗೌಡ ಜೆ.ಎಸ್. ಇವರು 'ಸೂಕ್ಷ್ಮ ಅರ್ಥಶಾಸ್ತ್ರ' ೨೦೦೯:೫ರಲ್ಲಿ ಹೇಳಿದ್ದಾರೆ ಎಂಬುದನ್ನು ಮರೆಯುವ ಹಾಗಿಲ್ಲ.

ಇಂದು ಅರ್ಥಶಾಸ್ತ್ರವು ಹೆಚ್ಚು ಪ್ರಬುದ್ಧವಾಗಿ ಬೆಳೆಯುತ್ತಿದೆ. ಸಂಕೀರ್ಣವಾದ ಆರ್ಥಿಕ ವಿದ್ಯಮಾನಗಳನ್ನು ಮತ್ತು ಸಮಸ್ಯೆಗಳನ್ನು ವಿಶ್ಲೇಷಿಸಲು ಅರ್ಥಶಾಸ್ತ್ರದಲ್ಲಿಯೇ ಅನೇಕ ಶಾಖೆಗಳು ಜನ್ಮತಾಳಿವೆ. ಅವುಗಳೆಂದರೆ ಹಣಕಾಸಿನ ಅರ್ಥಶಾಸ್ತ್ರ, ಅಭಿವೃದ್ಧಿ ಅರ್ಥಶಾಸ್ತ್ರ, ವ್ಯವಹಾರದ ಅರ್ಥಶಾಸ್ತ್ರ, ನಿರ್ವಹಣಾ ಅರ್ಥಶಾಸ್ತ್ರ, ಕೃಷಿ ಅರ್ಥಶಾಸ್ತ್ರ, ಕೈಗಾರಿಕಾ ಅರ್ಥಶಾಸ್ತ್ರ, ಅಂತರಾಷ್ಟ್ರೀಯ ಅರ್ಥಶಾಸ್ತ್ರ, ಮೂಲಸೌಕರ್ಯದ ಅರ್ಥಶಾಸ್ತ್ರ, ಮಹಿಳಾ ಆರ್ಥಿಕ ಅಧ್ಯಯನ, ಪ್ರವಾಸೋದ್ಯಮ ಅರ್ಥಶಾಸ್ತ್ರ, ಹೋಟೆಲ್ ನಿರ್ವಹಣಾ ಅರ್ಥಶಾಸ್ತ್ರ, ಕಾರ್ಪೋರೇಟ್ ಅರ್ಥಶಾಸ್ತ್ರ ಇತ್ಯಾದಿಗಳು. ವಿಶ್ವಮಟ್ಟದಲ್ಲಿ ಬೆಳೆದಿರುವ ಸಂಕೀರ್ಣವಾದ ಆರ್ಥಿಕ ವ್ಯವಸ್ಥೆಯನ್ನು ಗ್ರಹಿಸಲು ಹೊಸ ಪರಿಭಾವನೆಗಳು ಮತ್ತು ಸಿದ್ಧಾಂತಗಳು ಬೆಳಕಿಗೆ ಬರುತ್ತಿವೆ. ಅಲ್ಲದೆ ಆದಿ ಚಿಂತಕರ ಸಿದ್ಧಾಂತಗಳ ಬಗ್ಗೆ ಪುನರಾವಲೋಕನ ಮಾಡುವಂತಾಗಿದೆ. ಅರ್ಥಶಾಸ್ತ್ರೀಯ ವಿವರಣೆ ಹಾಗೂ ಸಿದ್ಧಾಂತಗಳನ್ನು ಆದಷ್ಟು ನಿಖರ ಹಾಗೂ ಸ್ಪಷ್ಟವಾಗಿ ಮಂಡಿಸಲು ಹೆಚ್ಚಾಗಿ ಗಣಿತಶಾಸ್ತ್ರೀಯ, ಸಂಖ್ಯಾಶಾಸ್ತ್ರೀಯ ಸೂತ್ರಗಳನ್ನು, ರೇಖಾಚಿತ್ರಗಳನ್ನು, ಕೋಷ್ಟಕಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಲಾಗುತ್ತಿದೆ. ಆದರೆ ಪ್ರಸಿದ್ಧ ಅರ್ಥಶಾಸ್ತ್ರದ ಗ್ರಂಥಗಳು ಆಂಗ್ಲಭಾಷೆಯಲ್ಲಿ ಮಾತ್ರ ಲಭ್ಯವಾಗುತ್ತಿವೆ. ದುರಂತವೆಂದರೆ ಮಾನವಿಕ ವಿಜ್ಞಾನಗಳಲ್ಲಿ ಆಂಗ್ಲಭಾಷೆಯ ಕೃತಿಗಳಿಗೆ ಸಮವಾಗಿ ನಿಲ್ಲುವ ಕೃತಿಗಳು ಕನ್ನಡ

ಮಾಧ್ಯಮದಲ್ಲಿ ಲಭ್ಯವಿಲ್ಲ. ಹೀಗಾಗಿ ವಿದ್ಯಾರ್ಥಿಗಳು ಯಾವುದೇ ಅರ್ಥಶಾಸ್ತ್ರದ ಬಗ್ಗೆ ಪೂರ್ಣ ಮಾಹಿತಿ ಪಡೆಯಬೇಕಾದರೆ ಇಂಗ್ಲಿಷ್ ಮಾಧ್ಯಮದ ಹಲವಾರು ಪುಸ್ತಕಗಳನ್ನು ಆಶ್ರಯಿಸಬೇಕಾಗುತ್ತದೆ. ಇದು ಎಲ್ಲಾ ವಿದ್ಯಾರ್ಥಿಗಳಿಗೆ ಎಟುಕದ ವಿಷಯಗಿದೆ. ಆದ್ದರಿಂದ ಇಂಥ ಗುರುತರ ವಿಷಯಗಳನ್ನು ಪೂರ್ಣಪ್ರಮಾಣದಲ್ಲಿ ಸಮರ್ಪಕವಾಗಿ ಅರ್ಥೈಸಲು ಕನ್ನಡ ಮಾಧ್ಯಮದ ಕೃತಿಗಳ ಅವಶ್ಯಕತೆ ಕಂಡುಬರುತ್ತದೆ. ಕನ್ನಡ ಪಠ್ಯಸಾಮಗ್ರಿಗಳು ಹೇಗೆ ರೂಪುಗೊಂಡಿವೆ ಎಂಬುದರ ಅಧ್ಯಯನ ಇದುವರೆಗೆ ಪೂರ್ಣ ಪ್ರಮಾಣದಲ್ಲಿ ನಡೆದಿರುವುದಿಲ್ಲ. ಹೀಗಾಗಿ ಈ ಅಧ್ಯಯನ ಮಹತ್ವ ಪಡೆಯುತ್ತದೆ.

ಕನ್ನಡದಲ್ಲಿರುವ ಅರ್ಥಶಾಸ್ತ್ರದ ಕೃತಿಗಳು ಭಾಷಾಂತರದ ಕೃತಿಗಳಾಗಿವೆ. ಅವು ಇಂಗ್ಲಿಷ್ ಇಲ್ಲವೆ ಇತರ ಭಾಷೆಗಳಿಂದ ಅನುವಾದಗೊಂಡಿವೆ. ನೇರ ಅನುವಾದದ ಮೂಲಕ ಅವು ಕನ್ನಡಕ್ಕೆ ಬಂದಿರಲೂಬಹುದು. ಇಲ್ಲವೆ ಇತರ ಭಾಷೆಯ ಕೃತಿಗಳ ಓದಿನ ಗ್ರಹಿಕೆಯಿಂದ ರಚನೆ ಮಾಡಿದ ಕೃತಿಯಾಗಿರಬಹುದು. ಯಾವ ರೀತಿಯಲ್ಲಿಯೇ ರಚಿಸಿದರೂ ಸಹ ಆ ಕೃತಿಗಳನ್ನು ಒಟ್ಟಾರೆ ಭಾಷಾಂತರದ ಹಿನ್ನೆಲೆಯಲ್ಲಿಯೇ ಈ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಈ ಅಧ್ಯಯನ ಸಾಮಗ್ರಿಗಳು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಯಾವ ಪ್ರಮಾಣದಲ್ಲಿ (ಎಷ್ಟರ ಮಟ್ಟಿಗೆ) ಉಪಯುಕ್ತವಾಗಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಭಾಷಾಂತರವಾದ ಕನ್ನಡದ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳು ನಿರೀಕ್ಷಿತ ಪ್ರಮಾಣದಲ್ಲಿ ಆರಂಭದಲ್ಲಿ ಇರಲಿಲ್ಲ. ಈ ಕೊರತೆಯನ್ನು ಪೂರೈಸುವ ಪ್ರಯತ್ನಗಳು ನಿರಂತರವಾಗಿ ನಡೆದಿವೆ. ಆ ಪ್ರಯತ್ನದಲ್ಲಿ ವ್ಯಕ್ತಿಗಳು, ಸಂಘ–ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯಗಳು ಭಾಗಿಯಾಗಿವೆ. ರ‍್ಯಾಂಡಂ ಆಗಿ ಕೆಲವನ್ನು ಮಾತ್ರ ಇಲ್ಲಿ ದಾಖಲಿಸಲಾಗಿದೆ.

ಕುಮಾರಪ್ಪ ಜೆ.ಸಿ. (೧೯೪೩), ಮುಜುಮದಾರ ಎಸ್.ಎ(೧೯೫೨), ಹರಿದಾಸ ಭಟ್ಟ ಕು.ಶಿ (೧೯೫೨), ಹುಚ್ಚಪ್ಪ ಜಿ.ಟಿ. (೧೯೫೭), ಶ್ರೀನಿವಾಸಮೂರ್ತಿ ಎ.ಪಿ (೧೯೫೭), ಸಚ್ಚಿದಾನಂದ ಶಿರೋಡಕರ್ (೧೯೫೯), ಜೋಶಿ ಕೃ.ಪ (೧೯೬೦), ಸೀತಾರಾಮಯ್ಯ ವಿ. (೧೯೬೨), ಸಾಖರೆ ಎಚ್.ಆರ್. (೧೯೬೮), ಕರಭಂಟನಾಳ ಎಸ್.ಜಿ. (೧೯೬೯), ಕಣವಿ ಬಿ ಬಿ, ಕಡ್ಡಿಮುಡಿ ಸಿ ಎಸ್ (೧೯೬೯), ಇನಾಮದಾರ ವಾಯ್.ಎಲ್.(೧೯೬೯), ರಾಮಾಚಾರಿ ಬಿ (೧೯೬೯), ಮೇಟಿ ಟಿ.ಕೆ (೧೯೬೯), ಕುಮಾರಸ್ವಾಮಿ ಬಿ. ಎಂ. ಕುಮಾರಸ್ವಾಮಿ ಎಸ್. (೧೯೭೦), ಹಳ್ಳೂರು ಎಂ.ಎಸ್. (೧೯೭೧), ಬಸವಾ ಕೆ.ಡಿ. (೧೯೭೧, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಬೆಂಗಳೂರ ವಿಶ್ವವಿದ್ಯಾಲಯ, ಬೆಂಗಳೂರ. (೧೯೬೨), ಹಟ್ಟಿ ಆಯ್.ಟಿ (೧೯೭೬), ರಾವ್ ಎಸ್.ಎನ್.ಸಿ. (೧೯೭೮), ಭಟ್ಟ ಪಿ.ಎಂ. (೧೯೭೯), ಮರಳುಸಿದ್ಧಪ್ಪ ಎಸ್. (೧೯೮೨), ಬಸಪ್ಪ ಕೆ.ಸಿ. (೧೯೮೩), ಅಪರಂಜಿ ಎನ್.ಆರ್. (೧೯೮೫), ರಾಜ ಮತ್ತು ಶಿವರಾಜ (೧೯೮೫), ಶ್ರೀಕಂಠಾರಾಧ್ಯ ಬಿ.ಎಸ್. ಸಿದ್ದೇಗೌಡ ಬಿ.ಎಸ್. ನರಸಿಂಹಮೂರ್ತಿ. ಕೆ. ವೆಂಕಟರಮಣ. ಓ. ಚಂದ್ರಣ್ಣ ಎನ್, ರೇಣುಕಾರ್ಯ ಸಿ.ಕೆ.(೧೯೮೬), ಶರಣಪ್ಪ. ಎಸ್. ಹಿರೇಮಠ. ಎನ್.ಎಸ್. ಮಡ್ಡಿ. ಕೆ. ಆರ್. ರಾವ್ ಎಮ್. ಎಸ್. ಎನ್., ಪಾರ್ಶ್ವನಾಥ ಅಜ್ರಿ, ರಾಮನ್

ಬಿ.ಎಸ್., ನಂಜುಂಡಪ್ಪ ಡಿ. ಎಮ್., ರಾಯಕರ್ ಡಿ. ಎನ್., ಕಡೆಮನಿ ಜಿ.ಬಿ., ಮೂರ್ತಿ ಡಿ.ಎನ್.(೧೯೮೮), ವೀರಯ್ಯ ಕೆ.ಎಂ. (೧೯೮೯), ಮಲ್ಲೇಶಪ್ಪ ಟಿ.ಎಸ್.(೧೯೮೯), ಅಬ್ದುಲ್ ಅಜೀಜ, ಚಂದ್ರಶೇಖರ ಟಿ.ಆರ್., ಕಲ್ಲೂರ ಎಂ.ಎಸ್., ಪ್ರಭಾಕರ ಬಿ. ಶಿಶಿಲ, ಅರವಿಂದ ಜೋಶಿ, ಒಡೆಯರ್ ಡಿ. ಹೆಗ್ಗಡೆ, ಕೃಷ್ಣಮೂರ್ತಿ ಎಚ್.ಆರ್. ಹೊಸಬೀಡು, ಕೆಂಪಯ್ಯ ಜಿ.ಎನ್., ಕೃಷ್ಣಭಟ್ಟ ಕೆ., ಕೃಷ್ಣಯ್ಯಗೌಡ ಎಚ್.ಆರ್, ಗುಡೂರು ಭೀಮಸೇನ, ಗೋವಿಂದಯ್ಯ ಟಿ, ಗೋಪಾಲಕೃಷ್ಣರಾವ್ ಕೆ.ಎಲ್, ನಾಯಕ್ ಎಸ್.ಎನ್., ರಾಜಣ್ಣ ಕೆ.ಎ., ರಾಮಕೃಷ್ಣಯ್ಯ ಆರ್, ರಾಮಸ್ವಾಮಿ ಎಸ್.ಆರ್. ವಸಂತ ಗುಮಾಸ್ತೆ, ಸಿದ್ಧಪ್ಪ ಬಿ, ಸುರಪುರ, ಬಿರಾದಾರ ಎ.ಪಿ, ಚಂದ್ರಶೇಖರಪ್ಪ ಸಿ.ವಿ, ಬಸವರಾಜ ಕುಮ್ನೂರ, ಮಲ್ಲೇಶಪ್ಪ ಕುಂಬಾರ, ಟಿ. ಆರ್. ಗುರುಬಸಪ್ಪ, ಎನ್.ಟಿ.ಸೋಮಶೇಖರ, ಹಿರೇಮಠ. ಎಸ್. ಸಿ., ಸೀತಾಲಕ್ಷ್ಮಿ ರಂಗನಾಥನ್, ಶಾಂತಾಮಣಿ ಎ. ಸಿ., ಕೃಷ್ಣನಾಯಕ. ಆರ್. ಎನ್., ಎಂ. ಮಾದಯ್ಯ, ರಾಮಣ್ಣ ಆರ., ಜೆ. ಪಿ. ಪಿಂಜಾರ, ಬಿ.ಆರ್. ಭಟ್ಟ, ಡಿ. ಪಿ. ಹೆಗ್ಗಡೆ, ರಾಯಕರ್. ಡಿ. ಎನ್., ಎಮ್. ಎಸ್. ಕುಮಾರ, ಎಸ್. ನಾಗರಾಜ, ಶಿವಚಿತ್ತಪ್ಪ ಕೆ., ಸಿದ್ಧಾನಂದ ಎಂ., ಪ್ರಭುಸ್ವಾಮಿ. ಎನ್., ನಾಗರಾಜು ಎಸ್., ಸದಾಶಿವಯ್ಯ ಹೆಚ್. ಎಮ್., ಈ ಮೊದಲಾದವರು ಅನುವಾದ ಪ್ರಕ್ರಿಯೆಯಲ್ಲಿ ಶ್ರಮಿಸಿದ್ದಾರೆ. ಇವರೆಲ್ಲಾ ತಮ್ಮತಮ್ಮ ಆಲೋಚನಾ ಕ್ರಮದಂತೆ ಪಾರಿಭಾಷಿಕ ಪದಗಳನ್ನು ರಚಿಸಿಕೊಂಡಿದ್ದಾರೆ. ಅವುಗಳನ್ನೇ ತಮ್ಮ ಕೃತಿಗಳಲ್ಲಿ ಬಳಸಿಕೊಂಡಿದ್ದಾರೆ. ಪಾರಿಭಾಷಿಕ ಪದಗಳ ರಚನೆಗೆಂದು ಎರಡು ಉಚ್ಚ ಸಮಿತಿಗಳನ್ನು ವಿಶ್ವವಿದ್ಯಾಲಯ ನೇಮಿಸಿದೆ. ಪಠ್ಯಪುಸ್ತಕ ಸಮಿತಿಯವರು ತಂತಮ್ಮ ವಿಷಯಗಳಿಗಾಗಿ ರೂಪಿಸಿಕೊಂಡ ಪದಗಳನ್ನು ಈಗ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಏಕರೂಪತೆ ಸಾಧಿಸುವ ಕಾರ್ಯವನ್ನು ಮುಂದೆ ಕೈಗೊಳ್ಳಲಾಗುವುದು ಎಂಬುದಾಗಿ ಪಠ್ಯಪುಸ್ತಕಗಳು ಸರ್ವಸಮ್ಮತಿ ದೊರೆಯುವವರೆಗೆ ಭಾಷಾಂತರ ಪ್ರಕ್ರಿಯೆ ನಿರಂತರ ಎಂಬ ಜವಾಬ್ದಾರಿ ನುಡಿಗಳನ್ನು ಪಠ್ಯಪುಸ್ತಕ ಸಮಿತಿಯ ಗೌರವ ನಿರ್ದೇಶಕರಾದ ಸ.ಸ. ಮಾಳವಾಡರು ವ್ಯಕ್ತಪಡಿಸಿದ್ದಾರೆ.

ಅನುವಾದಿತ ಕನ್ನಡ ಕೃತಿಗಳಲ್ಲಿನ ಪಾರಿಭಾಷಿಕ ಪದಗಳಲ್ಲಿ ಈಗಲೂ ಭಿನ್ನತೆಗಳಿವೆ. ಲಭ್ಯವಿರುವ ಕನ್ನಡ ಕೃತಿಗಳು ಅಧ್ಯಯನದ ಎಲ್ಲಾ ಅವಶ್ಯಕತೆಗಳನ್ನು ಪೂರೈಸುತ್ತಿಲ್ಲ. ವಿಷಯ ನಿರೂಪಣೆ, ವಿಶ್ಲೇಷಣೆ, ಪರಿಕಲ್ಪನೆಗಳು, ಪರಿಭಾವನೆಗಳು, ವಿಷಯ ವಿವರಿಸುವಿಕೆಗಳಲ್ಲಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಕೃತಿಗಳಲ್ಲಿನ ವಿಚಾರಗಳು ಹರವಿಕೊಂಡಿದ್ದರೆ ಅಲ್ಲಿ ಆಳವಿಲ್ಲ. ಆಳವಿದ್ದರೆ ಅನುಕ್ರಮತೆ ಇಲ್ಲ. ಇವೆರಡೂ ಇದ್ದರೆ ಸಮಗ್ರತೆಯ ಕೊರತೆ ಎದ್ದು ಕಾಣುತ್ತದೆ ಎಂಬುದನ್ನು ಬಸಪ್ಪ ಕೆ. ಟಿ. ಮತ್ತು ಚಂದ್ರಣ್ಣ ಎನ್ ಇವರು 'ಅಂತರಾಷ್ಟ್ರೀಯ ಅರ್ಥಶಾಸ್ತ್ರ' ೨೦೦೧:೧ರಲ್ಲಿ ವಿವರಿಸಿದ್ದಾರೆ. ಇನ್ನೂ ಕೆಲವು ಅಪೂರ್ಣವಾಗಿದ್ದರೆ ಮತ್ತೆ ಕೆಲವು ಕ್ಲಿಷ್ಟವಾಗಿವೆ. ಕ್ಲಿಷ್ಟವಾದ ಪರಿಭಾಷೆಯನ್ನೊಳಗೊಂಡಿರುವ ಈ ವಿಷಯದಲ್ಲಿ ಆಂಗ್ಲ ಪದಗಳಿಗೆ ಸಂವಾದಿಯಾದ ಕನ್ನಡ ಪದಗಳನ್ನು ಬಳಸುವಲ್ಲಿ ವಿಶೇಷ ತೊಂದರೆಯಾಗಿದೆ ಎಂಬುದನ್ನು ಕೃಷ್ಣಯ್ಯಗೌಡ ಎಚ್.

ಆರ್. ಇವರು 'ಅಭಿವೃದ್ಧಿ ಅರ್ಥಶಾಸ್ತ್ರ' ೧೯೯೮:iiರಲ್ಲಿ ವ್ಯಕ್ತಪಡಿಸಿದ್ದಾರೆ. ಅರ್ಥಶಾಸ್ತ್ರ ವಿಷಯವನ್ನು ನಿರೂಪಿಸುವಾಗ ಸಧ್ಯಕ್ಕೆ ರೂಢಿಯಲ್ಲಿರುವ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿದ್ದೇನೆ. ಕ್ಲಿಷ್ಟ ಶಬ್ದಗಳಿಗೆ ಸಮನಾರ್ಥಕ ವಿವರಿಸುವ ಇಂಗ್ಲಿಷ್ ಶಬ್ದಗಳನ್ನು ಅಲ್ಲಿಯೇ ಕೊಟ್ಟಿರುವುದರಿಂದ ವಿದ್ಯಾರ್ಥಿಗಳಿಗೆ ವಿಷಯ ತಿಳಿಯಲು ಹೆಚ್ಚು ಸುಲಭವಾಗುವುದು ಎಂಬ ಅಭಿಪ್ರಾಯ ಅಪರಂಜಿ ಎನ್. ಆರ್. ಇವರು 'ಆಧುನಿಕ ಅರ್ಥಶಾಸ್ತ್ರ' ೧೯೮೫: iiiರಲ್ಲಿ ವ್ಯಕ್ತಪಡಿಸಿದ್ದಾರೆ. 'ಸಪ್ಲೈಯನ್ನು ಪೂರೈಕೆ ಎನ್ನಬೇಕೇ ವಿನಃ ನೀಡಿಕೆ ಎಂದಲ್ಲ. ಇಳಿಕೆಯನ್ನು ಇಳಿತಾಯವೆನ್ನುವುದು ತಪ್ಪು. ಕನ್ನಡ ಬರಹಗಾರರು ತುಂಬಾ ಎಚ್ಚರಿಕೆಯಿಂದ ವಿಚಾರ ಸಾಹಿತ್ಯವನ್ನು ಬೆಳೆಸಬೇಕಾಗಿದೆ' ಈ ವಿಚಾರವನ್ನು ಪ್ರಭಾಕರ ಶಿಶಿಲ ಇವರು 'ಅಂತರಾಷ್ಟ್ರೀಯ ಅರ್ಥಶಾಸ್ತ್ರ' ೨೦೦೬: iiರಲ್ಲಿ ಭಿನವಿಸಿಕೊಂಡಿದ್ದಾರೆ. ಕನ್ನಡದಲ್ಲಿ ಬರುತ್ತಿರುವ ಅರ್ಥವಿಜ್ಞಾನ ಕೃತಿಗಳಲ್ಲಿ ಹೆಚ್ಚಿನವು ಸಂತೆಯಲ್ಲಿ ನೇಯ್ದ ಮಾಲೆ. ಕನ್ನಡದ ಎರಡು ಕೃತಿಗಳನ್ನಿಟ್ಟುಕೊಂಡು ಮೂರನೆಯ ಕೃತಿತರುವ ದಿಡೀರ್ ವಿದ್ವಾಂಸರಿಂದ ವಿಚಾರ ಸಾಹಿತ್ಯ ಬೆಳೆಯಲು ಸಾಧ್ಯವಿಲ್ಲ. ಕನ್ನಡದ ಬರಹಗಾರರಲ್ಲಿ ಅರ್ಥವಿಜ್ಞಾನದ ಪರಿಕಲ್ಪನೆಗಳನ್ನು ಮನಬಂದಂತೆ ಕನ್ನಡಕ್ಕೆ ಅನುವಾದಿಸುತ್ತಿರುವುದು ಆತಂಕಕಾರಿ. ಪರಿಕಲ್ಪನೆಗಳ ಕನ್ನಡೀಕರಣದಲ್ಲಿ ಏಕರೂಪತೆ ಇರಲೇಬೇಕು. ಇಲ್ಲದಿದ್ದರೆ ಗೊಂದಲ ಮೂಡುತ್ತದೆ ಎಂಬ ಅಭಿಪ್ರಾಯವನ್ನು ಶರಣಪ್ಪ ಎಸ್. ಇವರು 'ಹಣ, ಬ್ಯಾಂಕಿಗ್, ವ್ಯಾಪಾರ ಮತ್ತು ಹಣಕಾಸು' ೧೯೯೯:iiiರಲ್ಲಿ ವ್ಯಕ್ತಪಡಿಸಿದ್ದಾರೆ. ಅರ್ಥಶಾಸ್ತ್ರವು ಎಲ್ಲಾ 'ಸಾಮಾಜಿಕ ವಿಜ್ಞಾನಗಳ ರಾಣಿ' ಎಂದು ಪರಿಗಣಿತವಾಗಿದೆ. ಈ ವಿಜ್ಞಾನದ ಅಧ್ಯಯನಕ್ಕೆ ಜಾಗತಿಕ ಮನ್ನಣೆ ದೊರಕಿದೆ. ಸಾಹಿತ್ಯ ಮತ್ತು ವಿಜ್ಞಾನಕ್ಕೆ ದೊರಕುತ್ತಿದ್ದ ನೋಬೆಲ್ ಪರಿತೋಷಕ ೧೯೬೯ ರಿಂದ ಅರ್ಥಶಾಸ್ತ್ರಕ್ಕೂ ದೊರಕುತ್ತಿದೆ. **'ನಿಮಗೆ ಸ್ವಲ್ಪ ಮಟ್ಟಿಗಾದರೂ ಅರ್ಥಶಾಸ್ತ್ರದ ಜ್ಞಾನ ಇರದೇ ಹೊದರೆ ನೀವು ನಿಜವಾದ ನಾಗರಿಕರಾಗಲಾರಿರಿ'** ಇದನ್ನು ಅರ್ಥಶಾಸ್ತ್ರಜ್ಞೆ ಬಾರ್ಬರಾ ವೋಟನ್ ಎನ್ನುವರು ವಿಶ್ಲೇಷಿಸಿದ್ದಾರೆ. ಇದನ್ನೆ ಕೃಷ್ಣ ಮತ್ತು ಎಚ್ ಆರ್ ಇವರು 'ಮೂಲ ಆರ್ಥಿಕ ಸಿದ್ದಾಂತ' ೨೦೦೯:೧ರಲ್ಲಿ ಸೂಚಿಸಿದ್ದಾರೆ. ಎ.ಸಿ. ಪಿಗುರವರು 'ಅರ್ಥಶಾಸ್ತ್ರದ ಅಧ್ಯಯನವು ಕೇವಲ ಜ್ಞಾನದಾಯಕವಾಗಿರದೆ ಫಲದಾಯಕವಾಗಿದೆ ಎನ್ನುವಲ್ಲಿ ಅರ್ಥಶಾಸ್ತ್ರದ ಮಹತ್ವ ಮತ್ತು ಪ್ರಯೋಜನ ವ್ಯಕ್ತಪಡಿಸಿದ್ದಾರೆ. ಕೆಲವೇ ಶತಮಾನಗಳ ಇತಿಹಾಸ ಹೊಂದಿರುವ ಅರ್ಥಶಾಸ್ತ್ರವು ಒಂದು ಯೌವ್ವನಾವಸ್ಥೆಯ ವಿಜ್ಞಾನವಾಗಿದೆ ಎಂಬುದಾಗಿ ಕೃಷ್ಣ ಮತ್ತು ಎಚ್ ಆರ್ ಇವರು 'ಮೂಲ ಆರ್ಥಿಕ ಸಿದ್ದಾಂತ' ೨೦೦೯:೨ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ದಕ್ಷತೆಯ ಪಾಠ ಹೇಳುವ ತರ್ಕಬದ್ಧ ನಿರ್ಣಯದ ವಿಧಾನ ತಿಳಿಸುವ, ವಿಚಾರಪೂರ್ವಕ ಆಯ್ಕೆಯ ಮಾರ್ಗತೋರಿಸುವ ಈ ಜ್ಞಾನಾಂಗದ ಅರಿವು ಎಲ್ಲರಿಗೂ ಅಗತ್ಯವಾಗಿದೆ ಕೃಷ್ಣ ಮತ್ತು ಎಚ್ ಆರ್ ಇವರು 'ಮೂಲ ಆರ್ಥಿಕ ಸಿದ್ದಾಂತ' ೨೦೦೯:೨ರಲ್ಲಿ ಅರ್ಥಶಾಸ್ತ್ರದ ಮಹತ್ವವನ್ನು ವ್ಯಕ್ತಪಡಿಸಿದ್ದಾರೆ. ಇಂಥ ಮಹತ್ವದ ಅಧ್ಯಯನ ಸಾಮಗ್ರಿಗಳು ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ಲಭ್ಯವಾಗ ಬೇಕಲ್ಲವೇ ?. ಕನ್ನಡದಲ್ಲಿ ಕೃತಿ ರಚಿಸುವ ಅನುವಾದಕರು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ನೆಲೆಸಿದ್ದಾರೆ.

ಪ್ರತಿ ಪ್ರದೇಶವೂ ತನ್ನದೆ ಆದ ಭಾಷಾ ವೈಶಿಷ್ಟತೆಯನ್ನು ಪಡೆದುಕೊಂಡಿದೆ. ಪ್ರಾದೇಶಿಕ ಭಿನ್ನತೆಯು ಅರ್ಥ ವ್ಯತ್ಯಾಸಕ್ಕೆ ಅವಕಾಶ ಮಾಡಿಕೊಡುತ್ತದೆ. ಇಂಥ ಸಮಸ್ಯೆಗಳನ್ನು ಪರಿಹರಿಸುವ ಪ್ರಯತ್ನವನ್ನು ಕುವೆಂಪು ವಿಶ್ವವಿದ್ಯಾಲಯದ ವ್ಯಾಪ್ತಿಯ ಅರ್ಥಶಾಸ್ತ್ರ ಉಪನ್ಯಾಸಕರ ವೇದಿಕೆ ಮಾಡಿದ್ದು ತಿಳಿದು ಬರುತ್ತದೆ. ಆ ವೇದಿಕೆಯಲ್ಲಿ ಅನುವಾದ ಕುರಿತು ಹಲವು ವಿಷಯಗಳು ಚರ್ಚಿತವಾಗಿವೆ. ಸಾಮಾನ್ಯ 'ಪಾರಿಭಾಷಿಕ ಪದಕೋಶ' ರಚಿಸುವ ತಿರ್ಮಾನ ಕೈಗೊಂಡಿದೆ. ಅರ್ಥಶಾಸ್ತ್ರ ವಿಷಯ ಅನುವಾದಕರು ಆ ಪದಗಳನ್ನೇ ಬಳಸುವಂತೆಯೂ ನಿರ್ಣಯಿಸಲಾಗಿದೆ. ಆ ವೇದಿಕೆ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿನ ಅನುವಾದಕರನ್ನು ಸೇರಿಸುವ ಪ್ರಯತ್ನವನ್ನು ಮಾಡಿದೆ. ವೇದಿಕೆಯು ಸಭೆಯಲ್ಲಿ ಕೈಗೊಂಡ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ವಿಫಲವಾಗಿದೆ. ಕಾರಣ ಅಂದು ವೇದಿಕೆಯಲ್ಲಿ ಒಂದುಗುಡಿದವರು ನಂತರ ಸರಿಯಾದ ಪ್ರತಿಕ್ರಿಯೆ ತೋರಿಸಲಿಲ್ಲವೆಂಬ ಸಂಗತ್ತಿಯನ್ನು ಪ್ರಾಧ್ಯಾಪಕರೊಬ್ಬರು ವಿವರಿಸಿದರು. ಒಟ್ಟಾರೆಯಾಗಿ ಅರ್ಥಶಾಸ್ತ್ರ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ಸ್ಪಷ್ಟತೆ ಕಾಣದೆ ಗೊಂದಲದಲ್ಲಿ ಉಳಿಯುವಂತಾಗಿದೆ.

ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಕನ್ನಡಕ್ಕೆ ಭಾಷಾಂತರ ಗೊಂಡಿರುವ ಅರ್ಥಶಾಸ್ತ್ರದ ಪಠ್ಯಗಳನ್ನು ಕುರಿತಂತೆ ಸಮಗ್ರವಾದ ಅಧ್ಯಯನಗಳು ನಡೆದಂತೆ ಕಂಡು ಬರುವುದಿಲ್ಲ. ಅರ್ಥಶಾಸ್ತ್ರ ಪಠ್ಯವು ಇವರೆಗೆ ವ್ಯವಸ್ಥಿತವಾಗಿ ಮತ್ತು ಸಮಗ್ರವಾಗಿ ಅಧ್ಯಯನಕ್ಕೆ ಒಳಪಟ್ಟಂತೆ ಕಂಡುಬರುವುದಿಲ್ಲ. ಪಠ್ಯಕ್ರಮಗಳು ಬದಲಾವಣೆಯಾದ ಸಂದರ್ಭಗಳಲ್ಲಿ ಭಾಷಾ ವಿಷಯಗಳು ಹೆಚ್ಚು ಚರ್ಚೆಗೊಂಡಿವೆ. ಆದರೆ ಅರ್ಥಶಾಸ್ತ್ರ ವಿಷಯ ಕುರಿತು ಅಲ್ಲಲ್ಲಿ ಕೆಲವು ಪ್ರತಿಕ್ರಿಯೆಯ ರೂಪದಲ್ಲಿ ಬಂದಿವೆ. ಅವು ಪತ್ರಿಕೆಗಳಲ್ಲಿ ಲೇಖನ ರೂಪದಲ್ಲಿ(ವರದರಾಜ ೧೯೯೨, ಪ್ರಭುರಾಜ ೨೦೦೦, ಪದವಿಪೂರ್ವ ಶಿಕ್ಷಣ ಇಲಾಖೆಯ 'ಶಿಕ್ಷಣ ಚಿಂತನೆ' ೧೯೯೮, ಶಿಕಣ ದರ್ಶನ ೨೦೦೦, ಅರವಿಂಧ ಚೊಕ್ಕಾಡಿ ೨೦೦೩, 'ಸಂವಾದ' ಮಾಸ ಪತ್ರಿಕೆ ೨೦೧೧) ಪ್ರಕಟವಾಗಿವೆ. ಅರ್ಥಶಾಸ್ತ್ರ ಉಪನ್ಯಾಸಕರ ವೇದಿಕೆಗಳಲ್ಲಿ (ತುಮಕೂರು, ಮೈಸೂರು, ಧಾರವಾಡ, ಹಾವೇರಿ, ಚಿತ್ರದುರ್ಗ, ಬೆಂಗಳೂರು) ಚರ್ಚಿತಗೊಂಡಿವೆ. ಆದರೆ ಪೂರ್ಣಪ್ರಮಾಣದಲ್ಲಿ ಅಧ್ಯಯನ ನಡೆದಿರು ವುದಿಲ್ಲ. ಫಕೀರಪ್ಪ ವಜ್ರಬಂಡಿ ಇವರು 'ಕನ್ನಡದಲ್ಲಿ ಅರ್ಥಶಾಸ್ತ್ರ ಪಠ್ಯಪುಸ್ತಕಗಳು (ಅನುವಾದ ಮತ್ತು ಸಮಸ್ಯೆಗಳು) ಕುರಿತು ಎಂ.ಫಿಲ್ (ಡಿಸೆಂಬರ್ ೨೯, ೨೦೦೮) ಅಧ್ಯಯನ ಮಾಡಿರುತ್ತಾರೆ. ಅದು ಪಿಯುಸಿ ತರಗತಿಯ ಪಠ್ಯಕ್ಕೆ ಸೀಮಿತಗೊಂಡಿದೆ. ಉಳಿದಂತೆ ಸಮಗ್ರವಾಗಿ ಪಠ್ಯಕ್ರಮಗಳನ್ನು ಕುರಿತು ಅಧ್ಯಯನ ನಡೆದಂತೆ ಕಂಡುಬರುವುದಿಲ್ಲ. ಹೀಗಾಗಿ ಅಂಥ ಅಧ್ಯಯನದ ಅಗತ್ಯವಿದೆ ಎಂದು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಖಾಸಗೀಕರಣ, ಉದಾರೀಕರಣ ಹಾಗೂ ಜಾಗತೀಕರಣಗಳ ಹೊಸ್ತಿಲಲ್ಲಿ ಸದ್ಯದ ಸ್ಥಿತಿ ಇದೆ. ಇಂದಿನ ಬದುಕಿನ ಬೇಕು ಬೇಡಗಳ ಹಿನ್ನೆಲೆಯಲ್ಲಿ ಪಠ್ಯಕ್ರಮಗಳಿರಬೇಕು. ಜಾಗತೀಕಮಟ್ಟದ ಆರ್ಥಿಕ ಏರಿಳಿತಗಳಿಗೆ ಕಟ್ಟಕಡೆ ಗ್ರಾಮದ ಒಬ್ಬ ಸಾಮಾನ್ಯ ವ್ಯಕ್ತಿಯೂ ಸಹ ಒಳಗಾಗಬೇಕಾದ

ಸನ್ನಿವೇಶಗಳು ನಿರ್ಮಾಣವಾಗಿವೆ. ಆದ್ದರಿಂದ ಅರ್ಥಶಾಸ್ತ್ರದ ತಿಳುವಳಿಕೆ ಪ್ರತಿಯೊಬ್ಬ ಪ್ರಜೆಗೂ, ಇರಬೇಕಾದ ಅಗತ್ಯತೆ ಇದೆ. ಸರಕಾರ ರೂಪಿಸುವ ಆರ್ಥಿಕ ನೀತಿ ನಿರ್ಣಯಗಳಿಗೆ ಪ್ರಜೆಗಳ ಅಭಿಪ್ರಾಯವೂ ಮಹತ್ವ ಪಡೆಯಬೇಕು. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ನಾಲ್ಕು ವಿಶ್ವವಿದ್ಯಾಲಯಗಳಲ್ಲಿ ಪಠ್ಯಕ್ರಮ ಹೇಗೆ ರೂಪಿಸಲ್ಪಟ್ಟಿದೆ? ಪಠ್ಯಕ್ರಮದ ವ್ಯತ್ಯಾಸದಿಂದ ವಿದ್ಯಾರ್ಥಿಗಳ ಮುಂದಿನ ಬದುಕಿಗೆ ಹೇಗೆ ಸಹಾಯಕವಾಗಬಹುದು ಎಂಬುದನ್ನು ಅಧ್ಯಯನದಿಂದ ತಿಳಿಯುವ ಪ್ರಯತ್ನ ಮಾಡಲಾಗಿದೆ. ಅರ್ಥಶಾಸ್ತ್ರದ ಪಠ್ಯಕ್ರಮವು ವಾಸ್ತವಿಕ ಬದುಕಿಗೆ ಪೂರಕವಾಗಿರದೆ ಕಾಣದ ಕೈ ನಿಯಂತ್ರಣದಿಂದ ಒತ್ತಡದಮೇರೆಗೆ ಬಲವಂತವಾಗಿ ಹೇರಲ್ಪಟ್ಟ ಪಠ್ಯಕ್ರಮವು ಜಾರಿಯಲ್ಲಿದೆ ಎಂಬ ಅಭಿಪ್ರಾಯವಿದೆ. ಕಾರಣ ಈ ವಿಷಯವನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿರುವ ಪದವಿಪೂರ್ವ ಮತ್ತು ಪದವಿ ತರಗತಿಗಳ ವಿದ್ಯಾರ್ಥಿಗಳಿಗಾಗಿ ರಚಿತವಾದ ಪಠ್ಯಸಾಮಗ್ರಿಗಳು ಸಂಹವನಕ್ಕೆ ಸೂಕ್ತವಾಗಿವೆಯೇ ಎಂಬುದನ್ನು ಪರಿಶೀಲಿಸಲಾಗಿದೆ. 'ಕಲಿಕಾರ್ಥಿಗಳಲ್ಲಿ ಪಠ್ಯಸಾಮಗ್ರಿಗಳು ಕಲಿಕಾ ಸಾಮರ್ಥ್ಯವನ್ನು ಕುಂಠಿತಗೊಳಿಸಲಾಗಿದೆ' ಎಂಬ ಮಾತುಗಳು ಕೇಳಿಬರುತ್ತವೆ. ಅದನ್ನು ಸರಿಪಡಿಸುವ ಮಾರ್ಗ ತಿಳಿಯುವ ಅಗತ್ಯವಿತ್ತೆಂದು ಭಾವಿಸಿ ಈ ಅಧ್ಯಯನ ಕೈಗೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಮೊದಲನೆಯ ಅಂಶದಲ್ಲಿ ಪೀಠಿಕೆಯನ್ನು ಹೇಳಲಾಗುತ್ತದೆ. ಎರಡನೆಯ ಅಂಶವಾಗಿ ಅಧ್ಯಯನದ ಉದ್ದೇಶಗಳನ್ನು ತಿಳಿಸಲಾಗುತ್ತದೆ. ಮೂರನೆಯ ಅಂಶವಾಗಿ ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಪ್ರಾಮುಖ್ಯತೆಯನ್ನು ಚರ್ಚಿಸಲಾಗಿದೆ. ನಾಲ್ಕನೇ ಅಂಶವಾಗಿ ಅಧ್ಯಯನ ವಿಧಾನವನ್ನು ಕುರಿತು ವಿವರಿಸಲಾಗಿದೆ. ಐದನೆಯ ಅಂಶವಾಗಿ ಅಧ್ಯಯನದ ಅಧ್ಯಾಯಗಳ ವಿಂಗಡಣೆಯನ್ನು/ವಿನ್ಯಾಸವನ್ನು ತಿಳಿಸಲಾಗಿದೆ. ಆರನೆಯ ಅಂಶವಾಗಿ ಅಧ್ಯಯನದ ಮಿತಿಗಳನ್ನು ವಿವರಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶಗಳು

೧. ಕನ್ನಡ ಅರ್ಥಶಾಸ್ತ್ರ ಪಠ್ಯಬರಹಗಳ ಸ್ವರೂಪ ಮತ್ತು ಬೆಳವಣಿಗೆಯನ್ನು ಗುರುತಿಸುವುದು.

೨. ಅರ್ಥಶಾಸ್ತ್ರದ ಪಠ್ಯಸಾಮಗ್ರಿಗಳಲ್ಲಿಯ ಭಾಷಾ ಭಿನ್ನತೆ ಹಾಗೂ ವೈಶಿಷ್ಟ್ಯಗಳನ್ನು ಗುರುತಿಸುವುದು.

೩. ಪಿಯುಸಿ ತರಗತಿಗಳ ಹಾಗೂ ನಾಲ್ಕು ವಿಶ್ವವಿದ್ಯಾಲಯಗಳಲ್ಲಿನ ಪಠ್ಯಕ್ರಮಗಳ ತೌಲನಿಕ ವಿಶ್ಲೇಷಣೆ ಮಾಡುವುದು.

೪. ಪಠ್ಯ ಸಾಮಗ್ರಿಗಳು ವಿದ್ಯಾರ್ಥಿಗಳ ಅಧ್ಯಯನಕ್ಕೆ ಹೇಗೆ ರೂಪಿಸಲ್ಪಟ್ಟಿವೆ ಎಂಬುದನ್ನು ಗುರುತಿಸುವುದು.

೫. ಪಠ್ಯಸಾಮಗ್ರಿಗಳಲ್ಲಿನ ಪಾರಿಭಾಷಿಕ ಪದಗಳ ವಿಶ್ಲೇಷಣೆ ಮಾಡುವುದು.

## ೧.೩ ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಪ್ರಾಮುಖ್ಯತೆ

ಪ್ರಸ್ತುತ ಅಧ್ಯಯನ ಸೈದ್ಧಾಂತಕ ಮತ್ತು ಇಂಪಿರಿಕಲ್ ಅಧ್ಯಯನವೂ ಆಗಿದೆ. ಅರ್ಥಶಾಸ್ತ್ರದಲ್ಲಿ ರಚಿತವಾದ ಕನ್ನಡ ಪಠ್ಯಕ್ರಮಗಳ ಹಿಂದೆ ಇರುವ ಭಾಷಾಂತರ ಅಧ್ಯಯನದ ಸೈದ್ಧಾಂತಿಕ ಸಂಗತಿಗಳನ್ನು ತಿಳಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಅಲ್ಲದೇ ಈ ರೀತಿಯ ಕಾರ್ಯದಲ್ಲಿ ಕಾಲಕಾಲಕ್ಕೆ ಆಗಿರುವ ಬದಲಾವಣೆಯನ್ನು ಗುರುತಿಸುವ ಪ್ರಯತ್ನವನ್ನು ಸಹ ಇದೇ ಸಂದರ್ಭದಲ್ಲಿ ಅಧ್ಯಯನ ಮಾಡಲಾಗುತ್ತದೆ. ಅರ್ಥಶಾಸ್ತ್ರವು ಕನ್ನಡದ ಬಳಕೆಯಾಗುವ ಸಂದರ್ಭವು ವಿವಿಧ ಕಾಲಘಟ್ಟಗಳಲ್ಲಿ ಆಗಿರುವ ಬದಲಾವಣೆಗಳನ್ನು ಈ ಅಧ್ಯಯನವು ಗುರುತಿಸಿದೆ. ಇದಲ್ಲದೇ ಅರ್ಥಶಾಸ್ತ್ರದ ಪಠ್ಯಕ್ರಮದಲ್ಲಿ ಆಗಿರುವ ಬದಲಾವಣೆಗಳು ಅವುಗಳ ಆಶಯಗಳನ್ನು ತಿಳಿಯಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಇದರಿಂದಾಗಿ ಪ್ರಸ್ತುತ ಅಧ್ಯಯನ ಪ್ರಬಂಧವು ಸೈದ್ಧಾಂತಿಕ ಮತ್ತು ಇಂಪಿರಿಕಲ್ ಅಧ್ಯಯನವೂ ಸಹ ಆಗಿದೆ ಎಂದು ಹೇಳಬಹುದಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ನಾಲ್ಕು ವಿಶ್ವವಿದ್ಯಾಲಯಗಳಿಗೆ ಸೀಮಿತವಾಗಿದೆ. ರಾಜ್ಯದ ನಾಲ್ಕು ಕಂದಾಯ ವಿಭಾಗಗಳಿಗೆ ಒಂದರಂತೆ ವಿಶ್ವವಿದ್ಯಾಲಯಗಳನ್ನು ಆಯ್ಕೆ ಮಾಡಲಾಗಿದೆ. ಆಯ್ಕೆಯ ವಿಶ್ವವಿದ್ಯಾಲಯ ಪ್ರತಿ ಕಂದಾಯ ವಿಭಾಗದಲ್ಲಿ ಸ್ಥಾಪಿತವಾದ ಮೊದಲನೆಯ ಸಾಮಾನ್ಯ ವಿಶ್ವವಿದ್ಯಾಲಯ ಆಗಿರುತ್ತದೆ. ಅವುಗಳೆಂದರೆ, ಮೈಸೂರು ವಿಭಾಗದಲ್ಲಿ ಮೈಸೂರು ವಿಶ್ವವಿದ್ಯಾಲಯ ಮೈಸೂರು, ಬೆಂಗಳೂರು ವಿಭಾಗದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು, ಬೆಳಗಾವಿ ವಿಭಾಗದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಮತ್ತು ಗುಲಬುರ್ಗಾ ವಿಭಾಗದಲ್ಲಿ ಗುಲಬುರ್ಗಾ ವಿಶ್ವವಿದ್ಯಾಲಯ ಗುಲಬುರ್ಗಾ. ಈ ನಾಲ್ಕು ವಿಶ್ವವಿದ್ಯಾಲಯಗಳ ವ್ಯಾಪ್ತಿಯೊಳಗೆ ಬರುವ ಮೂರು ವರ್ಷಗಳ ಬಿ.ಎ.(ಕಲಾ) ಪದವಿ ತರಗತಿಗೆ ನಿಗಧಿಡಿಸಿದ 'ಅರ್ಥಶಾಸ್ತ್ರ' ಪಠ್ಯಸಾಮಗ್ರಿಗಳನ್ನು ಕುರಿತಾದ ಈ ಅಧ್ಯಯನವಿರುತ್ತದೆ. ನಾಲ್ಕು ವಿಶ್ವವಿದ್ಯಾಲಯಗಳು ಮೂರು ವರ್ಷಗಳ ಪದವಿ ತರಗತಿಗೆ ನಿಗಧಿಪಡಿಸಿದ ೧೯೯೦-೯೧ ರಿಂದ ೨೦೧೪-೧೫ ರಲ್ಲಿದ್ದ ಪಠ್ಯಕ್ರಮವನ್ನು ಈ ಅಧ್ಯಯನ ಮಾಡುತ್ತದೆ. ಅದರಂತೆ ಪದವಿಪೂರ್ವ ಶಿಕ್ಷಣ ಇಲಾಖೆಯು ಕಲಾ ವಿಭಾಗದ ಎರಡು ವರ್ಷಗಳಿಗೆ ಗೊತ್ತುಪಡಿಸಿದ 'ಅರ್ಥಶಾಸ್ತ್ರ'ವನ್ನೂ ಸಹ ಅಧ್ಯಯನ ಮಾಡಲಾಗುತ್ತದೆ. ಎರಡು ವರ್ಷಗಳ ಪಿಯುಸಿ ಪಠ್ಯಕ್ರಮ ೧೯೭೧-೭೨ ರಿಂದ ೨೦೧೪-೧೫ ರವರೆಗೆ ಇರುವುದನ್ನು ಈ ಅಧ್ಯಯನ ಪರಿಗಣಿಸಲಾಗಿದೆ. ಪಿಯುಸಿ ತರಗತಿಯನ್ನು ವಿಶ್ವವಿದ್ಯಾಲಯ ವ್ಯಾಪ್ತಿಯಿಂದ ಪ್ರತ್ಯೇಕಿಸಿ ಪ್ರತ್ಯೇಕವಾದ ಇಲಾಖೆಯನ್ನು (ಮಂಡಳಿ) ಸ್ಥಾಪಿಸಿ, ಒಂದು ವರ್ಷದ ಬದಲಿ ಪಿಯುಸಿಯನ್ನು ಎರಡು ವರ್ಷದ ಕೋರ್ಸನ್ನಾಗಿ ಬದಲಾಯಿಸಲಾಗಿದೆ. ಆದ್ದರಿಂದ ಈ ಅವಧಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ೧೯೯೦-೯೧ನೇ ವರ್ಷವನ್ನು ಆಯ್ಕೆ ಮಾಡಿಕೊಳ್ಳಲು ಮುಖ್ಯ ಕಾರಣ ಸುಮಾರು ಎರಡು ದಶಕಗಳ ಪಠ್ಯಕ್ರಮ ಅಧ್ಯಯನಕ್ಕೆ ಲಭ್ಯವಾಗುತ್ತದೆ. ಎರಡನೇ ಕಾರಣ

ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಹೊಸ ಆರ್ಥಿಕ ನೀತಿ ೧೯೯೧ ರಿಂದ LPG ಜಾರಿಗೆ ಬಂದವು. ಇದು ಆರ್ಥಿಕ ವ್ಯವಸ್ಥೆಯ ಸಂಧಿಕಾಲ. ಈ ಎಲ್ಲಾ ಕಾರಣಗಳಿಂದಾಗಿ ಈ ಅವಧಿ ಮಹತ್ವ ಪಡೆಯುತ್ತದೆ. ಈ ಹಿನ್ನೆಲೆಯಲ್ಲಿ ಈ ಅವಧಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಹಲವು ನಿಟ್ಟಿನಲ್ಲಿ ತನ್ನ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಕನ್ನಡದ ಅರ್ಥಶಾಸ್ತ್ರ ಕೃತಿಗಳ ರಚನಾ ಪ್ರಕ್ರಿಯೆ ಯಾವಾಗಿನಿಂದ ಆರಂಭವಾಯಿತು ಎಂಬ ಮಾಹಿತಿಯನ್ನು ನೀಡುವಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ಪಠ್ಯ ಬರಹಗಳ ಸ್ವರೂಪ ಮತ್ತು ಬೆಳವಣಿಗೆಯನ್ನು ಗುರುತಿಸುವಲ್ಲಿಯೂ ಮಹತ್ವ ಪಡೆಯುತ್ತದೆ. ಕನ್ನಡ ಅರ್ಥಶಾಸ್ತ್ರ ಕೃತಿಗಳ ಮಾಹಿತಿ ಒಂದೆಡೆ ಸೇರಿಸಲು ಪ್ರಯತ್ನಿಸಲಾಗಿದೆ. ಇದರಿಂದ ಅನುವಾದಿತ ಕೃತಿಗಳ ಪ್ರಮಾಣ ಆರಂಭದಲ್ಲಿ ಹೇಗಿತ್ತು ಮತ್ತು ಈಗ ಯಾವ ಪ್ರಮಾಣದಲ್ಲಿದೆ ಎಂಬುದನ್ನು ವಿಶ್ಲೇಷಿಸುವಲ್ಲಿ ಮಹತ್ವ ಪಡೆಯುತ್ತದೆ. ಈ ಅಧ್ಯಯನವು ಒದಗಿಸುವ ಪ್ರಯತ್ನ ಮಾಡಲಾಗಿದೆ. ಅರ್ಥಶಾಸ್ತ್ರ ಕೃತಿ ರಚನಾಕಾರರ ಅಂದರೆ ಭಾಷಾಂತರಕಾರರ ಮಾಹಿತಿ ಒಂದೆಡೆ ಸಂಗ್ರಹಿಸುವುದರಿಂದ ಭವಿಷ್ಯದಲ್ಲಿ ಮಹತ್ವ ಪಡೆಯುವುದು. ಯಾವ ಯಾವ ಪ್ರದೇಶದವರು ಹೆಚ್ಚಿನ ಸಂಖ್ಯೆಯಲ್ಲಿ ಅನುವಾದಕರಿದ್ದಾರೆನ್ನುವ ಅಂಶವನ್ನು ತಿಳಿಸುವಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ಪ್ರದೇಶವಾರು ಭಾಷಾ ಭಿನ್ನತೆಯನ್ನು ಗುರುತಿಸುವಲ್ಲಿ ಈ ಅಧ್ಯಯನ ಮಹತ್ವ ಪಡೆಯುತ್ತದೆ. ಪಠ್ಯ ಸಾಮಗ್ರಿಗಳಲ್ಲಿನ ಭಾಷಾ ಭಿನ್ನತೆ ಹಾಗೂ ವೈಶಿಷ್ಟ್ಯತೆಗಳನ್ನು ಗುರುತಿಸುವಲ್ಲಿ ಮಹತ್ವದ್ದಾಗಿದೆ. ಅರ್ಥಶಾಸ್ತ್ರ ವಿದ್ಯಾರ್ಥಿಗಳಿಗೆ ಉಂಟಾಗುವ ಸಮಸ್ಯೆಗಳನ್ನು ಪಠ್ಯಸಾಮಗ್ರಿಗಳಲ್ಲಿನ ಗುರುತಿಸಿ ಸೂಕ್ತ ಪರಿಹಾರೋಪಾಯಗಳನ್ನು ಸೂಚಿಸುವಲ್ಲಿ ಈ ಅಧ್ಯಯನ ಪ್ರಾಮುಖ್ಯತೆ ಪಡೆಯುತ್ತದೆ. ಕನ್ನಡ ಅರ್ಥಶಾಸ್ತ್ರದಲ್ಲಿ ಪಾರಿಭಾಷಿಕ ಪದಗಳಲ್ಲಿನ ವ್ಯತ್ಯಾಸ ಲೇಖಕರಿಂದ ಲೇಖಕರಿಗೆ ಹೇಗೆ ಭಿನ್ನವಾಗಿವೆ ಮತ್ತು ಈ ಭಿನ್ನತೆಗೆ ಕಾರಣಗಳನ್ನು ತಿಳಿಯುವಲ್ಲಿ ಅಧ್ಯಯನ ಮಹತ್ವದ್ದಾಗಿದೆ. ಪಾರಿಭಾಷಿಕ ಪದಗಳು ಯಾವ ಯಾವ ವಿಧದಲ್ಲಿ ಬಳಕೆಯಾಗುತ್ತವೆ ಎಂಬುದನ್ನು ಅರಿಯುವಲ್ಲಿ ಈ ಅಧ್ಯಯನ ಪ್ರಾಮುಖ್ಯತೆ ಪಡೆಯುತ್ತದೆ. ವಿವಿಧ ವಿಶ್ವವಿದ್ಯಾಲಯಗಳ ಪಠ್ಯಕ್ರಮಗಳಲ್ಲಿನ ಭಿನ್ನತೆ ಮತ್ತು ಸಾಮ್ಯತೆಯನ್ನು ವಿಶ್ಲೇಷಿಸುವಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ಪದವಿಪೂರ್ವ ಶಿಕ್ಷಣ ಇಲಾಖೆಯ ಹಾಗೂ ವಿವಿಧ ವಿಶ್ವವಿದ್ಯಾಲಯಗಳ ಪಠ್ಯಕ್ರಮ ಪ್ರಸ್ತುತತೆಗೆ ಪೂರಕವಾಗಿರುವುದನ್ನು ಗುರುತಿಸುವಲ್ಲಿ ಪ್ರಸ್ತುತ ಅಧ್ಯಯನವು ಮಹತ್ವದ್ದಾಗಿದೆ. ಭವಿಷ್ಯದ ಪಠ್ಯ ಸಾಮಗ್ರಿಗಳು ಹೇಗಿರಬೇಕೆಂಬ ಬಗ್ಗೆ ಸಲಹೆ ಸೂಚನೆಗಳನ್ನು ನೀಡುವಲ್ಲಿ ಈ ಅಧ್ಯಯನವು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ.

## ೧.೪ ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಬೇಕಾಗುವ ವಿಷಯ ಸಾಮಗ್ರಿಗಳನ್ನು ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳಿಂದ ಸಂಗ್ರಹಿಸಿಕೊಳ್ಳಲಾಗಿದೆ. ಪ್ರಾಥಮಿಕ ಸಾಮಗ್ರಿಗಳನ್ನು ಸಂದರ್ಶನ ಮತ್ತು ಪ್ರಶ್ನಾವಳಿಗಳ

ಮೂಲಕ ಸಂಗ್ರಹಿಸಲಾಗಿದೆ. ಮುಕ್ತ ಪ್ರಶ್ನಾವಳಿಗಳನ್ನು ಬಳಸಿಕೊಳ್ಳಲಾಗಿದೆ. ವಿದ್ಯಾರ್ಥಿಗಳಿಗೆ, ಉಪನ್ಯಾಸಕರಿಗೆ ಮತ್ತು ಕನ್ನಡ ಅರ್ಥಶಾಸ್ತ್ರ ಭಾಷಾಂತರಕಾರರಿಗೆ ಪ್ರತ್ಯೇಕವಾದ ಪ್ರಶ್ನಾವಳಿಗಳನ್ನು ರಚಿಸಿಕೊಳ್ಳಲಾಗಿತ್ತು. ನಾಲ್ಕು ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ತಲಾ ಒಂದುನೂರು ವಿದ್ಯಾರ್ಥಿಗಳಿಗೆ ಪ್ರಶ್ನಾವಳಿಗಳ ಮೂಲಕ ಮಾಹಿತಿ ಪಡೆಯಲಾಗಿದೆ. ಈ ನೂರು ವಿದ್ಯಾರ್ಥಿಗಳನ್ನು ರ್‍ಯಾಂಡಮ್ ಆಗಿ ಆಯ್ಕೆ ಮಾಡಿಕೊಳ್ಳಲಾಗಿತ್ತು. ಪ್ರತಿ ಕಂದಾಯ ವಿಭಾಗದಿಂದ ೨೦ ಜನ ಉಪನ್ಯಾಸಕರಿಗೆ ಪ್ರಶ್ನಾವಳಿಗಳನ್ನು ನೀಡುವ ಮೂಲಕ, ಮಾಹಿತಿ ಸಂಗ್ರಹಿಸಲಾಗಿದೆ. ಉಪನ್ಯಾಸಕರ ಆಯ್ಕೆಯಲ್ಲಿ ರ್‍ಯಾಂಡಂ ಪದ್ಧತಿ ಅನುಸರಿಸಲಾಗಿದೆ. ಲೇಖಕರನ್ನೂ ಸಹ ರ್‍ಯಾಂಡಂ ಪದ್ಧತಿಯ ಮೂಲಕ ಪ್ರತಿ ಕಂದಾಯ ವಿಭಾಗದಲ್ಲಿ ೫ ಜನರಂತೆ ಆಯ್ಕೆ ಮಾಡಿಕೊಳ್ಳಲಾಗಿತ್ತು.

ಆನುಷಂಗಿಕ ಮೂಲಗಳಾಗಿ ವಿವಿಧ ಖಾಸಗಿ ವ್ಯಕ್ತಿಗಳು, ಸಂಘ ಸಂಸ್ಥೆಗಳು, ಇಲಾಖೆಗಳು, ಮಂಡಳಿಗಳು, ಅಧ್ಯಯನ ಪೀಠಗಳು, ಪ್ರಕಾಶನಗಳು ಮತ್ತು ವಿಶ್ವವಿದ್ಯಾಲಯಗಳು ಪ್ರಕಟಿಸಿದ ಪಠ್ಯಪುಸ್ತಕಗಳಿಂದ ಅಗತ್ಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ವಿವಿಧ ವರದಿಗಳು, ವಿವಿದ ಕಮ್ಮಟಗಳಲ್ಲಿನ ಚರ್ಚಿತ ವಿಷಯ ಗಳ ಪ್ರಕಟಣೆಗಳು, ಲೇಖನಗಳು, ಪುಸ್ತಕಗಳಿಂದ (ಮಿತಪ್ರಮಾಣದ ಮತ್ತು ಲಭ್ಯವಾದ ಆದರೆ ಎಲ್ಲವನ್ನು ಬಳಸಲಾಗಿಲ್ಲ) ಅಗತ್ಯವಾದ ಸಂಗತಿಗಳನ್ನು ಕ್ರೂಢಿಕರಿಸಿ ಕೊಳ್ಳಲಾಗಿದೆ. ಆನುಷಂಗಿಕ/ಮಾಧ್ಯಮಿಕ ಸಾಮಗ್ರಿಗಳನ್ನು ಆಯ್ಕೆಮಾಡಿಕೊಂಡ ನಾಲ್ಕು ವಿಶ್ವವಿದ್ಯಾಲಯಗಳ ಪದವಿ ಪಠ್ಯಕ್ರಮಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೆ ಅವುಗಳ ಅಧ್ಯಯನಕ್ಕೆ ರೂಪಿವಾದ/ರಚಿಸಿದ ವಿವಿಧ ಪಠ್ಯಪುಸ್ತಕಗಳನ್ನು ಬಳಸಿಕೊಳ್ಳಲಾಗಿದೆ. ಪೂರಕವಾಗುವ ಸಂದರ್ಭ ಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಪದವಿಪೂರ್ವ ಶಿಕ್ಷಣ ಇಲಾಖೆಯ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳನ್ನು ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಕೆಲವು ಮಿತಿಗಳನ್ನು ಹೊಂದಿದೆ. ಕರ್ನಾಟಕ ರಾಜ್ಯದಲ್ಲಿ ಸಾಮಾನ್ಯ ವಿಶ್ವವಿದ್ಯಾಲಯಗಳು, ತಾಂತ್ರಿಕ ವಿಶ್ವವಿದ್ಯಾಲಯಗಳು ಮತ್ತು ಮುಕ್ತ ವಿಶ್ವವಿದ್ಯಾಲಯಗಳು ಅಸ್ತಿತ್ವದಲ್ಲಿ ಇವೆ. ಈ ಅಧ್ಯಯನದ ವ್ಯಾಪ್ತಿಗೆ ಸಾಮಾನ್ಯ ವಿಶ್ವವಿದ್ಯಾಲಯಗಳಾದ ಮೈಸೂರು ವಿಶ್ವವಿದ್ಯಾಲಯ ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಮತ್ತು ಗುಲಬುರ್ಗಾ ವಿಶ್ವವಿದ್ಯಾಲಯ ಗುಲಬುರ್ಗಾ ಸೇರಿರುತ್ತವೆ. ರಾಜ್ಯದಲ್ಲಿ ಇನ್ನೂ ಅನೇಕ ಸಾಮಾನ್ಯ ವಿಶ್ವವಿದ್ಯಾಲಯಗಳು ಅಂದರೆ ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ, ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ, ಬೆಳಗಾವಿ ರಾಣಿಚೆನ್ನಮ್ಮ ಮಹಿಳಾ ವಿಶ್ವವಿದ್ಯಾಲಯ, ಬಿಜಾಪೂರ, ಈ ಮೊದಲಾದವುಗಳು ಇದ್ದರೂ ಸಹ ಅವು ಈ ಅಧ್ಯಯನದ ವ್ಯಾಪ್ತಿಗೆ ಬರುವುದಿಲ್ಲ. ಪದವಿಪೂರ್ವ ಶಿಕ್ಷಣ ಇಲಾಖೆಯು ಎರಡು ವರ್ಷಗಳ ಪಿಯುಸಿ ಕಲಾ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗಗಳನ್ನು ಹೊಂದಿದೆ. ಅರ್ಥಶಾಸ್ತ್ರ ವಿಷಯವನ್ನು ಕಲಾ, ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳಲ್ಲಿ ಅಧ್ಯಯನ ಮಾಡಲು ಅವಕಾಶ ನೀಡಿದೆ.

ಎರಡೂ ವಿಭಾಗಗಳಿಗೂ ಒಂದೇ ಪಠ್ಯಕ್ರಮವಿದ್ದರೂ ಸಹ ಕಲಾ ವಿಭಾಗದ ಅರ್ಥಶಾಸ್ತ್ರವನ್ನು ಮಾತ್ರ ಈ ಅಧ್ಯಯನದ ವ್ಯಾಪ್ತಿಗೆ ಸೇರಿಸಲಾಗಿದೆ. ಉಳಿದ ಯಾವ ವಿಭಾಗದಲ್ಲಿ ಅರ್ಥಶಾಸ್ತ್ರ ಪಠ್ಯವಾಗಿದ್ದರೂ ಅದು ಈ ಅಧ್ಯಯನದ ವ್ಯಾಪ್ತಿಗೆ ಬರುವುದಿಲ್ಲ. ಪಿಯುಸಿ ಕಲಾ ವಿಭಾಗದ ಅರ್ಥಶಾಸ್ತ್ರ ಪಠ್ಯಕ್ರಮ ೧೯೭೧–೭೨ರಿಂದ ೨೦೧೪–೧೫ರ ವರೆಗಿರುವುದನ್ನು ಮಾತ್ರ ಪರಿಗಣಿಸುತ್ತದೆ. ೧೯೭೧–೭೨ರ ಪೂರ್ವದ ಮತ್ತು ೨೦೧೪–೧೫ರ ನಂತರದ ಪಠ್ಯಕ್ರಮ ಈ ಆಧ್ಯಯನದ ವ್ಯಾಪ್ತಿಗೆ ಬರುವುದಿಲ್ಲ.

ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ನಾಲ್ಕು ವಿಶ್ವವಿದ್ಯಾಲಯಗಳಲ್ಲಿ ೧೯೯೦–೯೧ರಲ್ಲಿದ್ದ ಮೂರು ವರ್ಷದ ಕಲಾ ಪದವಿಗೆ ಗೊತ್ತುಮಾಡಿದ ಅರ್ಥಶಾಸ್ತ್ರ ಪಠ್ಯಕ್ರಮದಿಂದ ೨೦೧೪–೧೫ರವರೆಗಿನ ಪಠ್ಯಕ್ರಮವನ್ನು ಅಧ್ಯಯನ ಮಾಡುವ ಮಿತಿಯನ್ನು ಹೊಂದಿದೆ. ಅರ್ಥಶಾಸ್ತ್ರವು ನಾಲ್ಕು ವಿಶ್ವವಿದ್ಯಾಲಯಗಳ ವ್ಯಾಪ್ತಿಯ ವಾಣಿಜ್ಯ, ವಿಜ್ಞಾನ, ತಂತ್ರಜ್ಞಾನ, ಡಿಪ್ಲೋಮಾ, ಕೃಷಿ ವಿಜ್ಞಾನ, ಬಿಬಿಎ, ಬಿಬಿಎಂ ಈ ಮೊದಲಾದ ತರಗತಿಗಳಲ್ಲಿ ಅಧ್ಯಯನ ಮಾಡಲು ಅವಕಾಶವಿದ್ದರೂ ಸಹ ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಸಂಶೋಧಕರು ಯಾವುದೇ ನಿರ್ಣಯ ಕೈಗೊಂಡಿದ್ದರೆ ಬೇರೆ ಪ್ರಬಂಧಗಳಿಗೆ ಬಳಸುವಂತಿಲ್ಲ.

## ೧.೬ ಅಧ್ಯಾಯಗಳ ವಿನ್ಯಾಸ

ಪ್ರಸ್ತುತ ಮಹಾಪ್ರಬಂಧವನ್ನು ಆರು ಅಧ್ಯಾಯಗಳಾಗಿ ವಿಭಜಿಸಿಕೊಳ್ಳಲಾಗಿದೆ. ಮೊದಲ ಅಧ್ಯಾಯವು 'ಪ್ರವೇಶ' ಎಂದಿದ್ದು, ಇದರಲ್ಲಿ ಅಧ್ಯಯನ ಉದ್ದೇಶ, ಸ್ವರೂಪ, ವ್ಯಾಪ್ತಿ, ಪ್ರಾಮುಖ್ಯತೆ ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ. ಅರ್ಥಶಾಸ್ತ್ರ ಪಠ್ಯಬರಹಗಳ ಸ್ವರೂಪ ಮತ್ತು ಬೆಳವಣಿಗೆ ಎನ್ನುವ ಎರಡನೇ ಅಧ್ಯಾಯದಲ್ಲಿ ಪಠ್ಯದ ಇತಿಹಾಸ, ಅರ್ಥಶಾಸ್ತ್ರ: ಬೋಧನೆ ಇತಿಹಾಸ, ಬರಹಗಳ ಸ್ವರೂಪ ಮತ್ತು ಬೆಳವಣಿಗೆ ಇತ್ಯಾದಿ ಅರಿಯುವ ಪ್ರಯತ್ನವನ್ನು ಮಾಡಲಾಗಿದೆ. ವಿವಿಧ ವಿಶ್ವವಿದ್ಯಾಲಯಗಳು ಮತ್ತು ಪದವಿಪೂರ್ವ ಶಿಕ್ಷಣ ಇಲಾಖೆಯ ಪಠ್ಯಸಾಮಗ್ರಿಗಳ ಸಾಮ್ಯತೆ ಮತ್ತು ವೈವಿದ್ಯತೆಯನ್ನು ಮೂರನೇ ಅಧ್ಯಾಯವು ಮಾಡುತ್ತದೆ. ನಾಲ್ಕನೇ ಅಧ್ಯಾಯದಲ್ಲಿ ಪಠ್ಯಸಾಮಗ್ರಿ: ಭಾಷೆ ಎಂದಿದ್ದು, ಇದರಲ್ಲಿ ವಿವಿಧ ವಿಶ್ವವಿದ್ಯಾಲಯಗಳ ಅರ್ಥಶಾಸ್ತ್ರ ಪಠ್ಯಕ್ರಮದಲ್ಲಿ ಬಳಸಲಾದ ಪದಗಳ ಸಾಮಾನ್ಯ ಪದಗಳು, ವಿಶೇಷ ಪದಗಳು, ಆಡು ಭಾಷೆಯ ಪದಗಳು, ವಿಷಯವಸ್ತುವಿನ ನಿರೂಪಣೆ ಮತ್ತು ವಿಶ್ಲೇಷಣೆ ಕುರಿತಾದ ವಿಶ್ಲೇಷಣೆಯನ್ನು ಮಾಡಲಾಗಿದೆ. ಅಲ್ಲದೆ ಭಾಷಾ ಭಿನ್ನತೆ ಕುರಿತಂತೆ ಚರ್ಚೆಯನ್ನು ಮಾಡಲಾಗಿದೆ. ಐದನೇ ಅಧ್ಯಾಯ ಪಾರಿಭಾಷಿಕ ಪದಗಳ ವಿಶ್ಲೇಷಣೆ ಎಂದಿದ್ದು, ಇದರಲ್ಲಿ ಹೊಸಪದಗಳ ಸೃಷ್ಟಿಯನ್ನು ಮೊದಲನೇ ಅಂಶದಲ್ಲಿ, ಎರಡನೇ ಅಂಶದಲ್ಲಿ ಸ್ವೀಕರಣವನ್ನು ವಿವರಿಸಲಾಗಿದೆ. ಮೂರನೇ ಅಂಶದಲ್ಲಿ ಸ್ಥಾನಾಂತರ ಸ್ವೀಕರಣ ಕುರಿತು ಚರ್ಚಿಸಲಾಗುವುದು. ಐದನೇ ಅಂಶ ಸಮನಾರ್ಥಕ ಪದಗಳ ಬಳಕೆ ಕುರಿತಂತೆ ಇರುವುದು. ವಿವರಣಾತ್ಮಕ ಭಾಷಾಂತರ ಕುರಿತು ಮತ್ತು ಆರನೇ ಅಂಶದಲ್ಲಿ ಚರ್ಚಿಸಲಾಗುವುದು. ಏಳನೇ

ಅಂಶವು ಸಾಮಾನ್ಯ ಪದಗಳನ್ನು ಕುರಿತು ವಿಶ್ಲೇಷಿಸುತ್ತದೆ. ಮಹಾಪ್ರಬಂಧದ ಆರನೇ ಮತ್ತು ಕೊನೆಯ ಅಧ್ಯಾಯವು 'ಅಧ್ಯಯನದ ಫಲಿತಗಳು' ಎಂದಿದ್ದು, ಇದರಲ್ಲಿ ಅಧ್ಯಯನದಿಂದ ಕಂಡುಕೊಳ್ಳಲಾದ ಫಲಿತಗಳನ್ನು ವಿವರಿಸಲಾಗಿದೆ ಹಾಗೂ ಪಠ್ಯಕ್ರಮ ರಚಿಸುವ ಸಂದರ್ಭದಲ್ಲಿ ಅನುಸರಿಸಬಹುದಾದ ಕ್ರಮಗಳ ಕುರಿತಂತೆ ಸಲಗೆ ಸೂಚನೆಗಳನ್ನು ನೀಡಲಾಗುವುದು.

## ಅಧ್ಯಾಯ ಎರಡು

# ಪಠ್ಯ ಬರಹಗಳ ಸ್ವರೂಪ ಮತ್ತು ಬೆಳವಣಿಗೆ

೨.೧. ಪಠ್ಯದ ಇತಿಹಾಸ

೨.೨. ಅರ್ಥಶಾಸ್ತ್ರ: ಬೋಧನೆಯ ಇತಿಹಾಸ

೨.೩. ಬರಹಗಳ ಸ್ವರೂಪ ಮತ್ತು ಬೆಳವಣಿಗೆ

# ಅಧ್ಯಾಯ ಎರಡು

# ಪಠ್ಯ ಬರಹಗಳ ಸ್ವರೂಪ ಮತ್ತು ಬೆಳವಣಿಗೆ

## ೨.೧. ಪಠ್ಯದ ಇತಿಹಾಸ

ಭಾರತ ಸ್ವಾತಂತ್ರ್ಯ ಪಡೆಯುವ ಪೂರ್ವದಲ್ಲಿನ ಪಠ್ಯ ಮಾದರಿಗಳು ಮತ್ತು ಶಿಕ್ಷಣ ಮಾಧ್ಯಮವನ್ನು ಸ್ವಾತಂತ್ರ್ಯದ ನಂತರವು ಮುಂದುವರಿಸಿರುವುದನ್ನು ಗಮನಿಸಬಹುದಾಗಿದೆ. ಶಿಕ್ಷಣಕ್ಕೆ ಹೊಸ ರೂಪ–ಸ್ವರೂಪ ಪರಿಭಾವಿಸುವ ಪರಿಕಲ್ಪನೆ ಭಾರತೀಯರಲ್ಲಿರಲಿಲ್ಲ. ಆಗ ಅವರಿಗೆ ರಾಜಕೀಯ ವಿಮುಕ್ತಿ ಮುಖ್ಯವಾಗಿತ್ತು. ಕರ್ನಾಟಕ ಈ ಪರಿಧಿಯ ಹೊರಗುಳಿದಿರಲಿಲ್ಲ "ಭಾಷೆ ಚಲನಶೀಲವಾಗಿದ್ದರಷ್ಟೇ ಉಳಿದುಕೊಳ್ಳುತ್ತದೆ. ಕನ್ನಡ ಉಳಿದು ಬೆಳೆಯಬೇಕಾದರೆ ಅದು ಚಲನ ಶೀಲವಾಗಿರಲೇ ಬೇಕಾಗುತ್ತದೆ. ಎಲ್ಲ ಜೀವಂತ ಭಾಷೆಗಳೂ ಹೀಗೆ ಸದಾ ಬದಾಲಗುತ್ತಿರುತ್ತವೆ." ಎಂಬುದನ್ನು ಇಸ್ಮಾಯಿಲ್ ಇವರು ಟೀಚರ್ ಶೈಕ್ಷಣಿಕ ಮಾಸಪತ್ರಿಕೆ ೨೦೦೯:೩೮ರಲ್ಲಿ ಹೇಳಿರುತ್ತಾರೆ. ಈ ಪರಿಭಾಷೆಯಲ್ಲಿ ಅರ್ಥಶಾಸ್ತ್ರವನ್ನು ಕನ್ನಡಿಕರಿಸಿರುವ ಪ್ರಕ್ರಿಯೆಯು ಆರಂಭವಾಗಿರುವ ಸಾಧ್ಯತೆ ಇದೆ. ಈ ನೆಲೆಯಲ್ಲಿ ಆಲೋಚನೆ ಬಲಗೊಂಡು ಅರ್ಥಶಾಸ್ತ್ರ ಪಠ್ಯಬರಹ ರೂಪಗೊಂಡಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಥ್ಯವಾಗುತ್ತದೆ. ಸರಕಾರದ ಯಾವ ಒತ್ತಾಸೆಯ ಆದೇಶಗಳೂ ಇಲ್ಲದ ಆ ಸಂದರ್ಭದಲ್ಲಿ ಪಠ್ಯಗಳ ರಚನಾ ಪ್ರಕ್ರಿಯೆ ಭಾಷಿಕರ ಅಂತರಂಗದ ಜಿಜ್ಞಾಸೆ ಇಲ್ಲದಿರಲು ಸಾಧ್ಯವಿಲ್ಲ. ಅಂದಿನ ಅರ್ಥಶಾಸ್ತ್ರ ಬೋಧಕರು ಕನ್ನಡಿಕರಿಸುವ ಕಾಯಕ ಆರಂಭಿಸಿರುವುದು ವೆದ್ಯವಾಗುತ್ತದೆ. ೧೯೫೦ರ ದಶಕದ ವೇಳೆಗೆ ಕು.ಶಿ. ಹರಿದಾಸ ಭಟ್ಟರು ಕನ್ನಡದಲ್ಲಿ ಮೊದಲ ಪಠ್ಯ ರಚಿಸಿರುವುದಾಗಿ ತಿಳಿದು ಬರುತ್ತದೆ. "ಕನ್ನಡದಲ್ಲಿ ಅರ್ಥಶಾಸ್ತ್ರದ ಮೂಲತತ್ವಗಳನ್ನು ಕುರಿತು ಮೊದಲನೆಯ ಗ್ರಂಥ. ಇದರಲ್ಲಿ ಆಧುನಿಕ ಪ್ರಪಂಚದ ಆರ್ಥಿಕ ಸುಳವು ಹೊಳವುಗಳನ್ನು ಸುಲಭವಾಗಿ ಗ್ರಹಿಸುವಂತೆ ಸರಳ ಸುಂದರವಾದ ಶೈಲಿಯಲ್ಲಿ ಹಲವು ನಕ್ಷೆಗಳ ನಿದರ್ಶನಗಳ ಸಹಾಯದಿಂದ ರಸವತ್ತಾಗಿ ನಿರೂಪಿಸಲಾಗಿದೆ. ಈ ಗ್ರಂಥಕ್ಕೆ ಮದರಾಸು ವಿಶ್ವವಿದ್ಯಾನಿಲಯದ ಘನವಾದ ಪಾರಿತೋಷಕವು ದೊರಕಿದೆ" ಎಂಬುದನ್ನು ಪ್ರಕಾಶಕ(ಅರ್ಥಶಾಸ್ತ್ರ ೧೯೫೨)ರಲ್ಲಿ ತಿಳಿಸಿರುತ್ತಾರೆ. ಆಗತಾನೆ ಭಾರತ ಗಣ್ಯರಾಜ್ಯಗಳ ಒಕ್ಕೂಟವಾಗಿ ಉದಯಿಸಿತ್ತು. ಭಾಷಾವಾರು ಪ್ರಾಂತ್ಯಗಳ

ರಚನೆಯಾಗಿರದ ಸಂದರ್ಭದಲ್ಲಿ ಪ್ರಾಂತೀಯ ಭಾಷಾ ಬೆಳವಣಿಗೆಗೆ ಪಠ್ಯ ಬರಹಗಳು ಬೀಜಾಂಕುರ ಪಡೆದವು. ೧೯೫೦ರಲ್ಲಿ ಪಠ್ಯ ರಚನೆಯಾದರೂ ೧೯೫೨ರ ವೇಳೆಗೆ ಪ್ರಕಟಗೊಂಡ ಹರಿದಾಸ ಭಟ್ಟರ ಅರ್ಥಶಾಸ್ತ್ರ ಭಾಷೆ, ವಿಷಯವಸ್ತು, ವಿಶ್ಲೇಷಣೆ ಮತ್ತು ನಿರೂಪಣೆ ಈ ಮೊದಲಾದ ಅಂಶಗಳ ಪರಿಶೀಲನೆ ತರುವಾಯವೆ ಅದಕ್ಕೆ ಪಾರಿತೋಷಕವನ್ನು ನೀಡಲಾಗಿದೆ. ಆಗಿನ ಭಾಷೆಯ ಬಗೆಗಿನ ಕಾಳಜಿ ಪಾರಿಭಾಷಿಕ ಪದಗಳ ಪರಿಕಲ್ಪನೆಗಳ ಚಿಂತನೆಯು ವ್ಯಕ್ತವಾಗುತ್ತದೆ.

೧೯೫೬ ನವಂಬರ ೧ರಂದು ಭಾರತ ಸರಕಾರ ಕನ್ನಡ ಭಾಷಿಕರನ್ನು ಒಂದುಗೂಡಿಸಿ 'ಮೈಸೂರು' ಪ್ರಾಂತವೆಂದು ಅಧಿಕೃತವಾಗಿ ಘೋಷಣೆ ಮಾಡಿತು. ಭಾಷಾವಾರು ಪ್ರಾಂತ್ಯಗಳು ರಚನೆಯಾದ ಹಿನ್ನಲೆಯಲ್ಲಿ ಆಯಾ ಭಾಷಾ ಬೆಳವಣೆಗೆಗೆ ಹೆಚ್ಚು ಮಹತ್ವ ಲಭಿಸಿತು. ಈ ವೇಳೆಗೆ ಕನ್ನಡ ಭಾಷೆ ಸಶಕ್ತವಾಗುವ ಲಕ್ಷಣಗಳನ್ನು ಪಠ್ಯ ಬರಹಗಳ ನೆಲೆಯಲ್ಲಿ ಸ್ಪಷ್ಟವಾಗಿ ಗೋಚರಿಸಿದವೆಂದು ಪರಿಭಾವಿಸಬಹುದಾಗಿದೆ. ಪಾಶ್ಚಿಮಾತ್ಯ ಆರ್ಥಿಕ ತತ್ವ ಮತ್ತು ಸಿದ್ದಾಂತಗಳನ್ನು ಕನ್ನಡದ ಪರಿಭಾಷೆಯಲ್ಲಿ ಕಟ್ಟಿಕೊಡಲು ಪ್ರಯತ್ನಗಳು ನಡೆದಿರುವಂತೆ ಕಂಡುಬರುತ್ತವೆ. ೧೯೭೦ರ ದಶಕದಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಪ್ರಾಂತೀಯ ಭಾಷೆಗಳಿಗೆ ಒತ್ತಾಸೆಯಾಗಿ ನಿಂತವು. "ಉಚ್ಚ ಶಿಕ್ಷಣದ ಮಾಧ್ಯವೆಂದು ಕ್ರಮಕ್ರಮವಾಗಿ ಎಲ್ಲಾ ಹಂತಗಳಲ್ಲಿ ಪ್ರಾದೇಶಿಕ ಭಾಷೆಗಳನ್ನು ಅನುಗೊಳಿಸಬೇಕೆನ್ನುವ ಕಾರ್ಯಧೋರಣೆಯನ್ನು ನಮ್ಮ ಕೇಂದ್ರ ಸರಕಾರ ಸ್ವಿಕರಿಸಿದೆ. ಪಠ್ಯಪುಸ್ತಕ ನಿರ್ಮಾಣದ ಕಾರ್ಯಕ್ಕೆ ವಿಶೇಷ ಗಮನಕೊಡುವ ದಿಸೆಯಲ್ಲಿ ರಾಜ್ಯ ಸರಕಾರಗಳನ್ನು ಕೇಳಿ ಕೊಳ್ಳಲಾಗಿದೆ. ಮೈಸೂರು ರಾಜ್ಯ ಸರಕಾರದ ಪ್ರಾದೇಶಕ ಸಮಿತಿಯ ಯೋಜನೆಗಳಿಗುಣವಾಗಿ ಕರ್ನಾಟಕ ವಿಶ್ವವಿದ್ಯಾಲಯವು ಪಠ್ಯಪುಸ್ತಕ ನಿರ್ಮಾಣದ ಕಾರ್ಯವನ್ನು ಕೂಡಲೆ ಕೈಗೊಂಡಿತು. ಇದಕ್ಕಾಗಿ ೧೯೬೮ರಲ್ಲಿ ಒಂದು **'ಕೋ ಆರ್ಡಿನೆಷನ್ ಕಮಿಟಿ'** ನೇಮಕವಾಯಿತು. ಸಮಿತಿಯ ನಿರ್ಣಯದಂತೆ ಪಠ್ಯಪುಸ್ತಕಗಳ ರಚನೆ ಹಾಗೂ ಪ್ರಕಾಶನದ ನಿರ್ದೇಶನಕ್ಕೆಂದು 'ಪಠ್ಯಪುಸ್ತಕ ನಿರ್ದೇಶನಾಲಯ'ವು ಅಸ್ಥಿತ್ವದಲ್ಲಿ ಬಂದಿತು". ಈ ವಿಚಾರವನ್ನು ಅಪ್ಪಾಸಾಹೇಬ ಅಡಕೆ ಇವರು 'ಅರ್ಥಶಾಸ್ತ್ರ ಪರಿಚಯ' ೧೯೬೯:ರಲ್ಲಿ ಹೇಳಿದ್ದಾರೆ. ಪ್ರಾಂತೀಯ ಭಾಷೆಯಲ್ಲಿ ಶಿಕ್ಷಣ ನೀಡಿದರೆ ಅದು ಪರಿಣಾಮಕಾರಿಯೂ ಫಲಪ್ರದವಾಗುತ್ತದೆ ಎಂಬ ಪರಿಕಲ್ಪನೆ ಬಲಗೊಂಡ ಪ್ರಯುಕ್ತ ಪಠ್ಯಸಾಮಾಗ್ರಿಗಳ ರಚನಾ ಪ್ರಕ್ರಿಯೆಗಳು ಆರಂಭವಾದವು. ಈ ವಿವೇಚನೆ ವಿಸ್ತಾರಗೊಂಡು ಪಠ್ಯಪುಸ್ತಕ ನಿರ್ದೇಶನಾಲಯಗಳು ಅಸ್ತಿತ್ವ ಪಡೆಯಲು ಸಾಧ್ಯವಾಯಿತು. ಕರ್ನಾಟಕ ರಾಜ್ಯದಲ್ಲಿ ಕನ್ನಡ ಪಠ್ಯಗಳು ಅಧಿಕೃತವಾಗಿ ಅರಂಭವಾದುದ್ದು ೧೯೭೦ರ ದಶಕದಲ್ಲಿ ಎಂಬುದಕ್ಕೆ ಅಪ್ಪಾಸಾಹೇಬರ ಪ್ರಸ್ತಾವನೆಯು ಪ್ರಾಮುಖ್ಯವೆನಿಸುತ್ತದೆ. ವಿವಿಧ ವಿಷಯಗಳ ಪಠ್ಯಗಳು ಕನ್ನಡದಲ್ಲಿ ಏಕಕಾಲಕ್ಕೆ ರೂಪಗೊಳ್ಳಲು ಪ್ರಕ್ರಿಯೆಗಳನ್ನು ಆರಂಭಿಸಿದ್ದನ್ನು ಇದು ಸಾಕ್ಷಿಕರಿಸುತ್ತದೆ. ೧೯೫೦-೭೦ರ ದಶಕಗಳಲ್ಲಿ ರೂಪಿತ ಕನ್ನಡದ ಅರ್ಥಶಾಸ್ತ್ರದ ಪಠ್ಯಗಳು ವಿಷಯ ಪರಿಣಿತ ಬೋಧಕ ಸಮುದಾಯದ ಸ್ವ ಆಸಕ್ತಿಗಳೆಂದು ಪರಿಭಾವಿಸಬಹುದಾಗಿದೆ. ಅರ್ಥಶಾಸ್ರಗಳಂತ ಮಾನವೀಕ ಮತ್ತು ವಿಜ್ಞಾನಗಳ ವಿಷಯಗಳನ್ನು

ಕನ್ನಡಿಕರಿಸುವ ಪ್ರಕ್ರಿಯೆ ಸುಲಭವಾಗಿರಲಿಲ್ಲ. ಅದರ ಸೂಕ್ಷ್ಮ ಸಮಸ್ಯೆಗಳನ್ನು ಗ್ರಹಿಸಿ ಹಲವಾರು ಉಪಸಮಿತಿಗಳ ರಚನೆ ಮತ್ತು ಹೊಣೆಗಾರಿಕೆಗಳ ಹಂಚಿಕೆ ಕುರಿತು ದಾಖಲಿಸ ಲಾಗಿದೆ.

"ಕನ್ನಡ ಭಾಷೆ ಸಾಹಿತ್ಯಗಳ ಸರ್ವೋತೊಮುಖವಿವಾದ ಬೆಳವಣಿಗೆಯನ್ನು ಸಾಧಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಆರಂಭವಾಯಿತು. ವಿಶ್ವವಿದ್ಯಾನಿಲಯದ ಎಲ್ಲಾ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಲಾಗಿದೆ. ವಿಜ್ಞಾನ ಮತ್ತು ಮಾನವಿಕ ಶಾಸ್ತ್ರಗಳಿಗೆ ಸಂಬಂಧಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಸಂದರ್ಭಗ್ರಂಥಗಳನ್ನು ಹೊರತರುವುದೇ ಈ ವಿಭಾಗದ ಮುಖ್ಯ ಉದ್ದೇಶ. ಮೂರು ರೀತಿಯಲ್ಲಿ ಈ ಕಾರ್ಯವನ್ನು ನೆರವೇರಿಸಬೇಕೆಂದು ಯೋಚಿಸಲಾಗಿದೆ: ೧. ಸಮರ್ಥ ಲೇಖಕರಿಂದ ಗ್ರಂಥಗಳನ್ನು ಬರೆಯಿಸುವುದು. ೨. ಪ್ರಸಿದ್ಧ ಆಕರ, ಸಂದರ್ಭಗ್ರಂಥಗಳನ್ನು ತಜ್ಞರಿಂದ ಭಾಷಾಂತರಿಸುವುದು ೩. ಸಂಸ್ಥೆಯ ಕಾರ್ಯಕರ್ತರೇ ಸಾಧ್ಯವಾದಷ್ಟು ಗ್ರಂಥಗಳನ್ನು ಭಾಷಾಂತರಿಸುವುದು." ಇದನ್ನು 'ಆರ್ಥಿಕ ಚಿಂತನೆಯ ಬೆಳವಣಿಗೆ' ಕೃತಿಯ ಮುನ್ನುಡಿಯಲ್ಲಿನ ಹಾ.ಮಾ. ನಾಯಕರ ಈ ವಿಚಾರಗಳು ಕನ್ನಡ ಅರ್ಥಶಾಸ್ತ್ರ ಪಠ್ಯ ಇತಿಹಾಸದಲ್ಲಿ ಮಹತ್ವವೆಂದು ಭಾವಿಸಬಹುದಾಗಿದೆ. ೧೯೭೦ರ ದಶಕದಲ್ಲಿ ಪಠ್ಯಗಳನ್ನು ಪ್ರಾಂತಿಯತೆ ಮೈಗೂಡಿಸಿಕೊಳ್ಳುವುದರಲ್ಲಿ ಸರಕಾರದ ಜೊತೆ ಜೊತೆಯಲ್ಲಿ ವಿಶ್ವವಿದ್ಯಾಲಯಗಳು ಭಾಷಾ ಬೆಳವಣಿಗೆಯ ಜೊತೆಗೆ ಸ್ಥಳೀಯ ಜನಸಮುದಾಯದ ಭವಿಷ್ಯ ಕಟ್ಟಿಕೊಡುವಲ್ಲಿ ಶ್ರಮಿಸಿರುವುದನ್ನು ಗುರುತಿಸಬಹುದಾಗಿದೆ. ಪಠ್ಯಪುಸ್ತಕಗಳಿಗೆ ಪೂರಕ ಸಾಮಾಗ್ರಿಗಳನ್ನಾಗಿ ಸಂದರ್ಭಗ್ರಂಥಗಳ ಔಚಿತ್ಯವನ್ನು ದೂರದೃಷ್ಟಿಯಿಂದ ಚಿಂತನೆ ನಡೆಸಿರುವುದು ವ್ಯಕ್ತವಾಗುತ್ತದೆ. ಪಠ್ಯಗಳ ರಚನಾ ಪ್ರಕ್ರಿಯೆಯಲ್ಲಿ ಪ್ರತಿಭಾವಂತ ತಜ್ಞರನ್ನು ತೊಡಗಿಸಿರುವುದು ಕಂಡುಬರುತ್ತದೆ. ಒಂದು ಭಾಷೆಯ ಆಳವಾದ ಜ್ಞಾನದ ಮಹತ್ವದಂತೆ ಇನ್ನೊಂದು ಪರಿಸರದ ಜ್ಞಾನಾಂಗವನ್ನು ಕನ್ನಡೀಕರಿಸುವುದು ಕೂಡಾ ಅಷ್ಟೆ ಮಹತ್ವ ಪಡೆಯುತ್ತದೆ. ಮೈಸೂರು ವಿಶ್ವವಿದ್ಯಾಲಯವು ಶಿಕ್ಷಣ ಮಾಧ್ಯಮಕ್ಕಷ್ಟೆ ಸಿಮೀತವಾಗಿ ಚಿಂತನೆ ನಡೆಸಿರಲಿಲ್ಲ, ಹೊಸದಾಗಿ ರೂಪಪಡೆಯುವ ಪಠ್ಯಗಳು ಎಲ್ಲಾ ಅಂದದಲ್ಲಿ ಪೂರ್ಣತೆ ಪಡೆಯುವಂತೆ ಮಾಡುವ ಗುರುತರ ಜವಾಬ್ಧಾರಿ ನಿಭಾಯಿಸಿದೆ. ತಜ್ಞರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಕೆಲಸಮಾಡಿದೆ. ಇಂಗ್ಲಿಷ್ ಮಾಧ್ಯಮದಲ್ಲಿ ಅಧ್ಯಯನ ಮತ್ತು ಅಧ್ಯಾಪನ ಮಾಡಿದ್ದರೂ ಸಹ ಕನ್ನಡ ಪಠ್ಯಗಳ ಪರಿಕಲ್ಪನೆ ಅವರಲ್ಲಿ ತುಂಬಿದಂತೆಯಿದೆ. ಭಾಷಾಂತರದ ಕಾರ್ಯದಲ್ಲಿ ಸಂಸ್ಥೆಯ ಪರಿಣಿತರ ಸಾಮರ್ಥ್ಯಗಳನ್ನು ಗರಿಷ್ಠ ಬಳಕೆಮಾಡಿದ್ದು ಮಹತ್ವದಾಗಿದೆ. ಅವುಗಳ ಪ್ರಕಟಣ ಜವಾಬ್ದಾರಿಯನ್ನು ತಾನೆ ವಹಿಸಿಕೊಂಡ ನಿಲುವು ಉತ್ತೇಜನಕಾರಿಯಾಗಿದೆ.

"ನಮ್ಮ ದೇಶದ ಶಾಲಾ ಕಾಲೇಜುಗಳ ಶಿಕ್ಷಣ ಮಾಧ್ಯಮ ಕುರಿತು ಈ ವರೆಗಿನ ಚರ್ಚೆ ಒಂದು ನಿರ್ದಿಷ್ಠ ನೀತಿಗೆ ಮಾರ್ಗ ಮಾಡಿದೆ. ಪ್ರಾದೇಶಿಕ ಭಾಷೆ ಶಿಕ್ಷಣ ಮಾಧ್ಯವಾಗಬೇಕು ಎಂಬುದು ಈಗ ಸರ್ವಸಮ್ಮತವಾದ ವಿಷಯವಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳ

ಬೆಂಬಲದಿಂದ ಉತ್ತೇಜನ ಪಡೆದು ಭಾರತದ ವಿಶ್ವವಿದ್ಯಾನಿಲಯಗಳು ಹಂತ ಹಂತವಾಗಿ ಈ ಬದಲಾವಣೆಗೆ ಹೊಂದಿಕೊಳ್ಳುತ್ತಿವೆ. ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ಪ್ರಾದೇಶಿಕ ಭಾಷೆಗೆ ಮನ್ನಣೆ ಹಾಗೂ ಸ್ಥಾನ ದೊರಕಿಸಿದುದರಲ್ಲಿ ಮೈಸೂರು ವಿಶ್ವವಿದ್ಯಾನಿಲಯವೇ ಮೊದಲ ಸಂಸ್ಥೆ ಎನ್ನಬಹುದು. ಪ್ರಾಯೋಗಿಕವಾಗಿ ಕೆಲವು ನಿರ್ದಿಷ್ಟ ಪಠ್ಯವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆರಂಭವಾದ ಕನ್ನಡ ಮಾಧ್ಯವನ್ನು ಇಂದು ಇಂಗ್ಲೀಷ ಮಾಧ್ಯಮದ ಜೊತೆಗೆ ಸಾಮಾನ್ಯವಾಗಿ ಎಲ್ಲಾ ಹಂತಗಳಲ್ಲಿ ಅನುಸರಿಸುವ ಪ್ರಗತಿಯುತ ನೀತಿಯನ್ನು ಮೈಸೂರು ವಿಶ್ವವಿದ್ಯಾನಿಲಯ ಈಗ ಕೈಗೊಂಡಿದೆ. ಪ್ರಾದೇಶಿಕ ಭಾಷೆಯ ಮೂಲಕ ವಿದ್ಯಾಭ್ಯಾಸ ಯಶಸ್ವಿಯಾಗಿ ನಡೆಯಬೇಕಾದರೆ ಜ್ಞಾನಾಭಿವೃದ್ಧಿ ಮಾಡುವಂತಹ ಸಾಹಿತ್ಯ ಬಂಡಾರ ಬೆಳೆಯಬೇಕು. ಕೇವಲ ಕವಿತೆ, ಕತೆ, ಕಾದಂಬರಿ, ನಾಟಕ ಇವುಗಳಿಂದ ತೃಪ್ತಿಪಡುತ್ತಿದ್ದ ಕನ್ನಡ ಜನಕ್ಕೆ ಇಂದು ಅರ್ಥ, ರಾಜ್ಯ, ಸಮಾಜ, ಭೌತ, ಪ್ರಾಕೃತ, ಇತ್ಯಾದಿ ವಿಜ್ಞಾನಗಳನ್ನು ಕುರಿತ ಕನ್ನಡ ಗ್ರಂಥಗಳ ಅವಶ್ಯಕತೆಯ ಅರಿವು ಉಂಟಾಗುತ್ತಿದೆ. ಪಠ್ಯಪುಸ್ತಕಗಳು ಉದ್ಗ್ರಂಥಗಳು, ಸಂಶೋಧನಾ ಲೇಖನಗಳು ಇವೆಲ್ಲವುಗಳನ್ನೂ ಕನ್ನಡದಲ್ಲಿ ಒದಗಿಸಲು ನಾವು ವಿಶೇಷವಾಗಿ ಪ್ರಯತ್ನ ನಡೆಸಬೇಕು. ವಿದ್ಯಾಭ್ಯಾಸದ ಉನ್ನತಮಟ್ಟದ ಸಾಧನೆಗೂ ಜ್ಞಾನ ಪ್ರಸರಣೆಗೂ ಇವು ಸಹಾಯಕವಾಗುತ್ತವೆ" ಎಂಬುದನ್ನು ಮೈಸೂರು ವಿಶ್ವವಿದ್ಯಾನಿಯಲದ ಅರ್ಥಶಾಸ್ತ್ರದ ವಿಭಾಗದ ಮುಖ್ಯಸ್ಥರಾದ ಜಿ.ಟಿ.ಹುಚ್ಚಪ್ಪನವರು ಪ್ರಸ್ಥಾಪಿಸಿರುವಂತೆ ದೇಶ ಸ್ವಾತಂತ್ರ್ಯ ಪಡೆದ ನಂತರ ಶಿಕ್ಷಣ ಮಾಧ್ಯಮ ಈ ಮೊದಲಿದ್ದ ಇಂಗ್ಲೀಷೇ ಮುಂದುವರಿಯಬೇಕೇ, ಇಲ್ಲವೆ ಪ್ರಾದೇಶಿಕ ಭಾಷೆಯನ್ನು ಅನುಸರಿಬೇಕೇ ಎಂಬ ಬಗ್ಗೆ ತೀವ್ರತರವಾದ ಪರ ಮತ್ತು ವಿರೋಧ ಚರ್ಚೆಗಳು ನಡೆದಿವೆ. ಅಂತಿಮವಾಗಿ ಪ್ರಾದೇಶಿಕತೆಗೆ ಮಹತ್ವ ಕೊಟ್ಟಿರುವುದು ತಿಳಿದು ಬರುತ್ತದೆ. ಪ್ರಾದೇಶಿಕ ಭಾಷೆ ಶಿಕ್ಷಣದ ಮಾಧ್ಯವಾಗಲು ಕಾಲಾವಕಾಶ ಬೇಕಾಗುತ್ತದೆ. ಏಕಕಾಲದಲ್ಲಿ ಎಲ್ಲಾ ಹಂತಗಳಲ್ಲಿ ಪ್ರಾದೇಶಿಕ ಪಠ್ಯಗಳನ್ನು ರೂಪಿಸಲು ಸಾಧ್ಯವಾಗದು. ಇದು ಹಂತ ಹಂತವಾಗಿ ನಡೆಯಬೇಕಾದ ಪ್ರಕ್ರಿಯೆಂಬುದನ್ನು ಸ್ಪಷ್ಟಪಡಿಸುತ್ತಾರೆ. ಮೈಸೂರು ವಿಶ್ವವಿದ್ಯಾನಿಯಲವು ಪ್ರಾದೇಶಿಕ ಭಾಷೆಗೆ ಮನ್ನಣೆ ನೀಡಿದ ವಿಶ್ವವಿದ್ಯಾನಿಲಯಗಳಲ್ಲಿಯೇ ಮೊದಲ ಸಂಸ್ಥೆಯಾಗಿದೆ. ಕನ್ನಡ ಮಾಧ್ಯಮ ಅನುಷ್ಠಾನಕ್ಕಾಗಿ ಕೈಗೊಂಡ ಇದರ ಪ್ರಕ್ರಿಯೆ ಅಮೋಘವಾಗಿದೆ. ಪ್ರಾಯೋಗಿಕವಾಗಿ ನಿರ್ದಿಷ್ಠ ಪಠ್ಯ ವಿಷಯಗಳನ್ನು ಆಯ್ಕೆ ಮಾಡಿಕೊಂಡು ಯಶಸ್ಸು ಪಡೆದಿದೆ. ನಂತರ ಇಂಗ್ಲೀಷ ಮಾಧ್ಯಮದ ಜೊತೆಗೆ ಕನ್ನಡ ಮಾಧ್ಯವನ್ನು ಎಲ್ಲಾ ಹಂತಗಳಲ್ಲಿ ಅನುಷ್ಠಾನಗೊಳಿಸಿದೆ. ಕನ್ನಡ ಮಾಧ್ಯಮವನ್ನು ಬಹುಬೇಗನೆ ಯಶಸ್ವಿಗೊಳಿಸಲು ಇರುವ ಹಿನ್ನೆಲೆ ಎಂದು ಹಿರಿಯ ಅರ್ಥಶಾಸ್ತ್ರ ಉಪನ್ಯಾಸಕರು ಅಭಿಪ್ರಾಯಪಡುತ್ತಾರೆ. ಅವರ ಪರಿಭಾವನೆ ಕನ್ನಡ ನಾಡು ಮತ್ತು ಭಾಷಾ ದೃಷ್ಟಿಯಿಂದ ವೈವಿಧ್ಯತೆ ಪಡೆದಿದೆ. ಕನ್ನಡಿಗರು ವಿವಿಧ ಭಾಗಗಳಲ್ಲಿ ಹಂಚಿಹೋಗಿದ್ದರು. ಅಂದರೆ ಮದ್ರಾಸ–ಕರ್ನಾಟಕ, ಮುಂಬೈ–ಕರ್ನಾಟಕ, ಹೈದ್ರಾಬಾದ್–ಕರ್ನಾಟಕ, ಮೈಸೂರು–ಕರ್ನಾಟಕವೆಂಬ ಪ್ರದೇಶದಲ್ಲಿ ಹಂಚಿಹೋಗಿದ್ದರು. ಹೈದರಾಬಾದ ಕರ್ನಾಟಕದವರು ಉರ್ದು ಭಾಷೆಯ, ಮದ್ರಾಸ ಕರ್ನಾಟಕ

ತೆಲುಗಿನ ಪ್ರಭಾವಕ್ಕೆ, ಬಾಂಬೆ ಕರ್ನಾಟಕ ಮರಾಠಿ ಪ್ರಭಾವಕ್ಕೆ ಒಳಗಾಗಿದ್ದ ಅಂಶಗಳು ತಿಳಿದು ಬರುತ್ತವೆ. ಮೈಸೂರು ಕರ್ನಾಟಕದವರು ಹೆಚ್ಚು ಕಡಿಮೆ ಶುದ್ಧ ಕನ್ನಡಿಗರಾಗಿದ್ದರು. ಇವರು ಅಷ್ಟಾಗಿ ಇತರ ಭಾಷೆಯ ಪ್ರಭಾವಕ್ಕೆ ಒಳದಾದಂತೆ ಕಂಡು ಬರುವುದಿಲ್ಲ. ಹೀಗಾಗಿ ಈ ಪ್ರದೇಶದಲ್ಲಿ ಸ್ಥಾಪಿತವಾದ ವಿಶ್ವವಿದ್ಯಾನಿಲಯವು ಕನ್ನಡ ಮಾಧ್ಯಮ ಅನುಷ್ಠಾನಕ್ಕೆ ಸನ್ನದ್ಧವಾದ ಮೊದಲ ಸಂಸ್ಥೆಯಾಗಲು ಸಾಧ್ಯವಾಗಿದೆ ಎಂದು ಭಾವಿಸಬಹುದಾಗಿದೆ. ಬಹುತೇಕ ಶುದ್ಧ ಕನ್ನಡ ಪರಿಸರ ಇದಕ್ಕೆ ಕಾರಣವಾಗಿರಲುಬಹುದು. ವಿದ್ಯಾಭ್ಯಾಸ ಕನ್ನಡದಲ್ಲಿ ಸಾಗುವುದಾದರೆ ಅದಕ್ಕೆ ಪೂರಕವಾದ ಪಠ್ಯಗಳು, ಸಂದರ್ಭಗ್ರಂಥಗಳು, ಸಂಶೋಧನಾ ಲೇಖನಗಳು ಈ ಮೊದಲಾದವುಗಳ ಅವಶ್ಯಕತೆ ಮತ್ತು ಬೇಡಿಕೆಗಳು ಸ್ವಾಭಾವಿಕವಾಗಿ ವಿಸ್ತಾರವಾಗುವುದನ್ನು ಗಮನಿಸ ಬೇಕಾಗುತ್ತದೆ. ಪ್ರಾದೇಶಿಕ ಭಾಷೆಯ ಪರಿಣಾಮವಾಗಿ ಜ್ಞಾನವು ವೃದ್ಧಿಯಾಗುತ್ತದೆ. ಉನ್ನತ ಮಟ್ಟದ ವಿದ್ಯಾಭ್ಯಾಸ ಸಾಧಿಸಲು ಸಹಕಾರಿಯಾಗುತ್ತದೆ ಹಾಗೂ ಸಹಾಯಕ್ಕೆ ಬರುತ್ತದೆ. ಗ್ರಹಿಕೆಯ ಪರಿಮಿತಿ ವಿಸ್ತಾರವಾಗುತ್ತದೆ ಎಂಬುದನ್ನು ಈ ಮೇಲಿನ ವಿಚಾರವು ಪ್ರಸ್ತುತ ಪಡಿಸುವಂತಿದೆಂಬುದನ್ನು ಗಮನಿಸಬಹುದಾಗಿದೆ.

"ಕನ್ನಡ ಮಾಧ್ಯಮ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಸಫಲವಾಗಬೇಕಾದರೆ ಕನ್ನಡ ಭಾಷೆಯನ್ನು ಕೃಷಿಮಾಡಿ ಪಠ್ಯಪುಸ್ತಕಗಳು ಪ್ರೌಢಗ್ರಂಥಗಳನ್ನು ಸಿದ್ದಗೊಳಿಸುವುದು ಅತ್ಯವಶ್ಯಕ." ಎಂಬುದನ್ನು ಅಪ್ಪಾಸಾಹೇಬ ಅಡಕೆ ಇವರು 'ಅರ್ಥಶಾಸ್ತ್ರ ತತ್ವ ನಿರೂಪಣೆ' ೧೯೭೧:iiರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಪಠ್ಯ ಪುಸ್ತಗಳ ಗುಣಮಟ್ಟವನ್ನು ಅರ್ಥಶಾಸ್ತ್ರ ಅನುವಾದಕರು ಎಚ್ಚರದಿಂದ ಪರಿಭಾವಿಸಿ ಕಾರ್ಯ ಪ್ರವೃತ್ತರಾಗುವಂತೆ ಜಾಗೃತಿ ಮೂಡಿಸಿದೆ. ಪಾಶ್ಚಾತ್ಯ ಆರ್ಥಿಕ ವಿಚಾರಗಳ ಸಿದ್ಧಾಂತಗಳನ್ನು ಕನ್ನಡಕ್ಕೆ ತರುವಾಗ ಭಾಷೆಯನ್ನು ಜಾಗರೂಕತೆಯಿಂದ ದುಡಿಸಿಕೊಳ್ಳುವ ಪರಿಭಾವನೆ ವ್ಯಕ್ತವಾಗುತ್ತದೆ. ಪಠ್ಯಪುಸ್ತಕಗಳಲ್ಲಿನ ಕೆಲವೊಂದು ಅಂಶಗಳಿಗೆ ವಿವರಣೆ, ವಿಶ್ಲೇಷಣೆ ಪಡೆಯುವ ಅಗತ್ಯೆತೆಯ ಸಾಧ್ಯತೆಗಳಿರುತ್ತವೆ. ಅಂತಹ ಸಂದರ್ಭದಲ್ಲಿ ಪ್ರೌಢಗ್ರಂಥಗಳ ಮೊರೆಹೋಗಲೇಬೇಕಾಗುತ್ತದೆ. ಆದ್ದರಿಂದ ಪ್ರೌಢ ಇಲ್ಲವೆ ಪೂರಕ ಗ್ರಂಥಗಳನ್ನು ಸಹ ಇದೇ ಸಂದರ್ಭದಲ್ಲಿ ರಚಿಸಬೇಕೆಂಬ ಒತ್ತಾಸೆಗಳು ಕೇಳಿಬಂದಿರುತ್ತವೆ. "ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಪಕರಲ್ಲಿ ಅನೇಕರು ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥರಚನೆಗೆ ತೊಡಗಿದುದು ಇದೇ ಮೊದಲು. ಈ ಕಾರ್ಯಕ್ಕೆ ಕೈ ಹಾಕಿದಾಗ ಕನ್ನಡದಲ್ಲಿ ಯಶಸ್ವಿಯಾಗಿ ಬರೆಯಬಲ್ಲವೆ ಎಂಬ ಸಂದೇಹ ಅವರಲ್ಲಿ ಕೆಲವರಿಗೆ ಇದ್ದಂತಿತ್ತು. ಇಂಗ್ಲಿಷ್ ಭಾಷೆಯ ಪರಿಸರದಲ್ಲಿ ವಿದ್ಯಾರ್ಜನೆ ಮಾಡಿದವರಿಗೆ ಹೀಗಾಗುವುದು ಸಹಜವೆ. ಅದರೂ ನಮ್ಮ ಪ್ರಾಧ್ಯಾಪಕರು ಸಾಧ್ಯವಾದಷ್ಟು ಸೊಗಸಾಗಿಯೇ ಬರೆದು ತಮ್ಮ ಆತ್ಮವಿಶ್ವಾಸವನ್ನು ಹೆಚ್ಚಿಕೊಂಡಿದ್ದಾರೆ." ಎಂಬುದು ಸ.ಸ.ಮಾಳವಾಡರು 'ಅರ್ಥಶಾಸ್ತ್ರ ಪರಿಚಯ' ೧೯೭೧:iiiರಲ್ಲಿ ಹೇಳಿರುತ್ತಾರೆ. ಆರಂಭದ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸುವ ಸಂದರ್ಭದಲ್ಲಿ ಅರ್ಥಶಾಸ್ತ್ರದ ಪರಿಕಲ್ಪನೆಗಳನ್ನು ಪರಿಭಾವಿಸಿ ಕಟ್ಟಿಕೊಡುವ ಪ್ರಕ್ರಿಯೆಗಳು ಅನುಮಾನದಿಂದ ಆರಂಭವಾಗಿವೆ. ಅನುಮಾನವಿದ್ದರೂ ಆತ್ಮಹಂಬಲಿಕೆಯ ನಂಬಿಕೆ ಬಲವಾಗಿ ತ್ತೆಂದು ತಿಳಿದುಬರುತ್ತದೆ.

ಒಂದು ಭಾಷೆಯ ವಿಷಯ ಕಾಠಿಣ್ಯತೆಯನ್ನು ಮೀರಿ ನಿಲ್ಲಬಲ್ಲದು ಎಂಬುದು ಪಠ್ಯರೂಪತಾಳಿದ ಪರಿಯು ಲೇಖಕರಲ್ಲಿಯೂ ಅಚ್ಚರಿ ಮೂಡಿಸಿದ್ದು 'ಸರಿ'ಎನ್ನಬಹುದು. ಅವರ ಪರಿಶ್ರಮ ಫಲಕಾರಿಯಾಗಲು ಪರಿಸರದ ಉತ್ತೇಜನವು ಒಂದು ಕಾರಣವಾಗಿದೆ. ಹೀಗೆ ಪಠ್ಯಗಳು ಕನ್ನಡ ರೂಪತಾಳಲು ಹಲವಾರು ಮಜಲುಗಳನ್ನು ದಾಟಿ ಬರಬೇಕಾಯಿತು.

೧೯೮೦ರ ದಶಕದಲ್ಲಿ ಇನ್ನೂ ಹೆಚ್ಚು ಹೆಚ್ಚು ಪಠ್ಯಗಳು ರಚಿತವಾಗಲು ಪ್ರೇರಣೆಗಳು ದೊರಕಿದವು. ಆರಂಭದಲ್ಲಿ ಸರಕಾರದ ಪರವಾಗಿ ವಿಶ್ವವಿದ್ಯಾಲಯಗಳೇ ಅಧಿಕ ಪ್ರಮಾಣದಲ್ಲಿ ಪಠ್ಯಗಳನ್ನು ಪ್ರಕಟಿಸಿ ಮಾದರಿ ತೋರಿದವು. ಬರಹಗಾರರಲ್ಲಿ ಆತ್ಮಶಕ್ತಿಯನ್ನು ತುಂಬಿ ಭಾಷಾಂತರದಲ್ಲಿ ತೊಡಗುವಂತೆ ಮಾಡಿದವು. ಇದರ ಪ್ರತಿಕ್ರೀಯೆಯಾಗಿ ಖಾಸಗಿ ಪ್ರಕಾಶಕರು ಪಠ್ಯಗಳನ್ನು ಪ್ರಕಟಿಸಲು ಮುಂದೆ ಬಂದರು. ಇಂಗ್ಲಿಷಿನ ಪಠ್ಯಗಳಲ್ಲಿನ ಸಾರ ಕನ್ನಡ ಪಠ್ಯಗಳಲ್ಲಿ ರಸವತ್ತಾಗಿ ಕ್ರೋಢೀಕರಿಸುವ ಚಟುವಟಿಕೆ ಕ್ರಮೇಣ ಹೆಚ್ಚಾಯಿತು. ಕನ್ನಡ ಪಠ್ಯಗಳ ಪ್ರಕಟಣೆಯೂ ಬೆಳೆಯಿತು. ಬರಹಗಾರರ ಸಂಖ್ಯೆಯೂ ವೃದ್ದಿಸಿತು. ೧೯೯೦ರ ದಶಕದಲ್ಲಿ ಇನ್ನೂ ಹೆಸರಿಸಬಹುದಾದ ಪ್ರಮಾಣದಲ್ಲಿ ಅರ್ಥಶಾಸ್ತ್ರದ ಪಠ್ಯಗಳು ಕನ್ನಡದಲ್ಲಿ ಲಭ್ಯವಾಗತೊಡಗಿದವು. ಕೆಲವೇ ಕೆಲವು ಲೇಖಕರು ಇಂಗ್ಲಿಷ್ ಪಠ್ಯವನ್ನು ಕನ್ನಡದಲ್ಲಿ ಸೋಗಸಾಗಿ ರೂಪಿಸಿದರು. ಸರಳವಾದ ಭಾಷೆ ಬಳಸಿ ವಿವರಣೆಯುಳ್ಳ ಪಠ್ಯ ರೂಪಿಸಿದರು. ಅಗತ್ಯವೆನಿಸಿದಲ್ಲೆಲ್ಲಾ ಆವರಣದಲ್ಲಿ ಇಂಗ್ಲೀಷ ಪದಗಳನ್ನು ಬಳಸಿದ್ದಾರೆ. ರೇಖಾ ಚಿತ್ರಗಳನ್ನು, ಕೋಷ್ಠಕಗಳನ್ನು ಮತ್ತು ದೃಷ್ಟಾಂತಗಳನ್ನು ನಮ್ಮ ಪರಿಸರದೊಂದಿಗೆ ಸಮೀಕರಿಸಿ ನಿರೂಪಿಸಿದರು. ಈ ಪಠ್ಯಗಳು ವಿಸ್ತೃತ ಪದಗಳಲ್ಲಿ ಬಳಕೆ ಪಡೆದವು. ಇದು ಪ್ರಕಾಶಕರನ್ನು ಆಕರ್ಷಿಸುವಂತೆ ಮಾಡಿತು. ಆರಂಭದಲ್ಲಿ ಖಾಸಗಿ ಪ್ರಕಾಶಕರಲ್ಲಿ ಕೆಲವರು ಮಾತ್ರ ಪಠ್ಯಗಳನ್ನು ಪ್ರಕಟಿಸಿದ್ದಾರೆ. ಅವರಲ್ಲಿ ಮೈಸೂರಿನ ಕಾವ್ಯಾಲಯ ಪ್ರಕಾಶನ, ಧಾರವಾಡದ ಮಿಂಚಿನಬಳ್ಳಿ ಮತ್ತು ಮನೋಹರ ಗ್ರಂಥಮಾಲೆ, ಗದುಗಿನ ವಿದ್ಯಾನಿಧಿ ಪ್ರಕಾಶನ ಮತ್ತು ವಿಜಯ ಬುಕ್‌ಡಿಪೋ ಪ್ರಮುಖವಾಗಿವೆ. ಈ ಪ್ರಕಾಶನಗಳು ಲಾಭಗಳಿಸುವ ಉದ್ದೇಶಕ್ಕಿಂತಲೂ ಕನ್ನಡ ನಾಡಿನ ಮತ್ತು ಭಾಷಾ ಬೆಳವಣಿಗೆಯ ಅಭಿಮಾನಕ್ಕಾಗಿ ಮಾಡಿದ್ದೆ ಹೆಚ್ಚು. ಆ ಸಂದರ್ಭದಲ್ಲಿ ಕಥೆ, ಕಾವ್ಯ, ಕಾಂದಬರಿಯಂತೆ ಶಾಸ್ತ್ರೀಯ ವಿಷಯಗಳು ವ್ಯಾಪಕವಾಗಿ ಬಳಕೆಯಾಗುತ್ತಿರಲಿಲ್ಲ. ಹೀಗಾಗಿ ಇವುಗಳಿಗೆ ತೊಡಗಿಸಿದ ಬಂಡವಾಳ, ಹಿಂದಿರುಗಿ ಬರುವ ಭರವಸೆ ಇರಲಿಲ್ಲ. ಆ ಸಂದರ್ಭದಲ್ಲಿ ಪಠ್ಯಗಳನ್ನು ಪ್ರಕಟಿಸಲು ೧೯೭೦-೮೦ರ ದಶಕದಲ್ಲಿ ಪ್ರಕಾಶಕರು ಮುಂದೆ ಬರುತ್ತಿರಲಿಲ್ಲ. ಆದರೆ ೧೯೯೦ರ ದಶಕದಲ್ಲಿ ಪ್ರಕಾಶರನ್ನು ಅರ್ಥಶಾಸ್ತ್ರ ಆಕರ್ಷಿಸಿತು. ಕನ್ನಡ ಮಾಧ್ಯಮ ಜನಪ್ರಿಯವಾಗ ತೋಡಗಿತು. "ಕನ್ನಡ ನಮ್ಮ ಮಾತೃಭಾಷೆ. ಶಿಕ್ಷಣದ ಎಲ್ಲಾ ಶ್ರೇಣಿಗಳಲ್ಲಿಯೂ ಮಾತೃಭಾಷೆ ಶಿಕ್ಷಣದ ಮಾಧ್ಯಮವಾದಾಗ ಶಿಕ್ಷಣದ ಧ್ಯೇಯೋದ್ದೇಶಗಳು ಸಫಲವಾಗಲು ಸಾಧ್ಯ. ಕಳೆದ ಎರಡು ದಶಕಗಳಲ್ಲಿ ಈ ದಿಸೆಯಲ್ಲಿ ಗುರುತರವಾದ ಪ್ರಯತ್ನಗಳು ನಡೆದು ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣದ ಹಂತಗಳಲ್ಲಿ ಕನ್ನಡ ಮಾಧ್ಯಮ ಜನಪ್ರೀಯವಾಗುತ್ತಿರುವುದು ಒಂದು ಹರ್ಷದಾಯಕ ಸಂಗತಿ." ಈ ವಿಚಾರವನ್ನು

ಕೆ. ಎಂ. ವೀರಯ್ಯ ಇವರು ಅರ್ಥಶಾಸ್ತ್ರ ಸಿದ್ಧಾಂತ ೧೯೯೮:iiರಲ್ಲಿ ವ್ಯಕ್ತಪಡಿಸಿದ್ದಾರೆ. ಕನ್ನಡ ಮಾಧ್ಯಮ ಐಚ್ಛಿಕವಾಗಿದ್ದಾಗಿನ ಸಂದರ್ಭವು ಕನ್ನಡ ಮಾಧ್ಯಮ ಕಡ್ಡಾಯವೆನ್ನುಷ್ಟರ ಮಟ್ಟಿನ ಪರಿಸರದ ಪರಸ್ಥಿತಿಗೂ ಇರುವ ವ್ಯತ್ಯಾಸ ಗಮನಿಸಬಹುದಾಗಿದೆ. ಆರಂಭದಲ್ಲಿ ಪಠ್ಯಸಾಮಾಗ್ರಿಗಳ ಲಭ್ಯತೆ ತುಂಬಾ ವಿರಳವಾಗಿತ್ತು. ಕಾಲಕ್ರಮೇಣ ಅವುಗಳ ರಚನಾ ಪ್ರಕ್ರೀಯೆ ವಿಸ್ತಾರವಾದಂತೆ, ಅವುಗಳ ಬಳಕೆ ಮತ್ತು ಮಹತ್ವ ಸಹಜವಾಗಿ ಅಧಿಕವಾಯಿತು. ಪ್ರಕಾಶಕರು ಹೆಚ್ಚಿನ ಸಂಖ್ಯೆಯಲ್ಲಿ ಪಠ್ಯಗಳನ್ನು ಪ್ರಕಟಿಸಲು ಮುಂದೆ ಬರುತ್ತಿದ್ದಾರೆ. ಇದೇ ಸಂದರ್ಭದಲ್ಲಿ ಸರಕಾರ ಮತ್ತು ವಿಶ್ವವಿದ್ಯಾಲಯಗಳಂತಹ ಸಂಸ್ಥೆಗಳು ಹಾಗೂ ಇಲಾಖೆಗಳು ಇವುಗಳ ಪ್ರಕಟಣಾ ಪ್ರಕ್ರೀಯೆಗಳನ್ನು ಸ್ಥಗಿತಗೊಳಿಸಿರುವುದು ಕಂಡು ಬರುತ್ತದೆ. ಪ್ರಮುಖ ಖಾಸಗಿ ಪ್ರಕಾಶನಗಳೆಂದರೆ, ಆಕಳವಾಡಿ ಬುಕ್ ಡಿಪೋ ಧಾರವಾಡ, ಕವಿತಾ ಪ್ರಕಾಶನ ಬೆಂಗಳೂರು, ಮೈತ್ರಿ ಪ್ರಕಾಶನ ಅರಸಿಕೆರೆ, ನರೇಂದ್ರ ಪ್ರಕಾಶನ ತಿಪಟೂರು, ಮಲ್ಲಿಕಾರ್ಜುನ ಪ್ರಕಾಶನ ಬಾಗಲಕೋಟೆ, ಆರ್.ಎಮ್ ಪ್ರಕಾಶನ್ ಮೈಸೂರು, ಎಮ್.ಎಸ್ ಶಾಬಾದಿಮಠ ಬುಕ್ ಡಿಪೋ ಗದಗ, ಚೇತನ ಬುಕ್ ಹೌಸ್ ಮೈಸೂರು, ಪದ್ಮ ಪ್ರಕಾಶನ ಬೆಂಗಳೂರು, ಪ್ರಗತಿ ಪ್ರಕಾಶನ ಮಾಸ್ಕೋ, ಪ್ರಕಾಶ ಸಾಹಿತ್ಯ ಬೆಂಗಳೂರು, ಸತ್ಯ ಸುಗುಣ ಸುಂದರ ಸಾಹಿತ್ಯ ಮಾಲೆ ಬೆಂಗಳೂರು, ಸಾಹಿತ್ಯ ಸಿಂಧು ಪ್ರಕಾಶನ ದಾವಣಗೆರೆ, ಸುನಿಲ್ ಪ್ರಕಾಶನ ಬೆಂಗಳೂರು, ಸರಸ್ವತಿ ಹೌಸ್(ಪ್ರೈ) ಲಿಮಿಟೆಡ್ ಬೆಂಗಳೂರು, YES ಇಂಟನ್ಯಾಷನಲ್ ಬೆಂಗಳೂರು, ಕೆಂಬ್ರಿಜ್ ಪಬ್ಲಿಷಿಂಗ್ ಕಂಪನಿ ಬೆಂಗಳೂರು, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಯುನೈಟೆಡ್ ಪಬ್ಲಿಷರ್ಸ್ ಮಂಗಳೂರು, ರವಿ ಪ್ರಕಾಶನ ಹುಬ್ಬಳ್ಳಿ, ಸುರಭಿ ಪ್ರಕಾಶನ ನಂಜನಗೂಡು, ವಿದ್ಯಾ ಪ್ರಕಾಶನ ಗದಗ, ಕಲಾ ಪ್ರಕಾಶನ ಬೆಂಗಳೂರು, ಚೈತ್ರ ಪ್ರಕಾಶನ ಬೆಂಗಳೂರು, ಸಪ್ನ ಬುಕ್ ಹೌಸ್ ಬೆಂಗಳೂರು, ಸ್ಪಂದನ ಪ್ರಕಾಶನ ಬೆಂಗಳೂರು, ವಿನೂತಾ ಪ್ರಕಾಶನ ವಿಜಾಪೂರ, ಜಿಲ್ಲಾ ಅರ್ಥಶಾಸ್ತ್ರ ಅಧ್ಯಯನ ಕೇಂದ್ರ ತುಮಕೂರು, ಅರ್ಜುನ ಪಬ್ಲಿಷಿಂಗ್ ಮೈಸೂರು, ಬಸವ ಪ್ರಕಾಶನ ಶಿವಮೊಗ್ಗ, ಸಿ.ಪಿ ಇನ್ನೋವೇಷನ್ಸ್ ಬೆಂಗಳೂರು, ಈ ಮೊದಲಾದ ಪ್ರಕಾಶನಗಳು ಅರ್ಥಶಾಸ್ತ್ರ ಪಠ್ಯಗಳನ್ನು ಪ್ರಕಟಿಸಿರುವುದು ತಿಳಿದು ಬರುತ್ತದೆ.

ಪಠ್ಯಗಳನ್ನು ಕನ್ನಡಿಕರಿಸಿದ ಅರ್ಥಶಾಸ್ತ್ರ ಬರಹಗಾರರ ಸಂಖ್ಯೆ ಆರಂಭದಲ್ಲಿ ತುಂಬ ಕಡಿಮೆಯಿದ್ದಂತೆ ಕಂಡು ಬರುತ್ತದೆ. ಕ್ರಮೇಣ ವಿಸ್ತೃತವಾಗಿರುವ ವಿಚಾರಗಳನ್ನು ಅನೇಕ ದಾಖಲೆಗಳು ದೃಢಪಡಿಸುತ್ತವೆ. ಆರಂಭದಿಂದ ಇಂದಿನವರೆಗಿನ ಪ್ರಮುಖ ಭಾಷಾಂತರಕಾರರೆಂದರೆ (ಲೇಖಕರು), ಹರಿದಾಸ ಭಟ್ಟ್, ಕು.ಶಿ.-೧೯೫೨, ಜಿ.ಟಿ ಹುಚ್ಚಪ್ಪ-೧೯೫೭, ಎ.ಪಿ ಶ್ರೀನಿವಾಸ ಮೂರ್ತಿ-೧೯೫೭, ವೀರರಾಘವಾಚಾರ, ಎಸ್. ಎಮ್ -೧೯೫೭, ಟಿ.ಎಸ್ ವಿಜಯಪ್ಪ-೧೯೫೭ ಸಚ್ಚಿದಾನಂದ ಶಿರೋಡಕರ-೧೯೫೯, ಕೃ.ಪ. ಜೋಷಿ-೧೯೬೦, ವಿ. ಸೀತಾರಾಮಯ್ಯ-೧೯೬೨, ಹೆಚ್. ಆರ್ ಸಾಖರೆ-೧೯೬೮, ಕೆ.ವೆಂಕಟಗಿರಿಗೌಡ-೧೯೬೮, ಎಸ್.ಜಿ.ಕರಭಂಟನಾಳ-೧೯೬೯, ಬಿ.ಬಿ.ಕಣವಿ-೧೯೬೯, ವಾಯ್.ಎಲ್. ಇನಾಮದಾರ-೧೯೬೯, ಬಿ.ರಾಮಾಚಾರಿ-೧೯೬೯, ಟಿ.ಕೆ.ಮೇಟಿ-೧೯೬೯,

ಬಿ.ಎಮ್.ಕುಮಾರಸ್ವಾಮಿ–೧೯೭೦, ಎಮ್.ಎಸ್ ಹಳ್ಳೂರ–೧೯೭೧, ಕೆ.ಡಿ.ಬಸವಾ–೧೯೭೧, ಸಿ.ಬಿ.ಚಂದ್ರಶೇಖರಪ್ಪ–೧೯೭೧, ಸಿ.ಎಸ್ ಕಡ್ಡಿಪುಡಿ–೧೯೭೧, ಎನ್.ಎಸ್ ಹಿರೇಮಠ–೧೯೭೧, ಕೆ.ಆರ್.ಮಡ್ಡಿ–೧೯೭೧, ಎಮ್.ಸಿ ಕೋಡ್ಲಿ–೧೯೭೨, ಜೆ.ಆರ್.ಕರಗುದರಿ–೧೯೭೨, ಐ.ಟಿ.ಹಟ್ಟಿ–೧೯೭೬, ಎಸ್.ಎನ್.ಸಿ. ರಾವ್–೧೯೭೮, ಪಿ.ಎಮ್.ಭಟ್ಟ–೧೯೭೯, ಎಸ್. ಮರಳುಸಿದ್ದಪ್ಪ–೧೯೮೨, ಕೆ.ಸಿ.ಬಸಪ್ಪ–೧೯೮೩, ಡಿ.ವೆಂಕಟರಾವ್–೧೯೮೩, ಎಸ್. ಶರಣಪ್ಪ–೧೯೮೩ ಎಸ್.ಎಮ್. ನರಗುಂದ–೧೯೮೪, ಅಪರಂಜಿ ಎನ್.ಆರ್.–೧೯೮೫, ರಾಜ ಮತ್ತು ಶಿವರಾಜ–೧೯೮೫, ಸಿ.ಕೆ.ರೇಣುಕಾರ್ಯ–೧೯೮೬, ಡಿ.ಎಮ್.ಮೂರ್ತಿ–೧೯೮೮. ಕೆ.ಎಮ್.ವೀರಯ್ಯ–೧೯೮೯, ಟಿ.ಎನ್.ಮಲ್ಲೇಶಪ್ಪ–೧೯೮೯, ಅಬ್ದುಲ್ ಅಜೀಜ್, ಚಂದ್ರಶೇಖರ.ಟಿ.ಆರ್, ಎಮ್.ಎಸ್ ಕಲ್ಲೂರು, ಪ್ರಭಾಕರ.ಬಿ.ಶಿಶೀಲ, ಅರವಿಂದ ಜೋಷಿ, ಒಡೆಯರ ಡಿ.ಹೆಗ್ಗಡೆ, ಕೃಷ್ಣಮೂರ್ತಿ.ಹೆಚ್.ಆರ್ ಹೊಸಬೀಡು, ಕೆಂಪಯ್ಯ.ಜಿ.ಎನ್, ಕೆ.ಕೃಷ್ಣಭಟ್ಟ, ಹೆಚ್.ಆರ್ ಕೃಷ್ಣಯ್ಯಗೌಡ, ಗುಡೂರು ಭೀಮಸೆನ್, ಟಿ.ಗೋವಿಂದಯ್ಯ, ಗೋಪಾಲಕೃಷ್ಣರಾವ್ ಕೆ.ಎಲ್, ಎಸ್.ಎನ್.ನಾಯಕ, ಕೆ.ಎ.ರಾಜಣ್ಣ, ಹೆಚ್.ಆರ್.ರಾಮಕೃಷ್ಣಯ್ಯ , ಎಸ್.ಆರ್ ರಾಮಸ್ವಾಮಿ, ವಸಂತ ಗುಮಾಸ್ತೆ, ಸಿದ್ದಪ್ಪ.ಬಿ.ಸೂರಪೂರ, ಎ.ಪಿ ಬಿರಾದಾರ, ಸಿ.ವಿ.ಚಂದ್ರಶೇಖರಪ್ಪ, ಡಿ.ಎಸ್ ಶರ್ಮಾ, ಟಾಸ್ಕೋ ಜಿ, ಎಮ್.ಎಸ್. ಬದಾಮಿ, ಪಾರ್ಶ್ವನಾಥ ಅಜ್ರಿ, ಬಸವರಾಜ ಕುಮ್ನೂರ, ಟಿ.ಆರ್.ಗುರುಬಸಪ್ಪ, ಮಲ್ಲೇಶಪ್ಪ ಕುಂಬಾರ, ಕೆ.ಎ.ರಾಜಣ್ಣ ಈ ಮೊದಲಾದವರು ಕನ್ನಡದಲ್ಲಿ ಅರ್ಥಶಾಸ್ತ್ರ ಪಠ್ಯ ರಚನಾ ಪ್ರಕ್ರಿಯೆಯಲ್ಲಿ ತೊಡಗಿರುವುದು ತಿಳಿದುಬರುತ್ತದೆ.

ಈ ಭಾಷಾಂತರಕಾರರಲ್ಲಿ ಕೆಲವರ ಪಠ್ಯಗಳು ಆರಂಭದಲ್ಲಿ ವಿಶ್ವವಿದ್ಯಾಲಯಗಳ ಪ್ರಕಟಣೆಯ ಮೂಲಕ ಹೊರಬಂದಿವೆ. ಕ್ರಮೇಣ ಖಾಸಗಿ ಪ್ರಕಾಶಕರು ಪಠ್ಯಗಳ ಮುದ್ರಣ ಮತ್ತು ಪ್ರಕಾಶನಕ್ಕೆ ಮುಂದಾಗಿರುವುದು ಕಂಡು ಬರುತ್ತದೆ ಅಧ್ಯಯನ ಮತ್ತು ಅಧ್ಯಾಪನವು ನಿಧಾನವಾಗಿ ಕನ್ನಡಕ್ಕೆ ವಿಸ್ತರಿಸಿದಂತೆ ಖಾಸಗಿ ಪ್ರಕಾಶಕರು ಪ್ರಕಟಣೆಗೆ ಸಹಕರಿಸಿದ್ದಾರೆ. ಕಾಲಕ್ರಮೇಣ ಮುದ್ರಣ ತಂತ್ರಜ್ಞಾನವು ಸುಧಾರಿಸಿದಂತೆ ಪ್ರಕಟಣೆ ತೀವ್ರವಾಗಿರಬೇಕೆಂದು ಪರಿಭಾವಿಸಲು ಅವಕಾಶವಿದೆ. ಅಲ್ಲದೆ. ಭಾಷೆಯೂ ಈ ಅವಧಿಯಲ್ಲಿ ಸಾಕಷ್ಟು ಬೆಳವಣಿಗೆ (ಪರಿಷ್ಕೃತ ಸ್ವರೂಪ) ಪಡೆದಿರುವುದು ಕಂಡುಬರುತ್ತದೆ.

### ೨.೨ ಅರ್ಥಶಾಸ್ತ್ರ: ಬೋಧನೆಯ ಇತಿಹಾಸ

ವಿಷಯ ಸಮರ್ಪಕವಾಗಿ ಪೂರ್ಣ ಪ್ರಮಾಣದಲ್ಲಿ ಗ್ರಹಿಕೆಯಾಗ ಬೇಕಾದರೆ ಅದು ಮಾತೃ ಭಾಷೆಯ ಮೂಲಕ ಮಾತ್ರ ಸಾಧ್ಯವೆಂಬ ಅಭಿಪ್ರಾಯವಿದೆ. ವಸಾಹತು ನೆಲೆಯ ಭಾರತದಲ್ಲಿ ಇಂಗ್ಲೀಷ ಮಾಧ್ಯಮದ ಮೂಲಕ ಶಿಕ್ಷಣ ಪ್ರಸಾರವಾಗುತ್ತಿತ್ತು. ಪಾಶ್ಚಾತ್ಯ ಆರ್ಥಿಕ ಸಿದ್ಧಾಂತಗಳು ಭಾರತ ದೇಶದಾದ್ಯಂತ ಪಠ್ಯಗಳನ್ನಾಗಿ ರೂಪಿಸಲಾಗಿತ್ತು. ಶಾಲಾ ಕಾಲೇಜುಗಳಲ್ಲಿ ಅವುಗಳ ಅಧ್ಯಯನ ಮತ್ತು ಅಧ್ಯಾಪನ ಇಂಗ್ಲೀಷ್ ಮೂಲಕ ನಡೆಯುತಿತ್ತು. ದೇಶ ರಾಜಕೀಯ ಸ್ವಾತಂತ್ರ್ಯ ಪಡೆದರೂ ಶೈಕ್ಷಣಿಕ ಕ್ಷೇತ್ರ ಪರೋಕ್ಷವಾಗಿ ಸ್ವಾತಂತ್ರ್ಯ ಪಡೆದಿರಲಿಲ್ಲ. ಹೀಗಾಗಿ ಸ್ವಾತಂತ್ರ್ಯದ ನಂತರವೂ

ಇಂಗ್ಲೀಷ್ ಮಾಧ್ಯಮದಲ್ಲಿ ಶಿಕ್ಷಣ ಮುಂದುವರೆಯಿತು. "ಧಾರವಾಡದ ಪ್ರಾಥಮಿಕ ಶಾಲೆಗಳಲ್ಲಿಯೂ ಕೂಡಾ ಕನ್ನಡ ಪಠ್ಯಪುಸ್ತಕಗಳು ಇಲ್ಲದ ಕಾಲವು ಒಮ್ಮೆ ಇತ್ತು. ಮುಂಬೈ-ಕರ್ನಾಟಕದ ಐತಿಹಾಸಿಕ ಹಿನ್ನೆಲೆಯ ಪರಿಣಾವದು. ಅಂತೆಯೆ ಇಲ್ಲಿ ಕನ್ನಡದ ಪರಿಸರ ನಿರ್ಮಿಸಲು ಅಂದಿನ ಹಿರಿಯರು ಹೆಣಗಬೇಕಾಯಿತು. ಡೆಪ್ಯೂಟಿ ಚನ್ನಬಸಪ್ಪನವರು ಇಲ್ಲಿ ಕನ್ನಡದ ದೀಪ ಹಚ್ಚಿದರು ಅದು ಈಗ ದೀಪಮಾಲೆಯಾಗಿ ಉಜ್ವಲವಾಗಿ ಬೆಳಗುವುದರ ಸಂಕೇತವಾಯಿತು." ಎಂಬ ವಿಚಾರವನ್ನು ಸ. ಸ. ಮಾಳವಾಡ ಇವರು ಅರ್ಥಶಾಸ್ತ್ರ ಪರಿಚಯ ೧೯೬೮:iiiರಲ್ಲಿ ದಾಕಲಿಸಿದ್ದಾರೆ. ಈ ಹೇಳಿಕೆ ಕೇವಲ ಧಾರವಾಡಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಹೆಚ್ಚು ಕಡಿಮೆ ಇಡೀ ಕರ್ನಾಟಕವೇ ಶೈಕ್ಷಣಿಕವಾಗಿ ಇಂಗ್ಲೀಷಮಯವಾಗಿತ್ತು. ಅಂತಹ ಸಂಕೀರ್ಣ ಪರಿಸರದಲ್ಲಿಯೂ ಪ್ರಾಂತೀಯ ಭಾಷೆಯ ಉದ್ದಿಪನ ಪ್ರಕ್ರೀಯೆ ಸದ್ದಿಲ್ಲದೆ ಸಾಗಿರುವಂತೆ ಪರಿಭಾವಿಸುವ ಸುಳಿವುಗಳು ಗೋಚರಿಸುತ್ತವೆ. ೧೯೭೦ರ ದಶಕದ  ಈ ಅವಧಿಗಾಗಲೆ ಅನೇಕ ಯೋಚನೆಗಳು ಯೋಜನೆಗಳು ಭಾಷಾ ವಿಷಯ ಮತ್ತು ಮಾಧ್ಯಮಕ್ಕೆ ಸಂಬಂಧಿಸಿದಂತೆ ರೂಪಗೊಂಡವು. "ಕನ್ನಡಮಾಧ್ಯಮದಲ್ಲಿ ಕಾಲೇಜು ಮಟ್ಟದ ವಿದ್ಯಾವ್ಯಾಸಂಗ ಮಾಡಬೇಕೆಂದು ಬಯಸುವ ವಿದ್ಯಾರ್ಥಿಗಳಿಗೆ ತಕ್ಕ ಸೌಕರ್ಯಗಳನ್ನು ಒದಗಿಸಿಕೊಡಬೇಕು. ಜೊತೆಯಲಿಯೇ ಉನ್ನತ ಮಟ್ಟದ ಜ್ಞಾನದಾನವು ಮಾತೃ ಭಾಷೆಯಲ್ಲಿಯೇ ನಡೆಯಲು ಸಮರ್ಪಕ ವಾತಾವರಣವನ್ನು ರೂಪಿಸಬೇಕು. ಇವೆರಡು ಉದೇಶ ಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೆಂಗಳೂರು ವಿಶ್ವವಿದ್ಯಾನಿಲಯವು ಜನವರಿ ೧೯೬೭ರಲ್ಲಿ ಒಂದು ನಿರ್ಧಾರವನ್ನು ಕೈಗೊಂಡಿತು. ಅದು ಅಖಿಲ ಭಾರತೀಯ ವಿದ್ಯಾಧೋರೆಣೆಗೆ ಅನುಸಾರವಾಗಿಯೂ ಇತ್ತು. ಇದರ ಅಂಗವಾಗಿ ೧೯೬೭-೬೮ರ ಪ್ರಿಯೂನಿವರ್‌ಸಿಟಿ ತರಗತಿಯಲ್ಲಿ ಐಚ್ಛಿಕವಾಗಿ ಕನ್ನಡ ಮಧ್ಯಮವನ್ನು ಸ್ವೀಕರಿಸುವ ವಿದ್ಯಾರ್ಥಿಗಳಿಗೆ ಕನ್ನಡ ಮಾಧ್ಯಮದ ಒಂದು ವಿಭಾಗವನ್ನು ಪ್ರಾರಂಭಿಸಬಹುದೆಂದು ಕಾಲೇಜುಗಳಿಗೆ ಆದೇಶ  ನೀಡಲಾಯಿತು. ಜೊತೆಯಲ್ಲಿಯೇ ಯೋಗ್ಯ ಪಠ್ಯ ಪಸ್ತಕಗಳನ್ನು ಕನ್ನಡ ಭಾಷೆಯಲ್ಲಿ ಒದಗಿಸಿಕೊಡುವ ಹೊಣೆಗಾರಿಕೆಯನ್ನು ವಿಶ್ವವಿದ್ಯಾಲಯವು ವಹಿಸಿಕೊಂಡಿತು." ಇದನ್ನು ವಿ. ಕೃ. ಗೋಕಾಕ ಇವರು ಅರ್ಥಶಾಸ್ತ್ರ ೧೯೬೮:ivರಲ್ಲಿ ಹೇಳಿಕೊಂಡಿ ದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯವು ಕನ್ನಡ ನಾಡಿನಲ್ಲಿ ಮಾತೃ ಭಾಷೆಯ ಮೂಲಕ ಶಿಕ್ಷಣ ನೀಡಲು ಮುಂದೆ ಬಂದ ಮೊದಲ ಸಂಸ್ಥೆ ಎಂದು ಗುರುತಿಸಬಹುದಾಗಿದೆ. ಅದೂ ಸಹ ಪೂರ್ಣಪ್ರಮಾಣದಲ್ಲಿ ಅಲ್ಲ. ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಕೈಗೊಳ್ಳಲು ಬೇಕಾಗುವ ಪೂರಕ ಸಾಮಗ್ರಿಗಳನ್ನು ತಯಾರಿಸಿಕೊಳ್ಳಲು ಎರಡು ದಶಕಗಳ ಕಾಲಾವಕಾಶ ಸಾಕಗಲಿಲ್ಲವೆ ಎಂಬ ಪ್ರಶ್ನೆ ಕಾಡದಿರದು. ಕನ್ನಡ ಮಾಧ್ಯಮದಲ್ಲಿ ಬೋಧಿಸುವ ಬೋಧಕ ವರ್ಗಕ್ಕೆ ಸರಿಯಾದ ಸಹಕಾರ ಸರಕಾರದ ಮತ್ತು ಸಂಸ್ಥೆಗಳಿಂದ ಅಧಿಕೃತವಾಗಿ ಲಭ್ಯವಾಗಿರಕ್ಕಿಲ್ಲ ಎಂಬ ಅನುಮಾನ ಬರದಿರದು. ಪ್ರಥಮ ಹಂತದಲ್ಲಿ ಪದವಿಪೂರ್ವ ಹಂತದ ತರಗತಿಗಳಿಗೆ ಪ್ರಾಯೋಗಿಕವಾಗಿ ಐಚ್ಛಿಕವಾದ ಅವಕಾಶ ಕಲ್ಪಿಸಿಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಕನ್ನಡದ ಪಠ್ಯಪರಿಕರಗಳನ್ನು ರೂಪಿಸುವ ಹೊಣೆಗಾರಿಕೆಯನ್ನು ವಿಶ್ವವಿದ್ಯಾಲಯವೇ ವಹಿಸಿಕೊಂಡಿರುವ ವಿಚಾರವು ಯುಕ್ತವಾಗಿದೆ.

"ಬೆಂಗಳೂರು ವಿಶ್ವವಿದ್ಯಾಲಯವು ವಿದ್ಯಾಭ್ಯಾಸದ ಮಾಧ್ಯಮದ ವಿಚಾರದಲ್ಲಿ ಕುಲಂಕಷವಾಗಿ ಆಲೋಚಿಸಿ ಪ್ರಾದೇಶಿಕ ಭಾಷೆಯ ಉಚ್ಚ ವ್ಯಾಸಂಗದಲ್ಲಿಯೂ ಮಾಧ್ಯಮವಾಗಬೇಕೆಂಬ ತೀರ್ಮಾನಕ್ಕೆ ಬಂದಿತು. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅದನ್ನು ಐಚ್ಛಿಕವಾಗಿಡುವುದು ಯುಕ್ತ ಎಂಬ ನಿರ್ಣಯವನ್ನು ಅದು ಕೈಗೊಂಡಿತು. ಪಠ್ಯ ಪುಸ್ತಕಗಳ ರಚನೆ ಮತ್ತು ಪ್ರಕಟಣೆಗಳಿಗೆ ಕನ್ನಡ ಪಠ್ಯಪುಸ್ತಕ ಸಮಿತಿ ಒಂದನ್ನು ನೇಮಕ ಮಾಡಿರುತ್ತದೆ. ಈ ಸಮಿತಿಯ ಪರವಾಗಿ ಬೇರೆ ಬೇರೆ ವಿಷಯಗಳನ್ನು ಕುರಿತು ಕನ್ನಡದಲ್ಲಿ ಪುಸ್ತಕಗಳನ್ನು ಭಾಷಾಂತರಿಸುವುದಕ್ಕೆಂದು ಅನುಭವಿಕ ಅಧ್ಯಾಪಕರನ್ನು ಕೇಳಿಕೊಳ್ಳಲಾಯಿತು. ಆಯಾ ವಿಷಯಕ್ಕೆ ಸಂಬಂಧಪಟ್ಟ ಪಠ್ಯ ಸಮಿತಿಯ ಸದಸ್ಯರಾಗಲಿ, ಪಠ್ಯ ಪುಸ್ತಕ ಸಮಿತಿ ಗೊತ್ತುಪಡಿಸಿದ ಸಂಪಾದಕ ಸಮಿತಿಯ ಅಧ್ಯಕ್ಷರಾಗಲಿ, ಸದಸ್ಯರಾಗಲಿ ಭಾಷಾಂತರಕಾರರಿಂದ ಬರುವ ಹಸ್ತಪ್ರತಿಗಳನ್ನು ಪರಿಶೀಲಿಸಿಬೇಕೆಂದು ಭಿನ್ನವಿಸ ಲಾಯಿತು. ಪ್ರತಿಯೊಂದು ಹಸ್ತಪ್ರತಿಯನ್ನು ಭಾಷಾತಜ್ಞರಿಂದ ನೋಡಿಸಬೇಕೆಂದು ಗೊತ್ತಾಯಿತು. ಈ ಎಲ್ಲ ಬಗೆಯ ಪ್ರಕ್ರಿಯೆಗೆ ಒಳಪಟ್ಟು ಸಾಧ್ಯವಾದಷ್ಟು ಪರಿಪೂರ್ಣವೂ ನಿರ್ದುಷ್ಟವೂ ಆದ ಪಠ್ಯಪುಸ್ತಕವನ್ನು ರಚಿತವಾಗಬೇಕೆಂದು ಅದು ಸೊಗಸಾಗಿ ಮುದ್ರಿತವಾಗಬೇಕೆಂದು ಕನ್ನಡ ಪಠ್ಯ ಸಮಿತಿ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡುತ್ತಿದೆ. ಈ ಕಾರ್ಯವು ಎಷ್ಟು ಯಶಸ್ವಿಯಾಗುವುದು ಅಷ್ಟು ವೇಗದಿಂದ ಐಚ್ಛಿಕವಾದ ಮಾಧ್ಯಮವು ಸಾರ್ವತ್ರಿಕವಾಗುತ್ತದೆ. ಕನ್ನಡ ಐಚ್ಛಿಕ ಮಾಧ್ಯಮವು ಎನಿಸಿಕೊಳ್ಳದೆ ಕಡ್ಡಾಯವಾಗಿ ಅದನ್ನೇ ತನ್ನ ಶ್ರಮವೆಂಬ ಇಚ್ಚೇಯನ್ನು ನಿರ್ಮಾಣಮಾಡುತ್ತವೆ" ಎಂಬುದಾಗಿ ರಂ. ಶ್ರೀ. ಮುಗುಳಿಯವರು ಅರ್ಥಶಾಸ್ತ್ರ ೧೯೬೮: Vರಲ್ಲಿ ಹೇಳಿರುತ್ತಾರೆ. ಕನ್ನಡ ಮಧ್ಯಮದಲ್ಲಿ ಅರ್ಥಶಾಸ್ತ್ರದಂಥ ಮಾನವೀಕ ಶಾಸ್ತ್ರಗಳನ್ನು ಬೋಧನೆಗೆ ಸಿದ್ದಪಡಿಸುವ ದಾವಂತ ಸಲ್ಲದೆಂಬ ವಿಚಾರಪೂರ್ಣ ಮಾಹಿತಿಗಳನ್ನು ಪಠ್ಯಪುಸ್ತಕ ಪ್ರಧಾನ ಸಂಪಾದಕರು ದಾಖಲಿಸಿದ್ದಾರೆ. ಮಂತ್ರಶಕ್ತಿಯಲ್ಲಿ ಏಕಕಾಲಕ್ಕೆ ತಕ್ಷಣದಿಂದ ಎಲ್ಲ ಹಂತಗಳಲ್ಲಿ ಕನ್ನಡ ಮಾಧ್ಯಮ ಅನುಷ್ಠಾನಗೊಳಿಸಲು ಅಸಾಧ್ಯ. ನೈಜ ಕಾಠಿಣ್ಯ ಪರಿಸರದ ಪರಿಚಯವಾಗುತ್ತದೆ. ಭಾಷಾಂತರಿಸುವ ಪ್ರಕ್ರಿಯೆ ಗುರುತರದವಾದದ್ದು. ಪಠ್ಯಪುಸ್ತಕಗಳ ಬಳಕೆ ವಿಸ್ತಾರವಾಗುವ ಕಾರಣದಿಂದ ಅವು ಎಲ್ಲ ರೀತಿಯಲ್ಲಿ ಪರಿಶೀಲನೆಗೆ ಒಳಪಡಿಸುವುದು ಸೂಕ್ತ. ಇದು ವಿವಿಧ ಮಜಲುಗಳ ಕಾರ್ಯಚಟುವಟಿಕೆಗಳನ್ನು ಹೊಣೆಗಾರಿಕೆಯ ಪರಿಯನ್ನು ಪರಿಚಯಿಸುತ್ತದೆ. ಒಂದು ಪ್ರಾದೇಶಿಕ ಭಾಷೆ ವ್ಯಾಪಕವಾಗಿ ಬಳಕೆಗೆ ಬರುವ ಸಂದರ್ಭದ ಸಮಸ್ಯೆಗಳು ಮತ್ತು ಸವಾಲುಗಳನ್ನು ಎದುರಿಸುವ ಪರಿ ವೈವಿಧ್ಯಮ ಯವಾದದ್ದು. ವಿಷಯವನ್ನು ಪರಿಭಾವಿಸುವ ರೀತಿ ಪರಿಕಲ್ಪನೆಗಳನ್ನು ಕಟ್ಟಿಕೊಡುವಲ್ಲಿನ ತೊಡಕುಗಳು ಸ್ವೀಕರಿಸುವಲ್ಲಿ ಮತ್ತು ಒಪ್ಪಿಸುವ ಮನಸ್ಥಿತಿ ಪರಿಸರ ಈ ಮೊದಲಾದವುಗಳನ್ನು ಅರ್ಥೈಸುವುದು ತುಂಬಾ ಗ್ರಹಿಕೆಗೆ ಮೀರಿದ ಸನ್ನಿವೇಶವೆನ್ನಬಹುದು. ಅಲ್ಲದೆ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡಿದರೆ ಉದ್ಯೋಗಾವಕಾಶಗಳು ದೊರಕದೆಂಬ ನಂಬಿಕೆಗಳು ಅಥವಾ ಕಲ್ಪನೆಗಳಿದ್ದಂತೆ ತೋರುತ್ತದೆ. ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಗೈಯುವುದು ಕೀಳೆಂದು ಸಹ ಭಾವಿಸಿದರವರಿದ್ದಾರೆ. ಎಲ್ಲಕ್ಕೂ

ಮಿಗಿಲಾಗಿ ವಿಷಯ ಗ್ರಹಿಕೆಯ ಭೂಮಿಕೆಯ ಭಾಷೆಯು ಪ್ರಮುಖವಾದುದ್ದು. ಇಂಗ್ಲೀಷ್ ಭಾಷೆಯ ಮೂಲದ ಸಿದ್ಧಾಂತಗಳನ್ನು ಸಮರ್ಪಕವಾಗಿ ಪರಿಭಾವಿಸುವ ಪಠ್ಯ ಸಾಮಾಗ್ರಿಗಳು ಕನ್ನಡದಲ್ಲಿ ಲಭ್ಯವಿರಲಾರದ್ದು ಹಿಂಜರಿಕೆಗೆ ಒಂದು ಪ್ರಮುಖ ಕಾರಣವಾಗಿರಬಹುದು.

ಆದರೆ ೧೯೮೦ ಮತ್ತು ೧೯೯೦ರ ದಶಕದಲ್ಲಿ ಕನ್ನಡ ಬೋಧನೆಗೆ ಸಾಕಷ್ಟು ಪ್ರಾಮುಖ್ಯತೆ ದೊರಕಿದೆ. ಕನ್ನಡದಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳ ಸಂಖ್ಯೆಯೂ ಗಣನೀಯವಾಗಿ ವಿಸ್ತಾರಗೊಂಡಿದೆ. ಈ ಅವಧಿಯಲ್ಲಿ ಕನ್ನಡ ಪಠ್ಯಪುಸ್ತಕಗಳು, ಸಂದರ್ಭಗ್ರಂಥಗಳು, ಪೂರಕ ಮಾಹಿತಿಗಳ ರಚನಾ ಪ್ರಕ್ರಿಯೆ ವ್ಯಾಪಕವಾದಂತಿವೆ. ಪಠ್ಯಗಳನ್ನು ಪ್ರಕಟಿಸುವ ಪ್ರಕಾಶಕರು ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬಂದಿದ್ದಾರೆ. ಕೆಲವು ಭಾಷಾಂತರಕಾರರು ತಾವೇ ಪ್ರಕಟಿಸಲು ಪ್ರಾಂಭಿಸಿದ್ದಾರೆ ಅಂದರೆ ಅಧ್ಯಯನ ಮತ್ತು ಅಧ್ಯಾಪನಕ್ಕೆ ಬೇಕಾಗುವ ಪೂರಕ ಪಠ್ಯ ಸಾಮಗ್ರಿಗಳು ಸುಲಭವಾಗಿ ಲಭಿಸುತ್ತಿವೆ. ಕನ್ನಡ ಮಾಧ್ಯಮದ ಪರಿಸರ ಪಸರಿಸಿದ ಪ್ರಯುಕ್ತ ಕನ್ನಡದಲ್ಲಿ ಬೋಧಿಸುವ ಪ್ರಕ್ರಿಯೆ ಚಟುವಟಿಕೆ ಚುರುಕುಗೊಂಡಿದೆ. ಇದು ೨೦ನೇ ಶತಮಾನದ ಅಂಚಿನಲ್ಲಿ ಮತ್ತಷ್ಟು ವಿಸ್ತಾರವಾಗಿದೆ ಹಾಗೂ ಈಗ ಜನಪ್ರಿಯವಾಗುತ್ತಿದೆ.

ಈಗ ರಾಜ್ಯದಲ್ಲಿ ೧೮೭೫ ಪದವಿಪೂರ್ವ ಕಾಲೇಜುಗಳಿವೆ. ಅವುಗಳಲ್ಲಿ ೭೬೨ ಸರಕಾರಿ ಹಾಗೂ ೧೧೧೩ ಖಾಸಗಿ ಒಡೆತನದಲ್ಲಿರುವುದು ಕಂಡು ಬರುತ್ತದೆ, ಖಾಸಗಿ ಒಡೆತನದ ಪದವಿ ಪೂರ್ವಕಾಲೇಜುಗಳಲ್ಲಿ ಅನುದಾನ ಸಹಿತ ಮತ್ತು ಅನುದಾನ ರಹಿತ ಸಂಸ್ಥೆಗಳು ಸೇರಿವೆ, ಪದವಿ ಪೂರ್ವ ಕಾಲೇಜುಗಳಲ್ಲಿ ಅರ್ಥಶಾಸ್ತ್ರ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಲ್ಲಿ ೭೩% ಕನ್ನಡ ಮಾಧ್ಯಮ ಆಯ್ಕೆ ಮಾಡಿಕೊಂಡಿದ್ದಾರೆ. ಉಳಿದ ೨೭% ರಷ್ಟು ಇನ್ನೂ ಇಂಗ್ಲೀಷ್ ಮಾಧ್ಯಮ ಬಯಸುವವರು ಇರುವುದು ತಿಳಿದುಬರುತ್ತದೆ. ಬಹುತೇಕ ಗ್ರಾಮೀಣ ಪ್ರದೇಶದಲ್ಲಿ ಕನ್ನಡ ಮಾಧ್ಯಮವೇ ಇರುತ್ತದೆ ಹಾಗೂ ಬೋಧನೆ ಕನ್ನಡದಲ್ಲಿ ಸಾಗಿದೆ ಆದರೆ ನಗರ ಪ್ರದೇಶಗಳಲ್ಲಿ ಬೋಧನೆ ಸಮಿಶ್ರವಾಗಿರುವುದು ಕಂಡುಬರುತ್ತದೆ, ಎರಡೂ ಮಾಧ್ಯಮ, ಆಯ್ಕೆಮಾಡಿಕೊಂಡ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಬೋಧನಾ ಪ್ರಕ್ರಿಯೆ ರೂಪಗೊಂಡಿರುವುದು ಕಂಡುಬರುತ್ತದೆ. ಗರಿಷ್ಠ ಪ್ರಮಾಣವಿರುವ ಕಾಲೇಜುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮಕ್ಕೆ ಪ್ರತ್ಯೇಕ ವಿಭಾಗಗಳನ್ನು ತೆರೆಯಲಾಗಿದೆ. ಕನ್ನಡ ಬೋಧನೆ ಅಪೇಕ್ಷಿಸುವವರ ಸಂಖ್ಯೆ ಗಣನೀಯ ವಾಗಿರುವುದು. ಅದರಂತೆ ಇಂಗ್ಲಿಷ್ ಮಾಧ್ಯಮ ಇಷ್ಟಪಡುವವರ ಸಂಖ್ಯೆ ಇನ್ನೂ ಸಂಪೂರ್ಣವಾಗಿ ಸ್ಥಗಿತಗೊಳ್ಳದಿರುವುದು ಆಶ್ಚರ್ಯವಾದರೂ ಸತ್ಯ. ಆರು ದಶಕ ಗತಿಸಿದರೂ ಇನ್ನೂ ಇಂಗ್ಲಿಷ್ ಮಾಧ್ಯಮದ ಮೂಲಕ ಅರ್ಥಶಾಸ್ತ್ರ ಬೋಧಿಸಲ್ಪಡುತ್ತದೆ ಎಂದರೆ ಕನ್ನಡ ಪಠ್ಯಗಳ ರಚನೆ ಮತ್ತು ಭಾಷೆಯಲ್ಲಿನ ಪರಿಪೂರ್ಣತೆ ಕುರಿತು ಪರಿಶೀಲಿಸಿಬೇಕಾಗುತ್ತದೆ. ಈ ಮೇಲಿನ ಪ್ರಮಾಣವು ೧೯೬೦ರ ದಶಕದಿಂದ ಕಡಿಮೆಯಾಗಿದ್ದರೂ ಸಹ ೨೦೧೦ರ ವೇಳೆಗೆ ಸಂಪೂರ್ಣವಾಗಿ ಕನ್ನಡ ಮಾಧ್ಯಮಕ್ಕೆ ಸೀಮಿತವಾಗಬೇಕಿತ್ತು ಎಂಬ ಆಲೋಚನೆ ಮನಸ್ಸನ್ನು ಪ್ರವೇಶಿಸುವುದು ಸಹಜ ರಾಜ್ಯದ ೪

ವಿಶ್ವವಿದ್ಯಾಲಯಗಳ(ಮೈಸೂರು ವಿಶ್ವವಿದ್ಯಾಲಯ ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಮತ್ತು ಗುಲಬುರ್ಗಾ ವಿಶ್ವವಿದ್ಯಾಲಯ ಗುಲಬುರ್ಗಾ ವ್ಯಾಪ್ತಿಯಲ್ಲಿ ಪದವಿ ತರಗತಿಗಳ ಮಹಾವಿದ್ಯಾಲಯಗಳ ಒಟ್ಟು ಸಂಖ್ಯೆ ೨೪೩. ಇದರಲ್ಲಿ ೧೦೩ ಸರಕಾರಿ ಹಾಗೂ ೧೪೦ ಖಾಸಗಿ ಒಡೆತನಕ್ಕೆ ಸೇರಿವೆ ಖಾಸಗಿ ಒಡೆತನದ ಸಂಸ್ಥೆಗಳಲ್ಲಿ ಅನುದಾನ ಸಹಿತ ಮತ್ತು ಅನುದಾನ ರಹಿತ ಕಾಲೇಜುಗಳನ್ನು ಒಳಗೊಂಡಿದೆ. ಸರಕಾರಿ ಕಾಲೇಜುಗಳಲ್ಲಿ ಕನ್ನಡ ಬೋಧನೆಗೆ ಪ್ರಾಶಸ್ತ್ಯ ನೀಡಲಾಗಿದೆ. ಆದರೆ ವಿದ್ಯಾರ್ಥಿಗಳು ಅಪೇಕ್ಷಿಸಿದರೆ ಇಂಗ್ಲೀಷ ಮಾಧ್ಯಮದಲ್ಲಿಯೂ ಬೋಧಿಸುವ ವ್ಯವಸ್ಥೆ ಇರುವುದಾಗಿ ಹಿರಿಯ ಉಪನ್ಯಾಸಕರುಗಳು ಹೇಳಿರುತ್ತಾರೆ ಖಾಸಗಿ ಸಂಸ್ಥೆಗಳಲ್ಲಿ ಇಂಗ್ಲಿಷ ಮಾಧ್ಯಮ ಸಂಪೂರ್ಣವಾಗಿ ಇಲ್ಲದಿದ್ದರೂ ೩೦% ಇರುವುದಾಗಿ ಸಂದರ್ಶನಗಳು ತಿಳಿಸುತ್ತವೆ. ಒಟ್ಟಾರೆ ನಾಲ್ಕು ವಿಶ್ವವಿದ್ಯಾಲಯಗಳ ವ್ಯಾಪ್ತಿಯೊಳಗಿನ ಪದವಿ ತರಗತಿಗಳಲ್ಲಿ ವಿದ್ಯಾರ್ಥಿಗಳು ಅಪೇಕ್ಷಿಸಲಿ ಇಲ್ಲದಿರಲಿ ಉಪನ್ಯಾಸಕರು ಇಂಗ್ಲಿಷ್ ಪದಗಳ ಮಿಶ್ರಿತ ಭಾಷೆಯಲ್ಲಿ ಬೋಧಿಸುತ್ತಿರುವುದು ಕಂಡು ಬರುತ್ತದೆ.

"ಕನ್ನಡ ಮಾಧ್ಯಮ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಸಫಲವಾಗಬೇಕಾದರೆ ಕನ್ನಡ ಭಾಷೆಯನ್ನು ಕೃಷಿಮಾಡಿ ಪಠ್ಯಪುಸ್ತಕ ಹಾಗೂ ಪ್ರೌಢ ಗ್ರಂಥಗಳನ್ನು ಸಿದ್ದಗೊಳಿಸುವುದು ಅವಶ್ಯಕ ಎಂಬುದಾಗಿ ಅಪ್ಪಾಸಹೇಬ ಅಡಕೆ ಇವರು 'ಅರ್ಥಶಾಸ್ತ್ರ ತತ್ವ ನಿರೂಪಣೆ' ೧೯೭೦ರಲ್ಲಿ ಹೇಳಿರುತ್ತಾರೆ. ಇಂಗ್ಲಿಷ ಭಾಷೆಗೆ ಸಂವಾದಿಯಾಗಿ ನಿಲ್ಲಬಲ್ಲ ಕನ್ನಡ ಕೃತಿಗಳಿದ್ದರೆ ಅವುಗಳ ಬಳಕೆಯ ಮೂಲಕ ಅಧ್ಯಯನ ಮತ್ತು ಅಧ್ಯಾಪನ ಸಫಲವಾಗಲು ಸಾಧ್ಯ. ಈ ಅಭಿಪ್ರಾಯವು ೧೯೭೦ರ ದಶಕದಲ್ಲಿ ಅಭಿವ್ಯಕ್ತವಾಗಿದ್ದರೂ ಇನ್ನೂ ಕನ್ನಡ ಭಾಷೆ ತಾಂತ್ರಿಕ ಪದಗಳಿಂದ ಸಮೃದ್ದವಾದಂತೆ ಕಾಣದು. "ಕಾಲೇಜು ಶಿಕ್ಷಣದ ಎಲ್ಲ ಹಂತಗಳಲ್ಲಿ ಕನ್ನಡವೇ ಶಿಕ್ಷಣ ಮಾಧ್ಯಮ ವಾಗುವ ಕಾಲ ಬಹುದೂರವಿಲ್ಲ." ಈ ವಿಚಾರವನ್ನು ವೃಷಭೇಂದ್ರಸ್ವಾಮಿ. ಎಸ್. ಎಮ್. ಇವರು 'ಅರ್ಥಶಾಸ್ತ್ರ ತತ್ವ ನಿರೂಪಣೆ' ೧೯೭೧ರಲ್ಲಿ ವ್ಯಕ್ತಪಡಿಸಿದ್ದಾರೆ. ಈ ನಂಬುಗೆಯು ಸಫಲ ವಾಗುವ ಅಂದಿನ ಕ್ರಿಯಾಶೀಲ ಪ್ರಕ್ರಿಯೆಯ ವೇಗ ಅದೆ ಗತಿಯಲ್ಲಿ ಸಾಗದೆ ಸಪ್ಪೆಯಾಗಿರಬೇಕು ಅಂದು ಭಾಷೆಯ ಬೆಳವಣಿಗೆಗೆ ಪೂರಕ ಪರಿಸರ ಸೃಷ್ಟಿಗೆ ಇರುವ ಸಹಕಾರ ಮಂದವಾದಂತಿದೆ. ಇತ್ತೀಚೆಗೆ ಕರ್ನಾಟಕದ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಬೋಧನೆ ಮತ್ತು ಪರೀಕ್ಷೆಗಳನ್ನು ನಡೆಸಲಾಗುತ್ತಿದೆ. ಅದು ದಿನದಿಂದ ದಿನಕ್ಕೆ ಜನಪ್ರಿಯವೂ ಆಗುತ್ತಿದೆ. ಇದರಿಂದ ಕನ್ನಡ ಮಾಧ್ಯಮದಲ್ಲಿ ಪದವಿ ಮಟ್ಟದವರೆಗೆ ಶಾಸ್ತ್ರೀಯ ಗ್ರಂಥಗಳು ಹೆಚ್ಚೆಚ್ಚಾಗಿ ಮುದ್ರಣವಾಗಿ ಪ್ರಕಟವಾಗುತ್ತಲಿವೆ." ಇದನ್ನು ಎನ್. ಆರ್. ಅಪರಂಜಿ ಆಧುನಿಕ ಅರ್ಥಶಾಸ್ತ್ರ ೧೯೮೫ರಲ್ಲಿ ದಾಖಲಿಸಿದ್ದಾರೆ. ಇದು ೧೯೯೦ರ ದಶಕದ ವಿಚಾರ. ಈ ವೇಳೆಗಾಗಲೇ ಕನ್ನಡ ಪದಗಳನ್ನು ಬೋಧನೆಯಲ್ಲಿ ಬಳಸುವುದರ ಜೊತೆ ಜೊತೆಯಲ್ಲಿ ಇಂಗ್ಲಿಷ್ ಉಪಯೋಗಿಸಲಾಗುತ್ತದೆ. ವಿದ್ಯಾರ್ಥಿ ಗಳ ಅಧ್ಯಯನಕ್ಕೆ ಸಹಕಾರಿಯಾಗುವ ಕನ್ನಡ ಕೃತಿಗಳು ಕ್ರಮೇಣ ಅಧಿಕಗೊಂಡಿವೆ. ೧೯೭೦ರ ದಶಕದವರೆಗೂ

ಕನ್ನಡದಲ್ಲಿ ಅಧ್ಯಯನ ಮತ್ತು ಅಧ್ಯಾಪನ ಹಾಗೂ ಪರೀಕ್ಷೆಗಳನ್ನು ಇಂಗ್ಲಿಷ್ ಮಾಧ್ಯಮದಲ್ಲಿಯೇ ನಡೆಸಬೇಕಾಗಿತ್ತು. ೧೯೭೦ರ ದಶಕದಲ್ಲಿ ಕನ್ನಡ ಮಾಧ್ಯಮದಲ್ಲಿ ಉತ್ತರಿಸುವ ಮನ್ವಂತರ ನಡೆಯಿತು. ಕನ್ನಡ ಬೋಧನೆಯ ಪರಿಣಾಮವದು. ಆರಂಭದಲ್ಲಿ ಈ ಕ್ರಮ ದಾವಂತಕ್ಕೊಳಗಾದದ್ದು ಕಂಡು ಬರುತ್ತದೆ. ಆದಾಗ್ಯೂ "ಕರ್ನಾಟಕದಾದ್ಯಾಂತ ಕನ್ನಡ ಮಾಧ್ಯಮದ ಮೂಲಕ ಶಿಕ್ಷಣ ನೀಡಲಾಗುತ್ತಿದೆಯಾದರೂ ಅತ್ಯುತ್ತಮ ಕನ್ನಡ ಪುಸ್ತಕಗಳ ಕೊರತೆಯಿಂದ ಶಿಕ್ಷಣ ಅರ್ಥಪೂರ್ಣವಾಗುತ್ತಿಲ್ಲ. ಇತ್ತೀಚಿಗೆ ಹೆಚ್ಚು ಕನ್ನಡ ಮಾಧ್ಯಮದ ಪುಸ್ತಕಗಳು ಹೊರ ಬರುತ್ತಿದ್ದಾಗ್ಯೂ ಅವುಗಳ ಅವಶ್ಯಕತೆ ಇನ್ನೂ ಹೆಚ್ಚಾಗಿ ಕಂಡು ಬರುತ್ತದೆ. ಹಲವಾರು ಲೇಖಕರು ವಿವಿಧ ದೃಷ್ಟಿಕೋನಗಳಿಂದ ವಿಷಯಗಳನ್ನು ವಿಶ್ಲೆಷಿಸುವುದರಿಂದ ಹೆಚ್ಚು ಹೆಚ್ಚು ಪುಸ್ತಕಗಳ ಅಧ್ಯಯನದಿಂದ ವಿದ್ಯಾರ್ಥಿವೃಂದಕ್ಕೆ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ." ಎಂಬುದಾಗಿ ಎಮ್ ಮಾದಯ್ಯ ಇವರು 'ಅರ್ಥಶಾಸ್ತ್ರ' ೧೯೮೫ರಲ್ಲಿ ಪ್ರಸ್ತಾಪಿಸಿದ್ದಾರೆ. ೨೦ನೇ ಶತಮಾನ ಅಂಚಿನಲ್ಲಿ ಕನ್ನಡ ಪೂರಕ ಪಠ್ಯಸಾಮಾಗ್ರಿಗಳು ಸಂಖ್ಯಾ ದೃಷ್ಠಿಯಿಂದ ವಿಸ್ತಾರವಾಗಿರುವುದು. ಆದರೆ ಬೋಧನೆಗೆ ಸಂಬಂಧಿಸಿದಂತೆ ಒಳನೋಟಗಳನ್ನರಿಸಿದಾಗ ಭಿನ್ನ ಅಂಶಗಳು ಗೋಚರಿಸುತ್ತವೆ. ವಿಷಯ ವಿಶ್ಲೇಷಣೆ ಏಕರೂಪವಾಗಿರುವುದಿಲ್ಲ. ಬೋಧನೆಗೆ ಇನ್ನೂ ಕನ್ನಡ ಪಠ್ಯಗಳ ಅವಶ್ಯಕತೆ ವ್ಯಕ್ತವಾಗುತ್ತದೆ. "ಕನ್ನಡ ಅರ್ಥವಿಜ್ಞಾನ ಸಾಹಿತ್ಯ ಒಂದು ಸಂಕ್ರಮಣಾವಸ್ಥೆಯಲ್ಲಿದೆ. ಬೆಳೆಯನೋ ಹುಲುಸಾಗಿಯೇ ಇದೆ. ಆದರೆ ಕಾಳು ಕಡಿಮೆ. ಕಳೆದ ಮೂರು ದಶಕಗಳಿಂದ ಈ ಕ್ಷೇತ್ರದ ಬೆಳವಣಿಗೆಯನ್ನು ಗಮನಿಸಿದಾಗ ಆತಂಕ ಕಾಡುತ್ತದೆ. ಕನ್ನಡದಲ್ಲಿ ಬರುತ್ತಿರುವ ಅರ್ಥವಿಜ್ಞಾನ ಕೃತಿಗಳಲ್ಲಿ ಹೆಚ್ಚಿನವು ಸಂತೆಯಲ್ಲಿ ನೇಯ್ದ ಮಾಲೆ. ಕನ್ನಡದ ಎರಡು ಕೃತಿಗಳನ್ನಿಟ್ಟುಕೊಂಡು ಮೂರನೆಯ ಕೃತಿಯನ್ನು ಹೊರತರುತ್ತಿರುವ ದಿಢೀರ್ ವಿದ್ವಾಂಸರಿಂದ ವಿಚಾರ ಸಾಹಿತ್ಯ ಬೆಳೆಯಲು ಸಾಧ್ಯವಿಲ್ಲ, ಕನ್ನಡ ಸಾಹಿತ್ಯ ಪರಿಚಯವಿಲ್ಲದ ಭಾಷಾ ಶುದ್ದಿಯ ಬಗ್ಗೆ ಗಮನವೀಯದ ಬರಹಗಾರರ ಗೈಡ್ಸ್ ಮಾದರಿಯು ಕೃತಿಗಳು ಮಾರುಕಟ್ಟೆಯಲ್ಲಿ ವಿಜೃಂಭಿಸುವುದು ಒಳ್ಳೆಯ ಲಕ್ಷಣವೇನಲ್ಲ. ಅರ್ಥವಿಜ್ಞಾನದ ವಿದ್ಯಾರ್ಥಿವೃಂದಕ್ಕೆ ಉತ್ತಮ ಗುಣಮಟ್ಟದ ಕನ್ನಡ ಕೃತಿಗಳನ್ನು ತಲುಪಿಸುವಲ್ಲಿ ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು ಸೋತಿದ್ದಾರೆ." ಈ ವಿಚಾರವನ್ನು ಪ್ರಭಾಕರ ಶಿಶಿಲ ಇವರು ಅಂತಾರಾಷ್ಟ್ರೀಯ ಅರ್ಥವಿಜ್ಞಾನ ೨೦೦೬ರಲ್ಲಿ ವಿನಂತಿಸಿಕೊಂಡಿದ್ದಾರೆ. ಈ ವಿಧಧ ವಿಮರ್ಶಾ ಸ್ವರೂಪದ ಟೀಕೆ ಟಿಪ್ಪಣಿಗಳು ಸತ್ಯಕ್ಕೆ ದೂರವಿಲ್ಲ ಎಂಬುದನ್ನು ಪರಿಗಣಿಸಿಬಹುದಾಗಿದೆ. ಮೇಲಿನ ವಿಚಾರ ಅರ್ಥಶಾಸ್ತ್ರ ಬೋಧಕರೊಬ್ಬರ ಅಂತರಂಗದ ಅಭಿವ್ಯಕ್ತ ಪರಿಭಾವನೆಗಳನ್ನು ಅಷ್ಟು ಸುಲಭವಾಗಿ ತಳ್ಳಿಹಾಕುವಂತಿಲ್ಲ. ಬೋಧನಾ ಸಂದರ್ಭದಲ್ಲಿ ಬಳಸುವ ಸಂದರ್ಭ ಗ್ರಂಥಗಳು ಪಠ್ಯಗಳು ತುಂಬಾ ಪರಿಣಾಮ ಮತ್ತು ಪ್ರಭಾವ ಬೀರುತ್ತವೆ. ಮನೆಮಾತು ಕನ್ನಡ ಇದ್ದರೂ ಸಹ, ವಿಷಯ ಬೋಧನೆಗೆ ಪಾಶ್ಚಾತ್ಯ ಆರ್ಥಿಕ ಸಿದ್ಧಾಂತಗಳು ಉತ್ತಮ ಗುಣಮಟ್ಟದ ಭಾಷೆಗಳಿಂದ ಕೂಡಿರಬೇಕು. ಪಾರಿಭಾಷಿಕ ಪದಗಳಿಗೆ ಸೂಕ್ತವಾದ ಕನ್ನಡ ಪದಬಳಕೆ ಇನ್ನೂ ಉಪಯುಕ್ತ ಎನಿಸುತ್ತದೆ. ಇದರಿಂದ ಇರುವ ವಿಷಯವನ್ನು

ವಿದ್ಯಾರ್ಥಿಗಳಿಗೆ ಸಮರ್ಪಕವಾಗಿ ವಿಶ್ಲೇಷಣೆ ಮಾಡಲು ಸಾಧ್ಯವಾಗುತ್ತದೆ. ವಿಷಯಕ್ಕೆ ಸಂಬಂಧಿಸಿದಂತೆ ಉದಾಹರಣೆಯೊಂದಿಗೆ ವಿಷಯವನ್ನು ವ್ಯಕ್ತಪಡಿಸಲು ಸಾಧ್ಯವಾಗುತ್ತದೆ.

## ೨.೩ ಬರಹಗಳ ಸ್ವರೂಪ ಮತ್ತು ಬೆಳವಣಿಗೆ

ಮೈಸೂರು ಪ್ರಾಂತವನ್ನೊಳಗೊಂಡಂತೆ ಭಾರತದಾದ್ಯಂತ ಅಧ್ಯಯನಕ್ಕೆ ಆಯ್ಕೆಯಾದ ಅರ್ಥಶಾಸ್ತ್ರ ಪಠ್ಯಗಳು ಪಾಶ್ಚಾತ್ಯ ಮೂಲದ್ದಾಗಿವೆ. ಪಾಶ್ಚಾತ್ಯರು ರೂಪಿಸಿದ ಆರ್ಥಿಕ ತತ್ವ, ನೀತಿ ಮತ್ತು ಸಿದ್ಧಾಂತಗಳಿಂದ ಅವರು ಪ್ರಗತಿ ಸಾಧಿಸಿರುವುದಾಗಿ ಭಾರತೀಯರು ಭಾವಿಸಿದ್ದರು. ಹೀಗಾಗಿ ಅವುಗಳ ಅಧ್ಯಯನ ಕೈಗೊಂಡರು. ಕನ್ನಡದಲ್ಲಿನ ಅರ್ಥಶಾಸ್ತ್ರ ಪಠ್ಯ ಬರವಣಿಗೆ ೧೯೫೦ರ ದಶಕದಲ್ಲಿ ಆರಂಭವಾಗಿ ರುವಂತೆ ದಾಖಲಾತಿಗಳು ಹೇಳುತ್ತವೆ. ಆ ಸಂದರ್ಭದಲ್ಲಿ ಸರಕಾರವಾಗಲಿ ವಿಶ್ವವಿದ್ಯಾಲಯಗಳಾಗಲಿ ಇಲ್ಲವೆ ಇಲಾಖೆಗಳಾಗಲಿ ಕನ್ನಡ ಪಠ್ಯಗಳಿಗೆ ಮನ್ನಣೆ ನೀಡುತ್ತಿರಲಿಲ್ಲ. ಇದಕ್ಕೆ ಪ್ರಬಲ ಕಾರಣವೆಂದರೆ ಶಿಕ್ಷಣ ಮಾಧ್ಯಮ ಇಂಗ್ಲಿಷ್ ಇರುವುದು. ಭಾಷಿಕರ ತುಡಿತ ವಿದ್ಯಾರ್ಥಿಗಳ ಮೇಲಿನ ಮಿಡಿತದ ಪ್ರಭಾವದಿಂದ. ಆಗ ಭಾಷಾಂತರಿಸಿದ ಪಠ್ಯಗಳು ಪದವಿ ಪೂರ್ವ ಶಿಕ್ಷಣದ ಹಂತಕ್ಕೆ ಸಂಬಂಧಿಸಿದವುಗಳಾಗಿವೆ. ಈ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸುವ ಪ್ರಯತ್ನಗಳು ನಡೆದವು. ಈ ಪ್ರಕ್ರಿಯೆ ಒಂದು ಅರ್ಥದಲ್ಲಿ ಸ್ವಯಂ ಚಾಲಿತವೆನ್ನುಬಹು ದಾಗಿದೆ. ಇದು ೧೯೭೦ರ ದಶಕಗಳವರೆಗೆ ಮುಂದುವರೆದಿರುವುದಾಗಿ ತಿಳಿದುಬರುತ್ತದೆ. ೧೯೭೦ರ ದಶಕದಲ್ಲಿ ಭಾರತ ಸರಕಾರ ಭಾಷಾ ನೀತಿಯನ್ನು ರೂಪಿಸಿ ಅನುಷ್ಠಾನಕ್ಕೆ ಪ್ರಯತ್ನಿಸುವರೆಗೂ ಹೀಗೆ ಸಾಗಿರುವುದು ಕಂಡುಬರುತ್ತದೆ.

"ನಮ್ಮ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗಗಳ ಮತ್ತು ಕಾಲೇಜುಗಳ ಅಧ್ಯಾಪಕರ ನೆರವಿನಿಂದ ನಾವು ಪಠ್ಯಪುಸ್ತಕ ರಚನೆಯ ಕಾರ್ಯ ಆರಂಭಿಸಿದ್ದೇವೆ." ಎಂಬುದನ್ನು ಸ.ಸ. ಮಾಳವಾಡರವರು ಅರ್ಥಶಾಸ್ತ್ರ ಪರಿಚಯ ೧೯೭೧ರಲ್ಲಿ ಹೇಳಿದ್ದಾರೆ. ಈ ದಾಖಲೆ ಪಠ್ಯ ಬರವಣಿಗೆಯ ಸ್ವರೂಪಕ್ಕೆ ಮುಖ್ಯವೆನಿಸುತ್ತದೆ. ಸರಕಾರದ ಆದೇಶಕ್ಕನುಗುಣವಾಗಿ ಕನ್ನಡದ ಬೋಧನೆಗೆ ಪಠ್ಯ ಸಿದ್ಧಪಡಿಸಬೇಕಾಗಿತ್ತು. ಈ ಪ್ರಕ್ರಿಯೆಗೆ ಯಾರನ್ನು ಸಂಪನ್ಮೂಲವಾಗಿ ಬಳಸಿ ಕೊಳ್ಳಬೇಕೆಂದು ಯೋಚಿಸಲಾಗಿದೆ. ಬೋಧನಾ ಪ್ರಕ್ರಿಯೆಯಲ್ಲಿ ದೀರ್ಘಕಾಲ ತೊಡಗಿರುವ ವರನ್ನು ಆಯ್ಕೆ ಮಾಡಲಾಗಿದೆ. ಈ ಉಪಾಧ್ಯಾಯರು ಇಂಗ್ಲಿಷ್ ಮೂಲದ ಅರ್ಥಶಾಸ್ತ್ರ ಪಠ್ಯಗಳನ್ನು ತಮ್ಮ ಅನುಭವ ಬಳಸಿ ಕನ್ನಡ ಪಠ್ಯಗಳನ್ನು ರೂಪಿಸಿದಂತೆ ಕಂಡುಬರುತ್ತದೆ. ಇಂಗ್ಲಿಷ್‌ನಿಂದ ನೇರ ಅನುವಾದ ವಿಧಾನವನ್ನು ಅನುಸರಿಸಿದಂತೆ ಇವು ಭಾಸವಾಗುವುದಿಲ್ಲ. ಇವು ಓದಿನ ಗ್ರಹಿಕೆಯಿಂದ ರೂಪಿತವಾಗಿವೆ. ಈಗ ಮೊದಲನೆಯ ಹಂತದ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತಿದ್ದೇವೆ. ಪಿಯುಸಿ ಪಠ್ಯಪುಸ್ತಕಗಳನ್ನು ಸೂಚಿಸುವುದಕ್ಕೆ ಆಯಾ ವಿಷಯಗಳ ಮುಂದೆ 'ಪರಿಚಯ' ಎಂಬ ಪದವನ್ನು ಬಳಸಿದ್ದೇವೆ." ಈ ವಿಚಾರವನ್ನು ಎಮ್. ಎಸ್. ಸುಂಕಾಪೂರ (ಸಂ) 'ಅರ್ಥಶಾಸ್ತ್ರ ಪರಿಚಯ' ೧೯೭೪ರಲ್ಲಿ ಹೇಳಿದ್ದಾರೆ. ಅಂದರೆ ಪ್ರಾಯೋಗಿಕ ಹಂತವೆಂದು ಭಾವಿಸಬಹುದಾದ ಈ ಸಂದರ್ಭದಲ್ಲಿ

ಪದವಿ ಪೂರ್ವ ಶಿಕ್ಷಣದ ಪಠ್ಯಪುಸ್ತಕಗಳನ್ನು ರೂಪಿಸಲಾಗಿದೆ. ಇದು ಒಂದು ವಿಧದ ಅವಸರದ ಚಟುವಟಿಕೆ ಎಂದರೂ ಸರಿಯಾದೀತು. ಸರಕಾರದ ಮುದ್ರೆಯೊಂದಿಗೆ ನಾಡಿನ ಭಾಷೆಯಲ್ಲಿ ಶಿಕ್ಷಣ ದೊರಕಿಸಿಕೊಡುವುದು ಬಹುಮುಖ್ಯ ಅಂಶ. ಈ ನಿಟ್ಟಿನಲ್ಲಿ ಕನ್ನಡ ಅರ್ಥಶಾಸ್ತ್ರ ಪಠ್ಯಬರಹದ ಸ್ವರೂಪ ನಿರ್ದಿಷ್ಟವಾಗಿತ್ತೆಂದು ಪರಿಭಾವಿಸುವುದು ಕಠಿಣವಾದದ್ದೆ. ಒಂದು ತರಗತಿಯ ಪಠ್ಯ ಸೀಮಿತ ಅವಧಿಯಲ್ಲಿ ರೂಪುಗೊಳ್ಳಬೇಕಾದರೆ ಅದರ ಕಾರ್ಯ ಹಂಚಿಕೆಯಾಗಬೇಕಾಗುತ್ತದೆ. ಹಲವರಲ್ಲಿ ಹಂಚಿಕೆಯಾದ ಪಠ್ಯದ ಘಟಕಗಳು ಯಾವ ಯಾವ ಸ್ವರೂಪ ಪಡೆಯುತ್ತವೆಂಬುದನ್ನು ನಿರೀಕ್ಷಿಸಲಾಗದು. ಆದರೂ ಉತ್ತಮ ಗುಣಮಟ್ಟದ ಪಠ್ಯಪುಸ್ತಕಗಳು ರಚನೆಯಾಗಿರುವುದು ಸಂತೋಷದ ಸಂಗತಿ. ಕನ್ನಡ ಪಠ್ಯಗಳಲ್ಲಿ ನೇರ ಅನುವಾದಗಳೇ ಹೆಚ್ಚು ಎಂಬುದನ್ನು ಪಠ್ಯಗಳು ತಿಳಿಸಿಕೊಡುತ್ತವೆ. ಆ ಪಠ್ಯಗಳನ್ನು ರೂಪಿಸಲು ಬಳಸಿದ ಬಗ್ಗೆ ಉಲ್ಲೇಖಿಸ ಲಾಗಿದೆ. "ಈ ಕಾರ್ಯಕ್ಕೆ ಕೈ ಹಾಕಿದಾಗ ಕನ್ನಡದಲ್ಲಿ ಯಶಸ್ವಿಯಾಗಿ ಬರೆಯಬಲ್ಲವೇ ಎಂಬ ಸಂದೇಹ ಅವರಲ್ಲಿ ಕೆಲವರಿಗೆ ಇದ್ದಂತಿತ್ತು" ಈ ವಿಚಾರವನ್ನು ವೃಷಭೇಂದ್ರಸ್ವಾಮಿ ಎಸ್. ಎಮ್. ಇವರು 'ಅರ್ಥಶಾಸ್ತ್ರ ತತ್ವ ನಿರೂಪಣೆಯ' ೧೯೭೧ರಲ್ಲಿ ವ್ಯಕ್ತಪಡಿಸಿದ್ದಾರೆ. ಇಂಗ್ಲಿಷ್ ಪರಿಸರದಲ್ಲಿ ಅಧ್ಯಯನ ಮತ್ತು ಬೋಧನೆಯಲ್ಲಿ ತೊಡಗಿರುವ ಮನೋಸ್ಥಿತಿಯನ್ನು ಇದು ಬಿಂಬಿಸುತ್ತದೆ. ಆದರೂ ಪ್ರಯತ್ನಿಸಿ ಯಶಸ್ಸನ್ನು ಸಾಧಿಸಿದ ಪ್ರಥಮ ಘಟ್ಟ. ಇದರಿಂದ ಪ್ರೇರಿತರಾಗಿ ಮುಂದಿನ ಹಂತದ ಪಠ್ಯಗಳನ್ನು ಕನ್ನಡದಲ್ಲಿ ರೂಪಿಸುವ ಪ್ರಕ್ರಿಯೆಯಲ್ಲಿ ತೊಡಗುವಂತೆ ಉತ್ತೇಜನಲಭಿಸಿದೆ. ೮೦ರ ದಶಕದವರೆಗೂ ವಿಶ್ವವಿದ್ಯಾಲಯಗಳು ಪಠ್ಯಗಳನ್ನು ರೂಪಿಸಿವೆ. ನಂತರದ ಕಾಲಘಟ್ಟಗಳಲ್ಲಿ ರೂಪಿತವಾದ ಪಠ್ಯಗಳು ಅನುವಾದ, ಭಾಷಾಂತರಗಳಾಗಿ ಪರಿವರ್ತನೆ ಕಂಡಂತಿವೆ. ೨೦ನೇ ಶತಮಾನದ ಅಂಚಿನಲ್ಲಿ ಪಠ್ಯಗಳು ಕನ್ನಡದಲ್ಲಿ ವಿಸ್ತಾರಗೊಂಡಿವೆ.

೧೯೭೦ರ ದಶಕದಲ್ಲಿ ಅಧಿಕೃತವಾಗಿ ಕನ್ನಡದಲ್ಲಿ ಪಠ್ಯಗಳು ರೂಪಿತವಾಗಿರುವುದು ತಿಳಿದು ಬರುತ್ತದೆ. ಪದವಿ ಪೂರ್ವ ಹಂತದಲ್ಲಿ 'ಪರಿಚಯ' ಎನ್ನುವ ಆಯಾ ವಿಷಯಗಳ ಮುಂದೆ ಪ್ರಕಟಿಸಿರುವುದಾಗಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ತಿಳಿಸಿದೆ. ಇದು ೧೯೭೯ರ ಅವಧಿ. ಇದೇ ಅವಧಿಯಲ್ಲಿ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳೂ ಸಹ ಇದೆ ಮಾದರಿಯ ಪ್ರಕ್ರಿಯೆಗಳನ್ನು ನಡೆಸಿರುವುದು ದಾಖಲೆಗಳಿಂದ ತಿಳಿದು ಬರುತ್ತದೆ. ಈ ಎಲ್ಲಾ ಮೂರು ವಿಶ್ವವಿದ್ಯಾಲಯಗಳು ಹಂತ ಹಂತವಾಗಿ ಪದವಿ ತರಗತಿಗಳಿಗೆ ಪಠ್ಯಪುಸ್ತಕಗಳನ್ನು ಪ್ರಕಟಿಸಿರುತ್ತವೆ. ಕನ್ನಡ ಮಾಧ್ಯಮದ ವಾತವರಣ ಸೃಷ್ಟಿಸಿರುವುದು ಬಹುಮುಖ್ಯ ಕಾರ್ಯವಾಗಿದೆ. ಪಠ್ಯಗಳ ಜೊತೆ ಜೊತೆಯಲ್ಲಿಯೆ ಸಂದರ್ಭ ಗ್ರಂಥಗಳನ್ನೂ ಪ್ರಕಟಿಸುವ ಪ್ರಯತ್ನ ನಡೆದಿರುವುದು ತಿಳಿದು ಬರುತ್ತದೆ. ಒಂದು ದಶಕದ ಅವಧಿಯಲ್ಲಿ ಈ ಎಲ್ಲಾ ಕಾರ್ಯಗಳು ಚುರುಕತನ ಪಡೆದಿರುವಂತೆ ಕಂಡುಬರುತ್ತದೆ. ನಂತರದ ಅವಧಿಯಲ್ಲಿ ಈ ಪ್ರಕ್ರಿಯೇ ನಿಧಾನವಾಗಿರಬೇಕೆಂಬ ಅಭಿಪ್ರಾಯ ಹಿರಿಯ ಉಪನ್ಯಾಸಕರಲ್ಲಿ ವ್ಯಕ್ತವಾಗಿದೆ. ಈ ಸಂದರ್ಭದಲ್ಲಿ ಖಾಸಗಿ ಪ್ರಕಾಶಕರು ಪಠ್ಯಗಳ ಪ್ರಕಟಣ ಪ್ರಕ್ರಿಯೇಯ ಮುಂಚುಣಿಯಲ್ಲಿರುವುದನ್ನು ಗಮನಿಸಬಹುದಾಗಿದೆ.

# ಅಧ್ಯಾಯ ಮೂರು

## ಪಠ್ಯ ಸಾಮಗ್ರಿಗಳ ತೌಲನಿಕ ವಿಶ್ಲೇಷಣೆ

# ಅಧ್ಯಾಯ ಮೂರು

# ಪಠ್ಯ ಸಾಮಗ್ರಿಗಳ ತೌಲನಿಕ ವಿಶ್ಲೇಷಣೆ

## ಪೀಠಿಕೆ

ಭಾರತದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವನು ಆರಂಭಿಸಿದ ಬ್ರಿಟಿಷ್ ಸರಕಾರವು ಅದರ ಅಗತ್ಯಕ್ಕಾಗಿ ಪಶ್ಚಿಮದ ಜ್ಞಾನಪಠ್ಯಗಳನ್ನು ಕನ್ನಡದಲ್ಲಿ ರೂಪಿಸುವ ಕೆಲಸಕ್ಕೆ ತೊಡಗಿದರು. ಪರಿಣಾಮವಾಗಿ ಆಧುನಿಕ ಜ್ಞಾನಶಾಖೆಗಳಾದ ವಿಜ್ಞಾನ, ತಂತ್ರಜ್ಞಾನಗಳಲ್ಲದೆ, ಭೂಗೋಳ, ಇತಿಹಾಸ ಇತ್ಯಾದಿ ಹಲವು ಸಮಾಜ ವಿಜ್ಞಾನದ ಜ್ಞಾನಪಠ್ಯಗಳನ್ನು ಭಾಷಾಂತರಿಸುವ ಕೆಲಸಕ್ಕೆ ಮುಂದಾದರು. ಇಂಗ್ಲಿಷ್ ಬೋಧನೆ-ಬೋಧನ ವಿಧಾನವಾಗಿ ಭಾಷಾಂತರವನ್ನು ಪರಿಚಯಿಸಿದ್ದು, ಭಾಷಾಂತರಕ್ಕೆ ಚಾಲನೆಯೊಂದನ್ನು ನೀಡಿದಂತಾಗಿ ದೇಶಿ ಭಾಷಾಂತರಕಾರರ ಚಟುವಟಿಕೆಯು ಶೀಘ್ರದಲ್ಲಿಯೇ ಆರಂಭಗೊಂಡಿತು ಎಂಬುದನ್ನು ಎಂ. ಉಷಾ ಇವರು ಭಾಷಾಂತರ ಪ್ರವೇಶಿಕೆ ೨೦೧೪:೬೫ರಲ್ಲಿ ದಾಖಲು ಮಾಡಿರುತ್ತಾರೆ. ಈ ವಿಚಾರವನ್ನು ಕನ್ನಡ ಅರ್ಥಶಾಸ್ತ್ರದ ಸಂದರ್ಭಕ್ಕೆ ಅನ್ವಯಿಸಿ ಗಮನಿಸಬಹುದಾಗಿದೆ. ಕನ್ನಡದಲ್ಲಿ ರೂಪಗೊಂಡಿರುವ ಪಠ್ಯಗಳಲ್ಲಿ ಮಾದರಿಗಾಗಿ ಕೆಲವು ಅಂಶಗಳನ್ನು ರ‍್ಯಾಂಡಂ ಆಗಿ ಆರಿಸಿಕೊಂಡು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಅರ್ಥಶಾಸ್ತ್ರವು ವಿಶ್ವ ಮಾದರಿಯ ಅಧ್ಯಯನ ವಿಷಯವಾಗಿ ವಿಶಾಲ ವ್ಯಾಪ್ತಿಯನು ಹೊಂದಿ ಅತಿ ಪ್ರಮುಖವೆನಿಸಿದೆ. ಸಮಗ್ರವಾಗಿ ಎಲ್ಲ ವಿಷಯ ವಸ್ತುಗಳನು ಪರಿಶೀಲಿಸುವುದು ಕಷ್ಟ ಸಾಧ್ಯವಾದ ಮಾತು. ಹಾಗೆಂದು ಎಲ್ಲವನ್ನು ನಿರಾಶೆಯಿಂದ ಕೈಚೆಲ್ಲಿ ಕುಳಿತುಕೊಳ್ಳುವುದು ಸಾಧುವಾದುದಲ್ಲ. ಸಂಕ್ಷಿಪ್ತವಾಗಿ ಹಣ, ಬೇಡಿಕೆ, ಪೂರೈಕೆ, ಕೃಷಿ, ಕೈಗಾರಿಕೆ, ಬ್ಯಾಂಕಿಂಗ್ ಪದ್ಧತಿ, ವಿದೇಶಿ ವ್ಯಾಪಾರ ಈ ಮೊದಲಾದ ಪ್ರಮುಖವೆನಿಸುವ ಕೆಲವೇ ಅಂಶಗಳನು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಪ್ರತಿಯೊಂದು ಅಂಶದ ಬಗ್ಗೆ ಪಠ್ಯಸಾಮಗ್ರಿಗಳಲ್ಲಿ ವಿವರವಾಗಿ ಗಮನಿಸಲಾಗಿದ್ದರೂ, ಬೇರೆ ಬೇರೆ ಭಾಷಾಂತರಕಾರರ ಒಂದೊಂದು ಬೇರೆ ಬೇರೆ ಪಠ್ಯ ಭಾಗವನ್ನು ಇಲ್ಲಿ ಪರಿಶೀಲನೆಗಾಗಿ ತೆಗೆದುಕೊಳ್ಳಲಾಗಿದೆ. ಕೆಲವೊಮ್ಮೆ ಬೇರೆ ಬೇರೆ ಭಾಷಾಂತರಕಾರರ ಒಂದೇ ಅಂಶದ ಬಗ್ಗೆ ಪಠ್ಯವನ್ನು ತೆಗೆದುಕೊಂಡಿದ್ದಿದೆ. ಅಲ್ಲಿ

ಭಾಷೆ, ಶೈಲಿ, ನಿರೂಪಣೆ, ವಿಷಯ ವಿಶ್ಲೇಷಣೆ ಈ ಮೊದಲಾದ ವಿಚಾರಗಳನ್ನು ತೌಲನಿಕವಾಗಿ ಗಮನಿಸುವ ಉದ್ದೇಶ ಹೊಂದಲಾಗಿದೆ.

## ೩.೧. ಮಾನವನ ಬಯಕೆಗಳು (Human Wants)

ಅರ್ಥಶಾಸ್ತ್ರವು ಮಾನವನ ಆರ್ಥಿಕ ಚಟುವಟಿಕೆಗಳ ಅಧ್ಯಯನ ಮಾಡುವ ಒಂದು ಸಮಾಜ ವಿಜ್ಞಾನ. ಆಸೆಗಳಿಂದಾಗಿ ಆರ್ಥಿಕ ಚಟುವಟಿಕೆಗಳು ಆರಂಭವಾಗುತ್ತವೆ. ಆಸೆಗಳ ತೃಪ್ತಿಗಾಗಿ ಪ್ರಯತ್ನ ಪಡುವುದು ಮಾನವ ಸಹಜ ಸ್ವಭಾವ. ಪ್ರಯತ್ನದಿಂದ ದೊರೆಯುವ ಪ್ರತಿಫಲವನ್ನು(ಹಣ) ಕೊಟ್ಟು, ಮಾನವ ತನಗೆ ಬೇಕಾದ ವಸ್ತುಗಳನ್ನು ಅನುಭೋಗಿಸುತ್ತಾನೆ. ಆಸೆಗಳಿಂದಾಗಿ ಭೋಗ, ಅನುಭೋಗಕ್ಕಾಗಿ ಉತ್ಪಾದನೆ, ವಿನಿಮಯ ಮತ್ತು ವಿತರಣೆ. ಆದುದರಿಂದ ಮಾನವನ ಆಸೆಗಳೇ ಎಲ್ಲ ಚಟುವಟಿಕೆಗಳ ಮೂಲ ಎನಿಸಿವೆ. ಮಾನವ ಜೀವನವು ಸಾಮಾಜಿಕ ಮೌಲ್ಯಗಳಿಂದ ಮತ್ತು ವಾತಾವರಣದಿಂದ ಪ್ರಭಾವಿತವಾಗಿರುತ್ತದೆ. ಆಧುನಿಕ ನಾಗರಿಕತೆಯು ಮಾನವನನ್ನು ಆಸೆಗಳ ಆಗರವನ್ನಾಗಿ, ಇಷ್ಟಗಳ ರಾಶಿಯನ್ನಾಗಿ, ಬಯಕೆಗಳ ಮುದ್ದೆಯನ್ನಾಗಿ ಮಾಡಿದೆ. ಆಗ ತಾನೇ ಹುಟ್ಟಿದ ಮಗು ಅಳುತ್ತದೆ. ಏಕೆ? ಅದಕ್ಕೆನೋ ಬೇಕಾಗಿದೆ. ಮರಣ ಶಯ್ಯೆಯಲ್ಲಿರುವ ಮುದುಕ ಕಣ್ಣೀರಿಳಿಸುತ್ತಾನೆ. ಏಕೆಂದರೆ ಆತ ಬದುಕನ್ನು ಪ್ರೀತಿಸುತ್ತಾನೆ. ಹೀಗೆ ಆಸೆಗಳು ಹುಟ್ಟಿನಿಂದ ಸಾವಿನವರೆಗೆ ಮಾನವನ ಪರಮಾಪ್ತ ಸಂಗತಿಗಳಾಗಿವೆ.

ವಿಧಗಳು (Types) : ಮಾನವನ ಆಸೆಗಳನ್ನು ಮೂರು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಈ ವಿಭಾಗಗಳೆಂದರೆ, ೧. ಅತ್ಯಾವಶ್ಯಕ ಆಸೆಗಳು ೨. ಹಿತದಾಯಕ ಆಸೆಗಳು ೩. ಭೋಗಮಯ ಎಂಬುದಾಗಿ ಪ್ರಭಾಕರ ಬಿ. ಶಿಶಿಲ ಅವರು ಆರಂಭಿಕ ಅರ್ಥಶಾಸ್ತ್ರ, ೧೯೮೬:೨೪-೨೫ರಲ್ಲಿ ಭಾಷಾಂತರಿಸಿದ್ದಾರೆ.

**ಇಷ್ಟಗಳು (wants)**: ಮಾನವನ ಇಷ್ಟಗಳಿಗೆ ಮಿತಿಯೇ ಇಲ್ಲ. ಅವನ ಇಷ್ಟ ಅಥವಾ ಬಯಕೆಗಳು ಅಸಂಖ್ಯಾತವು ವೈವಿಧ್ಯ ಪೂರ್ಣವೂ ಆಗಿವೆ. ಕನಿಷ್ಟ ಇಷ್ಟಗಳು ತೃಪ್ತಿಯಾಗದೆ ಮಾನವ ಜೀವಿಸಲಾರನು. ಇಷ್ಟಗಳು ನಮ್ಮ ಎಲ್ಲ ಆರ್ಥಿಕ ಚಟುವಟಿಕೆಗಳಿಗೆ ಮೂಲ ಕಾರಣ, ದೈನಂದಿನ ಜೀವನದಲ್ಲಿ ನಮಗೆ ಹಲವಾರು ವಸ್ತುಗಳು ಮತ್ತು ಸೇವೆಗಳು ಬೇಕೆನಿಸುತ್ತವೆ. ಇವೇ ನಮ್ಮ ಇಷ್ಟಗಳು. ಇವುಗಳನ್ನು ತೃಪ್ತಿಪಡಿಸಿಕೊಳ್ಳಲು, ಅಂದರೆ ಬೇಕೆನಿಸಿದ ವಸ್ತುಗಳನ್ನು ಮತ್ತು ಸೇವೆಗಳನ್ನು ಪಡೆಯಲು ನಾವು ಪ್ರಯತ್ನ ಮಾಡಬೇಕಾಗುತ್ತದೆ. ಪ್ರತಿಯೊಬ್ಬರೂ ಒಂದಲ್ಲ ಒಂದು ಕೆಲಸದಲ್ಲಿ ನಿರತನಾಗಿರುವುದು ತನ್ನ ವಿವಿಧ ಇಷ್ಟಗಳನ್ನು ತೃಪ್ತಿ ಪಡಿಸಿಕೊಳ್ಳುವದಕ್ಕಾಗಿ. ಇಷ್ಟಗಳು ಒಂದು ವೇಳೆ ಇಲ್ಲದಿದ್ದಲ್ಲಿ ಆರ್ಥಿಕ ಚಟುವಟಿಕೆಗಳು ಇರುತ್ತಿರಲಿಲ್ಲ ಮತ್ತು ಆರ್ಥಿಕ ಸಮಸ್ಯೆಗಳು ಉದ್ಭವಿಸುತ್ತಿರಲಿಲ್ಲ. ಇಷ್ಟಗಳ ತೃಪ್ತಿಪಡಿಸುವಿಕೆ ಎಲ್ಲ ಆರ್ಥಿಕ ಚಟುವಟಿಕೆಗಳ ಮೂಲಗುರಿ.

ಇಷ್ಟಗಳ ಪ್ರಕಾರಗಳು (Types of wants): ಇಷ್ಟಗಳನ್ನು ತೃಪಿತಪಡಿಸುವದಕ್ಕಾಗಿ ವಿವಿಧ ವಸ್ತುಗಳನ್ನು ಉಪಯೋಗಿಸಲ್ಪಡುತ್ತವೆ. ಈ ವಸ್ತುಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

೧. ಅವಶ್ಯಕ ವಸ್ತುಗಳು (Necessaries) ೨.ಹಿತ ವಸ್ತುಗಳು (comfarts) ೩.ಐಷಾರಾಮದ ವಸ್ತುಗಳು(Luxuries) ಎಂಬುದಾಗಿ ಎಸ್.ಎನ್.ಸಿ. ರಾವ್ ಮತ್ತು ಎಸ್.ಎನ್. ನಾಯಕ ಇವರು ಅರ್ಥಶಾಸ್ತ್ರ, ೧೯೮೬:೨೭–೩೧ರಲ್ಲಿ ಭಾಷಾಂತರ ಮಾಡಿದ್ದಾರೆ.

**ಮಾನವನ ಬಯಕೆಗಳು (Human wants) ಅರ್ಥವಿವರಣೆ (Meaning)**: ಈ ಭೂಮಿಯ ಮೇಲೆ ಹುಟ್ಟಿದ ಮನುಷ್ಯರೆಲ್ಲ ಅನೇಕ ಬಯಕೆ(ಇಚ್ಛೆ)ಗಳನ್ನು ಹೊಂದಿರುತ್ತಾರೆ. ನಮ್ಮ ಇಚ್ಛೆಗಳನ್ನು ಎಣಿಸಲು ಸಾಧ್ಯವಿಲ್ಲ. ಅವು ಅಸಂಖ್ಯಾವಾಗಿವೆ. ಆದ್ದರಿಂದಲೇ ಮನುಷ್ಯನು ಬಯಕೆಗಳ 'ಸಿವುಡು' ಅಥವಾ 'ಹೊರೆ' ಎಂದು ಹೇಳಿದ್ದಾರೆ. ಈ ಅನೇಕ ಇಚ್ಛೆಗಳಲ್ಲಿ ಸಾಧ್ಯವಾದಷ್ಟು ಇಚ್ಛೆಗಳನ್ನು ಪೂರ್ತಿ ಮಾಡಿಕೊಳ್ಳಲು ಪ್ರತಿಯೊಬ್ಬ ವ್ಯಕ್ತಿಯೂ ಪ್ರಯತ್ನಿಸುತ್ತಾನೆ. ಇದಕ್ಕಾಗಿಯೇ ಎಲ್ಲ ಜನರು ಒಂದಿಲ್ಲೊಂದು ಉದ್ಯೋಗದಲ್ಲಿ ತೊಡಗಿರುತ್ತಾರೆ. ಉದ್ಯೋಗ ಮಾಡಿ ಹಣ ಗಳಿಸುತ್ತಾರೆ. ಆ ಹಣದಿಂದ ವಸ್ತುಗಳನ್ನು ಖರೀದಿಸಿ ತಮ್ಮ ಇಚ್ಛೆಗಳನ್ನು ತೃಪ್ತಿಪಡಿಸಿಕೊಳ್ಳತ್ತಾರೆ. ಒಂದು ಬಯಕೆಯನ್ನು ತೀರಿಸಿಕೊಂಡ ನಂತರ ಮತ್ತೊಂದು ಬಯಕೆ ಹುಟ್ಟಿಕೊಳ್ಳುತ್ತದೆ. ಹೀಗೆ ಬಯಕೆಗಳಿಗೆ ಕೊನೆಯಿಲ್ಲ. ಬಯಕೆಗಳಿಲ್ಲದ ಮನುಷ್ಯನಿಲ್ಲ. ಮನುಷ್ಯನಿಗೆ ಈ ಬಯಕೆ(ಇಷ್ಟ)ಗಳು ಇರದಿದ್ದರೆ ಅವನು ದುಡಿಯುತ್ತಿರಲಿಲ್ಲ. ಯಾವ ಚಟುವಟಿಕೆಗಳನ್ನು ಅವನು ಮಾಡುತ್ತಿರಲಿಲ್ಲ. ಆದ್ದರಿಂದ ಮನುಷ್ಯನ ಎಲ್ಲ ಚಟುವಟಿಕೆಗಳಿಗೆ ಈ ಬಯಕೆಗಳೇ ಮೂಲ. ಈ ಕಾರಣದಿಂದಾಗಿಯೇ ಅರ್ಥಶಾಸ್ತ್ರದಲ್ಲಿ ಮಾನವನ ಬಯಕೆಗಳ ಅಭ್ಯಾಸಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದೆ.

ಬಯಕೆಗಳ ಲಕ್ಷಣಗಳು: (ಇವುಗಳನ್ನು ಗಮನಿಸಿರುವುದಿಲ್ಲ)

ಬಯಕೆಗಳ ವರ್ಗೀಕರಣ: ಮನುಷ್ಯನ ಬಯಕೆಗಳು ಅಸಂಖ್ಯೆ. ಅವುಗಳನ್ನು ಎಣಿಸಲು ಸಾಧ್ಯವಿಲ್ಲವಾದರೂ ಅಭ್ಯಾಸದ ಅನುಕೂಲತೆಗಾಗಿ ಅವುಗಳನ್ನು ಈ ರೀತಿ ವಿಂಗಡಿಸಲಾಗಿದೆ. ೧. ಅವಶ್ಯಕಗಳು ೨. ಸುಖದ ಬಯಕೆಗಳು ೩. ವಿಲಾಸಿ ಬಯಕೆಗಳು" ಈ ಭಾಷಾಂತರವನ್ನು ಎಂ.ಎಸ್. ಬದಾಮಿ ಅವರು ಅರ್ಥಶಾಸ್ತ್ರ, ೧೯೯೬:೩೩–೩೯

**ಮಾನವನ ಬಯಕೆಗಳು (Human wants)** : ಆರ್ಥಿಕ ಚಟುವಟಿಕೆಗಳ ಉಗಮವು ಬಯಕೆ ಅಥವಾ ಅಪೇಕ್ಷೆಯಿಂದಲೇ ಪ್ರಾರಂಭ ವಾಗುತ್ತದೆ. 'ಮಾನವನು ಬಯಕೆಗಳ ಮುದ್ದೆ' ಮಾನವನ ಬಯಕೆಗಳು ಅಪರಿಮಿತವಾಗಿದ್ದು, ಇವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿವೆ. ಇದಲ್ಲದೆ ಬಯಕೆಗಳು ಸಮಯದಿಂದ ಸಮಯಕ್ಕೆ, ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿರುತ್ತವೆ. ಮಾನವನು ಹೆಚ್ಚು ಹೆಚ್ಚು ನಾಗರೀಕನಾಗುತ್ತಿದ್ದಂತೆ ಅವನ ಬಯಕೆಗಳು ದ್ವಿಗುಣಗೊಳ್ಳುತ್ತಲಿವೆ. ಪ್ರಾಚೀನ ಕಾಲದಲ್ಲಿ ಹಾಗೂ ಮಧ್ಯಕಾಲದಲ್ಲಿ ಮಾನವನ ಬಯಕೆಗಳು ಸರಳ, ಸುಲಭ, ಪ್ರತ್ಯಕ್ಷವಾಗಿದ್ದವು. ಆದರೆ ಆಧುನಿಕ ಯುಗದ ಮಾನವನ ಬಯಕೆಗಳು ಅಮಿತವಾಗಿಯೂ, ಪರೋಕ್ಷವಾಗಿಯೂ ಹಾಗೂ ಇಂದಿನ ತಾಂತ್ರಿಕ ಯುಗದಲ್ಲಿ ಅವುಗಳು ಜಟಿಲವಾಗುತ್ತಿವೆ. ಇವು ಸಾಮಾನ್ಯವಾಗಿ ಶಿಕ್ಷಣ, ಆದಾಯ, ಜೀವನಮಟ್ಟ, ವಾಯುಗುಣ ಮುಂತಾದ ಅಂಶಗಳನ್ನು ಒಳಗೊಂಡಿವೆ.

ಮಾನವನ ಬಯಕೆಗಳ ಲಕ್ಷಣಗಳು (Characteristics of Human Wants) : ಯಾವ ಬಯಕೆಗಳ ವರ್ಗೀಕರಣ(Classification of human wants) : ಬಯಕೆಗಳನ್ನು ನಾವು ಸಾಮಾನ್ಯವಾಗಿ ಪ್ರಾರ್ಥಮಿಕ ಬಯಕೆಗಳು ಹಾಗೂ ಮಾಧ್ಯಮಿಕ ಬಯಕೆಗಳು ಎಂದು ಎರಡು ಬಗೆಗಳಲ್ಲಿ ವಿಂಗಡಿಸುತ್ತೇವೆ.

ಪ್ರಾಥಮಿಕ ಬಯಕೆಗಳು(Primary wants) : ಪ್ರಾರ್ಥಮಿಕ ಬಯಕೆಗಳು ಮಾನವನ ಅವಿಭಾಜ್ಯ ಅಂಗವಾಗಿದ್ದು, ಈ ಬಯಕೆಗಳನ್ನು ತೃಪ್ತಿ ಪಡಿಸದಿದ್ದರೆ, ಮಾನವನ ಜೀವನ ತುಂಬಾ ದುರ್ಬಲವಾಗುತ್ತದೆ. ಪ್ರಾರ್ಥಮಿಕ ಬಯಕೆಗಳನ್ನು ನಾವು ಪ್ರಮುಖವಾಗಿ ಮೂರು ವಿಧದಲ್ಲಿ ವಿಂಗಡಿಸಬಹುದಾಗಿದೆ. ಅವು ಯಾವುವೆಂದರೆ, ೧. ಜೀವನಾವಶ್ಯಕ ವಸ್ತುಗಳು ೨. ದಕ್ಷತೆಯ ಅನಿವಾರ್ಯ ವಸ್ತುಗಳು ೩. ಸಾಂಪ್ರದಾಯಿಕ ವಸ್ತುಗಳು

ಜೀವನಾವಶ್ಯಕ ವಸ್ತುಗಳು (Necessaries of life): ಯಾವ ವಸ್ತುಗಳಿಂದ ಮಾನವನು ಬದುಕಲು ಅನಿವಾರ್ಯವೋ, ಅಂತಹ ವಸ್ತುಗಳನ್ನು ನಾವು ಜೀವನಾವಶ್ಯಕ ವಸ್ತುಗಳೆನ್ನುತ್ತೇವೆ. ಈ ವಸ್ತುಗಳನ್ನು ಉಪಯೋಗಿಸದೆ ಮಾನವನು ಬದುಕಲು ಅಸಾಧ್ಯ. ಬಡವನಿರಲಿ ಅಥವಾ ಶ್ರೀಮಂತನಿರಲಿ, ಈ ವಸ್ತುಗಳನ್ನು ಖರೀದಿಸಲೇಬೇಕಾಗುತ್ತದೆ. ಉದಾ: ಆಹಾರ, ಉಡುಪು, ವಸತಿ, ಮುಂತಾದವುಗಳು, ಇದಲ್ಲದೆ ಅಗತ್ಯ ವಸ್ತುಗಳನ್ನು ಉಪಯೋಗಿಸುವುದರಲ್ಲಿ ನಾವು ಭಿನತೆಯನ್ನು ಕಾಣಬಹುದಾದರೂ ಅದನ್ನು ನಾವು ಉಪಯೋಗಿಸಲೇಬೇಕಾಗುತ್ತದೆ. ಉದಾ: ಶ್ರೀಮಂತ ವರ್ಗದ ಜನರು ಪೌಷ್ಠಿಕವಾದ ಹಾಗೂ ಸಮತೋಲನವಾದ ಆಹಾರವನ್ನು ಸೇವಿಸಿದರೆ, ಬಡವರ್ಗದ ಜನರು ಕಡಿಮೆ ಪೌಷ್ಠಿಕಯುಕ್ತವಾದ ಹಾಗೂ ಅಸಮತೋಲನ ಆಹಾರವನ್ನು ಸ್ವೀಕರಿಸುತ್ತಾರೆ.

ದಕ್ಷತೆಯ ಅನಿವಾರ್ಯ ವಸ್ತುಗಳು (Necessaries for efficiency) : ಈ ವಸ್ತುಗಳು ಮಾನವನು ಜೀವಿಸಲು ಅವಶ್ಯವಾದ ವಸ್ತುಗಳು ಆಗದೆ ಇದ್ದರೂ ಸಹ, ಮಾನವನು ಉತ್ತಮ ಮಟ್ಟದ ಜೀವನವನ್ನು ಸಾಗಿಸಲು ಸಹಾಯಕಾರಿಯಾಗಿದೆ. ಈ ವಸ್ತುಗಳು ನಮ್ಮ ದಕ್ಷತೆ ಅಥವಾ ಬೌದ್ಧಿಕ ಮಟ್ಟವನ್ನು ಹೆಚ್ಚಿಸಿಕೊಳ್ಳಲು ಸಹಾಯಕಾರಿಯಾಗಿವೆ. ಉದಾ: ವಿದ್ಯಾರ್ಥಿಗೆ ಖುರ್ಚಿ ಹಾಗೂ ಮೇಜುಗಳನ್ನು ಒದಗಿಸಿದಾಗ ಅವನ ದಕ್ಷತೆ ಅಧಿಕವಾಗುವುದು. ಅದರಂತೆ ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಆಹಾರ ಸೌಲಭ್ಯ, ವಸತಿ ಸೌಲಭ್ಯ, ವೈದ್ಯಕೀಯ ಸೌಲಭ್ಯ, ಮನೋರಂಜನೆ, ಮುಂತಾದ ಅವಕಾಶಗಳನ್ನು ಮಾಡಿಕೊಟ್ಟರೆ ಇವು ಅವರ ಕಾರ್ಯ ಸಾಮರ್ಥ್ಯತೆ ಅಥವಾ ದಕ್ಷತೆಯನ್ನು ಹೆಚ್ಚಿಸಲು ಸಹಾಯವಾಗುತ್ತವೆ.

ಸಾಂಪ್ರದಾಯಿಕ ಅಗತ್ಯ ವಸ್ತುಗಳು(Conventional necessaries) : ಇವು ಮಾನವನು ಜೀವಿಸಲು ಅವಶ್ಯಕಗಳಾದ ವಸ್ತುಗಳಲ್ಲ. ಮೇಲಾಗಿ, ಈ ವಸ್ತುಗಳು ಅವನ ಕಾರ್ಯ ಸಾಮರ್ಥತೆಯನ್ನು

ಹೆಚ್ಚಿಸಲೂ ಸಹ ಸಹಾಯಕಾರಿಯಾಗಿಲ್ಲ. ಆದರೆ ಈ ವಸ್ತುಗಳು ಸಾಂಪ್ರದಾಯದ ಪೂರ್ವಾಚಾರಗಳಿಗೆ ಅನ್ವಯಿಸುತ್ತವೆ. ಉದಾ: ಕಾಫಿ ಅಥವಾ ಟೀಯ ಸೇವನೆಯು ನಮ್ಮ ದಕ್ಷತೆಯನ್ನು ಹೆಚ್ಚಿಸುವುದಕ್ಕಾಗಿ ಅಥವಾ ನಾವು ಜೀವಿಸುವುದಕ್ಕಾಗಿ ಅವಶ್ಯಕವಾದ ವಸ್ತುವಾಗಿಲ್ಲ. ಆದರೂ ಕೂಡಾ ನಾವು ಸಾಂಪ್ರದಾಯ ಪೂರ್ವಾಚಾರವಾಗಿ ಅವುಗಳ ಸೇವೆಯನ್ನು ಅನುಸರಿಸುತ್ತೇವೆ.

ಮಾಧ್ಯಮಿಕ ಬಯಕೆಗಳು (Secondary wants) : ಮಾಧ್ಯಮಿಕ ಬಯಕೆಗಳು ಮಾನವನಿಗೆ ಹೆಚ್ಚಿನ ತೃಪ್ತಿ ಅಥವಾ ಸಂತೋಷವನ್ನು ಕೊಡುವ ಬಯಕೆಗಳಾಗಿವೆ. ಈ ಬಯಕೆಗಳನ್ನು ಈಡೇರಿಸುವುದರಿಂದ ಮಾನವನು ಉತ್ತಮ ಜೀವನಮಟ್ಟವನ್ನು ಹೊಂದಬಹುದಾಗಿದೆ. ಈ ಬಯಕೆಗಳನ್ನು ಮುಖ್ಯವಾಗಿ ಸುಖಸಾಧನೆ ಅಥವಾ ಆರಾಮದ ವಸ್ತುಗಳು ಐಷಾರಾಮದ ವಸ್ತುಗಳೆಂದು ಎರಡು ಬಗೆಯಲ್ಲಿ ವಿಂಗಡಿಸಬಹುದಾಗಿದೆ.

ಸುಖಸಾಧನೆ ಅಥವಾ ಆರಾಮದ ವಸ್ತುಗಳು(comforts): ಈ ವಸ್ತುಗಳು ಮಾನವನಿಗೆ ಸಾಮಾನ್ಯ ವಸ್ತುಗಳಿಗಿಂತ ಭಿನ್ನರೂಪದಲ್ಲಿ ತೃಪ್ತಿಯನ್ನು ನೀಡುತ್ತವೆ. ಇವು ನಮ್ಮ ಜೀವನವನ್ನು ಹೆಚ್ಚು ಸುಖಮಯವಾಗಿಸಲು ಸಹಾಯ ಮಾಡುತ್ತವೆ. ಉದಾ: ಶೀತ ಕಾಲದಲ್ಲಿ ಉಣ್ಣೆಯ ಬಟ್ಟೆಯನ್ನು ಧರಿಸುವುದು, ಬೇಸಿಗೆ ಕಾಲದಲ್ಲಿ ವಿದ್ಯುತ್ ಫ್ಯಾನನ್ನು ಉಪಯೋಗಿಸುವುದು ಇತ್ಯಾದಿ

ಐಷಾರಾಮದ ವಸ್ತುಗಳು(Luxuries): ಐಷಾರಾಮದ ವಸ್ತುಗಳು ಹೆಚ್ಚು ಬೆಲೆ ಬಾಳುವ ವಸ್ತುಗಳಾಗಿದ್ದು, ಇವು ಶ್ರೀಮಂತ ವರ್ಗಕ್ಕೆ ಮೀಸಲಾಗಿವೆ. ಈ ವಸ್ತುಗಳು ಮಾನವನ ಜೀವನಕ್ಕೆ ಅವಶ್ಯಕವಾಗಿಲ್ಲದಿದ್ದರೂ, ಅವನು ತನ್ನ ಅಂತಸ್ತನ್ನು ಹಾಗೂ ಶ್ರೀಮಂತಿಕೆಯನ್ನು ತೋರಿಸಲು ಸಹಾಯಕಾರಿಯಾದ ವಸ್ತುಗಳಾಗಿವೆ. ಉದಾ: ಅತಿ ಬೆಲೆಬಾಳುವ ಪೋಷಾಕುಗಳು, ಬಂಗಲೆಯಲ್ಲಿ ವಾಸಮಾಡುವುದು, ಅತಿ ಬೆಲೆ ಬಾಳುವ ಆಭರಣಗಳನ್ನು ಧರಿಸುವುದು ಇತ್ಯಾದಿ. ಐಷಾರಾಮದ ವಸ್ತುಗಳನ್ನು ಪ್ರಮುಖವಾಗಿ ಮೂರು ಬಗೆಗಳಲ್ಲಿ ವಿಂಗಡಿಸಲಾಗಿದೆ. ಅವುಗಳಾವುವೆಂದರೆ, ೧. ದೋಷರಹಿತ ಅಥವಾ ಹಾನಿಕಾರಕವಲ್ಲದ ಐಷಾರಾಮದ ವಸ್ತುಗಳು, ೨. ದೋಷಯುಕ್ತ ಅಥವಾ ಹಾನಿಕಾರಕ ಐಷಾರಾಮದ ವಸ್ತುಗಳು ಹಾಗೂ ೩. ರಕ್ಷಣೆಯ ಐಷಾರಾಮದ ವಸ್ತುಗಳು.

ದೋಷರಹಿತ ಅಥವಾ ಹಾನಿಕಾರಕವಲ್ಲದ ಐಷಾರಾಮದ ವಸ್ತುಗಳು(Harmless luxuries): ಈ ವಸ್ತುಗಳು ಮಾನವನಿಗೆ ಯಾವುದೇ ತರಹದ ಹಾನಿಯನ್ನುಂಟು ಮಾಡದೇ ಅವನ ಶ್ರೀಮಂತಿಕೆಯನ್ನು ಪ್ರದರ್ಶಿಸುವ ವಸ್ತುಗಳಾಗಿವೆ. ಉದಾ: ಭವ್ಯವಾದ ಕಟ್ಟಡಗಳು, ಅತಿ ಬೆಲೆಬಾಳುವ ಉಡುಪುಗಳನ್ನು ಧರಿಸುವುದು ಇತ್ಯಾದಿ.

ದೋಷಯುಕ್ತ ಅಥವಾ ಹಾನಿಕಾರಕ ಐಷಾರಾಮದ ವಸ್ತುಗಳು(Harmful luxuries): ಹಾನಿಕಾರಕ ಐಷಾರಾಮದ ವಸ್ತುಗಳು ಮಾನವನ ಆರೋಗ್ಯದ ದೃಷ್ಟಿಯಿಂದ ಹಾನಿಕಾರಕವಾಗಿವೆ. ಉದಾ: ಮದ್ಯಪಾನದ ಸೇವನೆ, ಮಾದಕ ವಸ್ತುಗಳ ಸೇವನೆ ಇತ್ಯಾದಿ.

ರಕ್ಷಣೆಯ ಐಷಾರಾಮದ ವಸ್ತುಗಳು(Defence luxuries): ಕಷ್ಟಕಾಲದಲ್ಲಿ ನಮ್ಮನ್ನು ಅನಾಹುತಗಳಿಂದ ಅಥವಾ ತೊಂದರೆಗಳಿಂದ ರಕ್ಷಿಸಿಕೊಳ್ಳಲು ಸಹಾಯವಾಗುವಂತಹ ವಸ್ತುಗಳನ್ನು ನಾವು ರಕ್ಷಣೆಯ ಐಷಾರಾಮದ ವಸ್ತುಗಳೆಂದು ಕರೆಯುತ್ತೇವೆ. ಮನೆ ಅಥವಾ ಬೆಲೆ ಬಾಳುವ ಆಭರಣಗಳನ್ನು ಹೊಂದಿರುವುದು ಇದಕ್ಕೆ ಉದಾಹರಣೆಗಳಾಗಿವೆ.

ಈ ಮೇಲಿನ ವರ್ಗೀಕರಣಗಳು ಆಧುನಿಕ ಯುಗದಲ್ಲಿ ಬದಲಾಗುತ್ತವೆ. ಇಂದಿನ ಐಷಾರಾಮದ ವಸ್ತುಗಳು ಸ್ವಲ್ಪ ಸಮಯದ ನಂತರ ಆರಾಮದ ವಸ್ತುಗಳಾಗಬಹುದು. ಹಾಗೂ ಇಂದಿನ ಆರಾಮದ ವಸ್ತುಗಳು ಮುಂದೆ ಜೀವನಾವಶ್ಯಕ ವಸ್ತುಗಳಾಗಬಹುದು. ಉದಾ: ದೂರದರ್ಶನವು ಸ್ವಲ್ಪ ಕಾಲದ ಹಿಂದೆ ಐಷಾರಾಮದ ವಸ್ತುವೆಂದು ಪರಿಗಣಿಸಲ್ಪಟ್ಟಿತ್ತು. ಆದರೆ ಇಂದು ಅದು ಆರಾಮದ ಪಟ್ಟಿಯಲ್ಲಿ ಸೇರಿಕೊಂಡಿದೆ. ಮೇಲಾಗಿ ಬಯಕೆಗಳು ಸಾಪೇಕ್ಷವಾಗಿದ್ದು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುವುದರಿಂದ ಸ್ಪಷ್ಟ ವರ್ಗೀಕರಣ ಕಷ್ಟವಾಗುತ್ತದೆ. ಸ್ಕೂಟರ್ ವಿದ್ಯಾರ್ಥಿಗೆ ಐಷಾರಾಮದ ವಸ್ತುವಾಗಿದ್ದರೆ, ವ್ಯಾಪಾರಸ್ಥರಿಗೆ ಆರಾಮದ ವಸ್ತುವಾಗಿದ್ದು, ವೈದ್ಯರಿಗೆ ಅವಶ್ಯಕ ವಸ್ತುವಾಗಿದೆ. ಹೀಗೆಯೇ ಸಮಯ ಬದಲಾದಂತೆಲ್ಲಾ ವಸ್ತುಗಳ ಪ್ರಾಮುಖ್ಯತೆಯು ಬದಲಾಗುತ್ತಾ ಇರುತ್ತವೆ" ಎಂಬ ಭಾಷಾಂತರವನ್ನು ಗುಡೂರ್ ಭೀಮಸೇನ್ ಇವರು ಅರ್ಥಶಾಸ್ತ್ರದ ಮೂಲಾಂಶಗಳು, ೧೯೯೫, ೧೯೯೯:೩೧-೩೩ರಲ್ಲಿ ದಾಖಲಿಸಿದ್ದಾರೆ.

"ಮಾನವನ ಬಯಕೆಗಳು (Human wants): ಮಾನವನು ಸಮಾಜದಲ್ಲಿ ಬದುಕಬೇಕಾದರೆ ಕೆಲವು ವಸ್ತುಗಳನ್ನು ಬಳಸಲೇಬೇಕಾಗುತ್ತದೆ. ಇತರರ ಸೇವೆಗಳನ್ನು ಪಡೆಯಲೇಬೇಕಾಗುತ್ತದೆ. "ಸರಕುಗಳು ಮತ್ತು ಸೇವೆಗಳನ್ನು ಬಳಸುವ ಮಾನವನ ಇಚ್ಛೆಯನ್ನು ಬಯಕೆ ಎನ್ನುತ್ತೇವೆ." ಉದಾ: ಹಸಿವಾದಾಗ ಊಟ ಮಾಡಬೇಕೆಂದು ಬಯಸುತ್ತೇವೆ. ಬಾಯಾರಿದಾಗ ನೀರು ಬೇಕೆನಿಸುತ್ತದೆ. ಬೇಸರವಾದಾಗ ಸಂಗೀತ ಕೇಳಬೇಕೆನಿಸುತ್ತದೆ. ಅನಾರೋಗ್ಯಕ್ಕೆ ತುತ್ತಾದಾಗ ವೈದ್ಯರ ಸೇವೆ ಪಡೆಯಬೇಕೆನಿಸುತ್ತದೆ. ಇತ್ಯಾದಿ.

ಸರಕು ಸೇವೆಗಳು ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಶಕ್ತಿ ಹೊಂದಿವೆ. ಆದುದರಿಂದ ಅವನು ಅವುಗಳನ್ನು ಬಳಸಲು ಅಪೇಕ್ಷಿಸುತ್ತಾನೆ. ಬಯಕೆಗಳು ಮಾನವನ ಎಲ್ಲ ಆರ್ಥಿಕ ಚಟುವಟಿಕೆಗಳ ಮೂಲವಾಗಿವೆ. ಅವನ ಬಯಕೆಗಳ ತೃಪ್ತಿಗಾಗಿ ವಿವಿಧ ಸರಕುಗಳು ಮತ್ತು ಸೇವೆಗಳನ್ನು ಉತ್ಪಾದಿಸಲಾಗುತ್ತಿದೆ. ಮಾನವನು ನಾಗರಿಕನಾದಂತೆ ಆತನ ಬಯಕೆಗಳೂ ಹೆಚ್ಚುತ್ತಿವೆ.

ಮಾನವನ ಬಯಕೆಗಳ ಲಕ್ಷಣಗಳು : ಇವುಗಳ ಕುರಿತು ಪರಿಶೀಲನೆ ಮಾಡಲಾಗಿಲ್ಲ

ಬಯಕೆಗಳ ವಿಧಗಳು : ಮಾನವನ ಬಯಕೆಗಳು ವೈವಿಧ್ಯಮಯವಾಗಿವೆ. ಅವುಗಳನ್ನು ಮುಖ್ಯವಾಗಿ ಮೂರು ವಿಧಗಳನ್ನಾಗಿ ವಿಂಗಡಿಸಬಹುದು. ಅವುಗಳೆಂದರೆ, ೧. ಅಗತ್ಯ ಬಯಕೆಗಳು ೨. ಸುಖದಾಯಕ ಬಯಕೆಗಳು ೩. ಐಶಾರಾಮದ ಬಯಕೆಗಳು

ಅಗತ್ಯ ಬಯಕೆಗಳು (Necessaries) : ಮಾನವನ ಬದುಕಿಗೆ ಅಗತ್ಯವಾಗಿ ಬೇಕಾದ ವಸ್ತುಗಳನ್ನು ಬಯಸುವುದಕ್ಕೆ ಅಗತ್ಯ ಬಯಕೆಗಳೆನ್ನುತ್ತೇವೆ. ಇವುಗಳಲ್ಲಿ ಮೂರು ವಿಧಗಳಿವೆ. ಅವುಗಳೆಂದರೆ,

ಅತ್ಯವಶ್ಯಕ ಬಯಕೆಗಳು: ಜೀವನ ನಿರ್ವಹಣೆಗೆ ಅತಿ ಅಗತ್ಯವಾದ ವಸ್ತುಗಳನ್ನು ಬಯಸುವುದಕ್ಕೆ ಅತ್ಯವಶ್ಯಕ ಬಯಕೆ ಎನ್ನುತ್ತೇವೆ. ಉದಾ : ಊಟ, ಬಟ್ಟೆ, ವಸತಿ, ಶಿಕ್ಷಣ, ಆರೋಗ್ಯ ಇತ್ಯಾದಿ.

ದಕ್ಷತಾವಶ್ಯಕ ಬಯಕೆಗಳು: ಮಾನವನು ತಾನು ಮಾಡುವ ಕೆಲಸದಲ್ಲಿ ದಕ್ಷತೆಯನ್ನು ಹೆಚ್ಚಿಸಿಕೊಳ್ಳಲು ಕೆಲವು ವಸ್ತುಗಳನ್ನು ಬಯಸುತ್ತಾನೆ. ಅವುಗಳಿಗೆ ಧಕ್ಷತಾವಶ್ಯಕ ಬಯಕೆಗಳೆನ್ನುತ್ತೇವೆ. ಉದಾ: ಹಾಲು, ತುಪ್ಪ, ಮಾಂಸ, ತರಬೇತಿ.ಇತ್ಯಾದಿ

ಸಾಂಪ್ರದಾಯಕ ಬಯಕೆಗಳು: ಮಾನವನು ಸಮಾಜದಲ್ಲಿ ಬದುಕುವಾಗ ಕೆಲವು ಸಂಪ್ರದಾಯ ಗಳನ್ನು ಪಾಲಿಸಬೇಕಾಗುತ್ತದೆ. ಅದಕ್ಕೆ ಅಗತ್ಯವಾದ ವಸ್ತುಗಳ ಬಯಕೆಯೇ ಸಾಂಪ್ರದಾಯಕ ಬಯಕೆ. ಉದಾ : ಬಳೆ, ಕುಂಕುಮ, ಹೂವು, ಹಬ್ಬ–ಹರಿದಿನಗಳಲ್ಲಿ ಹೊಸಬಟ್ಟೆ ಬಯಸುವುದು ಇತ್ಯಾದಿ.

ಸುಖದಾಯಕ ಬಯಕೆಗಳು(Comforts): ಮಾನವನು ತನ್ನ ಬದುಕನ್ನು ಸುಖವಾಗಿ ಸಾಗಿಸಲು ಕೆಲವು ವಸ್ತುಗಳು ಬೇಕಾಗುತ್ತವೆ. ಅಂತಹ ಬಯಕೆಗಳಿಗೆ ಸುಖದಾಯಕ ಬಯಕೆಗಳೆನ್ನುತ್ತೇವೆ. ಉದಾ: ವೈದ್ಯರಿಗೆ ಕಾರು ಇದ್ದರೆ ಅವರು ರೋಗಿಗಳ ಮನೆಗೆ ಹೋಗಿ ಶುಶ್ರೂಷೆ ಮಾಡಲು ಅನುಕೂಲವಾಗುತ್ತದೆ. ಮಲಗಲು ಚಾಪೆಗೆ ಬದಲಾಗಿ ಮೆತ್ತನೆಯ ಹಾಸಿಗೆಯಿದ್ದರೆ ಸುಖವಾಗಿ ನಿದ್ದೆ ಬರುತ್ತದೆ. ವಿದ್ಯಾರ್ಥಿಗಳಿಗೆ ಕುರ್ಚಿ ಮತ್ತು ಮೇಜು ಇದ್ದರೆ ಆರಾಮವಾಗಿ ಬರೆಯಲು ಮತ್ತು ಓದಲು ಸಹಾಯಕವಾಗುತ್ತದೆ. ಕಾರ್ಮಿಕರಿಗೆ ಸ್ಕೂಟರ್ ಇದ್ದರೆ ತಮ್ಮ ಕೆಲಸಕ್ಕೆ ಆರಾಮವಾಗಿ ಹೋಗಿ ಬರಲು ಸಾಧ್ಯವಾಗುತ್ತದೆ.

ಐಶಾರಾಮದ ಬಯಕೆಗಳು(Luxuries): ಅತಿ ಬೆಲೆ ಬಾಳುವ ವಿಲಾಸಿ ವಸ್ತುಗಳನ್ನು ಕೊಂಡು ಬಳಸುವ ಇಚ್ಛೆಗೆ ಐಶಾರಾಮದ ಬಯಕೆಗಳು ಎನ್ನುತ್ತೇವೆ. ಐಶಾರಾಮದ ಬಯಕೆಗಳಲ್ಲಿ ಮೂರು ವಿಧಗಳಿವೆ. ಅವುಗಳೆಂದರೆ,

ಅಪಾಯರಹಿತ ಐಶಾರಾಮದ ಬಯಕೆಗಳು: ಹವಾನಿಯಂತ್ರಿತ ಬಂಗಲೆ ಅತಿ ಬೆಲೆಯ ಕಾರು, ಅತಿ ಬೆಲೆ ಬಾಳುವ ಬಟ್ಟೆಗಳು, ಒಡವೆಗಳು ಇತ್ಯಾದಿ ವಸ್ತುಗಳು ಸಾಮಾನ್ಯವಾಗಿ ನಮ್ಮ ಜೀವನಕ್ಕೆ ಅಪಾಯವನ್ನು ಉಂಟುಮಾಡಲಾರವು. ಇಂತಹ ವಸ್ತುಗಳನ್ನು ಬಯಸುವುದಕ್ಕೆ ಅಪಾಯರಹಿತ ಐಷಾರಾಮದ ಬಯಕೆಗಳೆನುತ್ತೇವೆ.

ಅಪಾಯಕಾರಕ ಐಶಾರಾಮದ ಬಯಕೆಗಳು: ಅತಿ ಬೆಲೆಯ ಧೂಮಪಾನ ಮತ್ತು ಮದ್ಯಪಾನ, ಹೆರಾಯಿನ್, ಅಫೀಮು ಮುಂತಾದ ಮಾದಕ ವಸ್ತುಗಳ ಸೇವನೆ ಇತ್ಯಾದಿ ಬಯಕೆಗಳು ಮಾನವನ

ಜೀವನಕ್ಕೆ ಅಪಾಯವನ್ನು ಉಂಟುಮಾಡುತ್ತವೆ. ಇಂತಹ ವಸ್ತುಗಳ ಬಯಕೆಗೆ ಅಪಾಯಕಾರಕ ಐಶಾರಾಮದ ಬಯಕೆ ಎನುತ್ತೇವೆ.

ಸಂರಕ್ಷಿತ ಐಶಾರಾಮದ ಬಯಕೆಗಳು: ಅತಿ ಬೆಲೆಯ ಒಡವೆಗಳು, ವಜ್ರ-ವೈಢೂರ್ಯಗಳು, ಆಸ್ತಿ, ಬ್ಯಾಂಕಿನ ಖಾತೆಯಲ್ಲಿನ ಹಣ ಇತ್ಯಾದಿಗಳು ಭವಿಷ್ಯದ ಜೀವನಕ್ಕೆ ಸಹಾಯಕವಾದವುಗಳು. ಇವುಗಳನ್ನು ಬಯಸುವುದಕ್ಕೆ ಸಂರಕ್ಷಿತ ಐಶಾರಾಮದ ಬಯಕೆಗಳೆನ್ನುತ್ತೇವೆ.

ಮಾನವನು ಮೊದಲು ಅಗತ್ಯ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕು. ಆನಂತರ ಸುಖದಾಯಕ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕು. ಅಗತ್ಯ ಮತ್ತು ಸುಖದಾಯಕ ಬಯಕೆಗಳು ತೃಪ್ತಿ ಹೊಂದಿದ ಮೇಲೂ ಆತನ ಆದಾಯ ಹೆಚ್ಚಿದ್ದರೆ, ಆಗ ಮಾತ್ರ ಐಶಾರಾಮದ ಬಯಕೆಗಳನ್ನು ತೃಪ್ತಿಪಡಿಸಲು ಮುಂದಾಗಬೇಕು. ಅಗತ್ಯ ಬಯಕೆಗಳನ್ನೇ ತೃಪ್ತಿಪಡಿಸಿಕೊಳ್ಳಲಾಗದವರು ಐಶಾರಾಮದ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಮುಂದಾದರೆ ಮೂರ್ಖರೆನಿಸಿಕೊಳ್ಳಬೇಕಾಗುತ್ತದೆ", ಎಂಬುದಾಗಿ ಜಿ.ಎನ್. ಕೆಂಪಯ್ಯ ಅವರು ಮೂಲ ಆರ್ಥಿಕ ಸಿದ್ಧಾಂತ, ೨೦೦೪:೫೨-೫೬ರಲ್ಲಿ ಭಾಷಾಂತರ ಮಾಡಿರುತ್ತಾರೆ.

ಮಾನವನ ಬಯಕೆಗಳು: ಮಾನವನ ಬಯಕೆಗಳು ಅಪಾರ. ಬಯಕೆಗಳೆಂದರೆ ಯಾವುದೇ ವಸ್ತುವನ್ನು ಅನುಭವಿಸುವ ಅಭಿಪ್ಸೆ. ಇದು ಮಾನವನಲ್ಲಿ ಅಪಾರವಾದುದು ಮತ್ತು ಅಪರಿಮಿತವಾದುದು. ಹಾಗೆಯೇ ಅನುಭವಿಸಿದ ನಂತರ ಬಯಕೆಗಳು ಸ್ಥಗಿತವಾಗುವುದಿಲ್ಲ. ಅದು ಮಾನವನಲ್ಲಿ ನಿರಂತರವಾಗಿರುತ್ತದೆ. ಕೆಲವು ಬಯುಕೆಗಳು ಅವಶ್ಯವಾಗಿರುತ್ತವೆ. ಇನ್ನೂ ಕೆಲವು ಸುಖದಾಯಕವಾಗಿರುತ್ತವೆ. ಇನ್ನೂ ಕೆಲವು ಸಾಮಾಜಿಕವಾಗಿ ಅವಶ್ಯಕ ಮತ್ತು ಘನತೆಯ ಜೀವನಶೈಲಿಯಿಂದ ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಮಾನವನ ಬಯಕೆಗಳು ವೈವಿಧ್ಯಮಯ. ವ್ಯಕ್ತಿ ಇನ್ನೊಬ್ಬನಿಂದ ಹೇಗೆ ವಿಭಿನ್ನನಾಗಿರುತ್ತಾನೋ ಹಾಗೇ ಬಯಕೆಗಳು ಒಬ್ಬನಿಂದ ಇನ್ನೊಬ್ಬನಿಗೆ ವಿಭಿನ್ನವಾಗಿರುತ್ತವೆ. ಉದಾ: ಆಹಾರ, ಬಟ್ಟೆ, ವಸತಿ, ಮೋಜು, ಪೀಠೋಪಕರಣ, ಟಿ.ವಿ., ರೇಡಿಯೋ ಇತ್ಯಾದಿ ಇಂತಹ ಸಾವಿರಾರು ವಸ್ತುಗಳನು ಪಡೆಯುವುದು, ಅನುಭವಿಸುವುದು ಬಯಕೆಯಾಗಿದೆ.

ಮಾನವನು ಇಷ್ಟಪಡುವ, ಬೇಕೆಂದು ಇಚ್ಛಿಸುವ ಎಲ್ಲ ಅಂಶಗಳನ್ನು ಬಯಕೆಗಳು ಎಂದು ಕರೆಯುತ್ತೇವೆ. ಬಯಕೆಯು ಹಲವಾರು ಕಾರಣಗಳಿಂದ ಹುಟ್ಟಿಕೊಳ್ಳುತ್ತದೆ. ಅವುಗಳೆಂದರೆ, (ಇವು ಬಯಕೆಗಳ ಲಕ್ಷಣಗಳು ಇವುಗಳ ಅಧ್ಯಯನ ಮಾಡಿರುವುದಿಲ್ಲ).

ಬಯಕೆಗಳ ವರ್ಗೀಕರಣ: ಬಯಕೆಗಳ ಅಗತ್ಯ, ಉಪಯೋಗ, ಲಕ್ಷಣಗಳನ್ನಾಧರಿಸಿ ಅವುಗಳನ್ನು ಎರಡು ವಿಧವಾಗಿ ವರ್ಗೀಕರಿಸಬಹುದು. ೧. ಪ್ರಾಥಮಿಕ ಅಥವಾ ಮೂಲ ಬಯಕೆಗಳು ೨. ಸಾಂಸ್ಕೃತಿಕ ಅಥವಾ ಹಿತದಾಯಕ ಬಯಕೆಗಳು

ಮೊದಲನೆಯ ವರ್ಗದಲ್ಲಿ ಅಗತ್ಯ ವಸ್ತುಗಳನ್ನು ಪಡೆಯುವ ಬಯಕೆಗಳಿರುತ್ತವೆ. ಎರಡನೆಯ ವರ್ಗದಲ್ಲಿ ವಿಲಾಸದಾಯಕ, ಸುಖ ನೀಡುವ, ಆರಾಮದಾಯಕ ಬಯಕೆಗಳಿರುತ್ತವೆ. ಸಾಮಾನ್ಯವಾಗಿ ಸರಳೀಕರಣ ದೃಷ್ಟಿಯಿಂದ ಬಯಕೆಗಳನ್ನು ಮೂರು ವಿಧಗಳಾಗಿ ವಿಂಗಡನೆ ಮಾಡಲಾಗಿದೆ. ಅವುಗಳೆಂದರೆ

ಅವಶ್ಯಕಗಳು: ಮಾನವನು ಬದುಕಲು, ಜೀವನ ನಡೆಸಲು ಕೆಲವು ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಆ ಬಯಕೆಗಳನ್ನು ಈಡೇರಿಸಿಕೊಳ್ಳದಿದ್ದರೆ ಅವನು ಬದುಕಿರಲಾರ. ಉದಾ: ಆಹಾರ, ನೀರು, ಬಟ್ಟೆ ಇಂತಹ ಬಯಕೆಗಳಿಗೆ ಜೀವನಾವಶ್ಯಕ ಬಯಕೆಗಳು ಎನ್ನಲಾಗುತ್ತದೆ. ಇದರ ಜೊತೆಗೆ ಉತ್ತಮ ಜೀವನಕ್ಕೆ, ಆರೋಗ್ಯಕ್ಕೆ, ಶಕ್ತಿಗೆ ಇನ್ನು ಕೆಲವು ಅಗತ್ಯ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಅವನ ಕೆಲಸ ಮಾಡುವ ಸಾಮರ್ಥ್ಯವನ್ನು, ದಕ್ಷತೆಯನ್ನು ಹೆಚ್ಚಿಸುವುದರಿಂದ ಅದನ್ನು ದಕ್ಷತಾವಶ್ಯಕ ಬಯಕೆಗಳೆಂದು ವರ್ಗೀಕರಿಸಲಾಗಿದೆ. ಉದಾ: ಪೌಷ್ಟಿಕಾಂಶವುಳ್ಳ ಆಹಾರ ಪದಾರ್ಥಗಳಾದ ಬೆಣ್ಣೆ, ಹಾಲು, ಮೊಟ್ಟೆ ಇತ್ಯಾದಿ. ಕೆಲವು ವೇಳೆ ಸಾಂಪ್ರಾದಾಯಿಕ ಕಾರ್ಯನೆರವೇರಿಸಲು ಅಗತ್ಯವಾಗಿ ಕೆಲವು ಬಯಕೆಗಳನ್ನು ಈಡೇರಿಸಿಕೊಳ್ಳಬೇಕಾಗುತ್ತದೆ. ಉದಾ: ಹುಟ್ಟು, ಸಾವು, ಮದುವೆ, ಹಬ್ಬ-ಹರಿದಿನಗಳಲ್ಲಿ ಬಳಸುವ ಸರಕುಗಳು. ಇಂತಹ ಬಯಕೆಯನ್ನು ಸಾಂಪ್ರದಾಯಿಕ ಅತ್ಯಾವಶ್ಯಕ ಬಯಕೆಗಳು ಎಂದು ವರ್ಗೀಕರಿಸಲಾಗಿದೆ.

ಹಿತದಾಯಕಗಳು: ಪ್ರತಿಯೊಬ್ಬ ಮಾನವನು ಸುಖ ಜೀವನ ನಡೆಸಲು ಇಚ್ಛೆಪಡುತ್ತಾನೆ. ಅಂದರೆ ಅವನು ಅನುಭೋಗಿಸುವ ವಸ್ತುಗಳಿಂದ ದೇಹಕ್ಕೆ, ಮನಸ್ಸಿಗೆ ಸಂತೋಷ ದೊರಕುವಂತಿರಬೇಕು. ಸುಖಕೊಡುವಂತಿರಬೇಕು. ಅಂತಹ ಬಯಕೆಗಳಿಗೆ ಹಿತದಾಯಕ ಅಥವಾ ಸುಖದಾಯಕ ಬಯಕೆಗಳು ಎನ್ನಲಾಗುತ್ತದೆ. ಉದಾ: ಉಣ್ಣೆ ಬಟ್ಟೆಗಳು, ಮಂಚ, ಹಾಸಿಗೆ, ಫ್ಯಾನು, ವಾಷಿಂಗ್ ಮೆಷನ್, ಹಣ್ಣು-ಹಂಪಲಗಳು ಇತ್ಯಾದಿ.

ವಿಲಾಸಿ ಬಯಕೆಗಳು: ಶ್ರೀಮಂತರು ತಮ್ಮ ಘನತೆ ಮೆರೆಯಲು ಈಡೇರಿಸಿಕೊಳ್ಳಬೇಕಾದ ಬಯಕೆಗಳನ್ನು ವಿಲಾಸಿ ಬಯಕೆಗಳು ಎನ್ನಲಾಗುತ್ತದೆ. ಉದಾ: ದೊಡ್ಡ ಬಂಗಲೆ, ಕಾರು, ವಜ್ರಾಭರಣಗಳು ಇತ್ಯಾದಿ. ಇವು ಯಾವುದು ಇಲ್ಲದಿದ್ದರೂ ಮಾನವ ಬದುಕಬಲ್ಲ, ಆದರೂ ಹೆಚ್ಚು ಸುಖಕ್ಕೊಸ್ಕರ ಇಂತಹ ಬಯಕೆಗಳಿರುತ್ತವೆ. ವಿಲಾಸಿ ವಸ್ತುಗಳ ಬಯಕೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು. ಕೆಲವು ವಿಲಾಸಿ ವಸ್ತುಗಳ ಅತಿಯಾದ ಬಳಕೆಯಿಂದ-ಸೇವನೆಯಿಂದ ಅಮೃತವೂ ಅತಿಯಾದರೆ ವಿಷವಾಗುವಂತೆ, ದೇಹಕ್ಕೆ, ಆರೋಗ್ಯಕ್ಕೆ ಅಪಾಯಕಾರಿಯಾಗಬಹುದು. ಉದಾ: ಮದ್ಯಪಾನ, ಸಿಗರೇಟು, ಕುದುರೆ ಜೂಜು ಇತ್ಯಾದಿ. ಇವುಗಳನ್ನು ಅಪಾಯಕಾರಿ ವಿಲಾಸಿ ಬಯಕೆಗಳು ಎನ್ನಲಾಗುತ್ತದೆ.

ಇನ್ನೂ ಕೆಲವು ವಿಲಾಸಿ ವಸ್ತುಗಳು ದುಬಾರಿಯಾಗಿರುತ್ತವೆ. ಹವಾನಿಯಂತ್ರಿತ ಮನೆ, ವಜ್ರ-ವೈಢೂರ್ಯಗಳು, ವಿದೇಶಿ ಕಾರು ಇತ್ಯಾದಿ. ಇವುಗಳನ್ನು ಅಪಾಯರಹಿತ ವಿಲಾಸಿ ಬಯಕೆಗಳು

ಎನ್ನಲಾಗುತ್ತದೆ. ಇನ್ನು ಕೆಲವು ವಸ್ತುಗಳು ಆಪತ್ಕಾಲಕ್ಕೆ, ಕಷ್ಟಕಾಲಕ್ಕೆ ನಿಧಿಯಾಗಿ ಪರಿವರ್ತಿತವಾಗುತ್ತವೆ. ಅವುಗಳನ್ನು ಸಂರಕ್ಷಣೆಯ ವಿಲಾಸಿ ವಸ್ತುಗಳು ಎನ್ನಲಾಗುತ್ತದೆ. ಉದಾ: ತೋಟ ಖರೀದಿಸುವುದು, ವಾಣಿಜ್ಯ ಪತ್ರ, ಶೇರು ಪತ್ರಗಳಲ್ಲಿ ಹಣ ತೊಡಗಿಸುವುದು, ಬಂಗಾರದ ಒಡವೆಗಳು ಇತ್ಯಾದಿಗಳು. ಇವುಗಳನ್ನು ಮಾರಾಟಮಾಡಿ ಕಷ್ಟ ಪರಿಹರಿಸಿಕೊಳ್ಳಬಹುದಾಗಿದೆ. ಇವು ಘನತೆ ಹೆಚ್ಚಿಸುವುದರ ಜೊತೆಗೆ ಆಪತ್ಕಾಲದಲ್ಲಿ ಅನುಕೂಲಕರವಾಗಿಯೂ ಇರುತ್ತವೆ" ಎಂಬುದಾಗಿ ಸಿ.ಕೆ. ರೇಣುಕಾರ್ಯ (ಸಂ), ಎಂ. ಸಿದ್ಧಾನಂದ (ಲೇ), ಇವರು (ಅನುಭೋಗ) ಅರ್ಥಶಾಸ್ತ್ರ, ೨೦೦೪:೬೨-೬೬ರಲ್ಲಿ ಭಾಷಾಂತರಿಸಿರುತ್ತಾರೆ.

**ಮಾನವನ ಬಯಕೆಗಳು(Human wants): ಮಾನವನ ಬಯಕೆಗಳ ಅರ್ಥವಿವರಣೆ:** ಮಾನವನು ಬಯಕೆಗಳ ಆಗರ. ಅವನ ಬಯಕೆಗಳು ಅನಿಯಮಿತ ಹಾಗೂ ವೈವಿಧ್ಯಮಯವಾಗಿವೆ. ಇವುಗಳಲ್ಲಿ ಕೆಲವು ಜೀವನಾವಶ್ಯಕವಾದುಗಳಾಗಿದ್ದರೆ, ಕೆಲವು ಸುಖದಾಯಕಗಳಾಗಿವೆ. ಇನ್ನೂ ಕೆಲವು ಐಷಾರಮದ ಬಯಕೆಗಳಾಗಿವೆ. ಆಹಾರ, ಬಟ್ಟೆ ಹಾಗೂ ವಸತಿ ಇವು ಮನುಷ್ಯನ ಉಪಜೀವನಕ್ಕೆ ಅತ್ಯಾವಶ್ಯಕವಾದ ಬಯಕೆಗಳು. ಇವುಗಳಿಲ್ಲದೆ ಮನುಷ್ಯನು ಜೀವಿಸಲಾರ. ಇವುಗಳ ಜೊತೆಗೆ ಅವನಿಗೆ ಇನ್ನೂ ಕೆಲವು ವಸ್ತುಗಳು ಬೇಕಾಗುತ್ತವೆ. ಇವು ಅವನಿಗೆ ಸುಖದಾಯಕ ಅಥವಾ ಐಷಾರಮದ ಜೀವನವನ್ನು ಒದಗಿಸುತ್ತವೆ. ಮನುಷ್ಯನ ಬಯಕೆಗಳು ಹೇಗೆ ಹುಟ್ಟುತ್ತವೆ? ಈ ವಿಚಾರವನ್ನು ಅಧ್ಯಯನಕ್ಕೆ ಪರಿಗಣಿಸುವುದಿಲ್ಲ.

ಬಯಕೆಗಳ ಲಕ್ಷಣಗಳು : ಈ ಅಂಶವನ್ನು ಅಧ್ಯಯನಕ್ಕೆ ಒಳಪಡಿಸಿರುವುದಿಲ್ಲ.

ಬಯಕೆಗಳ ವಿಂಗಡನೆ : ಮಾನವನ ಬಯಕೆಗಳನ್ನು ಮುಖ್ಯವಾಗಿ ಮೂರು ಪ್ರಕಾರವಾಗಿ ವಿಂಗಡಿಸಬಹುದು. ೧. ಅತ್ಯಾವಶ್ಯಕಗಳು ೨. ಸುಖದಾಯಕಗಳು ೩. ವಿಲಾಸಿ ವಸ್ತುಗಳು

ಅತ್ಯಾವಶ್ಯಕಗಳು (Necessaries) : ಮನುಷ್ಯನು ತನ್ನ ಉಪಜೀವನಕ್ಕಾಗಿ, ದಕ್ಷತೆಗಾ ಹಾಗೂ ಸಂಪ್ರದಾಯಗಳಿಗಾ ಹಲವಾರು ವಸ್ತುಗಳನ್ನು ಉಪಯೋಗಿಸಲಿಕ್ಕೆ ಬೇಕಾಗುತ್ತದೆ. ಈ ವಸ್ತುಗಳಿಗೆ 'ಅತ್ಯಾವಶ್ಯಕಗಳು' ಅಥವಾ 'ಅತ್ಯಾವಶ್ಯಕ ವಸ್ತುಗಳು' ಎಂದು ಕರೆಯುತ್ತಾರೆ. ಅತ್ಯಾವಶ್ಯಕಗಳಲ್ಲಿ ಮೂರು ಪ್ರಕಾರಗಳಿವೆ. ಜೀವನಾವಶ್ಯಕ, ದಕ್ಷತಾವಶ್ಯಕ ಮತ್ತು ಸಾಂಪ್ರದಾಯಿಕ.

ಮನುಷ್ಯನ ಉಪಜೀವನಕ್ಕೆ ಅತ್ಯಾವಶ್ಯಕವಾಗಿ ಬೇಕಾಗುವ ವಸ್ತುಗಳಿಗೆ ಜೀವನಾವಶ್ಯಕ ವಸ್ತುಗಳೆಂದು (Necessaries of Life) ಕರೆಯುತ್ತಾರೆ. ಇವುಗಳಿಲ್ಲದೆ ಮುನುಷ್ಯನು ಜೀವಿಸಲಾರನು. ಉದಾ: ಆಹಾರ, ಬಟ್ಟೆ ಮತ್ತು ವಸತಿ ಇವು ಮನುಷ್ಯನ ಉಪಜೀವನಕ್ಕೆ ಅವಶ್ಯಕವಾಗಿವೆ. ಪ್ರತಿಯೊಬ್ಬನಿಗೂ ಇವು ಬೇಕೆಬೇಕಾಗುತ್ತವೆ.

ಮನುಷ್ಯನಿಗೆ ಜೀವನಾವಶ್ಯಕ ವಸ್ತುಗಳಲ್ಲದೆ, ಇನ್ನೂ ಕೆಲವು ವಸ್ತುಗಳು ಬೇಕಾಗುತ್ತವೆ. ಇವು ಮನುಷ್ಯನ ಕಾರ್ಯದಕ್ಷತೆ ಅಥವಾ ದುಡಿಯುವ ಶಕ್ತಿಯನ್ನು ಕಾಪಾಡುತ್ತವೆ. ಇವುಗಳಿಲ್ಲದಿದ್ದರೆ

ಅವನ ಕಾರ್ಯದಕ್ಷತೆ ಕುಂದುತ್ತದೆ. ಉದಾ: ಕಾರ್ಮಿಕನು ಬಹುದೂರದ ತನ್ನ ಕಾರ್ಖಾನೆಗೆ ನಡೆದುಕೊಂಡೇ ಹೋಗಬಹುದು. ಆದರೆ ಆದರಿಂದ ಅವನಿಗೆ ದಣಿವು ಆಗುತ್ತದಲ್ಲದೆ ಕಾರ್ಖಾನೆಗೆ ಹೋಗಲು ಬಹಳ ಸಮಯಬೇಕಾಗುತ್ತದೆ. ಇದರಿಂದ ಅವನ ಕೆಲಸದ ಮೇಲೆ ವಿಪರೀತ ಪರಿಣಾಮವಾಗುತ್ತದೆ. ಇದಕ್ಕೆ ಬದಲಾಗಿ ಅವನು ಸೈಕಲ್ ಅಥವಾ ಬಸ್ಸಿನ ಮೂಲಕ ಕಾರ್ಖಾನೆಗೆ ಹೋದರೆ ಸಮಯದ ಉಳಿತಾಯವಾಗುತ್ತದೆ. ಅಲ್ಲದೆ ಅವನಿಗೆ ದಣಿವೂ ಆಗುವುದಿಲ್ಲ. ಅವನು ಹೆಚ್ಚು ಹುಮ್ಮಸ್ಸಿನಿಂದ ತನ್ನ ಕೆಲಸವನ್ನು ಮಾಡಬಹುದಾಗಿದೆ. ಉದಾ: ಆಹಾರವು ಜೀವನಾವಶ್ಯಕ ವಸ್ತುವಾಗಿದೆ. ಆದರೆ ಉತ್ತಮ ಆಹಾರವು ದಕ್ಷತೆಯ ವಸ್ತುವಾಗಿದೆ. ಅದರಂತೆ ಹಾಲು, ಮೊಟ್ಟೆ, ಮೀನು, ಬೆಣ್ಣೆ ಮೊದಲಾದ ಪೌಷ್ಟಿಕ ಆಹಾರ ಪದಾರ್ಥಗಳು, ಸ್ಕೂಟರ್, ಬಸ್ ಮೊದಲಾದ ವಾಹನ ಸೌಕರ್ಯಗಳು ಮತ್ತು ಉತ್ತಮ ವಸತಿ ದಕ್ಷತೆಯ ವಸ್ತುಗಳಾಗಿವೆ. ಇವುಗಳಿಗೆ ದಕ್ಷತೆಯ ಅವಶ್ಯಗಳೆಂದು (Necessaries of efficiency) ಕರೆಯುತ್ತಾರೆ.

ಮನುಷ್ಯನಿಗೆ ಜೀವನಾವಶ್ಯಕ ಮತ್ತು ದಕ್ಷತೆಯ ಅವಶ್ಯಕತೆಗಳೊಂದಿಗೆ ಇನ್ನೂ ಕೆಲವು ವಸ್ತುಗಳು ಬೇಕಾಗುತ್ತವೆ. ತನ್ನ ಸಂಪ್ರದಾಯಗಳನ್ನು ಪಾಲಿಸಲು ಅವನಿಗೆ ಇವು ಬೇಕಾಗುತ್ತವೆ. ಆದುದರಿಂದ ಇವುಗಳಿಗೆ ಸಾಂಪ್ರದಾಯಿಕ ಅತ್ಯಾವಶ್ಯಕಗಳು (Conventional Necessaries) ಎಂದು ಕರೆಯುತ್ತಾರೆ. ಉದಾ: ವಿವಾಹದ ಸಮಯದಲ್ಲಿ ವರನು ಹಾಕಿಕೊಳ್ಳುವ ಬಾಸಿಂಗ, ವಧುವಿಗೆ ಕಟ್ಟುವ ಮಂಗಳಸೂತ್ರ, ಉಪನಯನದ ಸಂದರ್ಭದಲ್ಲಿ ವಟುವಿಗೆ ಹಾಕುವ ಜನಿವಾರ, ಗಂಡು ಮಕ್ಕಳು ಧರಿಸುವ ಉಡದಾರ, ಹೆಣ್ಣು ಮಕ್ಕಳು ಧರಿಸುವ ಬಳೆಗಳು ಇವೆ ಮೊದಲಾದವು ಸಾಂಪ್ರದಾಯಿಕ ಅವಶ್ಯಕಗಳಾಗಿವೆ.

ಸುಖದಾಯಕ ಅಥವಾ ಹಿತದಾಯಕಗಳು (Comforts): ಮನುಷ್ಯನ ಜೀವನವು ಸುಖಮಯ ಮತ್ತು ಹಿತಕರವಾಗಿರುವಂತೆ ಮಾಡುವ ವಸ್ತುಗಳಿಗೆ ಸುಖದಾಯಕ ಅಥವಾ ಹಿತದಾಯಕ ವಸ್ತುಗಳೆಂದು ಕರೆಯುತ್ತಾರೆ. ಉದಾ: ನಾವು ಬರಿಗಾಲಿನಿಂದ ನಡೆದುಕೊಂಡು ಹೋಗಬಹುದು. ಆದರೆ ಜೋಡುಗಳನ್ನು ಉಪಯೋಗಿಸಿದರೆ ನಮಗೆ ಹೆಚ್ಚು ಹಿತವಾಗುವುದು. ನಾವು ನೆಲದ ಮೇಲೆ ಜಮಖಾನೆಯನ್ನೋ ಅಥವಾ ಕಂಬಳಿಯನ್ನೋ ಹಾಸಿ ಸೊಳ್ಳೆ ಪರದೆಯನ್ನು ಕಟ್ಟಿ ಮಲಗಿದರೆ ನಮಗೆ ಹೆಚ್ಚು ಹಿತವಾಗುವುದು. ಹೀಗೆ ನಮ್ಮ ಜೀವನಕ್ಕೆ ಹಿತವನ್ನು ನೀಡುವ ರೇಡಿಯೋ, ಟಿವಿ ಸೆಟ್, ಗಾದಿಯುಳ್ಳ ಸೋಪಾಗಳು, ಮೋಟಾರ ಕಾರು ಇವೇ ಮೊದಲಾದವುಗಳು ಲಭ್ಯವಿದ್ದರೆ ಮಾನವನ ಜೀವನ ಹೆಚ್ಚು ಸುಖಕರವಾಗುವುದು. ಇಂತಹ ಸುಖದಾಯಕಗಳಿಂದ ಅವನಿಗೆ ತುಂಬು ಜೀವನ ನಡೆಸಲು ಸಾಧಯವಾಗುತ್ತದೆ.

ವಿಲಾಸಿ ವಸ್ತುಗಳು (Luxuries): ಐಷಾರಮದ ಶ್ರೀಮಂತಿಕೆಯ ವಸ್ತುಗಳು ವಿಲಾಸೀ ವಸ್ತುಗಳಾಗಿವೆ. ಇವು ಮಾನವನ ಉಪಜೀವನಕ್ಕೆ ಅವಶ್ಯಕವಾದವುಗಳಲ್ಲ. ಇವುಗಳಿಲ್ಲದಿದ್ದರೂ ಸಹ ಅವನು ಸುಖವಾಗಿ ತುಂಬು ಜೀವನ ನಡೆಸಬಹುದಾಗಿದೆ. ಆದರೆ ಇವುಗಳನ್ನು ಹೊಂದಿದರೆ

ಅವನು ವಿಲಾಸಿ ಜೀವನ ನಡೆಸುತ್ತಾನೆ. ಉದಾ: ವಿದ್ಯಾರ್ಥಿಯೊಬ್ಬನು ನಡೆದುಕೊಂಡು ಇಲ್ಲವೆ ಬಸ್ಸಿನ ಮೂಲಕ ತನ್ನ ಕಾಲೇಜಿಗೆ ಹೋಗಬಹುದು. ಆದರೆ ಅವನು ಮೋಟಾರ ಕಾರಿನಲ್ಲಿ ಹೋದರೆ ಅದು ವಿಲಾಸಿ ಜೀವನದ ಸಂಕೇತವಾಗುವುದು. ಅದರಂತೆ ನಾವು ರೈಲಿನಲ್ಲಿ ದ್ವಿತೀಯ ವರ್ಗದ ಬೋಗಿಯಲ್ಲಿ ಪ್ರಯಾಣ ಮಾಡಿದರೆ ಅದು ವಿಲಾಸಿ ಜೀವನದ ಸಂಕೇತವಾಗುವುದು. ಭಾರಿ ಬೆಲೆಯುಳ್ಳ ಸೋಪಾಗಳು, ಅರಮನೆಯಂಥ ಮನೆ, ಭಾರಿ ಬೆಲೆಯ ಬಟ್ಟೆ, ಅತಿ ಉನ್ನತ ಗುಣಮಟ್ಟದ ಆಹಾರ, ಪಾನೀಯ, ಅನೇಕ ಸೇವಕರ ಸೇವೆಗಳು ಇವೇ ಮೊದಲಾದವುಗಳ ಮೂಲಕ ಮಾನವನು ಐಷಾರಮದ ಅಂದರೆ ವಿಲಾಸೀ ಜೀವನ ನಡೆಸುತ್ತಾನೆ.

ವಿಲಾಸಿ ವಸ್ತುಗಳಲ್ಲಿ ಮೂರು ಪ್ರಕಾರಗಳಿವೆ. ಅ. ಅಪಾಯರಹಿತ ಬ. ಅಪಾಯಕಾರಕ ಕ. ಸಂರಕ್ಷಣೆಯ ವಿಲಾಸಿ ವಸ್ತುಗಳು.

ಭಾರಿ ಮೌಲ್ಯ ಮೋಟಾರ ಕಾರು, ಸೋಫಾಗಳು, ಟಿವಿ ಸೆಟ್, ರೇಡಿಯೋ, ಸಕಲ ಸೌಕರ್ಯಗಳಿಂದ ಕೂಡಿದ ಹವಾನಿಯಂತ್ರಿತ ಮನೆ ಇವೆ ಮೊದಲಾದವು ಅಪಾಯರಹಿತ ವಿಲಾಸಿ ವಸ್ತುಗಳಾಗಿವೆ. ತಂಬಾಕು, ಅಫೀಮು ಮತ್ತು ಬ್ರ್ಯಾಂಡಿ, ವಿಸ್ಕಿ, ರಮ್ ಮೊದಲಾದವು ಅಪಾಯಕಾರಕ ವಿಲಾಸೀ ವಸ್ತುಗಳಾಗಿವೆ. ಬಂಗಾರದ ಒಡವೆಗಳು, ಬ್ಯಾಂಕಿನಲ್ಲಿರುವ ದೊಡ್ಡ ಮೊತ್ತದ ಠೇವಣಿಗಳು, ಸರಕಾರಿ ಸಾಲ ಪತ್ರಗಳು ಅಥವಾ ಆಪದ್ಧನಗಳು ಸಂರಕ್ಷಿತ ವಿಲಾಸೀ ವಸ್ತುಗಳಾಗಿವೆ. ಇವುಗಳು ಆಪತ್ಕಾಲದಲ್ಲಿ ಮನುಷ್ಯನಿಗೆ ತನ್ನ ಮಾರ್ಯಾದೆಯನ್ನು ಕಾಯ್ದುಕೊಳ್ಳಲು ಸಹಾಯಕವಾಗುತ್ತವೆ. ಅವುಗಳನ್ನು ಮಾರಾಟಮಾಡಿ ಅವನು ತನ್ನ ಮರ್ಯಾದೆಯನ್ನು ಕಾಯ್ದುಕೊಳ್ಳಬಹುದಾಗಿದೆ.

ಬಯಕೆಗಳ ವಿಂಗಡಣೆಯ ಅಗತ್ಯ: ಇಲ್ಲಿ ಸುಮಾರು ೧೩ ಸಾಲುಗಳಲ್ಲಿ ವಿವರಣೆ ಇದೆ. ಅದನ್ನು ಬಳಸಿಕೊಂಡಿರುವುದಿಲ್ಲ. ಕೊನೆಯಲ್ಲಿನ ವಿವರವು ಈ ಕೆಳಗಿನಂತಿದೆ.

ಹೀಗೆ ಮಾನವನ ಜೀವನಮಟ್ಟದಲ್ಲಿ ಸುಧಾರಣೆಯಾದಂತೆ ಮತ್ತು ಆರ್ಥಿಕ ಪ್ರಗತಿಯಾದಂತೆ ಹೆಚ್ಚು ಹೆಚ್ಚು ವಿಲಾಸೀ ವಸ್ತುಗಳು ಹಿತದಾಯಕ ಅಥವಾ ಅವಶ್ಯಕ ವಸ್ತುಗಳಾಗಿ ಪರಿಣಮಿಸುತ್ತವೆ. ಆದುದರಿಂದ ಮೇಲೆ ವಿವರಿಸಿದ ಬಯಕೆಗಳ ವಿಂಗಡಣೆಯು ಸಾಪೇಕ್ಷವಾಗಿದೆ. ಅದು ದೇಶ, ಕಾಲ ಮತ್ತು ವ್ಯಕ್ತಿಗಳ ಪರಿಸ್ಥಿತಿಗಳನ್ನವಲಂಬಿಸಿರುತ್ತದೆಯೇ ಹೊರತು ಅದು ಎಲ್ಲ ದೇಶಗಳಿಗೂ, ಎಲ್ಲ ಕಾಲಕ್ಕೂ ಮತ್ತು ಎಲ್ಲ ಜನರಿಗೂ ಒಂದೇ ರೀತಿಯಾಗಿ ಅನ್ವಯಿಸಲು ಬರುವುದಿಲ್ಲ ಎಂಬುದನ್ನು ಕೆ.ಡಿ. ಬಸವಾ, ಅರ್ಥಶಾಸ್ತ್ರ ಪರಿಚಯ, ೧೯೫೫, ೨೦೦೦: ೩೬–೪೦ರಲ್ಲಿ ಭಾಷಾಂತರ ಮಾಡಿರುತ್ತಾರೆ.

ಮಾನವನ ಬಯಕೆಗಳು(Human wants) : ಮಾನವನು ಆಸೆಗಳ ಆಗರವಾಗಿದ್ದಾನೆ. ಅವನು ಹುಟ್ಟಿನಿಂದ ಸಾಯುವವರೆಗೂ ಬಯಕೆಗಳನ್ನು ಹೊಂದಿರುತ್ತಾನೆ. ಅವನ ಬಯಕೆಗಳಿಗೆ ಇತಿಮಿತಿ ಎಂಬುದೇ ಇಲ್ಲವಾಗಿದೆ. ಅವನ ಈ ಬಯಕೆಗಳು ಮಾನವನ ಎಲ್ಲ ಚಟುವಟಿಕೆಗಳಿಗೆ ಪ್ರೇರಣೆ

ಯಾಗಿವೆ. ಇದರಿಂದಾಗಿ ಅವನ ಬಯಕೆಗಳಿಗೆ ಅರ್ಥಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು ಕಲ್ಪಿಸಲಾಗಿದೆ. ಮಾನವನ ಬಯಕೆಗಳು ಅವನಷ್ಟೇ ಪುರಾತನವಾದವುಗಳು. ಪ್ರಾಚೀನ ಕಾಲದಲ್ಲಿ ಮಾನವನು ತುಂಬಾ ಸರಳವಾದ ಜೀವನ ನಡೆಸುತ್ತಿದ್ದನು. ಹಾಗಾಗಿ ಅವನ ಬಯಕೆಗಳು ಮಿತವೂ ಹಾಗೂ ಸರಳವೂ ಆಗಿದ್ದವು. ಆದರೆ ನಾಗರಿಕತೆ ಬೆಳೆದಂತೆ ಆಧುನಿಕ ಯುಗದಲ್ಲಿ ಅವನ ಬಯಕೆಗಳು ಆಗಾಧ ಪ್ರಮಾಣದಲ್ಲಿ ದ್ವಿಗುಣಗೊಂಡಿವೆ. ಹೀಗಾಗಿ ಒಂದು ರೀತಿಯಲ್ಲಿ ಅರ್ಥಶಾಸ್ತ್ರದ ಅಧ್ಯಯನವೇ ಮಾನವನ ಬಯಕೆಗಳ ಅಧ್ಯಯನವಾಗಿ ಮಾರ್ಪಟ್ಟಿದೆ.

ಮಾನವನ ಬಯಕೆಗಳ ಅರ್ಥವಿವರಣೆ(Meaing of human wants) : ಸರಕು ಮತ್ತು ಸೇವೆಗಳಿಂದ ತೃಪ್ತಿಪಡಿಸಬಹುದಾದ ಆಸೆಗಳನ್ನು ಬಯಕೆಗಳು ಎನ್ನಲಾಗುತ್ತದೆ. ಬಯಕೆಗಳು ಸರಕು ಮತ್ತು ಸೇವೆಗಳಿಗಿರುವ ಮಾನವನ ಆಸೆಯನ್ನು ಬಿಂಬಿಸುತ್ತವೆ. ಆದರೆ ಅರ್ಥಶಾಸ್ತ್ರದಲ್ಲಿ ಕೇವಲ ಆಸೆಯನ್ನು ಬಯಕೆ ಎಂದು ಪರಿಗಣಿಸಲಾಗುವುದಿಲ್ಲ. ಏಕೆಂದರೆ ಆಸೆಗಳೆಲ್ಲಾ ಬಯಕೆಗಳಾಗುವುದು ಸಾಧ್ಯವಿಲ್ಲ. ಒಂದು ನಾಣ್ನುಡಿಯು ಹೇಳುವಂತೆ 'ಆಸೆಗಳೇ ಕುದುರೆಯಾದರೆ ಭಿಕ್ಷುಕರೂ ಸಹ ಅವನ್ನು ಸವಾರಿ ಮಾಡುವರು' ವಾಸ್ತವವಾಗಿ ಅರ್ಥಶಾಸ್ತ್ರದಲ್ಲಿ ಬಯಕೆಗಳು ಎಂದರೆ ೧. ಒಂದು ವಸ್ತುವಿನ ಮೇಲೆ ಆಸೆ ೨. ಆ ವಸ್ತುವನ್ನು ಕೊಂಡುಕೊಳ್ಳುವ ಸಾಧನದ ಒಡೆತನ ೩. ಈ ಸಾಧನವನ್ನು ಆ ನಿರ್ದಿಷ್ಟ ಉದ್ದೇಶಕ್ಕೆ ಬಳಸುವ ಮನಸ್ಸು ಎಂಬ ಈ ಮೂರು ಅಂಶಗಳ ಸಮ್ಮಿಲನವಾಗಿರುತ್ತದೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಬಯಕೆಗಳು ಎಂದರೆ ದೈಹಿಕ ಅಥವಾ ಮಾನಸಿಕ ಅಗತ್ಯತೆಯಿಂದ ಉದಯಿಸಿದ ಆಸೆಯಾಗಿದ್ದು ಅದು ತೃಪ್ತಿಪಡಿಸುವ ಒಂದು ಸಾಧನ ಮತ್ತು ಈ ಸಾಧನವನ್ನು ತ್ಯಾಗಮಾಡುವ ಸರಿಯಾದ ಮಾರ್ಗದಿಂದ ಬೆಂಬಲಿತವಾದ ಮಾನಸಿಕ ಅಥವಾ ದೈಹಿಕ ಅಗತ್ಯತೆಯಿಂದ ಉದಯಿಸುವ ಆಸೆಯು ಬಯಕೆಯಾಗುತ್ತದೆ. ಎರಿಕ್‌ರಾಲ್ ಅವರು ಬಯಕೆಯನ್ನು "ತೃಪ್ತಿಪಡೆಯುವ ಕ್ರಿಯೆಗೆ ಪ್ರೇರಣೆಯಾಗುವ ತೃಪ್ತಿಯ ಅಭಾವದ ಒಂದು ಅನುಭವ" ಎಂದು ವ್ಯಾಖ್ಯಾನಿಸಿದ್ದಾರೆ.

ಮೇಲಿನ ಈ ವ್ಯಾಖ್ಯಾನದ ಪ್ರಕಾರ, ಮಾನವನ ಬಯಕೆ ಎಂದರೆ ಅವನ ಬಳಿ ಲಭ್ಯವಿಲ್ಲದ ವಸ್ತುಗಳನ್ನು ಪಡೆಯುವ ಮನುಷ್ಯನ ಆಸೆಯಾಗಿದೆ. ಆದ್ದರಿಂದ ಸರಳ ಭಾಷೆಯಲ್ಲಿ ಬಯಕೆಗಳನ್ನು ಮನುಷ್ಯ ಆಸೆ ಪಡುವ ಅಥವಾ ಅಪೇಕ್ಷಿಸುವ ವಸ್ತುಗಳು ಎಂದು ವ್ಯಾಖ್ಯಾನಿಸಬಹುದು.

ಬಯಕೆಗಳು ಹೇಗೆ ಉದ್ಭವಿಸುತ್ತವೆ? (How do wants arise?) : ಈ ಅಂಶದ ಬಗ್ಗೆ ಅಧ್ಯಯನ ಮಾಡಲಾಗಿರುವುದಿಲ್ಲ.

ಮಾನವನ ಬಯಕೆಗಳ ಲಕ್ಷಣಗಳು (Characterics of human wants) : ಇದರ ಬಗ್ಗೆ ಅಧ್ಯಯನ ಮಾಡಲಾಗಿಲ್ಲ.

ಮಾನವನ ಬಯಕೆಗಳ ವರ್ಗೀಕರಣ (Classification of human wants) : ಮಾನವನ ಬಯಕೆಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಲಾಗಿದೆ. ಮೊದಲನೇ ವಿಧಾನದ ಪ್ರಕಾರ

ಬಯಕೆಗಳನ್ನು ೧. ಪ್ರಾಥಮಿಕ ಬಯಕೆಗಳು ೨. ಮಾಧ್ಯಮಿಕ ಬಯಕೆಗಳು ಎಂದು ವರ್ಗೀಕರಿಸಲಾಗಿದೆ. ಪ್ರಾಥಮಿಕ ಬಯಕೆಗಳೆಂದರೆ ಅತ್ಯಾವಶ್ಯಕ ಸಾಮಗ್ರಿಗಳಿಗಿರುವ ಬಯಕೆಯಾಗಿದೆ. ಮಾಧ್ಯಮಿಕ ಬಯಕೆಗಳೆಂದರೆ ಹಿತದಾಯಕಗಳು ಮತ್ತು ಐಷಾರಮದ ಸರಕುಗಳಿರುವ ಬಯಕೆಯಾಗಿದೆ. ಇನ್ನೊಂದು ವಿಧಾನದ ಪ್ರಕಾರ ಬಯಕೆಗಳನ್ನು ಎ. ಮೂಲ ಬಯಕೆಗಳು ಬಿ. ಸಾಂಸ್ಕೃತಿಕ ಬಯಕೆಗಳೆಂದು ವರ್ಗೀಕರಿಸಲಾಗಿದೆ. ಮೂಲ ಬಯಕೆಗಳು ಅತ್ಯಾವಶ್ಯಕ ಬಯಕೆಗಳಾದರೆ, ಸಾಂಸ್ಕೃತಿಕ ಬಯಕೆಗಳು ಹಿತದಾಯಕ ಮತ್ತು ಐಷಾರಮದ ಬಯಕೆಗಳಾಗಿವೆ. ಆದರೆ ಬಹಳ ಮುಖ್ಯವಾದ ಮತ್ತು ಸಾಮಾನ್ಯವಾದ ಬಯಕೆಗಳ ವರ್ಗೀಕರಣವೆಂದರೆ ೧. ಅತ್ಯಾವಶ್ಯಕಗಳು ೨. ಹಿತದಾಯಕಗಳು ೩. ಐಷಾರಮಗಳು ಇವುಗಳ ವಿವರಣೆ ಈ ಕೆಳಗಿನಂತಿದೆ.

ಅತ್ಯಾವಶ್ಯಕಗಳು(Necessaries): ಮಾನವನು ಕೆಲವು ಮೂಲಭೂತ ಬಯಕೆಗಳನ್ನು ಹೊಂದಿರುತ್ತಾನೆ. ಅವುಗಳನ್ನು ತೃಪ್ತಿಪಡಿಸಿಕೊಳ್ಳಲೇಬೇಕಾಗುತ್ತದೆ. ಇಲ್ಲದಿದ್ದರೆ ಅವನು ಬದುಕುಳಿಯಲಾರ ಅಥವಾ ಅವನು ಕಷ್ಟಪಡಬೇಕಾಗುತ್ತದೆ. ಅಂತಹ ಅತ್ಯಾವಶ್ಯಕ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಬಳಸಲಾಗುವ ಸರಕುಗಳನ್ನು ಅತ್ಯಾವಶ್ಯಕ ಸರಕುಗಳೆಂದು ಕರೆಯಲಾಗುತ್ತದೆ. ಅವುಗಳೆಂದರೆ, ಆಹಾರ, ವಸತಿ, ಬಟ್ಟೆ, ಗಾಳಿ, ನೀರು ಮುಂತಾದವುಗಳು. ಗಾಳಿ, ನೀರು ಮತ್ತು ಆಹಾರವಿಲ್ಲದೆ ಮಾನವ ಬದುಕುಳಿಯಲಾರ. ಮಾನವನು ಬಳಸುವ ಅತ್ಯಾವಶ್ಯಕ ಸರಕುಗಳನ್ನು ಮೂರು ಪ್ರಕಾರಗಳಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ ಜೀವನಾವಶ್ಯಕ, ದಕ್ಷತಾವಶ್ಯಕ ಮತ್ತು ಸಾಂಪ್ರದಾಯಿಕ ಅವಶ್ಯಕತೆಗಳು (ಈ ಮೂರರ ಬಗ್ಗೆ ಪ್ರತ್ಯೇಕವಾಗಿ ವಿವರಿಸಲಾಗಿದೆ)

ಹಿತದಾಯಕಗಳು(Comforts): ಮನುಷ್ಯ ತನ್ನ ಜೀವನ ಸುಖಮಯವಾಗಿರಬೇಕೆಂದು ಬಯಸುತ್ತಾನೆ. ಹಾಗೆ ಜೀವನವನ್ನು ಸುಖದಾಯಕವಾಗಿಟ್ಟುಕೊಳ್ಳಲು ಕೆಲವೊಂದು ಸರಕುಗಳನ್ನು ಬಳಸಬೇಕಾಗುತ್ತದೆ. ಅಂತಹ ಸರಕುಗಳನ್ನು 'ಹಿತದಾಯಕಗಳು' ಎಂದು ಕರೆಯುತ್ತಾರೆ. ಅಂದರೆ ಮಾನವನ ಜೀವನವನ್ನು ಇನ್ನೂ ಹಿತಕರವಾಗಿಸುವ ಮತ್ತು ಸಂತೋಷಗೊಳಿಸುವ ಸರಕುಗಳು ಹಿತದಾಯಕಗಳಾಗಿವೆ. ಉದಾ: ಪಾದರಕ್ಷೆ, ರೇಡಿಯೋ, ಟಿವಿ, ತಂಪು ಪಾನೀಯಗಳು, ಫ್ಯಾನು, ಮಂಚ, ಹಾಸಿಗೆ ಮುಂತಾದವುಗಳು. ಈ ವಸ್ತುಗಳನ್ನು ಬಳಸದಿದ್ದರೆ ಮನುಷ್ಯನೇನೂ ಸಾಯುವುದಿಲ್ಲ, ಆದರೆ ಅವುಗಳನ್ನು ಬಳಸುವುದರಿಂದ ಅವನ ಜೀವನ ಸುಖಮಯವಾಗಿ, ಹಿತದಾಯಕವಾಗಿರುತ್ತದೆ.

ಐಷಾರಾಮಗಳು(Luxuries): ಐಷಾರಾಮಗಳು ಭೋಗ ವಿಲಾಸದ ವಸ್ತುಗಳಾಗಿವೆ. ಇಂತಹ ವಸ್ತುಗಳನ್ನು ಬಳಸದಿದ್ದರೆ ಮಾನವನಿಗೆ ಏನೂ ತೊಂದರೆಯಾಗುವುದಿಲ್ಲ. ಅವುಗಳಿಲ್ಲದೆಯೂ ಬದುಕಬಹುದು. ವಿಲಾಸೀ ವಸ್ತುಗಳು ಬಾರೀ ಬೆಲೆಬಾಳುವಂತಹವುಗಳಾಗಿದ್ದು ಅವುಗಳನ್ನು ಬಳಸುವುದರಿಂದ ಮಾನವನ ಜೀವನ ಇನ್ನೂ ಸಂತೋಷದಾಯಕವಾಗುವುದು. ವಿಲಾಸೀ ವಸ್ತುಗಳಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳಿವೆ. ೧. ಅಪಾಯಕಾರಿ ಐಷಾರಾಮಗಳು ೨. ಅಪಾಯರಹಿತ ಐಷಾರಾಮಗಳು ೩. ಸಂರಕ್ಷಣೆಯ ಐಷಾರಮಗಳು (ಇವುಗಳ ವಿವರಣೆ ನೀಡಿದ್ದಾರೆ)

ಬಯಕೆಗಳ ವರ್ಗೀಕರಣ ಯಾವುದೇ ಕಟ್ಟುನಿಟ್ಟಿನ ನಿಯಮದ ಆಧಾರದ ಮೇಲಾಗಿರುವುದಿಲ್ಲ. ಈ ವರ್ಗೀಕರಣ ಎಲ್ಲ ಕಾಲಕ್ಕೆ, ಜನರಿಗೆ ಮತ್ತು ದೇಶಕ್ಕೆ ಒಂದೇ ಆಗಿರುವುದಿಲ್ಲ. ಬಯಕೆಗಳು ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಮತ್ತು ಕಾಲದಿಂದ ಕಾಲಕ್ಕೆ ಬದಲಾಗುತ್ತಿರುತ್ತವೆ. ಇಂದಿನ ಐಷಾರಾಮದ ಸರಕು ನಾಳೆಯ ಅತ್ಯಾವಶ್ಯಕವಾಗಬಹುದು. ಅಥವಾ ಒಂದು ದೇಶದಲ್ಲಿನ ಐಷಾರಾಮದ ಸರಕು ಇನ್ನೊಂದು ದೇಶದಲ್ಲಿ ಹಿತದಾಯಕವಾಗಿರಬಹುದು. ಹೀಗೆ ಬಯಕೆಗಳ ವರ್ಗೀಕರಣ ಕೇವಲ ಸಾಪೇಕ್ಷವಾದುದಾಗಿದ್ದು ಅದು ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ" ಎಂಬುದನ್ನು ಎಚ್.ಆರ್. ಕೃಷ್ಣಮೂರ್ತಿ ಹೊಸಬೀಡು, ಮೂಲ ಆರ್ಥಿಕ ಸಿದ್ಧಾಂತ, ೨೦೦೪ ೨೦೦೯:೭೦-೭೬ರಲ್ಲಿ ಭಾಷಾಂತರಿಸಿರುತ್ತಾರೆ.

ಮಾನವನ ಇಷ್ಟಗಳು ಮತ್ತು ಅವುಗಳ ತೃಪ್ತಿ: ಮಾನವನ ಬಯಕೆಗಳಿಗೆ ಮಿತಿಯೇ ಇಲ್ಲ. ಅವನ ಇಷ್ಟ ಅಥವಾ ಬಯಕೆಗಳು ಅಸಂಖ್ಯಾತವೂ, ವೈವಿಧ್ಯಪೂರ್ಣವೂ ಆಗಿವೆ. ಕನಿಷ್ಠ ಇಷ್ಟಗಳ ತೃಪ್ತಿಯಾಗದೆ ಅವನು ಜೀವಿಸಲಾರ. ಆಹಾರ, ಬಟ್ಟೆ, ವಸತಿ ಮುಂತಾದವು ಜೀವನಾವಶ್ಯಕವಾಗಿವೆ. ಕೆಲವು ನಾಗರಿಕತೆಯ ಪ್ರಭಾವದಿಂದಲೂ, ಮತ್ತೆ ಕೆಲವು ಅನುಕರಣೆ ಮತ್ತು ಪ್ರಚಾರದ ಪ್ರಭಾವದಿಂದಲೂ ಉದ್ಭವಿಸುತ್ತವೆ. ನಾಗರಿಕತೆಯ ಪ್ರಗತಿಯಾದಂತೆಲ್ಲ ಮಾನವನ ಇಷ್ಟಗಳು ಹೆಚ್ಚುತ್ತ ಹೋಗುತ್ತವೆ. ಈ ಇಷ್ಟಗಳ ತೃಪ್ತಗಾಗಿ ಮಾನವನ ಚಟುವಟಿಕೆಗಳೂ ಹೆಚ್ಚುತ್ತ ಹೋಗುತ್ತವೆ. ಇಂದಿನ ಆರ್ಥಿಕ ಪ್ರಗತಿಗೆ ಮಾನವನ ಅಸಂಖ್ಯಾತ ಅದ್ಭುತ ವೈವಿಧ್ಯಮಯ ಇಷ್ಟಗಳೇ ಕಾರಣವಾಗಿವೆಯೆಂದು ಹೇಳಿದರೆ ತಪ್ಪಾಗಲಾರದು. ಉತ್ಪಾದನೆ ನಡೆಯುವುದೂ ಇಡೀ ಆರ್ಥಿಕ ವ್ಯವಸ್ಥೆ ನಡೆಯುದೂ ಮಾನವನ ಇಷ್ಟಗಳ ತೃಪ್ತಿಪಡಿಸುವುದಕ್ಕಾಗಿಯೇ.

ಮಾನವನ ಇಷ್ಟಗಳ ಆತನ ವ್ಯಕ್ತಿತ್ವ, ಅಭಿರುಚಿ, ಆರ್ಥಿಕ, ಸಾಮಾಜಿಕ ಪರಿಸ್ಥಿತಿ, ದೈಹಿಕ, ಶೈಕ್ಷಣಿಕ, ಸಾಂಸ್ಕೃತಿಕ ಅಂಶಗಳ ಮೇಲೆ ಅವಲಂಬಿತವಾಗಿರುತ್ತವೆ. ಕೆಲವು ಇಷ್ಟಗಳು ನೈಸರ್ಗಿಕ ಅಥವಾ ಸ್ವಾಭಾವಿಕ ಕಾರಣದಿಂದ ಹುಟ್ಟುತ್ತವೆ. ಉದಾ: ಆಹಾರ, ನೀರು, ಬಟ್ಟೆ ಮುಂತಾದ ವಸ್ತುಗಳಿಗಾಗಿ ಇಷ್ಟಗಳೂ ಮಾನವನಿಗೆ ಸಹಜವಾಗಿ ದೈಹಿಕ ಅವಶ್ಯಕತೆಗಳಿಂದ ಬರುತ್ತವೆ. ಮತ್ತೆ ಕೆಲವು ಅವನಿಗಿರುವ ಸಮಾಜದ ನಾಗರಿಕತೆಯ ಕಾರಣಗಳಿಂದ ಉಂಟಾಗುತ್ತವೆ. ಮತ್ತೆ ಕೆಲವು ಜಾಹೀರಾತು, ಅನುಕರಣೆಯ ಪ್ರಭಾವದಿಂದ ಬರುತ್ತವೆ. ಜೀವನಾವಶ್ಯಕ ಬಯಕೆಗಳು ಮಿತವಾಗಿವೆ. ಆದರೆ ಸಾಂಸ್ಕೃತಿಕ ಬಯಕೆಗಳಿಗೆ ಮಿತಿಯೇ ಇಲ್ಲ.

ಇಷ್ಟಗಳ ಲಕ್ಷಣಗಳು : ಇವುಗಳನ್ನು ಗಮನಿಸಲಾಗಿಲ್ಲ.

ಮಾನವನ ಇಷ್ಟಗಳ ವರ್ಗೀಕರಣ : ಮಾನವನ ಇಷ್ಟಗಳನ್ನು ಮೂರು ವಿಧವಾಗಿ ವಿಂಗಡಿಸ ಬಹುದು. ೧. ಅತ್ಯಾವಶ್ಯಕ ವಸ್ತುಗಳ ೨. ಸುಖ ಸೌಕರ್ಯದ ವಸ್ತುಗಳು ೩. ವಿಲಾಸೀ ವಸ್ತುಗಳು

ಅತ್ಯಾವಶ್ಯಕ ವಸ್ತುಗಳು: ನಾವು ಜೀವಿಸಲಿಕ್ಕೆ, ಕೆಲಸ ಮಾಡಲಿಕ್ಕೆ ಯಾವ ವಸ್ತುಗಳು ಅವಶ್ಯವೋ ಅಂತಹ ವಸ್ತುಗಳಿಗೆ ಅತ್ಯಾವಶ್ಯಕಗಳೆಂದು ಕರೆಯುತ್ತೇವೆ. ಇವುಗಳಿಲ್ಲದೆ ಮನುಷ್ಯನು

ಜೀವಿಸಲಸಾಧ್ಯ. ಉದಾ: ಆಹಾರ, ಬಟ್ಟೆ, ನೀರು, ವಸತಿ ಮುಂತಾದ ವಸ್ತುಗಳು ಎಲ್ಲರಿಗೂ ಬೇಕೆಬೇಕು. ಆದ್ದರಿಂದ ಅವುಗಳನ್ನು ಜೀವನಾವಶ್ಯಕಗಳೆಂದು ಕರೆಯುತ್ತಾರೆ. ಕಾರ್ಮಿಕರು ದಕ್ಷತೆಯಿಂದ ಕೆಲಸ ಮಾಡ ಬೇಕಾದರೆ ಅವರಿಗೆ ಕೆಲವು ವಸ್ತುಗಳು ಬೇಕಾಗುತ್ತವೆ. ಉದಾ: ಹಾಲು, ಹಣ್ಣು, ಮೊಟ್ಟೆ, ಸೈಕಲ್ ಮುಂತಾದ ವಾಹನ ಅವಿಲ್ಲದಿದ್ದರೂ ಮನುಷ್ಯ ಬದುಕಬಲ್ಲ. ಅವು ಮನುಷ್ಯನ ಕಾರ್ಯಶಕ್ತಿಯನ್ನು ಹೆಚ್ಚಿಸುವುದರಿಂದ ಅವುಗಳನ್ನು, ದಕ್ಷತೆಯನ್ನು ವೃದ್ಧಿಸುವ ಅವಶ್ಯಕಗಳೆಂದು ಹೇಳಬಹುದು. ಹಾಗೆಯೇ ವ್ಯಕ್ತಿ ಕೆಲವು ಸಂಪ್ರದಾಯಗಳಿಗುಣವಾಗಿ ಕೆಲವು ವಸ್ತುಗಳನ್ನು ಮನುಷ್ಯನು ಉಪಯೋಗಿಸುತ್ತಾನೆ. ಉದಾ: ಮದುವೆಯಲ್ಲಿ ವಧುವಿಗೆ ಮಂಗಳಸೂತ್ರ, ವರನಿಗೆ ಬಾಸಿಂಗ, ಹೆಣ್ಣುಮಕ್ಕಳಿಗೆ ಬಳೆ ಮುಂತಾದವು ಜೀವನದ ರೂಢಿಗತವಾಗಿ ಬಂದಿವೆ. ನಿತ್ಯದಲ್ಲಿ ಉಪಯೋಗಿಸುವ ಕಾಫಿ, ಟೀ, ತಂಬಾಕು ಮುಂತಾದವುಗಳಿಗೆ ಸಾಂಪ್ರದಾಯಿಕ ಅವಶ್ಯಗಳೆಂದು ಹೇಳಬಹುದು.

ಹಿತದಾಯಕ ಅಥವಾ ಸುಖಸೌಕರ್ಯದ ವಸ್ತುಗಳು: ಮನುಷ್ಯ ತನ್ನ ಜೀವನವನ್ನು ಹೆಚ್ಚು ಸುಖಕರವಾಗಿಯೂ, ಹಿತಕರವಾಗಿಯೂ ಮಾಡಿಕೊಳ್ಳಲು ಕೆಲವು ವಸ್ತುಗಳನ್ನು ಇಚ್ಛಿಸುತ್ತಾನೆ. ನೆಲದ ಮೇಲೆ ಮಲಗುವ ಬದಲು ಮಂಚ, ಕೆಳಗೆ ಕೂಡುವ ಬದಲು ಖುರ್ಚಿ, ನಡೆಯುವ ಬದಲು ಸೈಕಲ್, ಕಾಲಿಗೆ ಬೂಟು, ಚಪ್ಪಲಿ, ಉಣ್ಣೆಯ ಉಡುಪುಗಳು ನಮ್ಮ ಸುಖಸೌಕರ್ಯವನ್ನು ಹೆಚ್ಚಿಸುತ್ತವೆ. ಇವನ್ನು ಹಿತದಾಯಕ ವಸ್ತುಗಳೆಂದು ಕರೆಯಬಹುದು. ಇವು ಅವಶ್ಯಕ ವಸ್ತುಗಳನ್ನು ಹೊಂದಿದ ನಂತರ ಬೇಕಾಗುತ್ತವೆ.

ವಿಲಾಸಿ ವಸ್ತುಗಳು: ಮನುಷ್ಯನು ಅವಶ್ಯಕ ಮತ್ತು ಸುಖದಾಯಕ ವಸ್ತುಗಳನ್ನು ಪಡೆದ ನಂತರ ಕೆಲವು ವಿಲಾಸೀ ವಸ್ತುಗಳನ್ನು ಅಪೇಕ್ಷಿಸುತ್ತಾನೆ. ಮೋಟಾರ್ ಕಾರ್, ಬೆಲೆ ಬಾಳುವ ಆಭರಣಗಳು, ಸುಸಜ್ಜಿತ ಮನೆ, ಪ್ರಥಮ ವರ್ಗದ ರೈಲ್ವೆ ಪ್ರಯಾಣ ಮುಂತಾದ ಶ್ರೀಮಂತಿಕೆಯ ವಸ್ತುಗಳು ವಿಲಾಸೀ ವಸ್ತುಗಳೆನಿಸಿಕೊಳ್ಳುತ್ತವೆ. ಇವು ನಮ್ಮ ಜೀವನಕ್ಕಾಗಲಿ, ದಕ್ಷತೆಗಾಗಲಿ ಅವಶ್ಯಕ ವಾಗಿರುವುದಿಲ್ಲ. ಇವು ಕೆಲವು ಸಮಯದಲ್ಲಿ ನಮ್ಮ ದಕ್ಷತೆಯನ್ನು ಕುಂಠಿತಗೊಳಿಸಲೂಬಹುದು. ಈ ವಿಲಾಸಿ ವಸ್ತುಗಳನ್ನು ಮತ್ತೆ ಮೂರು ವಿಭಾಗವಾಗಿ ಮಾಡಬಹುದು. ೧. ಕಾರು, ಬಂಗಲೆ, ಟೆಲಿವಿಜನ್ ಮುಂತಾದ ಅಪಾಯರಹಿತ ವಿಲಾಸಿ ವಸ್ತುಗಳು, ೨. ಬೆಲೆಯಾದ ವಿದೇಶಿ ಮಧ್ಯ, ತಂಬಾಕು, ಅಫೀಮು ಮೊದಲಾದ ಅಪಾಯಕಾರಕ ವಿಲಾಸಿ ವಸ್ತುಗಳು, ೩. ಬಂಗಾರದ ಆಭರಣ ಗಳೇ ಮೊದಲಾದ ಆಪತ್ಕಾಲಕ್ಕೆ ಸಹಾಯಕವಾಗುವ ಸಂರಕ್ಷಕ ವಿಲಾಸೀ ವಸ್ತುಗಳು

ಈ ವರ್ಗೀಕರಣವು ಕಟ್ಟುನಿಟ್ಟಾದುದಲ್ಲ. ಅವು ಎಲ್ಲ ಕಾಲಕ್ಕೂ, ಎಲ್ಲ ಜನರಿಗೂ, ಎಲ್ಲ ದೇಶಗಳಿಗೂ ಅನ್ವಯಿಸುವುದಿಲ್ಲ. ವ್ಯಕ್ತಿ, ದೇಶ, ಕಾಲಗಳಲ್ಲಿ ಬದಲಾವಣೆಯಾಗುತ್ತಲೇ ಇರುತ್ತದೆ. ಉದಾ: ಕಾರು ಒಬ್ಬ ವಿದ್ಯಾರ್ಥಿಗೆ, ರೈತನಿಗೆ ಅವಶ್ಯಕ ವಸ್ತುವಲ್ಲ. ಅದು ಅವರಿಗೆ ವಿಲಾಸೀ ವಸ್ತುವೆನಿಸಿದರೆ ವೈದ್ಯನಿಗೆ ಅದು ಅವಶ್ಯಕ ವಸ್ತುವಾಗುತ್ತದೆ. ಸೈಕಲ್ ಮೋಟಾರ್ ಒಬ್ಬ ಗುಮಾಸ್ತನಿಗೆ ವಿಲಾಸೀ ವಸ್ತುವಾದರೆ, ಕಾಲೇಜು ಪ್ರಾಧ್ಯಾಪಕನಿಗೆ ಸೌಕರ್ಯದಾಯಕ ವಸ್ತುವೆನಿಸುತ್ತದೆ. ಒಬ್ಬ

ಪೊಲೀಸ್ ಇನ್‌ಸ್ಪೆಕ್ಟರ್‌ನಿಗೆ ಅದೇ ಅವಶ್ಯ ವಸ್ತುವಾಗಿರುತ್ತದೆ. ಇಂಗ್ಲೆಂಡಿನಲ್ಲಿ ಉಣ್ಣೆಯ ಬಟ್ಟೆಗಳು ಅವಶ್ಯ ವಸ್ತುಗಳಾದರೆ, ಭಾರತದಲ್ಲಿ ಅವು ವಿಲಾಸೀ ವಸ್ತುಗಳೆನಿಸುತ್ತವೆ. ಕೆಲವು ಕಾಲದ ಹಿಂದೆ ಕುರ್ಚಿ, ರೇಡಿಯೋ, ವೃತ್ತ ಪತ್ರಿಕೆಗಳು ವಿಲಾಸೀ ವಸ್ತುಗಳೆನಿಸಿದ್ದವು. ಈಗ ಅವು ಅವಶ್ಯ ವಸ್ತುಗಳೆನಿಸಿವೆ. ಆದ್ದರಿಂದ ಈ ರೀತಿಯ ಇಷ್ಟಗಳ ವರ್ಗೀಕರಣವು ಸಾಪೇಕ್ಷವಾಗಿದೆ. ಅದು ಎಲ್ಲ ಕಾಲಕ್ಕೂ, ಎಲ್ಲ ದೇಶಕ್ಕೂ, ಎಲ್ಲ ವ್ಯಕ್ತಿಗಳಿಗೂ ಅನ್ವಯವಾಗುವುದಿಲ್ಲ ಎಂಬ ಎಂ.ಎಸ್. ಸುಂಕಾಪೂರ ಇವರು ಅರ್ಥಶಾಸ್ತ್ರ ಪರಿಚಯ, ಪ್ರಥಮ ೧೯೭೫: ೨೩-೨೭).

ಸಮಾರೋಪ: ಕನ್ನಡದಲ್ಲಿ ರಚಿತವಾದ ಪಠ್ಯಗಳನ್ನು ಮರು ಸೃಷ್ಟಿಸುವ ಪ್ರಕ್ರಿಯೆ ನಡೆದಿರುವುದನು ಪರಿಶೀಲಿಸುವ ಉದ್ದೇಶಕ್ಕಾಗಿ ಒಂಬತ್ತು ಜನ ಅನುವಾದಕರ ಕೃತಿಗಳನ್ನು ಮಾದರಿಗಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ. ಆ ಅನುವಾದಕರು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿದವರಾಗಿದ್ದಾರೆ. ಅಲ್ಲದೇ ಬೇರೆ ವರ್ಷಗಳಲ್ಲಿ ಅವರು ಭಾಷಾಂತರ ಪ್ರಕ್ರಿಯೆಯಲ್ಲಿ ತೊಡಗಿರುವುದು ತಿಳಿದುಬರುತ್ತದೆ. ಎಲ್ಲ ಭಾಷಾಂತರಕಾರರ ಮೂಲ ಉದ್ದೇಶ ಒಂದೇ ಆಗಿರುವಂತೆ ಕಂಡುಬರುತ್ತದೆ. ಅದು ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಕೈಗೊಳ್ಳುವವರಿಗೆ ಪೂರಕ ಪಠ್ಯಗಳನ್ನು ರಚಿಸಿ ಪೂರೈಸಬೇಕೆಂಬುದಾಗಿದೆ. ಇಲ್ಲಿ ಮಾದರಿಗಾಗಿ ಆಯ್ಕೆ ಮಾಡಿಕೊಂಡ ಅರ್ಥಶಾಸ್ತ್ರ ಪಠ್ಯಗಳಲ್ಲಿನ ಒಂದು ಪ್ರಮುಖ ಅಂಶ. ಅದೆಂದರೆ ಮಾನವನ ಬಯಕೆಗಳು (Human wants) ಒಂಬತ್ತು ಜನ ಅನುವಾದಕರು ಬಳಸಿದ ಸಾಮಾನ್ಯ ಅಂಶಗಳಾವುವು ಮತ್ತು ಭಿನ್ನವಾಗಿ ಏನನ್ನು ಹೇಳಿದ್ದಾರೆಂಬುದನ್ನು ನೋಡೋಣ.

೧. **'wants'**ನ್ನು ಕನ್ನಡಿಕರಿಸುವಾಗ 'ಆಸೆಗಳು', 'ಇಷ್ಟಗಳು' ಮತ್ತು 'ಬಯಕೆಗಳು' ಎಂಬ ಸಮಾನ ಅರ್ಥ ನೀಡುವ ಪದಗಳನ್ನು ಬಳಸಿರುತ್ತಾರೆ. ಸುಮಾರು ೧೯೭೫ರಿಂದ ಇಂದಿನ ತನಕ ಬಳಕೆಯಲ್ಲಿ ಈ ಪದಗಳಿರುತ್ತವೆ. ಇಂಗಿಷಿನ **'wants'** ಕನ್ನಡದಲ್ಲಿ ಬೇರೆ ಬೇರೆ ರೂಪ ಪಡೆದಿವೆ. ಆಧುನಿಕ ಸಂದರ್ಭದಲ್ಲಿ ಈ ಪದಗಳು ಪೂರ್ಣ ಪ್ರಮಾಣದಲ್ಲಿ ಸಮಾನ ಅರ್ಥವನ್ನು ಕಲ್ಪಿಸಲಾರವು. ಆದರೆ ಕನ್ನಡದಲ್ಲಿ ಕೊರತೆ ಇದ್ದ ಪಠ್ಯಗಳನ್ನು ಪೂರೈಸುವ ದಾವಂತ ಮತ್ತು ಅಂದು ಬಳಕೆಗಾಗಿ ನಿಲುಕುವ ಪದಗಳನ್ನು ಅನುವಾದಕರು ಬಳಸಿರಬೇಕೆಂದು ಭಾವಿಸ ಬಹುದಾಗಿದೆ. ಇಂದು 'ಆಸೆ' ಅಥವಾ 'ಇಷ್ಟ' ಪದಗಳು ಸಮಾನ ಅರ್ಥವನ್ನೇ ನೀಡ ಬಹುದಾದರೂ, 'ಬಯಕೆ'ಯ ಪರಿಕಲ್ಪನೆ ಭಿನ್ನವಾಗಿದೆ. ಇದು ಏನೇ ಇದ್ದರೂ ಆರಂಭದಲ್ಲಿ ಹೇಳಿದಂತೆ ಪರಸ್ಪರರು ಒಂದೇ ಭಾಷೆಯಲ್ಲಿ ಪಠ್ಯವನ್ನು ರೂಪಿಸುವಾಗ 'ಭಾಷೆಯನ್ನು ಮುರಿದು ಕಟ್ಟುವ' ಪ್ರಕ್ರಿಯೆ ನಡೆದಿದೆ ಎಂದು ಭಾವಿಸಬಹುದಾಗಿದೆ.

೨. ಒಂಬತ್ತು ಅನುವಾದಗಳನ್ನು ಗಮನಿಸಿದಾಗ ಸ್ಪಷ್ಟವಾಗಿ ತಿಳಿಯುವುದೆನೆಂದರೆ ಪ್ರಯೋಗಿಸಿದ ವಾಕ್ಯಗಳು, ಅವುಗಳಲ್ಲಿರುವ ಪದಗಳ ಪ್ರಮಾಣ ಮತ್ತು ವಿಶ್ಲೇಷಣೆ ಭಿನ್ನವಾಗಿರುತ್ತವೆ. ಅಂದರೆ ಭಾಷಾಂತರಕಾರರು ತಾವು ರೂಪಿಸುವ 'ಪಠ್ಯಸಾಮಗ್ರಿ' ಇತರ ಅನುವಾದಕರಿಗಿಂತ

ಭಿನ್ನವಾಗಿರಬೇಕೆಂಬ ಉದ್ದೇಶದಿಂದ ಈ ಕಾರ್ಯದಲ್ಲಿ ತೊಡಗಿಕೊಂಡಿರಬೇಕೆಂದು ಊಹಿಸಲು ಅವಕಾಶವಿದೆ. ಕಾರಣ ಈಗಾಗಲೇ ರೂಪಿಸಲ್ಪಟ್ಟ ಪಠ್ಯಸಾಮಗ್ರಿಗಳಲ್ಲಿನ ಕೊರತೆಯನ್ನು ಪೂರೈಸಬೇಕೆಂಬ ಇಚ್ಛೆಯೂ ಅದರಲ್ಲಿ ಅಡಕವಾಗಿರುತ್ತದೆ.

೩. ಈ ಮೇಲಿನ ಒಂಬತ್ತು ಅನುವಾದಗಳನ್ನು ಅವಲೋಕನ ಮಾಡಿದಾಗ ಸೃಜನಶೀಲತೆಯ ಲೇಪನ ಕಂಡುಬರುತ್ತದೆ. ವಿಷಯ ಮನವರಿಕೆಗಾಗಿ ವಿವರಣಾ ಪ್ರಮಾಣ ಪೀಠಿಕೆಯ ಭಾಗವಾಗಿ ಇಲ್ಲವೇ ವಿಷಯ ನಿರೂಪಣಾ ಭಾಗದಲ್ಲಿ ಸಂಕ್ಷಿಪ್ತವಾಗಿ ಇಲ್ಲವೇ ವಿವರವಾಗಿರು ವುದನ್ನು ನೋಡಬಹುದು. ಈ ರೀತಿಯಾಗಲು ಒಂದೇ ಭಾಷೆಯಲ್ಲಿ ಭಾಷಾಂತರ ಕಾರ್ಯದಿಂದ ಸಾಧ್ಯವಾಗಿಸುವ ಅವಕಾಶಗಳು ಅಧಿಕವೆಂಬುದು ನನ್ನ ಅಭಿಪ್ರಾಯ.

೪. ಬಯಕೆಗಳ 'ವಿಧ'ಗಳ ಸಂದರ್ಭದಲ್ಲಿ ಪ್ರಮುಖವಾಗಿ 'ಮೂರು' ಎಂಬುದನ್ನು ಒಂಬತ್ತು ಜನ ಭಾಷಾಂತರಕಾರರು ಪ್ರಸ್ತಾಪಿಸಿರುತ್ತಾರೆ. ಅಲ್ಲದೆ ಅವುಗಳ ಇಂಗ್ಲಿಷ ಪದಗಳನು ಯಥಾವತ್ತಾಗಿ ನೀಡಿರುತ್ತಾರೆ. ಆದರೆ ಅವುಗಳನ್ನು ಕನ್ನಡ ರೂಪದಲ್ಲಿ ನೀಡುವಾಗ ತಮ್ಮ ತಮ್ಮ ಸೃಜನ ಶೀಲತೆಯುಳ್ಳ ಸಮಾನ ಅರ್ಥ ನೀಡುವ ಪದಗಳನ್ನು ಟಂಕಿಸಿರುವುದನ್ನು ಗಮನಿಸಬಹುದಾಗಿದೆ.

೫. ಸಮಾರೋಪದಲ್ಲಿ ಎಲ್ಲರೂ 'ಬಯಕೆಗಳ ಈ ವರ್ಗೀಕರಣ ಕಟ್ಟುನಿಟ್ಟಿನದಲ್ಲ' ಎಂಬ ಸ್ಪಷ್ಟತೆ ಕೊಟ್ಟಿರುತ್ತಾರೆ. ಆ ಭಾಗದಲ್ಲಿನ ವಿವರಣೆ ಭಿನ್ನಭಿನ್ನವಾದ ದೃಷ್ಟಾಂತಗಳಿಂದ ಒಳಗೊಂಡಿರು ವುದನ್ನು ಪರಿಶೀಲಿಸಬಹುದಾಗಿದೆ.

ಒಟ್ಟಾರೆ ಹೇಳುವುದಾದರೆ ಅರ್ಥಶಾಸ್ತ್ರದ ಪಠ್ಯಸಾಮಗ್ರಿಗಳು ಕನ್ನಡದ ಸಂದರ್ಭದಲ್ಲಿ ಹೆಚ್ಚಿನವು 'ಆಂತರಿಕ' ಭಾಷಾಂತರಗಳೆಂದು ಭಾವಿಸಲು ಹೆಚ್ಚು ಅವಕಾಶವಿದೆ. ರಚಿತವಾದ ಕನ್ನಡ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳು ಸರಳೀಕರಣವುಳ್ಳ ಕನ್ನಡವನ್ನು ಹೊಂದಿವೆ. ಅವು ವಿದ್ಯಾರ್ಥಿಗಳ ಗ್ರಹಿಕೆಗೆ ನಿಲುಕುವ ದಿಸೆಯತ್ತ ಸಾಗಿದಂತಿವೆ. 'ತಾಂತ್ರಿಕ' ಪದಗಳನ್ನು ಆದಷ್ಟು ದೃಷ್ಟಾಂತಗಳನ್ನು ವಿದ್ಯಾರ್ಥಿಯ ಪರಿಸರ ಭಾಷೆಯಲ್ಲಿರುವಂತೆ ಪ್ರಯತ್ನಿಸಿದ್ದಾರೆಂಬ ಅನುಮಾನ ಮೂಡುತ್ತದೆ. ಪಠ್ಯಸಾಮಗ್ರಿಗಳಲ್ಲಿನ 'ಸಾಹಿತ್ಯ' ಪದಗಳಿಂದ ವಿವರಿಸಿದ್ದಾರೆ. ಪ್ರಾದೇಶಿಕ ಭಾಷೆಯ ಬಳಕೆಯೂ ಅಧಿಕವಾಗುತ್ತಿದೆ. ಇದು ವಿದ್ಯಾರ್ಥಿಗಳ ಕಲಿಕೆಗೆ ಪೂರಕವಾದದ್ದು. ಈ ಹಿನ್ನೆಲೆಯಲ್ಲಿ ಕೆಲವು ಅನುವಾದಕರು ಈ ಕಾರ್ಯದಲ್ಲಿ ತೊಡಗಿಕೊಂಡಿರುವುದಾಗಿ ಪಠ್ಯ ಪುಸ್ತಕದ ಆರಂಭದಲ್ಲಿ ಹೇಳಿಕೊಂಡಿದ್ದಿದೆ.

### ೩.೨. ಉಪಭೋಗ(ಅನುಭೋಗ)

ಎಲ್ಲ ವಸ್ತುಗಳು ಮತ್ತು ಸೇವೆಗಳು ಮಾನವನ ಬೇಕುಗಳ ಪೂರೈಕೆಗಾಗಿ ಉತ್ಪಾದಿಸಲ್ಪಡುತ್ತವೆ. ಉಪಭೋಗವು ಈ ರೀತಿಯ ಬೇಕುಗಳ ಪೂರೈಕೆಗಾಗಿ ಆಗುವ ವಸ್ತು ಮತ್ತು ಸೇವೆಗಳ ಉಪಭೋಗಕ್ಕೆ

ಸಂಬಂಧಿಸಿರುತ್ತದೆ. ವಸ್ತುಗಳನ್ನು ಉಪಯೋಗಿಸಿದಾಗ ನಿಜಕ್ಕೂ ಅವುಗಳಲ್ಲಿಯ ತುಷ್ಟಿಗುಣದ ಉಪಯೋಗವಾಗುತ್ತದೆ. ಈ ದೃಷ್ಟಿಯಿಂದ ಉಪಭೋಗವೆಂದರೆ ತುಷ್ಟಿಗುಣದ ಉಪಯೋಗವೆಂದು ಹೇಳಬಹುದು.

ಈ ಕಾರಣಕ್ಕಾಗಿಯೇ ಉಪಭೋಗವೆಂದರೆ ತುಷ್ಟಿ ಗುಣ ನಷ್ಟತೆಯೆಂದು ವ್ಯಾಖ್ಯೆ ಹೇಳುತ್ತಾರೆ. ಹಾಗೆ ನೋಡಿದರೆ ಮಾನವನು ಯಾವುದೇ ವಸ್ತುವಿನ ನಿರ್ಮಾಪಕನೂ ಅಲ್ಲ; ಸಂಹಾರಕನೂ ಅಲ್ಲ. ವಸ್ತು ಜಗತ್ತಿನಲ್ಲಿ ಎಂದಿನಿಂದಲೂ ಇದೆ. ಮುಂದೆಯೂ ಇರುತ್ತದೆ. ಮಾನವನು ಕೇವಲ ಅದರ ಆಕಾರವನ್ನು ಮಾತ್ರ ಬದಲಿಸಬಲ್ಲ. ಯಾವುದೇ ಹಣ್ಣನ್ನು ತಿಂದಾಗ ವ್ಯಕ್ತಿ ನಿಜಕ್ಕೂ ಅದರಲ್ಲಿಯ ದ್ರವ್ಯವನ್ನು ಸಂಹರಿಸುವುದಿಲ್ಲ. ಕೇವಲ ಅದರ ಆಕಾರವನ್ನು ಮಾತ್ರ ಬದಲಿಸುತ್ತಾನೆ. ಅದನ್ನು ತಿಂದಾಗ ಅವರಲ್ಲಿದ್ದ ಮಾನವನ ಬೇಡಿಕೆಯನ್ನು ತೃಪ್ತಿಗೊಳಿಸುವ ಗುಣವನ್ನು ಮಾತ್ರ ಅವನು ಉಪಯೋಗಿಸುತ್ತಾನೆ. ಇಲ್ಲವೆ ನಷ್ಟಪಡಿಸುತ್ತಾನೆ. ಹಣ್ಣನ್ನು ತಿಂದಾಗ ಅವರಲ್ಲಿಯ ಈ ಸತ್ವ ಗುಣ ನಷ್ಟವಾಗುತ್ತಿದೆಯೇ ವಿನಾ ಅದರಲ್ಲಿಯ ದ್ರವ್ಯವಲ್ಲ; ಇದನ್ನೇ ಬೇರೆ ಶಬ್ದಗಳಲ್ಲಿ ಹೇಳಬೇಕೆಂದರೆ ಹಣ್ಣನ್ನು ಉಪಭೋಗಿಸುವ ಕ್ರಿಯೆಯಲ್ಲಿ ಮಾನವನು ಅದರಲ್ಲಿಯ ತುಷ್ಟಿಗುಣವನ್ನು ನಷ್ಟಗೊಳಿಸುತ್ತಾನೆ. ಅಂದರೆ ಆ ಹಣ್ಣನ್ನು ಉಪಭೋಗಿಸುತ್ತಾನೆ. ಉಪಭೋಗದಲ್ಲಿ ಈ ತುಷ್ಟಿಗುಣ ನಷ್ಟತೆಯು ತ್ವರಿತವಾಗಿ ಇರಬಹುದು ಇಲ್ಲವೆ ಸಾವಕಾಶವಾಗಿ ಮುಂದೆ ಬೆಳೆಯುತ್ತಲೂ ಹೋಗಬಹುದು. ಹಣ್ಣನ್ನು ತಿಂದಾಗ, ಹಾಲನ್ನು ಕುಡಿದಾಗ ಇದು ತ್ವರಿತವಾಗಿರುತ್ತದೆ. ಆದರೆ ಅದೇ ಕುರ್ಚಿ, ಮೇಜು ಮುಂತಾದವುಗಳನ್ನು ಉಪಭೋಗಿಸಿದಾಗ ಅದು ಮಂದವಾಗಿ ಮುಂದುವರಿಯುವುದಾಗಿರುತ್ತದೆ. ಕೇವಲ ತುಷ್ಟಿಗುಣ ನಷ್ಟತೆಯೇ ಉಪಭೋಗವೆನಿಸಲಾರದು. ಬೆಂಕಿ ಬಿದ್ದು ಮನೆ ಸುಟ್ಟು ಹೋದಾಗ ಅರ್ಥಶಾಸ್ತ್ರದ ದೃಷ್ಟಿಯಲ್ಲಿ ಅದು ಉಪಭೋಗಿಸಿ ದಂತಾಗುವುದಿಲ್ಲ; ಏಕೆಂದರೆ ಮಾನವನ ಬೇಡಿಕೆ ಸಮಾಧಾನ ಅಥವಾ ತೃಪ್ತಿ ಉಪಭೋಗದ ಅರ್ಥದಲ್ಲಿ ಅಡಕವಾಗಿದೆ. ಬೇಡಿಕೆಯ ತೃಪ್ತಿಯನ್ನು ಇಲ್ಲಿ ಒತ್ತಿ ಹೇಳಬೇಕಾಗುತ್ತದೆ. ವ್ಯಾವಹಾರಿಕ ದೃಷ್ಟಿಯಲ್ಲಿ ಉಪಭೋಗವೆಂದರೆ ಆದಾಯದ ವೆಚ್ಚವೆಂದು ಆಗುತ್ತದೆ. ನಾವು ಉಪಭೋಗಿಸುವ ಆಹಾರ, ಹಾಲು ಮುಂತಾದ ವಸ್ತುಗಳು, ಪುಕ್ಕಟೆಯಾಗಿ ಸಿಗುವುದಿಲ್ಲ. ಅವುಗಳಿಗೆ ನಾವು ಹಣ ತೆರಬೇಕಾಗುತ್ತದೆ. ಆದ್ದರಿಂದ ಉಪಭೋಗವು ಆದಾಯ ವೆಚ್ಚವನ್ನು ಒಳಗೊಂಡಿರುತ್ತದೆ. ಈ ದೃಷ್ಟಿಯಿಂದ ಉಪಭೋಗವೆಂದರೆ ಮಾನವನ ಸಂಪತ್ತಿನ ಉಪಯೋಗದ ಚಟುವಟಿಕೆ ಯಾಗಿರುತ್ತದೆ. 

ಅನೇಕ ವಸ್ತುಗಳು ಉಪಭೋಗಿಸಿದ ತತ್‌ಕ್ಷಣ ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತವೆ, ಇಲ್ಲವೆ ನಷ್ಟವಾಗುತ್ತವೆ. ಉದಾಹರಣಾರ್ಥವಾಗಿ ಆಹಾರವನ್ನು ಸೇವಿಸಿದಾಗ, ನೀರು ಅಥವಾ ಪಾನೀಯಗಳನ್ನು ಕುಡಿದಾಗ ಈ ವಸ್ತುಗಳು ಸಂಪೂರ್ಣವಾಗಿ ನಷ್ಟವಾಗುತ್ತವೆ. ಆದರೆ ಇನ್ನಿತರ ಕೆಲವು ವಸ್ತುಗಳು ಉಪಭೋಗದೊಡನೆಯೇ ನಷ್ಟವಾಗಿ ಹೋಗುವುದಿಲ್ಲ. ಅವು ಬಹುಕಾಲದವರೆಗೆ ಮನುಷ್ಯನ ಉಪಭೋಗಕ್ಕೆ ಉಪಯೋಗವಾಗುತ್ತವೆ. ಉದಾಹರಣಾರ್ಥವಾಗಿ ಬಟ್ಟೆ, ಮನೆ, ಕುರ್ಚಿ,

ಮೇಜು, ರೇಡಿಯೊ ಮುಂತಾದ ವಸ್ತುಗಳು ಬಹುಕಾಲದವರೆಗೆ ಬಳಕೆಗೆ ಉಪಯೋಗವಾಗುತ್ತವೆ. ಇವುಗಳನ್ನು ಕೊಂಡು ಉಪಯೋಗಿಸುವ ಕ್ಷಣದಿಂದಲೇ ಉಪಭೋಗ ಪ್ರಾರಂಭ ವಾಗುತ್ತದೆ. ಆದರೆ ಯಾವುದೇ ಒಂದು ಕಾಲಮಿತಿಯಲ್ಲಿ ಈ ಬಾಳಿಕೆಯ ವಸ್ತುಗಳ ಸೇವೆ ಇಲ್ಲವೆ ಉಪಯೋಗ ಇಂತಿಷ್ಟೇ ಆಯಿತೆಂದು ನಿರ್ದಿಷ್ಟವಾಗಿ ಹೇಳುವುದು ಉಪಭೋಗಿಗೆ ಕಷ್ಟವಾಗುತ್ತದೆ. ಉಪಭೋಗವು ಎರಡು ತೆರನಾಗಿರುತ್ತದೆ. ಒಂದು ವಸ್ತುಗಳ ಉಪಭೋಗ ಇನ್ನೊಂದು ಸೇವೆಗಳ ಉಪಭೋಗ, ವಸ್ತುಗಳ ಉಪಭೋಗವನ್ನು ಇದೀಗ ವರ್ಣಿಸಿದ್ದಾಗಿದೆ. ಸೇವೆಗಳ ಉಪಭೋಗದ ಬಗೆಗೆ ಹೇಳಬೇಕೆಂದರೆ ಮಾನವನು ಹಣವನ್ನು ವೆಚ್ಚ ಮಾಡಿ ತನ್ನ ಅನೇಕ ಬೇಕುಗಳನ್ನು ಪೂರೈಸಿಕೊಳ್ಳುತ್ತಾನೆ. ಈ ಉಪಭೋಗ ಕೇವಲ ವಸ್ತುವಿನಿಂದಲೇ ಸಾಧಿಸುವುದಿಲ್ಲ. ವಿವಿಧ ತೆರೆನಾದ ಸೇವೆಗಳಿಂದಲೂ ಅವನ ಬೇಕುಗಳ ಪೂರೈಕೆಯಾಗುತ್ತದೆ. ಹಣ ಕೊಟ್ಟು ಗಾಡಿ, ಮೋಟಾರು, ಇಲ್ಲವೆ ಯಾವುದೇ ಸಾರಿಗೆಯ ಸಾಧನವನ್ನು ಉಪಯೋಗಿಸಿದಾಗ ಈ ಸಾಧನಗಳ, ಸೇವೆಗಳ ಉಪಭೋಗವಾಗುತ್ತದೆ. ಚಲನಚಿತ್ರಮಂದಿರಗಳಲ್ಲಿ, ನಾಟಕ ಗೃಹಗಳಲ್ಲಿ ಪ್ರವೇಶಧನವಿತ್ತು. ನಾವು ಪಡೆಯುವುದು ವಸ್ತುಗಳನ್ನಲ್ಲ. ಆದರೆ ಸೇವೆಯನ್ನು. ಇದೇ ತೆರನಾಗಿ ವೈದ್ಯರ ವಕೀಲನ, ಪ್ರಾಧ್ಯಾಪಕರ, ಫಲಾಹರ ಮಂದಿರಗಳ, ಸೇವಕರ, ಇಂಥ ಇನ್ನೂ ಅನೇಕರ ಸೇವೆಯನ್ನು ನಾವು ಉಪಭೋಗಿಸುತ್ತೇವೆ.

ಉಪಭೋಗಗಳ ಪ್ರಕಾರಗಳು: ಉಪಭೋಗವನ್ನು ಎರಡು ಪ್ರಕಾರಗಳಲ್ಲಿ ವಿಶ್ಲೇಷಿಸಬಹುದು.

೧. ಪ್ರತ್ಯಕ್ಷ ಉಪಭೋಗ: ಮಾನವನು ಆಹಾರವನ್ನು ಸೇವಿಸಿದಾಗ, ಬಟ್ಟೆಗಳನ್ನು ಬಳಸಿದಾಗ, ರೇಡಿಯೊ ಮುಂತಾದವುಗಲನ್ನು ಉಪಯೊಗಿಸಿದಾಗ, ಅವನಿಗೆ ಇವೆಲ್ಲವುಗಳಿಂದ, ಪ್ರತ್ಯಕ್ಷ ತೃಪ್ತಿ ದೊರಕುತ್ತದೆ. ಇದೇ ರೀತಿ ಎಲ್ಲ ಉಪಭೋಗದ ವಸ್ತುಗಳು ಪ್ರತ್ಯಕ್ಷ ಇಲ್ಲವೇ ಅಂತಿಮ ತೃಪ್ತಿ ಕೊಡುತ್ತವೆ. ಇವುಗಳಲ್ಲಿ ಹಣ್ಣು ಮುಂತಾದ ಕೆಲ ವಸ್ತುಗಳು ಒಂದೇ ಸಲ ಉಪಭೋಗಿಸಲ್ಪಡುತ್ತವೆ. ಬಟ್ಟೆ, ಕುರ್ಚಿ ಮುಂತಾದ ಬಾಳಿಕೆಯ ವಸ್ತುಗಳು, ಕೆಲಕಾಲದವರೆಗೆ ಉಪಯೋಗವಿದ್ದು ಉಪಭೋಗಿಸಲ್ಪಡುತ್ತವೆ.

೨. ಅಪ್ರತ್ಯಕ್ಷ ಉಪಭೋಗ ಇಲ್ಲವೆ ಉತ್ಪಾದಕ ಉಪಭೋಗ: ಕೆಲವಸ್ತುಗಳು ಮತ್ತು ಸೇವೆಗಳು ನಮಗೆ ನೇರವಾದ ತೃಪ್ತಿಯನ್ನು ಕೊಡುತ್ತವೆ. ಕಾರಖಾನೆಗಳಲ್ಲಿ ಉಪಯೋಗಿಸುವ ಯಂತ್ರಗಳು ಮತ್ತು ಕಚ್ಚಾ ಸರಕುಗಳು ನಮಗೆ ನೇರವಾದ ತೃಪ್ತಿಯನ್ನು ಕೊಡುವುದಿಲ್ಲ. ಆದರೆ ಇವುಗಳಿಂದ ಉತ್ಪಾದಿಸಲ್ಪಟ್ಟ ವಸ್ತುಗಳಿಂದ ನಮಗೆ ಪ್ರತ್ಯಕ್ಷವಾದ ಉಪಭೋಗವು ದೊರೆಯುತ್ತದೆ. ಪ್ರತ್ಯಕ್ಷ ತೃಪ್ತಿ ಕೊಡುವ ವಸ್ತುಗಳುಇಲ್ಲವೆ ಸೇವೆಗಳ ಉತ್ಪಾದನೆಗೆ ಉಪಯೋಗಿಸಲ್ಪಟ್ಟ ಇಂಥ ಯಂತ್ರ ಮತ್ತು ಕಚ್ಚಾ ಸರಕುಗಳಿಂದ ನಮಗೆ ಅಪ್ರತ್ಯಕ್ಷವಾದ ಉಪಭೋಗವು ದೊರೆಯುತ್ತದೆ. ಎಲ್ಲ ಉತ್ಪಾದನಾ ಸಾಧನೆಗಳಿಂದ. ಈ ರೀತಿಯ ಅಪ್ರತ್ಯಕ್ಷ ತೃಪ್ತಿ ದೊರೆಯುತ್ತದೆ. ಇವುಗಳ ಉಪಯೋಗಕ್ಕೆ ಉತ್ಪಾದಕ ಇಲ್ಲವೆ ಅಪ್ರತ್ಯಕ್ಷ ಉಪಭೋಗವೆಂದು ಹೇಳುತ್ತಾರೆ. ಬಟ್ಟೆಯ ಬಳಕೆ ಪ್ರತ್ಯಕ್ಷ ಉಪಭೋಗ, ಆದರೆ

ಕಾರಖಾನೆಯಲ್ಲಿ ಯಂತ್ರದ ಉಪಯೋಗ ಅಪ್ರತ್ಯಕ್ಷ ಉಪಭೋಗವೆನಿಸುತ್ತದೆ(ಅರ್ಥಶಾಸ್ತ್ರ: ತತ್ವ ನಿರೂಪಣೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೩೧, ಪು.೩೭-೩೯).

ಅನುಭೋಗ(Consumption): ಅರ್ಥವಿವರಣೆ(Meaning): ಮಾನವನಿಗೆ ಅನೇಕ ಇಚ್ಚೆಗಳು. ಅವುಗಳನ್ನು ಪೂರ್ತಿ ಮಾಡಿಕೊಳ್ಳಲು ಅವನು ಅನೇಕ ವಸ್ತುಗಳನ್ನು ಉಪಯೋಗಿಸುತ್ತಾನೆ. ಉದಾಹರಣೆಗೆ, ನಮಗೆ ಹಸಿವೆಯಾದಾಗ ಬ್ರೆಡ್ ತಿನ್ನುತ್ತೇವೆ. ಆಗ ನಮಗೆ ಹಸಿವು ಹಿಂಗುತ್ತದೆ. ಏಕೆಂದರೆ ಆ ಬ್ರೆಡ್‌ನಲ್ಲಿ ನಮ್ಮ ಇಚ್ಚೆಯನ್ನು ತೃಪ್ತಿಪಡಿಸುವ ಶಕ್ತಿ ಇದೆ. ವಸ್ತುಗಳಲ್ಲಿರುವ ನಮ್ಮ ಇಚ್ಚೆಯನ್ನು ತೃಪ್ತಿಪಡಿಸುವ ಈ ಶಕ್ತಿಗೆ 'ತುಷ್ಟಿಗುಣ' ಎಂದು ಕರೆಯುತ್ತಾರೆ. ಎಲ್ಲ ವಸ್ತುಗಳಲ್ಲಿಯೂ ಈ ಗುಣವಿರುತ್ತದೆ. ವಸ್ತುಗಳಲ್ಲಿಯ ಈ ತುಷ್ಟಿಗುಣ ಉಪಯೋಗಿಸಿಕೊಂಡು ನಮ್ಮ ಇಚ್ಚೆಯನ್ನು ತೃಪ್ತಿಪಡಿಸಿಕೊಳ್ಳುವುದಕ್ಕೆ 'ಅನುಭೋಗ' ಅಥವಾ 'ಉಪಭೋಗ' ಎಂದು ಕರೆಯುತ್ತಾರೆ. ನಮಗೆ ನೀರಡಿಕೆಯಾದಾಗ ನೀರು ಕುಡಿದರೆ ಆಗ ನೀರಿನ ಉಪಭೋಗ ಆದಂತೆ. ಚಳಿ ಎನಿಸಿದಾಗ ಉಣ್ಣೆ ಬಟ್ಟೆ ತೊಡುತ್ತೇವೆ, ತೃಪ್ತಿ ಎನಿಸುತ್ತದೆ. ಅದು ಉಪಭೋಗ. ನಮಗೆ ಜ್ಞಾನ ಪಡೆಯಬೇಕೆನಿಸಿದಾಗ ಶಿಕ್ಷಕರ ಸೇವೆಯನ್ನು ಪಡೆಯುತ್ತೇವೆ. ಅನಾರೋಗ್ಯದಿಂದಿರುವಾಗ ವೈದ್ಯರ ಸೇವೆಯನ್ನು ಪಡೆಯುತ್ತೇವೆ. ಇಂತಹ ಸೇವೆಗಳಿಂದಲೂ ನಮ್ಮ ಇಚ್ಛೆ ತೃಪ್ತಿಗೊಳ್ಳುತ್ತದೆ. ಆದುದರಿಂದ ಇದು ಕೂಡ ಉಪಭೋಗವೆನಿಸಿ ಕೊಳ್ಳುತ್ತದೆ. ಒಟ್ಟಿನಲ್ಲಿ ವಸ್ತುವಿನಲ್ಲಿರುವ ತೃಪ್ತಿಗುಣವನ್ನು ಉಪಯೋಗಿಸಿಕೊಂಡರೆ ಮಾತ್ರ ಅದು ಅನುಭೋಗವೆನಿಸಿಕೊಳ್ಳುತ್ತದೆ. ಇದಕ್ಕೆ ಬದಲಾಗಿ ವಸ್ತುವಿನಲ್ಲಿರುವ ತುಷ್ಟಿಗುಣವನ್ನು ವ್ಯರ್ಥ, ನಾಶ ಮಾಡಿದರೆ ಅದು 'ಉಪಭೋಗ'ವೆನಿಸಲಾರದು. ಒಂದು ಹಣ್ಣನ್ನು ಪೇಟೆಯಿಂದ ತಂದು ಒಂದೆರಡು ದಿನಗಳ ನಂತರ ನೋಡಿದರೆ ಅದು ಕೊಳೆತು ಹೋಗಿರುತ್ತದೆ. ಆಗ ಅದನ್ನು ತಿನ್ನಲು ಸಾಧ್ಯವಿಲ್ಲ. ಇದರಿಂದ ಅದರಲ್ಲಿಯ ತುಷ್ಟಿಗುಣವನ್ನು ನಾವು ಉಪಯೋಗಿಸಿದಂತಾಗಲಿಲ್ಲ. ಹೀಗಾದಾಗ ಅದು ಉಪಭೋಗವೆನಿಸಿಕೊಳ್ಳುವುದಿಲ್ಲ. ಚಹಾ ಕುಡಿಯಬೇಕೆಂಬ ಇಚ್ಛೆಯೊಡನೆ ಒಂದು ಕಪ್ಪು ಚಹ ತಯಾರಿಸುತ್ತೇವೆ. ಚಹವನ್ನು ಕುಡಿಯುವ ಪೂರ್ವದಲ್ಲಿಯೇ ಚಹದ ಕಪ್ಪು ಕೈಜಾರಿ ನೆಲಕ್ಕೆ ಬೀಳುತ್ತದೆ. ಆಗ ಅದು ನಮ್ಮ ಇಚ್ಚೇಯನ್ನು ತೃಪ್ತಿಪಡಿಸಲು ಉಪಯೋಗವಾಗಲಿಲ್ಲ. ಅಂದರೆ, ಚಹದಲ್ಲಿಯ ತುಷ್ಟಿಗುಣವನ್ನು ನಾವು ಬಳಸಲಿಲ್ಲ. ಆದ್ದರಿಂದ ಅದು ಉಪಭೋಗವಾಗಲಿಲ್ಲ. ಅಂದರೆ, ಚಹದಲ್ಲಿಯ ತುಷ್ಟಿಗುಣವನ್ನು ನಾವು ಬಳಸಲಿಲ್ಲ. ಆದ್ದರಿಂದ ಅದು ಉಪಭೋಗವಾಗಲಿಲ್ಲ. ಹೀಗೆ ವಸ್ತುಗಳಲ್ಲಿಯ ತುಷ್ಟಿಗುಣವನ್ನು ನಾವು ಉಪಯೋಗಿಸಿದರೆ ಮಾತ್ರ ಅದು 'ಉಪಭೋಗ' ಎನಿಸಿಕೊಳ್ಳುತ್ತದೆ(ಎಂ.ಎಸ್.ಬದಾಮಿ, ಅರ್ಥಶಾಸ್ತ್ರ, ೧೯೭೭-೭೭, ಪು.೩೧).

ಅನುಭೋಗದ ಅರ್ಥ: "ಮಾನವನು ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಸರಕು ಮತ್ತು ಸೇವೆಗಳನ್ನು ಉಪಯೋಗಿಸುವ ಕ್ರಿಯೆಗೆ ಅನುಭೋಗ ಎನ್ನುತ್ತೇವೆ." ಉದಾಹರಣೆಗೆ ಹಸಿವಾದಾಗ ಊಟ ಮಾಡುವುದು, ಬಾಯಾರಿದಾಗ ನೀರು ಕುಡಿಯುವುದು ಜ್ಞಾನ ಬೇಕೆನಿಸಿದಾಗ

ಪುಸ್ತಕ ಓದುವುದು ಅಥವಾ ಶಿಕ್ಷಕರ ಸೇವೆ ಪಡೆಯುವುದು. ಅನಾರೋಗ್ಯಕ್ಕೆ ತುತ್ತಾದಾಗ ವೈದ್ಯರ ಸೇವೆ ಪಡೆಯುವುದು ಇತ್ಯಾದಿ. ಸರಕು ಮತ್ತು ಸೇವೆಗಳಲ್ಲಿ ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಗುಣ ಅಂದರೆ ತುಷ್ಟಿಗುಣ ಇರುತ್ತದೆ. ಆದುದರಿಂದ ಅವುಗಳನ್ನು ಉಪಯೋಗಿಸಿಕೊಂಡು ಬಯಕೆಗಳನ್ನು ತೃಪ್ತಿಪಡಿಸಲಾಗುತ್ತದೆ.

ಅನುಭೋಗ ಮತ್ತು ತುಷ್ಟಿಗುಣದ ನಡುವೆ ನೇರ ಸಂಬಂಧವಿದೆ. ಸರಕು ಸೇವೆಗಳಲ್ಲಿ ಮಾನವನ ಬಯಕೆಗಳನ್ನು ತೃಪ್ತಿಪಡಿಸಬಹುದಾದ ತುಷ್ಟಿಗುಣವಿರುತ್ತದೆ. ಮಾನವನು ಆ ತುಷ್ಟಿಗುಣವನ್ನು ಬಳಸಿಕೊಂಡು ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾನೆ. ಆದುದರಿಂದ "ಅನುಭೋಗವೆಂದರೆ ಸರಕು-ಸೇವೆಗಳಲ್ಲಿರುವ ತುಷ್ಟಿಗುಣವನ್ನು ಬಳಸಿಕೊಳ್ಳುವ ಕ್ರಿಯೆ" ಎಂತಲೂ ಕರೆಯಬಹುದು.

ಅನುಭೋಗದ ವಿಧಗಳು: ಅನುಭೋಗದಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ ಅವುಗಳೆಂದರೆ ೧. ಪ್ರತ್ಯಕ್ಷ ಅನುಭೋಗ(Direct Consumption) ೨. ಪರೋಕ್ಷ ಅನುಭೋಗ(Indirect Consumption)

೧. ಪ್ರತ್ಯಕ್ಷ ಅನುಭೋಗ(Direct Consumption): ಸರಕು ಮತ್ತು ಸೇವೆಗಳು ಮಾನವನ ಬಯಕೆಗಳನ್ನು ಪ್ರತ್ಯಕ್ಷವಾಗಿ ತೃಪ್ತಿಪಡಿಸುವಂತಿದ್ದರೆ ಅದನ್ನು ಪ್ರತ್ಯಕ್ಷ ಅನುಭೋಗ ಎನ್ನುತ್ತೇವೆ. ಎಲ್ಲ ಅನುಭೋಗಿ ಸರಕು-ಸೇವೆಗಳು ಪ್ರತ್ಯಕ್ಷವಾಗಿ ಬಳಸಲ್ಪಡುತ್ತವೆ. ಹಾಗಾಗಿ ಅವುಗಳ ಬಳಕೆಯು ಪ್ರತ್ಯಕ್ಷ ಅನುಭೋಗವೆನಿಸುತ್ತದೆ. ಉದಾಹರಣೆಗೆ ಹಸಿದಾಗ ಊಟ ಮಾಡುವುದು, ಬಟ್ಟೆ ತೊಡೆಯುವುದು, ಶಿಕ್ಷಕರ ಸೇವೆ ಅಥವಾ ವೈದ್ಯರ ಸೇವೆ ಪಡೆಯುವುದು ಇತ್ಯಾದಿ.

೨. ಪರೋಕ್ಷ ಅನುಭೋಗ(Indirect Consumption): ಸರಕು ಮತ್ತು ಸೇವೆಗಳು ಮಾನವನ ಬಯಕೆಗಳನ್ನು ಪರೋಕ್ಷವಾಗಿ ತೃಪ್ತಿಪಡಿಸುವಂತಿದ್ದರೆ ಅದನ್ನು ಪರೋಕ್ಷ ಅನುಭೋಗ ಎನ್ನುತ್ತೇವೆ. ಉತ್ಪಾದನೆಗೆ ಸಹಾಯಕವಾಗುವ ಎಲ್ಲ ರೀತಿಯ ಸರಕು-ಸೇವೆಗಳನ್ನು ಉತ್ಪಾದಕ ಸರಕು-ಸೇವೆಗಳೆಂದು ಕರೆಯುತ್ತೇವೆ. ಉತ್ಪಾದಕರ ಸರಕು-ಸೇವೆಗಳನ್ನು ಅನುಭೋಗಿಯು ಪ್ರತ್ಯಕ್ಷವಾಗಿ ಅನುಭೋಗಿಸುವುದಿಲ್ಲ. ಆದರೆ ಅನುಭೋಗಿಗೆ ಬೇಕಾದ ಅನುಭೋಗಿ ಸರಕುಗಳನ್ನು ಉತ್ಪಾದಿಸಲು ಇವುಗಳನ್ನು ಬಳಸಲಾಗುತ್ತದೆ. ಹಾಗಾಗಿ ಉತ್ಪಾದಕ ಸರಕುಗಳು ಅನುಭೋಗಿಯ ಬಯಕೆಗಳನ್ನು ಪರೋಕ್ಷವಾಗಿ ತೃಪ್ತಿಪಡಿಸುತ್ತವೆ. ಉದಾಹರಣೆಗೆ ಹೊಲಿಗೆಯಂತ್ರ ನಮಗೆ ಬೇಕಾದ ಬಟ್ಟೆಗಳನ್ನು ತಯಾರಿಸಿಕೊಡುತ್ತದೆ. ಅಂದರೆ ಅದು ಪರೋಕ್ಷವಾಗಿ ನಮ್ಮ ಬಯಕೆಯನ್ನು ತೃಪ್ತಿಪಡಿಸುತ್ತದೆ. ಹಾಗೆಯೇ ಟಯಲರನ ಸೇವೆಯು ನಮಗೆ ಪರೋಕ್ಷವಾಗಿ ದೊರೆಯುತ್ತದೆ. ಯಂತ್ರೋಪಕರಣಗಳು, ಅವುಗಳಲ್ಲಿ ದುಡಿಯುವ ಕಾರ್ಮಿಕರ ಸೇವೆ, ಹೊಲಗದ್ದೆಗಳಲ್ಲಿ ದುಡಿದು ಅನ್ನ ಒದಗಿಸುವ ರೈತರ ಸೇವೆ ಮುಂತಾದವೆಲ್ಲವೂ ಪರೋಕ್ಷ ಅನುಭೋಗಕ್ಕೆ ಉದಾಹರಣೆಗಳಾಗಿವೆ.

ಒಟ್ಟಿನಲ್ಲಿ ಅನುಭೋಗವು ಎಲ್ಲ ಆರ್ಥಿಕ ಚಟುವಟಿಕೆಗಳ ಮೂಲವಾಗಿರುವುದಲ್ಲದೆ, ಗುರಿಯೂ ಆಗಿದೆ. ಜನರ ಆದಾಯ ಹೆಚ್ಚಾದಂತೆ ಅನುಭೋಗ ಹೆಚ್ಚಾಗುತ್ತದೆ. ಸರಕು-ಸೇವೆಗಳ ಅನುಭೋಗದ

ಪ್ರಮಾಣ ಹೆಚ್ಚಾದಂತೆ ಜನರ ಜೀನವಮಟ್ಟ ಹೆಚ್ಚುತ್ತದೆ. ಆ ಮೂಲಕ ಜನರ ಆರ್ಥಿಕ ಕಲ್ಯಾಣ ಸಾಧ್ಯವಾಗುತ್ತದೆ. ಹೀಗೆ ಜನರ ಆರ್ಥಿಕ ಕಲ್ಯಾಣವನ್ನು ಹೆಚ್ಚಿಸುವುದೇ ಪ್ರತಿ ಅರ್ಥವ್ಯವಸ್ಥೆಯ ಗುರಿಯಾಗಿದೆ(ಕೆಂಪಯ್ಯ ಜಿ.ಎನ್., ಮೂಲ ಆರ್ಥಿಕ ಸಿದ್ಧಾಂತ, ೨೦೦೪, ಪು.೬೦-೬೧).

ಮಾನವನ ಬಯಕೆಗಳು: ಮಾನವನ ಬಯಕೆಗಳು ಅಪಾರ. ಬಯಕೆಗಳೆಂದರೆ ಯಾವುದೇ ವಸ್ತುವನ್ನು ಅನುಭವಿಸುವ ಅಭಿಪ್ಸೆ ಇದು ಮಾನವನಲ್ಲಿ ಅಪಾರವಾದುದು ಮತ್ತು ಅಪರಿಮಿತವಾದುದು. ಹಾಗೆಯೇ ಅನುಭವಿಸಿದ ನಂತರ ಬಯಕೆಗಳು ಅದು ಮಾನವನಲ್ಲಿ ನಿರಂತರವಾಗಿರುತ್ತವೆ. ಕೆಲವು ಬಯಕೆಗಳು ಅವಶ್ಯಕವಾಗಿರುತ್ತವೆ. ಇನ್ನೂ ಕೆಲವು ಸುಖದಾಯಕವಾಗಿರುತ್ತದೆ. ಇನ್ನು ಕೆಲವು ಸಾಮಾಜಿಕವಾಗಿ ಅವಶ್ಯಕ ಮತ್ತು ಘನತೆಯ ಜಿವನಶೈಲಿಯಿಂದ ಹುಟ್ಟಿಕೊಳ್ಳುತ್ತವೆ. ಆದ್ದರಿಂದ ಮಾನವನ ಬಯಕೆಗಳು ವೈವಿಧ್ಯಮಯ. ವ್ಯಕ್ತಿ ಇನ್ನೊಬ್ಬನಿಂದ ಹೇಗೆ ವಿಭಿನ್ನವಾಗಿರು ತ್ತಾನೋ ಹಾಗೇ ಬಯಕೆಗಳು ಒಬ್ಬನಿಂದ ಇನ್ನೊಬ್ಬನಿಗೆ ವಿಭಿನ್ನವಾಗಿರುತ್ತವೆ. ಉದಾಹರಣೆ ಆಹಾರ, ಬಟ್ಟೆ, ವಸತಿ, ಮೋಜು, ಪೀಠೋಪಕರಣ, ಟಿ.ವಿ., ರೇಡಿಯೊ ಇತ್ಯಾದಿ ಇಂತಹ ಸಾವಿರಾರು ವಸ್ತುಗಳನ್ನು ಪಡೆಯುವುದು, ಅನುಭವಿಸುವುದು ಬಯಕೆಯಾಗಿದೆ.

ಮಾನವನು ಇಷ್ಟಪಡುವ, ಬೇಕೆಂದು ಇಚ್ಛಿಸುವ ಎಲ್ಲ ಅಂಶಗಳನ್ನು ಬಯಕೆಗಳು ಎಂದು ಕರೆಯುತ್ತೇವೆ. ಬಯಕೆಯು ಹಲವಾರು ಕಾರಣಗಳಿಂದ ಹುಟ್ಟಿಕೊಳ್ಳುತ್ತದೆ. ಅವುಗಳೆಂದರೆ

೧. ಮೂಲಭೂತ ಸೌಕರ್ಯವನ್ನು ಪಡೆಯುವ ಬಯಕೆ: ಪ್ರತಿಯೊಬ್ಬ ಮನುಷ್ಯನಿಗೆ ಬದುಕಲು ಮೂಲಭೂತ ಸರಕುಗಳು ಬೇಕಾಗುತ್ತವೆ. ಅವು ನೈಸರ್ಗಿಕವಾಗಿರುತ್ತವೆ. ಉದಾಹರಣೆಗೆ ಹಸಿವು, ನೀರಡಿಕೆ, ನಿದ್ರೆ ಇತ್ಯಾದಿ. ಇವುಗಳಿಗಾಗಿ ಆಹಾರ, ವಸತಿ, ಬಟ್ಟೆಗಳನ್ನು ಪಡೆಯುವ ಬಯಕೆ ಗಳುಂಟಾಗುತ್ತವೆ.

೨. ಸುಖದಾಯಕ ಜೀವನ ನಡೆಸುವ ಬಯಕೆ: ಬರಿ ಅಗತ್ಯ ವಸ್ತುಗಳಿಂದಷ್ಟರಲ್ಲೇ ಮಾನವ ತೃಪ್ತನಾಗುವುದಿಲ್ಲ. ಅವನಿಗೆ ಹಲವಾರು ಸುಖ, ವಿಲಾಸಿ ಜೀವನದ ಬಯಕೆಯಿರುತ್ತದೆ. ಆದ್ದರಿಂದ ಅಂತಹ ಆಸೆಗಳು ಹುಟ್ಟುತ್ತವೆ. ಉದಾಹರಣೆಗೆ ಟಿ.ವಿ., ಕಾರು, ರುಚಿಯಾದ ಊಟ, ಉತ್ತಮ ಬಟ್ಟೆ ಇತ್ಯಾದಿ.

೩. ಘನತೆ, ಉತ್ತಮ ಜೀವನಮಟ್ಟ ಇಟ್ಟುಕೊಳ್ಳುವ ಬಯಕೆ: ಮನುಷ್ಯ ನಾಗರಿಕನಾದಂತೆ ಅವನ ಬಯಕೆಗಳು ಬದಲಾಗುತ್ತವೆ. ಸಮಾಜದಲ್ಲಿ ತನ್ನ ಸ್ಥಾನಮಾನ ಕಾಪಾಡಿಕೊಳ್ಳಲು ಪ್ರತಿಷ್ಠೆ, ಘನತೆ ಹೆಚ್ಚಿಸುವಂತಹ ವಸ್ತುಗಳನ್ನು ಪಡೆಯುವ ಬಯಕೆಗಳಾಗುತ್ತದೆ. ಉದಾಹರಣೆ ಆಭರಣಗಳು, ದುಬಾರಿ ಬೆಲೆಯ ಉಡುಗೆಗಳು ಇತ್ಯಾದಿ.

೪. ಜೀವನ ಭದ್ರತೆಗೆ-ಕುಟುಂಬದ ಮೇಲಿನ ಪ್ರೀತಿಯಿಂದಾಗಿ: ತನ್ನ ಕುಟುಂಬ ವರ್ಗದವರ ಭದ್ರತೆಗೆ, ತನ್ನ ಜೀವನ ಭದ್ರತೆಗೆ ಕುಟುಂಬದ ಮೇಲಿನ ಪ್ರೀತಿಯಿಂದಾಗಿ ಅನೇಕ

ಬಯಕೆಗಳುಹುಟ್ಟಿಕೊಳ್ಳುತ್ತವೆ. ಉದಾಹರಣೆಗೆ ಆಸ್ತಿ ಮಾಡುವುದು, ಕಟ್ಟಡಗಳನ್ನು ಕಟ್ಟಿಸುವುದು, ಜೀವವಿಮೆ ಪಾಲಿಸಿ ತೆಗೆಯುವುದು, ಪಿಸ್ತೂಲು ಮುಂತಾದ ಜೀವರಕ್ಷಕ ವಸ್ತುಗಳನ್ನು ಇಟ್ಟುಕೊಳ್ಳುವುದು ಇತ್ಯಾದಿ.

೫. ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರ್ಯಗಳಿಂದಾಗಿ: ಮಾನವನು ಸಮಾಜ ಜಿವಿ. ಸಮಾಜದಲ್ಲಿನ ರೂಢಿ, ಸಂಪ್ರದಾಯ ಧರ್ಮ, ಪೂಜೆ, ಹುಟ್ಟು, ಸಾವು, ಮದುವೆ, ಮುಂಜಿ ಮುಂತಾದ ಸಂಪ್ರದಾಯಗಳನ್ನು ನೆರವೇರಿಸಲು ಅನೇಕ ವಸ್ತುಗಳ ಬಯಕೆಗಳು ಹುಟ್ಟಿಕೊಳ್ಳುತ್ತವೆ.

೬. ತಾಂತ್ರಿಕತೆ, ಶಿಕ್ಷಣ ಆರ್ಥಿಕ ಬದಲಾವಣೆಗಳಿಂದಾಗಿ: ಹೊಸ ಹೊಸ ವೈಜ್ಞಾನಿಕ ಸಂಶೋಧನೆಗಳಾದಂತೆ, ತಾಂತ್ರಿಕತೆಯಲ್ಲಿ ಆವಿಷ್ಕಾರವಾದಮತೆ, ಶಿಕ್ಷಣ, ಸಾಕ್ಷರತೆ ವ್ಯಾಪಕವಾದಂತೆ ದೇಶದ, ಪ್ರಪಂಚದ ಆರ್ಥಿಕ ನೀತಿಗಳು, ಸರ್ಕಾರದ ನೀತಿ ಬದಲಾದಂತೆಲ್ಲ ಅನೇಕ ಹೊಸ ಹೊಸ ಬಯಕೆಗಳು ಹುಟ್ಟಿಕೊಳ್ಳುತ್ತವೆ.

**ಅವಶ್ಯಕಗಳು:** ಮಾನವನು ಬದುಕಲು, ಜೀವನ ನಡೆಸಲು ಕೆಲವು ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಆ ಬಯಕೆಗಳನ್ನು ಈಡೇರಿಸಿಕೊಳ್ಳದಿದ್ದರೆ ಅವನು ಬದುಕಿರಲಾರ. ಉದಾಹರಣೆಗೆ ಆಹಾರ, ನೀರು, ಬಟ್ಟೆ ಇಂತಹ ಬಯಕೆಗಳಿಗೆ ಜೀವನಾವಶ್ಯಕ ಬಯಕೆಗಳು ಎನ್ನಲಾಗುತ್ತದೆ. ಇದರ ಜೊತೆಗೆ ಉತ್ತಮ ಜೀವನಕ್ಕೆ, ಆರೋಗ್ಯಕ್ಕೆ, ಶಕ್ತಿಗೆ ಇನ್ನು ಕೆಲವು ಅಗತ್ಯ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬೇಕಾಗುತ್ತದೆ. ಅವನ ಕೆಲಸ ಮಾಡುವ ಸಾಮರ್ಥ್ಯವನ್ನು–ದಕ್ಷತೆಯನ್ನು ಹೆಚ್ಚಿಸುವುದರಿಂದ ಅದನ್ನು ದಕ್ಷತಾವಶ್ಯಕ ಬಯಕೆಗಳೆಂದು ವರ್ಗೀಕರಿಸಲಾಗಿದೆ. ಉದಾರಹಣೆಗೆ ಪೌಷ್ಠಿಕಾಂಶವುಳ್ಳ ಆಹಾರ ಪದಾರ್ಥಗಳಾದ ಬೆಣ್ಣೆ, ಹಾಲು, ಮೊಟ್ಟೆ ಇತ್ಯಾದಿ. ಕೆಲವು ವೇಳೆ ಸಾಂಪ್ರದಾಯಿಕ ಕಾರ್ಯ ನೆರವೇರಿಸಿಲು ಅಗತ್ಯವಾಗಿ ಕೆಲವು ಬಯಕೆಗಳನ್ನು ಈಡೇರಿಸಿಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಹುಟ್ಟು, ಸಾವು, ಮದುವೆ, ಹಬ್ಬ–ಹರಿದಿನಗಳಲ್ಲಿ ಬಳಸುವ ಸರಕುಗಳು. ಇಂತಹ ಬಯಕೆಯನ್ನು ಸಾಂಪ್ರದಾಯಿಕ ಅತ್ಯಾವಶ್ಯಕ ಬಯಕೆಗಳು ಎಂದು ವರ್ಗೀಕರಿಸಲಾಗಿದೆ.

ಹಿತದಾಯಕಗಳು: ಪ್ರತಿಯೊಬ್ಬ ಮಾನವನು ಸುಖ ಜೀವನ ನಡೆಸಲು ಇಚ್ಛೆಪಡುತ್ತಾನೆ. ಅಂದರೆ ಅವನು ಅನುಭೋಗಿಸುವ ವಸ್ತುಗಳಿಂದ ದೇಹಕ್ಕೆ–ಮನಸ್ಸಿಗೆ ಸಂತೋಷ ದೊರಕುವಂತಿರಬೇಕು. ಸುಖ ಕೊಡುವಂತಿರಬೇಕು. ಅಂತಹ ಬಯಕೆಗಳಿಗೆ ಹಿತದಾಯಕ ಅಥವಾ ಸುಖದಾಯಕ ಬಯಕೆಗಳು ಎನ್ನಲಾಗುತ್ತದೆ. ಉದಾಹರಣೆ ಉಣ್ಣೆಬಟ್ಟೆಗಳು, ಮಂಚ, ಹಾಸಿಗೆ, ಫ್ಯಾನು, ವಾಷಿಂಗ್ ಮೆಷಿನ್, ಹಣ್ಣು–ಹಂಪಲುಗಳು ಇತ್ಯಾದಿ.

ವಿಲಾಸಿ ಬಯಕೆಗಳು: ಶ್ರೀಮಂತರು ತಮ್ಮ ಘನತೆ ಮೆರೆಯಲು ಈಡೇರಿಸಿಕೊಳ್ಳಬೇಕಾದ ಬಯಕೆಗಳನ್ನು ವಿಲಾಸಿ ಬಯಕೆಗಳು ಎನ್ನಲಾಗುತ್ತದೆ. ಉದಾರಹಣೆಗೆ ದೊಡ್ಡ ಬಂಗಲೆ, ಕಾರು ವಜ್ರಾಭರಣಗಳು ಇತ್ಯಾದಿ. ಇವು ಯಾವುದು ಇಲ್ಲದಿದ್ದರೂ ಮಾನವ ಬದುಕಬಲ್ಲ. ಆದರೂ

ಹೆಚ್ಚು ಸುಖಕ್ಕೋಸ್ಕರ ಇಂತಹ ಬಯಕೆಗಳಿರುತ್ತವೆ. ಇಲಾಸಿ ವಸ್ತುಗಳ ಬಯಕೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು. ಕೆಲವು ವಿಲಾಸಿ ವಸ್ತುಗಳ ಅತೀಯಾದ ಬಳಕೆಯಿಂದ-ಸೇವನೆಯಿಂದ ಅಮೃತವು ಅತಿಯಾದರೆ ವಿಷವಾಗುವಂತೆ, ದೇಹಕ್ಕೆ, ಆರೋಗ್ಯಕ್ಕೆ ಅಪಾಯಕಾರಿಯಾಗಬಹುದು. ಉದಾಹರಣೆಗೆ ಮದ್ಯಪಾನ, ಸಿಗರೇಟು, ಕುದುರೆ ಜುಜೂ ಇತ್ಯಾದಿ. ಇವುಗಳನ್ನು ಅಪಾಯಕಾರಿ ವಿಲಾಸಿ ಬಯಕೆಗಳು ಎನ್ನಲಾಗುತ್ತದೆ.

ಇನ್ನೂ ಕೆಲವು ವಿಲಾಸಿ ವಸ್ತುಗಳು ದುಬಾರಿಯಾಗಿರುತ್ತವೆ. ಹವಾನಿಯಂತ್ರಿತ ಮನೆ, ವಜ್ರ ವೈಢೂರ್ಯಗಳು, ವಿದೇಶೀ ಕಾರು ಇತ್ಯಾದಿ. ಇವುಗಳನ್ನು ಅಪಾಯರಹಿತ ವಿಲಾಸಿ ಬಯಕೆಗಳು ಎನ್ನಲಾಗುತ್ತದೆ. ಇನ್ನು ಕೆಲವು ವಸ್ತುಗಳು ಅಪತ್ಕಾಲಕ್ಕೆ, ಕಷ್ಟಕಾಲಕ್ಕೆ ನಿಧಿಯಾಗಿ ಪರಿವರ್ತಿತವಾಗುತ್ತವೆ. ಅವುಗಳನ್ನು ಸಂರಕ್ಷಣೆಯ ವಿಲಾಸಿ ವಸ್ತುಗಳು ಎನ್ನಲಾಗುತ್ತದೆ. ಉದಾಹರಣೆಗೆ ತೋಟ ಖರೀದಿಸುವುದು, ವಾಣಿಜ್ಯ ಪತ್ರ, ಶೇರು ಪತ್ರಗಳಲ್ಲಿ ಹಣ ತೊಡಗಿಸುವುದು, ಬಂಗಾರದ ಒಡವೆಗಳು ಇತ್ಯಾದಿ. ಇವುಗಳನ್ನು ಮಾರಾಟ ಮಾಡಿ ಕಷ್ಟ ಪರಿಹರಿಸಿಕೊಳ್ಳಬಹುದಾಗಿದೆ. ಇವು ಘನತೆ ಹೆಚ್ಚಿಸುವುದರ ಜೊತೆಗೆ ಅಪತ್ಕಾಲದಲ್ಲಿ ಅನುಕೂಲಕರವಾಗಿಯೂ ಇರುತ್ತವೆ(ರೇಣುಕಾರ್ಯ ಸಿ.ಕೆ.(ಸಂ), ಪ್ರಥಮ ಪಿಯುಸಿ ಅರ್ಥಶಾಸ್ತ್ರ, ೨೦೦೪, ಪು.೬೨-೬೬).

ಅನುಭೋಗಿಯ ವರ್ತನೆ(Consumer Behaviour): ಅನುಭೋಗದ ಅರ್ಥ(Meaning of Consumption): ಪ್ರತಿಯೊಂದು ಆರ್ಥಿಕ ಚಟುವಟಿಕೆಯ ಮೂಲವೇ ಅನುಭೊಗ. ಉತ್ಪಾದಿಲಸ್ಪಟ್ಟ ವಸ್ತುಗಳ ಮೌಲ್ಯ ಅನುಭೋಗದಲ್ಲಿ ಅಡಗಿದೆ. ಅನುಭೋಗವಿಲ್ಲದಿದ್ದರೆ ಉತ್ಪಾದನೆಯಿಲ್ಲ. ಉತ್ಪಾದನೆಯಿಲ್ಲದಿದ್ದರೆ ವಿನಿಮಯವಿಲ್ಲ. ಆದುದರಿಂದ ಉತ್ಪಾದನೆಯ ಅಂತಿಮ ಉದ್ದೇಶ ಪೂರ್ಣಗೊಳ್ಳುವುದು ವಸ್ತುಗಳು ಅನುಭೋಗಕ್ಕೊಳಪಟ್ಟಾಗ ಮಾತ್ರ. ಅನುಭೊಗದ ಮೂಲಕ ಮಾನವನು ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಅನುಭೋಗಕ್ಕೆ ಮಹತ್ವದ ಸ್ಥಾನವಿದೆ.

ಸಾಮಾನ್ಯವಾಗಿ 'ಅನುಭೋಗ' ಎಂದರೆ ವಸ್ತುಗಳ ಮೌಲ್ಯ ಅಥವಾ ತುಷ್ಟಿಗುಣ ನಾಶ ಮಾಡುವುದು ಎಂದು ಹೇಳಲಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಇದಕ್ಕೆ ವಿಶೇಷ ಅರ್ಥವಿದೆ. ಮಾನವನು ತನ್ನ ಬಯಕೆಯನ್ನು ತೃಪ್ತಿಪಡಿಸಿಕೊಳ್ಳಲು ಸರಕು-ಸೇವೆಗಳನ್ನು ಉಪಯೋಗಿಸುವ ಕ್ರಿಯೆಗೆ 'ಅನುಭೋಗ'ಎಂದು ಕರೆಯಲಾಗುತ್ತದೆ. ಹಸಿವಾದಾಗ ಆಹಾರ ಸೇವನೆ, ಆನಾರೋಗ್ಯವಾದಾಗ ವೈದ್ಯರ ಸೇವೆ, ಬೇಸರವಾದಾಗ ಸಿನಿಮಾ ನೋಡುವುದು ಇತ್ಯಾದಿಗಳೆಲ್ಲವೂ ಅನುಭೋಗದ ಉದಾಹರಣೆಗಳಾಗಿವೆ.

ಅನುಭೋಗದಲ್ಲಿ ತೃಪ್ತಿಯೇ ಬಹುಮುಖ್ಯವಾದುದು. ಏಕೆಂದರೆ ಬಯಕೆಯ ತೃಪ್ತಿಯೇ ಅನುಭೋಗದ ಮುಖ್ಯ ಗುರಿ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಹಣ ಕೊಟ್ಟು ಸರಕು ಅಥವಾ ಸೇವೆಗಳನ್ನು ಉಪಯೋಗಿಸಿ ಬಯಕೆಗಳನ್ನು ತೃಪ್ತಿಪಡಿಸುವ ಕ್ರಿಯೆಯು 'ಅನುಭೋಗ'ಎನಿಸುತ್ತದೆ.

ಅನುಭೋಗದಲ್ಲಿ ಕೆಲವು ವಸ್ತುಗಳು ಮೊದಲ ಬಳಕೆಗೆ ನಾಶವಾದರೆ(ಉದಾಹರಣೆಗೆ ಹಣ್ಣು, ಆಹಾರ, ಸಿಗರೇಟು ಇತ್ಯಾದಿ). ಇನ್ನೂ ಕೆಲವು ವಸ್ತುಗಳು ಬಹುಕಾಲದವರೆಗೆ ಬಾಳಿಕೆ ಬರುತ್ತವೆ ಮತ್ತು ದೀರ್ಘಕಾಲ ಅವುಗಳನ್ನು ಬಳಸಬಹುದು(ಉದಾಹರಣೆಗೆ ಪುಸ್ತಕ, ಬಟ್ಟೆ, ಕುರ್ಚಿ, ಮನೆ ಇತ್ಯಾದಿ). ಆದರೆ ಮಾನವನ ಬಯಕೆಯು ತೃಪ್ತಿಯಾಗದೆ, ಒಂದು ವಸ್ತುವಿನ ತುಷ್ಟಿಗುಣ ನಾಶವಾದರೆ ಅದು ಅನುಭೊಗವೆನಿಸುವುದಿಲ್ಲ.

ಅನುಭೊಗದ ಪ್ರಕಾರಗಳು(Types of Consumption): ಅನುಭೋಗದಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳುಂಟು. ಅವುಗಳು ಈ ಕೆಳಗಿನಂತಿವೆ.

೧. ನೇರ(ಪ್ರತ್ಯಕ್ಷ) ಅನುಭೋಗ(Direct consuption): ಯಾವುದೊಂದು ವಸ್ತುವನ್ನು ಉಪಯೋಗಿಸುವುದರಿಂದ ನಮಗೆ ನೇರವಾಗಿ ತೃಪ್ತಿ ಲಭಿಸಿದರೆ, ಅದು 'ನೇರ ಅನುಭೊಗ' ವಾಗುತ್ತದೆ. ಆಹಾರ ಸೇವನೆ, ಚಹಾ, ಕಾಫಿ, ಹಾಲು, ಕುಡಿಯುವುದು, ಬೀಡಿ ಸಿಗರೇಟ್ ಸೇದುವುದು, ಪಾನ್ ತಿನ್ನುವುದು ಮುಂತಾದವು ನೇರ ಅಥವಾ ಪ್ರತ್ಯಕ್ಷ ಅನುಭೋಗದ ಉದಾಹರಣೆಗಳಾಗಿವೆ. ಅಂತಿಮ ಬಳಕೆಯ ಸಿದ್ದವಸ್ತುಗಳನ್ನೇ ಉಪಯೋಗಿಸುವುದರಿಂದ ಅನುಭೋಗಿಗೆ ನೇರವಾದ ತೃಪ್ತಿ ದೊರೆಯುತ್ತದೆ. ಇದನ್ನೇ ನಾವು ನೇರ ಅನುಭೋಗ ಅಥವಾ ಅಂತಿಮ ಅನುಭೋಗ (Final Consumption)ಎಂದು ಕರೆಯುತ್ತೇವೆ.

೨. ಪರೋಕ್ಷ ಅನುಭೋಗ(Indirect consumption): ಯಾವುದೊಂದು ವಸ್ತುವಿನಿಂದ ತೃಪ್ತಿಯು ನೇರವಾಗಿ ಸಿಗದೆ ಪರೋಕ್ಷವಾಗಿ ಸಿಕ್ಕರೆ ಅದು 'ಪರೋಕ್ಷ ಅನುಭೋಗ' ಎಂದು ಕರೆಯಲಾಗುತ್ತದೆ. ಉದಾಹರಣೆಗೆ ಹೊಲಿಗೆ ಯಂತ್ರ, ಮುದ್ರಣಯಂತ್ರ ಮುಂತಾದವುಗಳು. ಹೊಲಿಗೆ ಯಂತ್ರವು ನೇರವಾದ ತೃಪ್ತಿ ಕೊಡುವುದಿಲ್ಲ. ಆದರೆ ಅದರಿಂದ ಹೊಲಿದ ಬಟ್ಟೆಗಳು ಪ್ರತ್ಯಕ್ಷ ಅಥವಾ ನೇರವಾದ ತೃಪ್ತಿಯನ್ನು ಕೊಡುತ್ತದೆ. ಅಂತೆಯೇ ಮುದ್ರಣ ಯಂತ್ರದಿಂದ ಪುಸ್ತಕ ಹೊರಬಂದರೆ ಅದು ನಮಗೆ ನೇರವಾದ ತೃಪ್ತಿಯನ್ನು ಒದಗಿಸುತ್ತದೆ.

೩. ನಿಷ್ಪ್ರಯೋಜಕ ಅನುಭೋಗ(Distructive consumption): ಬಯಕೆಯನ್ನು ತೃಪ್ತಿಪಡಿಸದೆ ಸರಕು-ಸೇವೆಗಳ ತುಷ್ಟಿಗುಣವು ನಾಶವಾದರೆ, ಯಾವ ಪ್ರಯೋಜನಕ್ಕೂ ಬಾರದೆ ಇದ್ದರೆ ಅದನ್ನು ನಿಷ್ಪ್ರಯೋಜಕ ಅನುಭೋಗವೆನ್ನುತ್ತೇವೆ. ಯಾವುದೇ ಒಂದು ವಸ್ತುವು ಕೊಳೆತು ಹೋಗುವುದರಿಂದ ಅಥವಾ ಬೆಂಕಿಯಿಂದ ನಾಶವಾಗುವುದರಿಂದ ಇಂತಹ ಅನುಭೋಗ ಸಂಭವಿಸುತ್ತದೆ. ಒಂದು ದೃಷ್ಟಿಯಿಂದ ಇದು ಅನುಭೋಗವೇ ಆಗಲಾರದು. ಇಂತಹ ನಷ್ಟದಿಂದ ಮಾನವನ ಬಯಕೆ ಈಡೇರುವುದಿಲ್ಲ(ಗುರುಬಸಪ್ಪ ಟಿ.ಆರ್. ಮತ್ತು ಮಲ್ಲೇಶಪ್ಪ ಕುಂಬಾರ, ಸೂಕ್ಷ್ಮ ಅರ್ಥಶಾಸ್ತ್ರ, ಭಾಗ ೧, ೨೦೧೩, ಪು.೮೪-೮೫).

ಸಮಾರೋಪ: ಕನ್ನಡ ಮಾಧ್ಯಮದಲ್ಲಿ ರೂಪಿಸಲಾದ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳಲ್ಲಿ ಉಪಭೋಗಕ್ಕೆ ಸಂಬಂಧಿಸಿದಂತೆ ಹೇಗೆ ರೂಪಿತಗೊಂಡಿವೆ. ಎಂಬುದನ್ನು ಕುರಿತು ಇಲ್ಲಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಪದವಿಪೂರ್ವ ಹಂತದ ತರಗತಿಗಳಲ್ಲಿ ಮತ್ತು ಪದವಿ ಹಂತದ ತರಗತಿಗಳ ಪಠ್ಯಪುಸ್ತಕಗಳಲ್ಲಿ ರ್‍ಯಾಂಡಂ ರೂಪದಲ್ಲಿ ಆಯ್ಕೆ ಮಾಡಿದ ಪಠ್ಯ ಸಾಮಗ್ರಿಗಳಲ್ಲಿ ಭಾಷೆ, ವಿವರಣೆ, ಪರಿಭಾಷಿಕ ಪದ ಪ್ರಯೋಗ ಬಳಸಿದ ದೃಷ್ಟಾಂತ, ಉದಾಹರಣೆ, ಭಾಷೆಯ ಸಂವಹನ ರೀತಿ ಈ ಮೊದಲಾದ ಅಂಶಗಳನ್ನು ಸ್ಯಾಂಪಲ್‌ಗಾಗಿ ಪರಿಶೀಲಿಸುವ ಸಣ್ಣ ಪ್ರಯತ್ನವಿದ್ದು ಈಗ ಅವುಗಳನ್ನು ಒಂದೊಂದಾಗಿ ಅಧ್ಯಯನ ಮಾಡೋಣ.

೧. "ಅನುಭೋಗ: .........ಅದು ಉಪಭೋಗ ಎನಿಸಿಕೊಳ್ಳುತ್ತದೆ" ಎಂಬುದಾಗಿ ಎಂ.ಎಸ್.ಬಾದಾಮಿ ಇವರು ಅರ್ಥಶಾಸ್ತ್ರ ೧೯೬೬: ೩೧-೩೩ರಲ್ಲಿ ಭಾಷಾಂತರಿಸಿದ್ದಾರೆ. ಅನುಭೋಗವನ್ನು ಉಪಯೋಘವೆಂಬ ಸಮನಾರ್ಥಕ ಬಳಸಿದ ಇವರು ಮೂರು ವಿಧದ ಉಪಭೋಗವನ್ನು ದೃಷ್ಟಾಂತಗಳೊಂದಿಗೆ ಮಾಹಿತಿಯುಳ್ಳ ಅನುವಾದ ನೀಡಿದ್ದಾರೆ.

೨. "ಅನುಭೋಗ: ಪ್ರತಿ ವ್ಯವಸ್ಥೆಯ ಗುರಿಯಾಗಿದೆ" ಎಂಬ ಭಾಷಾಂತರವನ್ನು ಜಿ.ಎನ್.ಕೆಂಪಯ್ಯನವರು ಮೂಲ ಆರ್ಥಿಕ ಸಿದ್ಧಾಂತ ೨೦೦೪, ೨೦೦೬, ೬೦-೬೧ರಲ್ಲಿ ದಾಖಲಿಸಿದ್ದಾರೆ. ಅನುಭೋಗದ ಅರ್ಥದೊಂದಿಗೆ ಅದರ ಬಿಂಬಕವನ್ನು ಗಣಿತಿಯ ಮೂಲಕ ಅನುವಾದಿಸಿದ್ದಾರೆ. ಅನುಭೋಗವು ಉತ್ಪಾದನೆಗಳಂಥ ಚಟುವಟಿಕೆಗಳಿಗೆ ಮೂಲ ಎಂಬುದನ್ನು ಸೂಕ್ತ ಚಿಹ್ನೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಇವರು ಅನುಭೋಗದಲ್ಲಿ ಎರಡು ವಿಧಗಳೆಂಬುದನ್ನು ಸಂಕ್ಷಿಪ್ತವಾಗಿ ಉದಾಹರಣೆ ಮೂಲಕ ಭಾಷಾಂತರಿಸಿರುತ್ತಾರೆ.

೩. "ಅನುಭೋಗ ಮತ್ತು ಬೇಡಿಕೆ: ಉಪಭೋಗ ಎಂಬುದೇ ಇರುವುದಿಲ್ಲ" ಎಂಬ ವಿಚಾರವನ್ನು ೧೯೭೧: ೩೭-೩೯ರಲ್ಲಿ ಟಿ.ಕೆ.ಮೇಟಿ, ಸಿ.ಬಿ.ಚಂದ್ರಶೇಖರಪ್ಪ, ಸಿ.ಎಸ್.ಕಡ್ಡಿಪುಡಿ, ಎನ್.ಎಸ್.ಹಿರೇಮಠ, ಕೆ.ಆರ್.ಮಡಿ ಇವರೆಲ್ಲ ಸೇರಿ ಅರ್ಥಶಾಸ್ತ್ರ: ತತ್ವ ನಿರೂಪಣೆ ಎಂಬ ಪಠ್ಯ ಪುಸ್ತಕದಲ್ಲಿ ಭಾಷಾಂತರಿಸಿದ್ದಾರೆ. ಈ ಪಠ್ಯದಲ್ಲಿ ಉಪಭೋಗದ ಅರ್ಥ, ಪ್ರಕಾರ, ಉಪಭೋಗ ಮತ್ತು ಉತ್ಪಾದನೆ ಹಾಗೂ ಉಪಭೋಗದ ಮಹತ್ವ ಎಂಬ ಅಂಶಗಳು ಅಡಕವಾಗಿರುತ್ತವೆ. ಪದವಿ ಹಂತದ ಈ ಪಠ್ಯವು ವಿಸ್ತಾರ ಸಾಮಗ್ರಿ ಹೊಂದಿದೆ. ಎರಡು ವಿಧ ಹೇಳುವುದರ ಜೊತೆಗೆ ನಿರರ್ಥಕ ಉಪಭೋಗದ ಬಗ್ಗೆ ಮಾಹಿತಿ ಪೂರೈಸಿದರೂ ಅದು 'ಒಂದು ವಿಧ' ಎಂಬುದಾಗಿ ಹೇಳಿರುವುದಿಲ್ಲ. ಅದು ಉಪಭೋಗವೇ ಅಲ್ಲ ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ. ಭಾಷೆಯು ಸಂಹಾರ, ನಿಜಕ್ಕೂ ತ್ವರಿತವಾಗಿ, ಸಾವಕಾಶವಾಗಿ, ಪುಕ್ಕಟೆಯಾಗಿ, ಹಣ ತೆರಬೇಕು. ಉದಾಹರಣಾರ್ಥವಾಗಿ ದುಡ್ಡು, ಫಲಹಾರ, ಇಂತವೆ ಹಲವು ಪದಗಳು ಭಾಷಾಂತರಗೊಂಡಿರುವುದನ್ನು ಗುರುತಿಸ ಬಹುದಾಗಿದೆ.

೪. "ಅನುಭೋಗಿಯ ವರ್ತನೆ: ಬಯಕೆ ಇದೇ ಇರುವುದಿಲ್ಲ" ಎಂಬುದಾಗಿ ಟಿ.ಆರ್.ಗುರುಬಸಪ್ಪ ಮತ್ತು ಮಲ್ಲೇಶ್ವರಪ್ಪ ಕುಂಬಾರ ಇವರು ಸೂಕ್ಷ್ಮ ಅರ್ಥಶಾಸ್ತ್ರ, ಭಾಗ ೧ರ ೨೦೧೩: ೮೪-೮೬ರಲ್ಲಿ ಭಾಷಾಂತರಿಸಿದ್ದಾರೆ. ಅನುಭೋಗದ ಅರ್ಥವನ್ನು ತಿಳಿಸುವಲ್ಲಿ ಪೀಠಿಕಾ ಭಾಗವೂ ಸೇರಿಕೊಂಡಿದೆ. ಅನುಭೋಗದ ಪ್ರಕಾರಗಳಲ್ಲಿ ಮೂರು ಎಂಬುದಾಗಿ ಭಾಷಾಂತರಿಸಿದ್ದಾರೆ. ಇವರು ನಿಷ್ಪ್ರಯೋಜಕವಾಗುವ ವಿವಿಧ ಸಂದರ್ಭಗಳನ್ನು ಹೇಳುತ್ತಾ ಅದನ್ನು ಒಂದು ಪ್ರತ್ಯೇಕ 'ವಿಧ' ಎಂದು ಸೂಚಿಸಿದ್ದಾರೆ. ಅನುಭೋಗದ ಮಹತ್ವವನ್ನು ವಿವಿಧ ಚಟುವಟಿಕೆಗಳಿಗೆ ಇರುವ ಸಂಬಂಧವನ್ನು ವಿವರಿಸಲು ಪ್ರಯತ್ನಿಸಿರುವುದನ್ನು ಗುರುತಿಸಬಹುದು. ಅನುಭೋಗಿ ಮತ್ತು ಅವನ ವರ್ತನೆ ಎಂಬ ಅಂಶದಡಿಯಲ್ಲಿ ಮೂರು ರಿತಿಯ ನಿರ್ಣಯಗಳ ಪಾತ್ರವನ್ನು ಪೂರೈಸುವ ಮಾಹಿತಿ ಇತರ ಭಾಷಾಂತರಗಳಲ್ಲಿ ಲಭ್ಯವಿಲ್ಲ. ಇದು ವಿಶೇಷವಾದ ಭಾಷಾಂತರದ ಪಠ್ಯವಾಗಿದೆ.

### ೩.೩. ಹಣ

ಇಂದಿನ ಜ್ಞಾನ ಪ್ರಸಾರ ಕನ್ನಡ ಮಾಧ್ಯಮವಾಗಿರುವುದರಿಂದ ಅರ್ಥಶಾಸ್ತ್ರದ ತತ್ವಗಳು, ರೂಪರೇಷೆಗಳು, ಪ್ರಚಲಿತ ಆರ್ಥಿಕ ಸಮಸ್ಯೆ ಮತ್ತು ಆರ್ಥಿಕ ಧೋರಣೆಗಳನ್ನು ನಿರ್ದಿಷ್ಟವಾಗಿ, ನಿಖರವಾಗಿ, ಸುಲಭ ಗ್ರಾಹ್ಯವಾಗಿ ಕನ್ನಡದ ಜನಭಾಷೆಯಲ್ಲಿ ರಚಿಸಿದಾಗ ಸರ್ವರಿಗೂ, ಮನದಟ್ಟಾಗುತ್ತದೆ" ಎಂಬುದು ಎಸ್.ಮರುಳಸಿದ್ದಪ್ಪ(ಅರ್ಥಶಾಸ್ತ್ರದ ಮೂಲಾಂಶಗಳು, ೧೯೮೨, ಪು.೫). ಅವರ ನಿವೇದನೆಯಾಗಿದೆ. ಈಗ ಹಣ(Money)ಕ್ಕೆ ಸಂಬಂಧಿಸಿದಂತೆ ವಿವಿಧ ಭಾಷಾಂತರಕಾರರ ಪಠ್ಯಗಳನ್ನು ಪರಿಶೀಲಿಸೋಣ.

೧. "ಹಣ ಪ್ರಪಂಚ: ಹಣವಿಲ್ಲದಿದ್ದರೆ ವಿನಿಮಯವು ಅದಲಾ ಬದಲಿಯಿಂದ ಸಾಗಬೇಕು. ಹತ್ತು ಖಂಡಿ ಅಡಿಕೆಗೆ ಮೂವತ್ತು ಖಂಡಿ ಭತ್ತ ಸಿಗುವುದಾದರೆ, ಅಡಿಕೆಯ ಧಾರಣೆ ಖಂಡಿಗೆ ಮೂರು ಖಂಡಿ ಭತ್ತ ಎಂದು ಲೆಕ್ಕ-ಅದಲಾಬದಲಿಯನ್ನೇ ನಂಬಿಕೊಂಡಿರುವ ಸಮಾಜದಲ್ಲಿ ಒಬ್ಬನ ಕೈಯಲ್ಲಿ ಎರಡು ಸೇರು ಅಕ್ಕಿ ಇದ್ದು ಅವನು ಅದನ್ನು ಮಡಬೇಕಾದರೆ ಅಕ್ಕಿ ಬೇಕಾದವನು ಒಬ್ಬಾತ ಬೇರೆ ಇರಲೇಬೇಕು. ಅಕ್ಕಿ ಮಾರುವವನಿಗೆ ಅಕ್ಕಿ ಕೊಳ್ಳುವವನು ಕೊಡುವ ಎಣ್ಣೆಯ ಮೇಲೋ, ಕಲ್ಲಿನ ಮೇಲೋ ಕಾಯಸ ಇರಬೇಕಾದೀತು. ಅದಲಾ ಬದಲಿ ನಡೆಯುವಾಗ ಎರಡು ಸರಕುಗಳ ಮೌಲ್ಯವನ್ನು ಅಳೆಯುವ ಸಮಾನ ಮಾನದಂಡವು ಇರುವುದಿಲ್ಲ. ಮನುಷ್ಯನ ಆರ್ಥಿಕ ಸಮಾಜದಲ್ಲಿ ಸುಧಾರಣೆಯುಂಟಾದ ಹಾಗೆ ವಿನಿಮಯವಾಗುವ ಸರಕುಗಳಲ್ಲದೆ ಮೂರನೆಯ ಒಂದು ಸರಕನ್ನು ಆರ್ಯಾವರ್ತದಲ್ಲಿ ಗೋವುಗಳನ್ನು ಅಳತೆಗೋಲಾಗಿ ಇರಿಸಿಕೊಳ್ಳುವುದು ರೂಢಿಯಾಗುವುದು. ಚಿಕ್ಕ ಚಿಕ್ಕ ಅಂಶಗಳನ್ನು ವಿನಿಮಯ ಮಾಡಿಕೊಳ್ಳುವಾಗ ಗೋವಿನಷ್ಟು ದೊಡ್ಡ ಮಾನದಂಡದಿಂದ

ಉಪಯೋಗವಿಲ್ಲ. ಮಾನದಂಡವು ಚಿಕ್ಕದಾಗಿ ವಿಭಜಿಸಲು ಬರಬೇಕೆಂದಿದ್ದರೆ ಹಣವೇ ಅದ್ಕೆ ಸರಿ ಎನಿಸಿದ ವಸ್ತು. ೧೯೫೨ರಲ್ಲಿ 'ಏನಿದು ಅರ್ಥಶಾಸ್ತ್ರ'ದ ಕೃತಿಯಲ್ಲಿ ಕು.ಶಿ.ಹರಿದಾಸ ಭಟ್ಟರು 'ಹಣ ಪ್ರಪಂಚ' ಎಂಬ(ಪು.೧೯೧) ಅಧ್ಯಾಯದಲ್ಲಿ ಅನುವಾದಿಸಿದ್ದಾರೆ. ಇದರ ಸಾರಾಂಶ 'ಹಣ' ವ್ಯವಹಾರಕ್ಕಾಗಿ ಬೇಕೆ ಬೇಕೆಂಬುದು. ಹಣದ ಬಳಕೆ ಇಲ್ಲದಿದ್ದರೆ ವಿನಿಮಯದ ಸಂದರ್ಭವನ್ನು ಸೂಕ್ತ ದೃಷ್ಟಾಂತಗಳಿಂದ ವಿವರಿಸಿದ್ದಾರೆ. ಅಳತೆಯ ಮಾನ 'ಖಂಡಿ' ಪ್ರಾದೇಶಿಕ ಪದವಾಗಿದೆ. ಮೈಸೂರು ಪ್ರದೇಶದ ಜನಸಮುದಾಯಕ್ಕೆ ಈ ಪದ ಸುಲಭವಾಗಿ ಅರ್ಥವಾಗಬಹುದು. ಆದರೆ ಈ 'ಪದ ಬಳಕೆ ಇಲ್ಲ'ದ ಪ್ರದೇಶದಲ್ಲಿ ಕನ್ನಡ ಬಳಕೆಯಲ್ಲಿದ್ದರೂ ಸಹ ಈ ಪದವು ಅರ್ಥವಾಗುವುದಿಲ್ಲ. ಆದ್ದರಿಂದ ಭಾಷಾಂತರಕಾರರು ರಾಜ್ಯವ್ಯಾಪ್ತಿ ಬಳಸುವ ಕನ್ನಡ ಪದವನ್ನೇ ಬಳಸಿದರೆ ಅವರ ಶ್ರಮ ಸಾರ್ಥಕ್ಕೆ ಪಡೆಯುವಲ್ಲಿ ಯಾವ ಅನುಮಾನವಿಲ್ಲ. ಅಗತ್ಯವಿದ್ದ ಕಡೆಗೆ ಆವರಣದಲ್ಲಿ ಇಂಗ್ಲಿಷ ಪದ ಬಳಸಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು.

೨. "ಈಗ ಬಹಳ ದಿನಗಳ ಹಿಂದಿನ ಮಾತು. ಒಂದು ಗ್ರಾಮದಲ್ಲಿ ಕೆಲವರು ಧಾನ್ಯಗಳನ್ನು, ಕೆಲವರು ಹತ್ತಿಯನ್ನು ಬೆಳೆಯುತ್ತಿದ್ದರು. ಕೆಲವರು ಬಟ್ಟೆಗಳನ್ನು, ಕೆಲವರು ಪಾತ್ರೆಗಳನ್ನು ತಯಾರಿಸುತ್ತಿದ್ದರು, ಇತ್ಯಾದಿ. ಆ ಎಲ್ಲರೂ ಆ ವಸ್ತುಗಳನ್ನು ಪರಸ್ಪರ ವಿನಿಮಯ(ಕೊಡುವುದು, ಕೊಳ್ಳುವುದು) ಮಾಡಿ ಕೊಳ್ಳುತ್ತಿದ್ದರು. ಆ ಜನ ಜೀವನವು ಗ್ರಾಮ ಸಮಾಜವಾಗಿತ್ತು. ಆ ಜನರಿಗೆ ವಿಶಾಲವಾದ ಭೂಮಿಯ ಮೇಲೆ ಇತರ ಕಡೆಯಲ್ಲಿ ಇರುತ್ತಿದ್ದ ಜನರ ಪರಿಚಯ-ಸಹಕಾರ-ವಸ್ತುಜ್ಞಾನ ಬಳಕೆಗಳಲ್ಲಿ ವೈವಿಧ್ಯತೆಯಾಗಲೀ, ವಿಪುಲತೆಯಾಗಲೀ ಇದ್ದಿರಲಿಲ್ಲ. ಆ ಜನರಿಗೆ ಹಣದ ಅವಶ್ಯಕತೆಯೇ ಇದ್ದಿರಲಿಲ್ಲ. ಆದರೂ ಇಂಥ ಕಾಲದ ಜನರಿಗೂ 'ಹಣ'ವನ್ನು ದರ ಕಲ್ಪನೆ ಇತ್ತು. ಕನಿಷ್ಕ, ಮೌರ್ಯ, ಗುಪ್ತ ಇತ್ಯಾದಿ ಪ್ರಾಚೀನ ಕಾಲದ ಅರಸರ ರಾಜ ಮುದ್ರೆಯುಳ್ಳ ನಾಣ್ಯಗಳು ಇಂದಿಗೂ ನೋಡಲಿಕ್ಕೆ ಸಿಗುತ್ತವೆ(ಹಿಂದಿನ ಕಾಲದಲ್ಲಿ ಕವಡಿಗಳನ್ನು ನಾಣ್ಯದಂತೆಯೂ ಗುಲಗಂಜೀ ಬೀಜಗಳನ್ನು ತೂಕ ಪ್ರಮಾಣದಂತೆಯೂ ಬಳಸುತ್ತಿದ್ದರೆಂಬುದು ಪ್ರಸಿದ್ಧವಿದೆ). ಆದರೆ ಆಗಿನ ಕಾಲದ ಜನರ ಹಣದ ವ್ಯವಹಾರಕ್ಕೂ ಈಗಿನ ಕಾಲದ ಜನರ ಹಣದ ವ್ಯವಹಾರಕ್ಕೂ ಬಹಳಷ್ಟು ಅಂತರವಿದೆ. ಹಿಂದಿನ ಕಾಲಕ್ಕೆ ರಾಜರು ತಮ್ಮ ಕೀರ್ತಿಯನ್ನು ಮೆರೆಸಲಿಕ್ಕೆ ಅಥವಾ ವೈಯಕ್ತಿಕ ಅನುಕೂಲತೆಗಾಗಿ ಜನಪ್ರಿಯ, ಬಹುಬಲೆಯ(ಚಿನ್ನದ) ಲೋಹದ ತುಂಡುಗಳ ಮೇಲೆ ತಮ್ಮ ಮುದ್ರೆಯನ್ನು ಹಾಕಿ ತಮ್ಮ ಪ್ರಜೆಗಳಲ್ಲಿ ಹಂಚುತ್ತಿದ್ದರು. ಬಂಗಾರದ ಆಕರ್ಷಣೆಯಿಂದ ಜನರು ಅವುಗಳನ್ನು ಉಪಯೋಗಿಸುತ್ತಿದ್ದರು. ಕೆಲವು ಸಲ ತೊಗಲಿನ, ಕಲ್ಲಿನ ಚೂರುಗಳಿಗೂ ಹೀಗೆ ಮುದ್ರೆಯನ್ನು ಹಾಕಿ 'ಹಣ'ವೆಂದು ಹಂಚಿದ ಕಥೆಗಳೂ ಇತಿಹಾಸದಲ್ಲಿವೆ. ಇಂಥ ಹಣವು ಕೇವಲ ಆ ರಾಜನಿಗೆ ಜನರು ಮನ್ನಣೆಯನ್ನು ಕೊಟ್ಟಿದ್ದರ ದ್ಯೋತಕವೆನಿಸುತ್ತಿತ್ತು. ಇದಕ್ಕಿಂದ ಬೇರೊಂದು ಆಧಾರವು ಆಗಿನ ಕಾಲದ ಹಣದ ವ್ಯವಹಾರಕ್ಕೆ ಇದ್ದಿರಲಿಲ್ಲ." ೧೯೬೦ರಲ್ಲಿ ಕೃ.ಪ.ಜೋಶಿಯವರು

ಈಗನ 'ಅರ್ಥಶಾಸ್ತ್ರ ಪರಿಶೀಲನೆ'ಯ ಪು.೧-೨ರಲ್ಲಿ ಈ ಭಾಷಾಂತರವನ್ನು ಮಾಡಿರುತ್ತಾರೆ. ಈ ಗ್ರಂಥವನ್ನು ನಿವೃತ್ತ ಪ್ರಿನ್ಸಿಪಾಲರಾದ ಕೆ.ಜಿ.ಕುರ್ತ್ಯಕೋಟಿ, ಧಾರವಾಡ ಇವರು ಪ್ರಕಾಶಿಸಿರುತ್ತಾರೆ. ಇವರು 'ವಸ್ತುವಿನಿಮಯ ಪದ್ಧತಿ' ಕುರಿತು ನೇರವಾಗಿ ಹೇಳದಿದ್ದರೂ ಸಹ ಆ ಹಿನ್ನೆಲೆಯಲ್ಲಿ ವಿಷಯವನ್ನು ಚರ್ಚಿಸಿರುವುದನ್ನು ಗಮನಿಸಬಹುದಾಗಿದೆ. ಅಂದಿನ ಸಮಾಜದ ಸ್ವರೂಪ ಮತ್ತು ಅದರ ಮಿತಿಗಳನ್ನು ಸಹಕಾರ ತತ್ವದಡಿ ಹೇಗೆ ಸಾಮರಸ್ಯದಿಂದ ಇದ್ದವು ಎಂಬುದರ ಔಚಿತ್ಯವರಿತು ಮಾಹಿತಿ ನೀಡಿದ್ದಾರೆ. ಅಂದಿನ ಜನರ ಸರಕು-ಸೇವೆಗಳ ಬಗೆಗಿನ ಜ್ಞಾನದ ಮಿತಿಗಳನ್ನು ಹೇಳಿರುವುದು ಪ್ರಮುಖವಾಗಿದೆ. ಆದರೆ ಅವರು ಸರಕುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರೆಂದರೆ ಅವರಿಗೆ 'ಹಣ'ದ ಕಲ್ಪನೆ ಇತ್ತೆಂಬುದನ್ನು ಅನುವಾದಕರು ಗುರುತಿಸಿದ್ದಾರೆ. ವಿವಿಧ ಕಾಲಘಟ್ಟಗಳಲ್ಲಿ ಆಡಳಿತ ಮಾಡಿದ ರಾಜ ಮನೆತನಗಳು 'ಹಣ'ವೆಂದು ಸೂಚಿಸಿದ ವೈವಿಧ್ಯಮಯ ವಸ್ತುಗಳ ಪಟ್ಟಿ ಸಹಿತ ನೀಡಿರುವುದರಿಂದ ಆಧುನಿಕ 'ಹಣದ ಶೋಧ'ಕ್ಕೆ ಅವಕಾಶಗಳು ಅಧಿಕವಾಗುತ್ತ ಒಂದು ಮೂರ್ತಸ್ವರೂಪ ಪಡೆಯಲು ಸಾಧ್ಯವಾಗಿದೆ. ಹಣದ ಶೋಧನೆ ಸದಾಕಾಲ ನಡೆಯುತ್ತಿರುವ ಒಂದು ಪ್ರಕ್ರಿಯೆ ಎಂಬುದನ್ನು ಜೋಶಿಯವರು ಸರಿಯಗಿ ಗುರುತಿಸಿದ್ದಾರೆನ್ನಬಹುದು. ಪ್ರಾಚೀನ ಕಾಲದ 'ಹಣದ ಪರಿಕಲ್ಪನೆ'ಗೂ ಆಧುನಿಕ 'ಹಣದ ಪರಿಕಲ್ಪನೆ'ಗೂ ತುಂಬಾ ಅಂತರವಿರುವುದನ್ನು ಸ್ವತಃ ಭಾಷಾಂತರಕಾರರೇ ಒಪ್ಪಿಕೊಂಡಿರುವರು. ಪ್ರಾಚೀನ ಕಾಲದ ಜನರ ಬೌದ್ಧಿಕ ಮಿತಿಯನ್ನು, ಆಲೋಚನಾ ವಿಧಾನವನ್ನು ಹೇಳುವ ಸಂದರ್ಭದಲ್ಲಿ ಪ್ರಶ್ನಿಸುವ/ಪ್ರತಿಭಟಿಸುವ ಸೂಚನೆಗಳಿಲ್ಲದಿರುವ ಸ್ಥಿತಿಯನ್ನು ಅನುವಾದರ ಹೇಳಿಕೆಗಳಲ್ಲಿ ಗುರುತಿಸಲು ಅವಕಾಶವಿದೆ.

೩. "ಹಣ: ಹಣದ ಬಳಕೆಯ ಪೂರ್ವದಲ್ಲಿನ ಸ್ಥಿತಿ: ಮೊದಲು ವಸ್ತುವಿನಿಮಯ ಪದ್ಧತಿ ಮತ್ತು(Barter system). ಜನರು ಆಗ, ತಮ್ಮ ವ್ಯವಹಾರಗಳಿಗೆ ಹಣದ ಮಾಧ್ಯಮವನ್ನು ಬಳಸುತ್ತಿರಲಿಲ್ಲ. ಆಗ ವಸ್ತು ಬದಲವಣೆಯು ನಡೆಯುತ್ತಿತ್ತು. ಗ್ರಾಹಕ ವಸ್ತುಗಳ ಕೊಡುಕೊಳ್ಳುವಿಕೆ ನಡೆಯುತ್ತಿದ್ದವು. ಸಮಾಜವು ಚಿಕ್ಕದಾಗಿದ್ದುದರಿಂದ ಮತ್ತು ಮಾನವನ ಬೇಕುಗಳು ಅಲ್ಪವಾದುದರಿಂದ, ಒಂದೊಂದು ಹಳ್ಳಿಯೂ ಸ್ವಯಂ ಪೂರ್ಣವಾಗಿದ್ದುದರಿಂದ ಈ ವಸ್ತುವಿನಿಮಯ (Barter) ಪದ್ಧತಿ ಸುಗಮವಾಗಿತ್ತು. ಆದರೆ ಸಮಾಜವು ಬೆಳೆಯುತ್ತ ನಡೆದಂತೆ, ಹಳ್ಳಿ ಹಳ್ಳಿಗಳಿಗೆ ಸಂಪರ್ಕವುಂಟಾಗಿ, ಮಾನವನ ಬೇಡಿಕೆಗಳು ಹೆಚ್ಚಾಗುತ್ತಾ ನಡೆದಂತೆ, ಈ ಪದ್ಧತಿಯಲ್ಲಿ ಅಡೆತಡೆಯುಂಟಾಗ ಹತ್ತಿತ್ತು. ಇದರ ನ್ಯೂನತೆಗಳು ಕಂಡುಬರತೊಡಗಿದವು. ಬೇರೆ ಬೇರೆ ದೇಶಗಳಲ್ಲಿ, ಬೇರೆ ಬೇರೆ ವಸ್ತುಗಳನ್ನು ಹಣವೆಂದು ಸ್ವೀಕರಿಸಲಾಯಿತು. ಉದಾ: ಅಬಿಸೀನಿಯಾದಲ್ಲಿ ಉಪ್ಪು, ವ್ಹರ್ಜಿನೀಯಾದಲ್ಲಿ ತಂಬಾಕು, ವೆಸ್ಟ ಇಂಡೀಜದಲ್ಲಿ ಸಕ್ಕರೆ, ಚೀನದಲ್ಲಿ ಚಹ, ಜಪಾನದಲ್ಲಿ ಅಕ್ಕಿ, ಭಾರತದಲ್ಲಿ ಆಕಳು ಇವು ಧನವೆಂದು ಸ್ವೀಕರಿಸಲ್ಪಡುತ್ತಿದ್ದವು" ಎಂಬುದಾಗಿ ೧೯೬೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

ಇವರು ಕನ್ನಡ ಪಠ್ಯಪುಸ್ತಕ ಮಾಲೆ-೪, ಅರ್ಥಶಾಸ್ತ್ರ ಪರಿಚಯ ಪು.೧೩೯-೧೪೦ರಲ್ಲಿ ಅನುವಾದಿಸಲಾಗಿದೆ. ಈ ಅನುವಾದವನ್ನು ಎಸ್.ಜಿ.ಕರಭಂಟವಾಳ, ಬಿ.ಬಿ.ಕಣವಿ, ವಾಯ್.ಎಲ್.ಇನಾಮದಾರ, ಬಿ.ರಾಮಾಚಾರ ಮತ್ತು ಎಚ್.ಆರ್.ಸಾಖರೆಯವರು ಮಾಡಿರುತ್ತಾರೆ. ಇವರು 'ಹಣದ ಮಾಧ್ಯಮವನ್ನು ಬಳಸುತ್ತಿರಲಿಲ್ಲ' ಎಂಬುದನ್ನು ಸ್ಪಷ್ಟವಾಗಿ ದಾಖಲಿಸಿರುತ್ತಾರೆ. ಇವರೆ ಅನುವಾದಿಸಿದ 'ಅರ್ಥಶಾಸ್ತ್ರ ಪರಿಚಯ' ೧೯೭೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಪಠ್ಯಪುಸ್ತಕದಲ್ಲಿ, ಪು.೨೨೭-೨೨೮ರಲ್ಲಿ ಅದೇ ರೀತಿ ಇದೆ). ಅಲ್ಲದೆ ಮಾನವನ 'ಬೇಕು'ಗಳ ಮತ್ತು 'ಬಯಕೆ'ಗಳ ಪದಗಳನ್ನು ಉಪಯೋಗಿಸಿರುವುದು ಭಾಷಾಂತರದ ಭಾಷೆ ಮತ್ತು ಅರ್ಥಶಾಸ್ತ್ರದಲ್ಲಿನ ಬೆಳವಣಿಗೆಯನ್ನು ಗಮನಿಸಲು ಅವಕಾಶವಿದೆ. ವಸ್ತು ವಿನಿಮಯ ಪದ್ಧತಿ ಚಲಾವಣೆಯಲ್ಲಿದ್ದ ಸಂದರ್ಭದಲ್ಲಿ ಯಾವ ಯಾವ ದೇಶಗಳಲ್ಲಿ ವಿನಿಮಯದ ಮಾಧ್ಯಮವನ್ನಾಗಿ ಯಾವ ವಸ್ತುವನ್ನು ಪರಿಗಣಿಸಲಾಗುತ್ತಿತ್ತು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ. ಆಯಾ ದೇಶಗಳಲ್ಲಿ 'ಆ ವಸ್ತು'ವನ್ನೆ ಏಕೆ ವಿನಿಮಯದ ಮಾಧ್ಯಮವಾಗಿ ಆಯ್ಕೆ ಮಾಡಿಕೊಂಡಿರಬೇಕೆಂಬ ವಿಚಾರದ ಮೇಲೆ ಬೆಳಕು ಚೆಲ್ಲುವುದರಿಂದ ಹೆಚ್ಚಿನ ಅಧ್ಯಯನಕ್ಕೆ ಅವಕಾಶವಿದೆ.

೪. "Money supply–ಹಣದ ಪೂರೈಕೆ: ಹಣದ ಆವಿಷ್ಕಾರ: ಆಧುನಿಕ ಜೀವನದಲ್ಲಿ ವಿನಿಮಯವು ಅತ್ಯಂತ ಪ್ರಮುಖ ಪಾತ್ರವನ್ನುವಹಿಸುತ್ತದೆ. ಪ್ರತಿಯೊಬ್ಬ ಮಾನವನೂ ವಿನಿಮಯದ ಉದ್ದೇಶದಿಂದ ವಸ್ತುಗಳನ್ನು ಹಾಗೂ ಸೇವೆಗಳನ್ನು ಉತ್ಪಾದಿಸುವನು. ಪ್ರಾಚೀನ ಕಾಲದಲ್ಲಿ ಮಾನವನ ಬೇಡಿಕೆಗಳು ತೀರ ಕಡಿಮೆ ಇದ್ದವು. ಪ್ರತಿಯೊಬ್ಬನೂ ತನಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದಿಸಿ ಉಪಭೋಗಿಸುತ್ತಿದ್ದನು. ಆದರೆ ನಾಗರಿಕತೆಯ ಬೆಳವಣಿಗೆಯಾದಂತೆ ಬೇಡಿಕೆಗಳ ಸಂಖ್ಯೆಯೂ ಹೆಚ್ಚುತ್ತ ನಡೆದಿದೆ. ಬೇಡಿಕೆಗಳು ಅನಂತವಿರುವವು. ಎಲ್ಲ ಬೇಡಿಕೆಗಳನ್ನು ತೃಪ್ತಿಪಡಿಸಲಿಕ್ಕೆ ಯಾರಿಗೂ ಸಾಧ್ಯವಿಲ್ಲ. ಯಾಕೆಂದರೆ ಒಬ್ಬ ವ್ಯಕ್ತಿಯ ಅನಂತ ಬೇಡಿಕೆಗಳನ್ನು ತೃಪ್ತಿಪಡಿಸಲಿಕ್ಕೆ ಅನಂತ ವಸ್ತುಗಳೂ ಹಾಗೂ ಸೇವೆಗಳೂ ಅವಶ್ಯಕ. ಇವೆಲ್ಲವುಗಳನ್ನು ಉತ್ಪಾದಿಸಲು ಒಬ್ಬ ವ್ಯಕ್ತಿಗೆ ಸಾಧ್ಯವೇ ಇಲ್ಲ. ಆದ್ದರಿಂದ ವ್ಯಕ್ತಿಯು ತಾನು ಏನೇ ಉತ್ಪಾದಿಸಿದರೂ ಅದನ್ನು ಮಾರಿ ಬಂದ ಹಣದಿಂದ ತನಗೆ ಬೇಕಾದ ವಸ್ತುಗಳನ್ನು ಕೊಳ್ಳುವನು. ಇಂಥ ವಿನಿಮಯ ಅಥವಾ ಅದಲಾಬದಲಿಯ ವ್ಯವಹಾರವು ಪ್ರಾರಂಭದಲ್ಲಿ ಹಣವಿಲ್ಲದಲೇ ನಡೆಯುತ್ತಿತ್ತು. ಇಂಥ ವಿನಿಮಯ ಪದ್ಧತಿಗೆ ವಸ್ತುಗಳ ಪ್ರತ್ಯಕ್ಷ ಅದಲಾಬದಲಿ ಅಥವಾ ಸಾಟಿ ಪದ್ಧತಿ(Barter Exchange)ಯೆನ್ನುತ್ತಿದ್ದರು. ಈ ಪದ್ಧತಿಯಲ್ಲಿ ಅನೇಕ ದೋಷಗಳಿದ್ದವು. ಇವೆಲ್ಲವುಗಳನ್ನು ಹೋಗಲಾಡಿಸಲು ಹಣದ ಜನನವಾಯಿತೆನ್ನಬಹುದು. ಅಂತೆಯೇ ಈಗ ಎಲ್ಲ ಕಡೆಯಲ್ಲಿಯೂ ಹಣದ ಆರ್ಥಿಕ ವ್ಯವಸ್ಥೆಗಳನ್ನು ಕಾಣುವೆವು.

ಸಾಟಿ ಪದ್ಧತಿ ಅಥವಾ ವಸ್ತು ವಿನಿಮಯ ಪದ್ಧತಿಯ ದೋಷಗಳು: ಸಾಟಿ ಪದ್ಧತಿಯ ಎಲ್ಲ ತೊಂದರೆಗಳಿಂದಾಗಿ ವ್ಯಾಪಾರವೂ ಕುಂಠಿತವಾಗಿ ಉತ್ಪಾದನೆಯು ಕಡಿಮೆಯಾಯಿತು. ಈ

ದೋಷಗಳಿಂದ ಮುಕ್ತರಾಗಲು ಜನರು ಮೊದಲಿನಿಂದಲೂ ವಿವಿಧ ವಸ್ತುಗಳನ್ನು ಹಣವೆಂದು ಪರಿಗಣಿಸಹತ್ತಿದರು. ಉದಾ: ಕೆಲವು ಜನಾಂಗಗಳಲ್ಲಿ ಆಕಳು, ಎತ್ತು, ಹಂದಿ, ಕುದುರೆಗಳು ಹಣವಾಗಿದ್ದವು. ಕೆಲವರಲ್ಲಿ ಧಾನ್ಯಗಳು ಹಣವೆನಿಸಿಕೊಂಡಿದ್ದವು. ಕೆಲವೆಡೆ ಕವಡೆ, ಮದ್ಯ, ತಂಬಾಕು, ಚಹಪುಡಿ ಮುಂತಾದವುಗಳು ಹಣವೆಂದು ಕರೆಯಲ್ಪಟ್ಟವು. ಇವೆಲ್ಲವುಗಳೂ ಅನೇಕ ನ್ಯೂನತೆಗಳಿಂದಾಗಿ ಎಲ್ಲ ಸಮುದಾಯಗಳಲ್ಲಿಯೂ ಎಲ್ಲರಿಂದ ಹಣವೆನ್ನಿಸಿಕೊಳ್ಳಲಿಲ್ಲ. ಮೂಲತಃ ಎಲ್ಲ ಜನರು ಎಲ್ಲ ವಿನಿಮಯಗಳಲ್ಲಿ ಒಂದು ವಸ್ತುವನ್ನು ಸಾಮಾನ್ಯವಾಗಿ ಮಧ್ಯವರ್ತಿಯೆಂದು ಒಪ್ಪಿದರೆ ಅದೇ ಹಣವಾಗುತ್ತದೆ.

ಹಣದ ವ್ಯಾಖ್ಯೆ: ಆಧುನಿಕ ಯುಗದಲ್ಲಿ ಹಣವು ಯಾರಿಗೂ ಅರಿಯದ ವಸ್ತುವಿರದಿದ್ದರೂ, ಅದರ ವ್ಯಾಖ್ಯೆಯನ್ನು ಹೇಳುವುದು ಅಷ್ಟು ಸುಲಭವಲ್ಲ. ಹಣವು ಯಾವುದೇ ವಸ್ತುವಿರಬಹುದು. ಆದರೆ ಅದು ಎಲ್ಲ ವಸ್ತುಗಳ ವಿನಿಮಯದಲ್ಲಿ ಸಾಮಾನ್ಯ ಮಾನದಂಡವೆಂದು ಭಾಗವಹಿಸಲು ಹಾಗೂ ಭೂತ ಮತ್ತು ವರ್ತಮಾನಗಳ ಎಲ್ಲ ಋಣಗಳನ್ನು ತೀರಿಸಲು ಉಪಯೋಗಿಸಲಿಕ್ಕೆ ಸಾರ್ವತ್ರಿಕ ಒಪ್ಪಿಗೆ ಪಡೆದಂತಹ ವಸ್ತುವೇ ಹಣ. "ಸಾರ್ವತ್ರಿಕ ಒಪ್ಪಿಗೆ"ಯು ಹಣದ ಮೂಲಭೂತ ಗುಣ. ನಮ್ಮ ದೇಶದಲ್ಲಿ ಕರೆನ್ಸಿ ನೋಟುಗಳು ಹಣವೆನಿಸಿಕೊಳ್ಳುವವು. ಆದರೆ ಬ್ಯಾಂಕುಗಳ ಚೆಕ್ಕುಗಳಲ್ಲ. ಏಕೆಂದರೆ ಕೆಲವರು ಎಲ್ಲ ವ್ಯವಹಾರಗಳಲ್ಲಿ ಚೆಕ್ಕುಗಳನ್ನು ಹಣವೆಂದು ಪರಿಗಣಿಸುವುದಿಲ್ಲ. ಕೇವಲ ಪರಿಚಯವಿದ್ದ ವ್ಯಕ್ತಿಗಳಿಂದಷ್ಟೇ ವ್ಯವಹಾರಗಳಲ್ಲಿ ಚೆಕ್ಕುಗಳನ್ನು ಸ್ವೀಕರಿಸುವರು. ಇಂಗ್ಲೆಂಡ್ ಹಾಗೂ ಅಮೆರಿಕೆಯಂಥ ಮುಂದುವರಿದ ದೇಶಗಳಲ್ಲಿ ಚೆಕ್ಕುಗಳಿಗೆ ವ್ಯವಹಾರಗಳಲ್ಲಿ ಸಾರ್ವತ್ರಿಕ ಒಪ್ಪಿಗೆಯಿದೆ. ಆದ್ದರಿಂದ ಅಲ್ಲಿ ಅವು ಕರೆನ್ಸಿ ನೋಟುಗಳ ಜೊತೆಗೆ ಹಣವೆಂದು ಕರೆಯಲ್ಪಡುತ್ತವೆ. ವಸ್ತು, ಹಣ, ಲೋಹದ ಹಣ, ಶಾಸನಬದ್ಧ ಹಣ, ಕಾಗದದ ಹಣ, ಚೆಕ್ಕುಗಳು, ಸಾಂಕೇತಿಕ ಹಣ ಮುಂತಾದವುಗಳು ಹಣದ ಪ್ರಕಾರಗಳು.

ಹಣದ ವ್ಯಾಖ್ಯೆಯು ಅದರ ಕಾರ್ಯಗಳ ಮೇಲೆ ಅವಲಂಬಿಸಿದೆ. ಹಣವು ಯಾವ ಯಾವ ಕಾರ್ಯಗಳನ್ನು ನಿರ್ವಹಿಸುತ್ತದೆನ್ನುವುದು ಎಲ್ಲರಿಗೂ ವಿಧಿತವಿದ್ದರೂ ಹಣವೆಂದರೆ ಏನೆಂಬುದನ್ನು ಯಾರೂ ಹೇಳಲಾರರು. ಇದಕ್ಕೆ ಫ್ರಾನ್ಸಿಸ್ ಎ.ವಾಕರ್ ಅವರ ವ್ಯಾಖ್ಯೆಯೇ ಸಾಕ್ಷಿ. "ಹಣವು ಏನು ಮಾಡುವುದೋ ಅದೇ ಹಣ"(Money is what money does). ಆದ್ದರಿಂದ ಹಣದ ಕಾರ್ಯಗಳ ಮಾಹಿತಿಯಿಲ್ಲದೇ ಹಣದ ವ್ಯಾಖ್ಯೆಯನ್ನು ಕೊಡಲಾಗುವುದಿಲ್ಲ. ಎಫ್.ಎಂ.ಟೇಲರ್ ಅವರು, "ವಿನಿಮಯದ ಮಾಧ್ಯಮವಾಗಲು ವಿಶೇಷವಾಗಿ ನಿರ್ಮಿಸಿದ ಹಾಗೂ ಮೀಸಲಿರಿಸಿದ ವಸ್ತುವೇ ಹಣ..." ಎಂದು ಹಣದ ವ್ಯಾಖ್ಯೆಯನ್ನು ಕೊಟ್ಟಿರುವವರು ಪ್ರೊ.ಡಿ.ಎಚ್. ರಾಬರ್ಟ್ಸನ್ಸ್ "ವಸ್ತುಗಳ ವಿನಿಮಯಗಳಲ್ಲಿ ಹಾಗೂ ಬೇರೆ ವಿಧದ ವ್ಯವಹಾರಿಕ ಋಣಗಳನ್ನು ತೀರಿಸುವಲ್ಲಿ ಸಾಮಾನ್ಯವಾಗಿ ಒಪ್ಪಿಗೆ ಪಡೆದಿರುವ ವಸ್ತುವೇ ಹಣ" ಎಂದು ಹೇಳಿದ್ದಾರೆ.

ಸಾಮಾನ್ಯವಾಗಿ ಹೇಳಬೇಕೆಂದರೆ, ವಿನಿಮಯದ ಮಾಧ್ಯಮವಾಗಿ ಮತ್ತು ಸಾಲಗಳನ್ನು ನಿರ್ಧರಿಸುವಾಗ ವಿಸ್ತೀರ್ಣವಾಗಿ ಉಪಯೋಗಿಸುವ ಹಾಗೂ ಒಪ್ಪಿಗೆ ಪಡೆದಿರುವ ಯಾವುದೇ ವಸ್ತುವು ಹಣವೆನಿಸಿಕೊಳ್ಳುವುದು. ಮೇಲಿನ ಮೂರಕ್ಕಿಂತಲೂ ಸ್ವಲ್ಪ ವಿಸ್ತೃತವೂ ವಿಶಿಷ್ಟವಾದ ಭಾಷಾಂತರವನ್ನು ೧೯೭೧ರಲ್ಲಿ ಕರ್ನಾಟ ವಿಶ್ವವಿದ್ಯಾಲಯ, ಧಾರವಾಡದ ಬಿ.ಎ.I.ದ ಪಠ್ಯ ಪುಸ್ತಕವನ್ನಾಗಿ 'ಅರ್ಥಶಾಸ್ತ್ರ: ತತ್ವ ನಿರೂಪಣೆ" ಪ್ರಕಟಿಸಿರುತ್ತಾರೆ. ಈ ಪಠ್ಯಪುಸ್ತಕವು ಟಿ.ಕೆ.ಮೇಟಿ ಸಿ.ಬಿ.ಚಂದ್ರಶೇಖರಪ್ಪ, ಸಿ.ಎಸ್.ಕಡ್ಡಿಪುಡಿ, ಎನ್.ಎಸ್.ಹಿರೇಮಠ ಮತ್ತು ಕೆ.ಆರ್.ಮಡಿಯವರು ಅನುವಾದಿಸಿದ್ದನ್ನು ಪು.೧೯೮-೨೦೧ರಲ್ಲಿ ಪ್ರಕಟವಾಗಿದೆ.

ಇವರ ಭಾಷಾಂತರದ ಪ್ರಮಾಣವು ಸ್ವಲ್ಪ ಪ್ರಮಾಣದಲ್ಲಿ ಉಳಿದ ಮೂರಕ್ಕಿಂತ ಹೆಚ್ಚಿಗೆ ಇದೆ. ಇವರು ಆಸೆ, ಬಯಕೆಯ ಬಯಲಾಗಿ 'ಬೇಡಿಕೆ' ಎಂಬ ಪದವನ್ನು ಬಳಸಿರುತ್ತಾರೆ. ಪ್ರಾಚೀನ ಕಾಲದ ವ್ಯಕ್ತಿಯ ಬೇಡಿಕೆಗಳು ಮಿತ ಪ್ರಮಾಣದಲ್ಲಿದ್ದವೆಂದು ಹೇಳುವುದರ ಜೊತೆಗೆ ಆಧುನಿಕ ಕಾಲಕ್ಕೆ ಮಾನವನ ಬೇಡಿಕೆಯ ವಿಸ್ತಾರವು ವಿನಿಮಯಕ್ಕೆ ಕಾರಣವಾಗಿರುವುದು ಪ್ರಸ್ತಾಪಿಸಿದ್ದಾರೆ. ಹಿಂದೆ ತನ್ನ ಅವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುತ್ತಿರುವ ಅಂಶವು, ಆಧುನಿಕ ಪ್ರಪಂಚದಲ್ಲಿ ಅಸಾಧ್ಯವಾಗುತ್ತಿರುವ ಹಿನ್ನೆಲೆಯನ್ನು ಅನುವಾದಕರು ವಿವರಿಸಿರುತ್ತಾರೆ. 'ಹಣ'ದ ಆವಿಷ್ಕಾರವಾದರೂ, 'ಹಣ'ವೆಂದು ವಿವರಣೆ ಸೂಚಿಸುವ ವ್ಯಾಖ್ಯಾನಗಳ ಅಲಭ್ಯತೆ ಕುರಿತು ಹೇಳಿದ್ದಾರೆ. ಬೇರೆ ಬೇರೆ ಅರ್ಥಶಾಸ್ತ್ರಜ್ಞರ ವ್ಯಾಖ್ಯೆಗಳನ್ನು ನೀಡುವ ಮೂಲಕ 'ಹಣ'ದ ಕಾರ್ಯಗಳ ಲಕ್ಷಣಗಳಲ್ಲಿ, ಹೆಚ್ಚು ಲಕ್ಷಣವುಳ್ಳ ವಾಕರ್ ಅವರ ಹೇಳಿಕೆಯನ್ನು ಸೂಚಿಸಲಾಗಿದೆ. ಇದು ಕೇವಲ ಒಂದು ವಾಕ್ಯದಲ್ಲಿ ಅತ್ಯಂತ ಸಂಕ್ಷಿಪ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಪೀಠಿಕೆ: ಮಾನವನ ಅನೇಕ ಸಂಶೋಧನೆಗಳಲ್ಲಿ ಹಣವು ಒಂದು ಅತಿ ಮಹತ್ವದ ಸಂಶೋಧನೆಯಾಗಿದೆ. ಇಂದು ಎಲ್ಲ ಆರ್ಥಿಕ ಚಟುವಟಿಕೆಗಳೂ ಹಣದ ಮೂಲಕವೇ ನಡೆಯುತ್ತಿರುವುದರಿಂದ ಮತ್ತು ಹಣವಿಲ್ಲದೆ ಯಾವ ಆರ್ಥಿಕ ಚಟುವಟಿಕೆಗಳೂ ನಡೆಯುವುದಿಲ್ಲ ವಾದ್ದರಿಂದ ಹಣಕ್ಕೆ ಇಂದು ಎಂದಿಲ್ಲದ ಪ್ರಾಮುಖ್ಯತೆ ಪ್ರಾಪ್ತವಾಗಿದೆ. ಇಂದು ಸರಕು ಸೇವೆಗಳನ್ನು ಹಣಕ್ಕೂ ಮತ್ತು ಹಣವನ್ನು ಸರಕು-ಸೇವೆಗಳಿಗೂ ವಿನಿಮಯ ಮಾಡುವ ಪದ್ಧತಿ ಅಸ್ತಿತ್ವದಲ್ಲಿದೆ. ಉತ್ಪಾದನೆ, ಅನುಭೋಗ, ವಿತರಣೆ, ವ್ಯಾಪಾರ, ವಾಣಿಜ್ಯ ಮೊದಲಾದ ಎಲ್ಲ ಚಟುವಟಿಕೆಗಳೂ ಹಣದ ಮೂಲಕವೇ ನಡೆಯುತ್ತಿರುವುದರಿಂದ ಇಂದಿನ ಅರ್ಥವ್ಯವಸ್ಥೆಗೆ ಹಣದ ಅರ್ಥವ್ಯವಸ್ಥೆ ಯೆಂದು ಕರೆಯುತ್ತಾರೆ. ಆಧುನಿಕ ಪ್ರಪಂಚದಲ್ಲಿ ಎಲ್ಲಿಯೂ ಹಣರಹಿತ ಅರ್ಥವ್ಯವಸ್ಥೆಯನ್ನು ನಾವು ಕಾಣಲಾರೆವು. ಏಕೆಂದರೆ ಹಣರಹಿತ ಅರ್ಥವ್ಯವಸ್ಥೆಯು ಪರಿಣಾಮಕಾರಿಯಾಗಿ, ಸಮರ್ಥ ವಾಗಿ ಮತ್ತು ಸುಗಮವಾಗಿ ಕಾರ್ಯನಿರ್ವಹಿಸದು. ಹಣವು ಸಾಟಿ ಪದ್ಧತಿಯಲ್ಲಿನ ಎಲ್ಲ ದೋಷಗಳನ್ನೂ ನಿವಾರಿಸಿದೆ. ಹಣದ ಉಪಯೋಗದಿಂದ ಸರಕು ಸೇವೆಗಳ ಉತ್ಪಾದನೆಯಲ್ಲಿ ಮತ್ತು ಅವುಗಳ ಬಳಕೆದಾರರಿಗೆ ವಿತರಣೆ ಮಾಡುವಲ್ಲಿ ದೊಡ್ಡ ಪ್ರಮಾಣದಲ್ಲಿ ಸಮಯ ಮತ್ತು ಶ್ರಮದ ಉಳಿತಾಯವಾಗಿದೆ. ಕೆಲಸದಲ್ಲಿ ನೈಪುಣ್ಯತೆ, ಶ್ರಮ ವಿಭಜನೆ, ತಾಂತ್ರಿಕ ಪ್ರಗತಿ, ವಿಜ್ಞಾನದ

ಪ್ರಗತಿ, ದೊಡ್ಡ ಪ್ರಮಾಣದ ಉತ್ಪಾದನೆ, ವ್ಯವಹಾರಿಕ ಸಂಸ್ಥೆಗಳ ವಿಸ್ತರಣೆ ಇವೆಲ್ಲವೂ ಹಣದ ಮೂಲಕ ಸಾಧ್ಯವಾಗಿವೆ. ...ಮಾನವನ ಬಯಕೆಗಳು ಇಂದು ಅನಿಯಮಿತವಾಗಿವೆ ಮತ್ತು ವೈವಿಧ್ಯಮಯವಾಗಿವೆ. ವಸ್ತುಗಳ ವಿನಿಮಯ ಪದ್ಧತಿ ಅಥವಾ ಸಾಟಿ ಪದ್ಧತಿ; ಅತೀ ಪ್ರಾಚೀನ ಕಾಲದಲ್ಲಿ, ಸರಕು ಸೇವೆಗಳ ವಿನಿಮಯಕ್ಕಾಗಿ ಹಣವನ್ನು ಬಳಸುತ್ತಿದ್ದಿಲ್ಲ. ನಿಜ ಹೇಳಬೇಕೆಂದರೆ ಆಗ ಜನರಿಗೆ ಹಣವೆಂಬುದೇ ಗೊತ್ತಿದ್ದಿಲ್ಲ. ಆಗ ಜನರ ಬೇಡಿಕೆಗಳೂ ಕಡಿಮೆ ಇದ್ದವು. ಆದುದರಿಂದ ಅವರು ತಮ್ಮ ಸ್ವಂತ ಪ್ರಯತ್ನದಿಂದಲೇ ಸರಕುಗಳನ್ನು ದೊರಕಿಸಿ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದರು. ಕ್ರಮೇಣ ನಾಗರಿಕತೆ ಬೆಳೆದಂತೆ, ಜೀವನ ವಿಕಾಸವಾದಂತೆ, ಜನರಿಗೆ ತಮ್ಮ ಎಲ್ಲ ಅವಶ್ಯಕತೆಗಳನ್ನು ತಮ್ಮ ಸ್ವಪ್ರಯತ್ನದಿಂದ ಪೂರೈಸಿಕೊಳ್ಳುವುದು ಕಠಿಣವಾಗತೊಡಗಿತು. ಆಗ ಜನರಲ್ಲಿ ಪರಸ್ಪರಾವಲಂಬನ ಪ್ರಾರಂಭವಾಯಿತು. ಒಬ್ಬನು ಕೆಲವೊಂದು ವಸ್ತುಗಳನ್ನು ತಯಾರಿಸಿ, ತನಗೆ ಬೇಕಾದಷ್ಟನ್ನಿಟ್ಟುಕೊಂಡು, ಹೆಚ್ಚಿನದನ್ನು ಇತರರಿಗೆ ಕೊಟ್ಟು, ಅವರಿಂದ ತನಗೆ ಬೇಕಾಗಿರುವ ವಸ್ತುಗಳನ್ನು ಪಡೆಯಲು ಪ್ರಾರಂಭಿಸಿದನು. ಹೀಗೆ ವಸ್ತುಗಳಿಗಾಗಿ ವಸ್ತುಗಳನ್ನು ವಿನಿಮಯ ಮಾಡಿ ಜನರು ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ಳತೊಡಗಿದರು. ಈ ಪದ್ಧತಿಗೆ "ವಸ್ತುಗಳ ವಿನಿಮಯ ಪದ್ಧತಿ" ಅಥವಾ "ಸಾಟಿ ವಿನಿಮಯ ಪದ್ಧತಿ"(Barter system) ಎಂದು ಕರೆಯಲಾಗಿದೆ. ಇಂತಹ ವಿನಿಮಯ ಪದ್ಧತಿಯಿಂದ ಜನರ ಪರಾವಲಂಬನ ಹೆಚ್ಚಿದರೂ, ಗ್ರಾಮವು ಸ್ವಯಂಪೂರ್ಣವಾಯಿತು. ಕ್ರಮೇಣ ನಾಗರಿಕತೆ ಬೆಳೆದಂತೆ, ಮಾನವನ ಬೇಡಿಕೆಗಳು ಅಧಿಕವಾದಂತೆ, ಗ್ರಾಮ ಗ್ರಾಮಗಳ ನಡುವೆ ವಿನಿಮಯ ಪ್ರಾರಂಭವಾಯಿತು. ಆದರೆ ಮುಂದೆ ಅಲ್ಪಾವಧಿಯಲ್ಲಿ, ವಸ್ತುಗಳ ವಿನಿಮಯ ಪದ್ಧತಿಯಲ್ಲಿ ಹಲವಾರು ದೋಷಗಳು ಕಂಡುಬಂದವು. ಈ ದೋಷಗಳನ್ನು ನಿವಾರಿಸಲು ಸಾಧ್ಯವಾಗದ್ದರಿಂದ, ಕೊನೆಗೆ ಅದನ್ನು ಬಿಟ್ಟು ಕೊಡಲಾಯಿತು.

ಸಾಟಿ ಪದ್ಧತಿಯ ದೋಷಗಳು: ಇವುಗಳನ್ನು ಗಮನಿಸಲಾಗಿಲ್ಲ.

ಹಣದ ಹುಟ್ಟು ಮತ್ತು ಬೆಳವಣಿಗೆ: ಸಾಟಿ ಪದ್ಧತಿಯಲ್ಲಿ ಅನೇಕ ದೋಷಗಳು ಕಂಡು ಬಂದದ್ದರಿಂದ, ವಿನಿಮಯವು ಕಠಿಣವಾಗತೊಡಗಿತು. ಇದರಿಂದ ವ್ಯಾಪಾರವು ಕುಂಠಿತಗೊಂಡು, ಉತ್ಪಾದನೆಯು ತಗ್ಗಿತು.ಈ ಪರಿಸ್ಥಿತಿಯಿಂದ....ಇದು ೧೯೯೦ರಲ್ಲಿ ಕೆ.ಡಿ.ಬಸವಾ ಅವರು ವಿದ್ಯಾವಾಹಿನಿ, ಹುಬ್ಬಳ್ಳಿ, ಪ್ರಕಾಶನದ ಮೂಲಕ ಹಣ, ಬ್ಯಾಂಕ ವ್ಯವಹಾರ, ಅಂತರ ರಾಷ್ಟ್ರೀಯ ವ್ಯಾಪಾರ ಮತ್ತು ಸಾರ್ವಜನಿಕ ಹಣಕಾಸು' ಎಂಬ ಪಠ್ಯ ಪುಸ್ತಕವನ್ನು ಭಾಷಾಂತರಿಸಿದ್ದಾರೆ. ಇದು ವಿವಿಧ ವಿಶ್ವವಿದ್ಯಾಲಯಗಳ ಬಿ.ಎ.ಪದವಿ ತರಗತಿಗಳಿಗೆ ಪಠ್ಯಪುಸ್ತಕವನ್ನಾಗಿ ಗೊತ್ತುಪಡಿಸಲಾಗಿದೆ.

ಇವರು 'ಹಣ' ಮತ್ತು 'ವಸ್ತು ವಿನಿಮಯ ಪದ್ಧತಿ'ಗಾಗಿ ವಿಸ್ತತವಾದ ಪೀಠಿಕೆ ಮತ್ತು ವಿವರಣೆ ಅನುವಾದದ ಮೂಲಕ ನೀಡಿರುತ್ತಾರೆ. ಪದವಿ ಹಂತಕ್ಕೆ ಸಂಬಂಧಿಸಿದ ಹಾಗೆ ಪರಿಶೀಲಿಸಿದರೆ, ವಿಸ್ತಾರವಾದ ಮಾಹಿತಿಯ ಅಗತ್ಯತೆ ಕಂಡುಬರುತ್ತದೆ. ಹಣದ ಶೋಧನೆಯು ನಿರಂತರವಾಗಿ

ನಡೆದು ಬಂದ ಪ್ರಕ್ರಿಯೆಗೆ ಜಗತ್ತಿನ ವಿವಿಧ ದೇಶಗಳ ಶ್ರಮದ ಪಾಲು ತಿಳಿಯಲು ಇಲ್ಲಿ ಅವಕಾಶವಿದೆ. ಪ್ರಾದೇಶಿಕ ಭಿನ್ನತೆಯೂ 'ಹಣ'ದ ಪಾತ್ರವನ್ನು ಹೇಗೆ ಸಮರ್ಥವಾಗಿ ಪೂರೈಸಿದೆಂಬುದನ್ನು ಗುರುತಿಸಬಹುದಾಗಿದೆ. ಹಣದ ಅರ್ಥವನ್ನು ಸ್ಪಷ್ಟಪಡಿಸುವ ಸಲುವಾಗಿ ಆರು ಜನ ಅರ್ಥಶಾಸ್ತ್ರಜ್ಞರ ಸರಳ ಮತ್ತು ಸರಿಯಾದ ಅರ್ಥ ನೀಡುವ ವ್ಯಾಖ್ಯಾನಗಳನ್ನು ಅನುವಾದಿಸಿ ಪೂರೈಸಿದ್ದಾರೆ. ಆಧುನಿಕ ಪ್ರಪಂಚದಲ್ಲಿ 'ಹಣ'ಕ್ಕಿರುವ ಮಹತ್ವವನ್ನು ಜನಸಾಮಾನ್ಯರಿಗೂ ಮನವರಿಕೆಯಾಗುವ ಮಾದರಿಯಲ್ಲಿ ವಿಶ್ಲೇಷಣಾತ್ಮಕ ವಿವರಣೆಯನ್ನು ಗಮನಿಸಬಹುದಾಗಿದೆ. ಇವರ ಅನುವಾದವು ವಸ್ತುವಿನಿಮಯ ಪದ್ಧತಿಯ ಹಿನ್ನೆಲೆ, ಅದರ ಮಹತ್ವ ಮತ್ತು ಮಿತಿಗಳನ್ನು ಒಳಗೊಂಡಿದೆ. ಇದರ ಜೊತೆಗೆ ಹಣದ ಪ್ರಾಮುಖ್ಯತೆ ಹಾಗೂ ಹಣದ ಪರಿಪೂರ್ಣ ಅರ್ಥ ಕಲ್ಪಿಸುವ ಹೇಳಿಕೆಗಳನ್ನೊಳಗೊಂಡ ವಿವರಣೆಯ ಜೊತೆ ಜೊತೆಗೆ ಸರಕು ಸೇವೆಗಳ ಅಗತ್ಯತೆ ಹಣಕ್ಕಿಂತಲೂ ಅಧಿಕವೆಂಬ ಅಭಿಪ್ರಾಯ ಅನುವಾದದ ಮೂಲಕ ರೂಪಿಸಿರುವುದನ್ನು ಗಮನಿಸ ಬಹುದಾಗಿದೆ.

ಹಣ(Money): ಮಾನವ ವಿವೇಚನಾ ಶಕ್ತಿಯುಳ್ಳ ಪ್ರಾಣಿಯಾಗಿದ್ದು ಸುಖೀ ಜೀವನ ನಡೆಸಲು ಇಚ್ಛಿಸುತ್ತಾನೆ. ತನ್ನ ಅವಶ್ಯಕ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಸ್ವತಃ ಸರಕುಗಳನ್ನು ಉತ್ಪಾದಿಸಿಕೊಳ್ಳುತ್ತಾನೆ ಅಥವಾ ತನಗೆ ಬೇಕಾದ ಸರಕುಗಳನ್ನು ಬೇರೆಯವರಿಂದ ವಿನಿಮಯದ ಮೂಲಕ ಪಡೆಯುತ್ತಾನೆ. ಇಂತಹ ಚಟುವಟಿಕೆಗಳನ್ನು ಸುಸೂತ್ರವಾಗಿ ನಡೆಸಲು ಹಣವೆಂಬ ಸಾಧನವನ್ನು ಮಾನವ ರೂಪಿಸಿಕೊಂಡಿದ್ದಾನೆ.

ಮಾನವನ ಅತಿಮುಖ್ಯ ಸಂಶೋಧನೆಗಳಲ್ಲಿ ಹಣದ ಸಂಶೋಧನೆ ಒಂದು. ಇಂದಿನ ಆರ್ಥಿಕ ವ್ಯವಸ್ಥೆಗಳಲ್ಲೆಲ್ಲಾ ಪ್ರಧಾನವಾಗಿ ಹಣರೂಪಿ ಆರ್ಥಿಕ ವ್ಯವಸ್ಥೆಗಳಾಗಿವೆ. ಇಂದು ಮಾನವ ಆರ್ಥಿಕ ಚಟುವಟಿಕೆಗಳನ್ನು ಹಣದ ಮೂಲಕವೇ ಕೈಗೊಳ್ಳುತ್ತಿದ್ದಾನೆ. ಹೀಗಾಗಿ ಒಂದು ರಾಷ್ಟ್ರದ ಆರ್ಥಿಕ ಪ್ರಗತಿಯ ಮೇಲೆ ಹಣ ತನ್ನ ಪ್ರಭಾವವನ್ನು ಖಚಿತವಾಗಿ ಬೀರುತ್ತದೆ. ಆಧುನಿಕ ಜೀವನದಲ್ಲಿ ವಿನಿಮಯವು ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಪ್ರತಿಯೊಬ್ಬ ಮಾನವನೂ ವಿನಿಮಯದ ಉದ್ದೇಶದಿಂದ ವಸ್ತುಗಳನ್ನು ಹಾಗೂ ಸೇವೆಗಳನ್ನು ಉತ್ಪಾದಿಸುವನು. ಪ್ರಾಚೀನ ಕಾಲದಲ್ಲಿ ಮಾನವನ ಬೇಡಿಕೆಗಳು ತೀರ ಕಡಿಮೆ ಇದ್ದವು. ಪ್ರತಿಯೊಬ್ಬನೂ ತನಗೆ ಬೇಕಾದ ವಸ್ತುಗಳನ್ನು ತಾನೇ ಉತ್ಪಾದಿಸಿ ಉಪಭೋಗಿಸುತ್ತಿದ್ದನು. ಆದರೆ, ನಾಗರಿಕತೆಯ ಬೆಳವಣಿಗೆಯಾದಂತೆ ಬೇಡಿಕೆಗಳ ಸಂಖ್ಯೆಯೂ ಹೆಚ್ಚುತ್ತ ನಡೆದಿದೆ. ಬೇಡಿಕೆಗಳು ಅನಂತವಿರುವವು. ಎಲ್ಲ ಬೇಡಿಕೆಗಳನ್ನು ತೃಪ್ತಿಪಡಿಸಲಿಕ್ಕೆ ಯಾರಿಗೂ ಸಾಧ್ಯವಿಲ್ಲ. ಯಾಕೆಂದರೆ ಒಬ್ಬ ವ್ಯಕ್ತಿಯ ಅನಂತ ಬೇಡಿಕೆಗಳನ್ನು ತೃಪ್ತಿಪಡಿಸಲಿಕ್ಕೆ ಅನಂತ ವಸ್ತುಗಳೂ ಹಾಗೂ ಸೇವೆಗಳೂ ಅವಶ್ಯ. ಇವೆಲ್ಲವುಗಳನ್ನು ಉತ್ಪಾದಿಸಲು ಒಬ್ಬ ವ್ಯಕ್ತಿಗೆ ಸಾಧ್ಯವೇ ಇಲ್ಲ. ಆದ್ದರಿಂದ ವ್ಯಕ್ತಿಯು ತಾನು ಏನೇ ಉತ್ಪಾದಿಸಿದರೂ ಅದನ್ನು ಮಾರಿ ಬಂದ ಹಣದಿಂದ ತನಗೆ ಬೇಕಾದ ವಸ್ತುಗಳನ್ನು ಕೊಳ್ಳುವನು. ಇಂಥ ವಿನಿಮಯ ಅಥವಾ ಅದಲಾಬದಲಿಯ ವ್ಯವಹಾರವು ಪ್ರಾರಂಭದಲ್ಲಿ ಹಣವಿಲ್ಲದಲೇ ನಡೆಯುತ್ತಿತ್ತು. ಇಂಥ

ವಿನಿಮಯ ಪದ್ಧತಿಗೆ ವಸ್ತುಗಳ ಪ್ರತ್ಯಕ್ಷ ಅದಲಾಬದಲಿ ಅಥವಾ ಸಾಟಿ ಪದ್ಧತಿ(Barter exchange)ಯೆನ್ನುತ್ತಿದ್ದರು. ಈ ಪದ್ಧತಿಯಲ್ಲಿ ಅನೇಕ ದೋಷಗಳಿದ್ದವು. ಇವೆಲ್ಲವುಗಳನ್ನು ಹೋಗಲಾಡಿಸಲು ಹಣದ ಜನನವಾಯಿತೆನ್ನಬಹುದು. ಅಂತೆಯೇ ಈಗ ಎಲ್ಲ ಕಡೆಯಲ್ಲಿಯೂ ಹಣದ ಆರ್ಥಿಕ ವ್ಯವಸ್ಥೆಗಳನ್ನು ಕಾಣುವೆವು.

೧. ವಸ್ತು ವಿನಿಮಯ ಪದ್ದತಿಯು ಸುಗಮವಾಗಿ ಸಾಗಬೇಕಾದರೆ ಸ್ವಾಧೀನತೆಗಳ ಹಾಗೂ ಬೇಡಿಕೆಗಳ ದ್ವಿಮುಖ ಹೊಂದಾಣಿಕೆ(Double coincidence of possessions to wants)ಯು ಅತ್ಯವಶ್ಯ. ವಿನಿಮಯದಲ್ಲಿಯ ಎರಡು ಪಕ್ಷಗಳೂ ಮತ್ತೊಂದು ಪಕ್ಷಕ್ಕೆ ಯಾವ ವಸ್ತುವು ಬೇಕಾಗಿದೆಯೋ ಅದನ್ನೇ ಹೊಂದಿರುವುದಲ್ಲದೇ, ಆ ಪಕ್ಷವು ಮತ್ತೊಂದು ಪಕ್ಷವು ಕೊಡಬೇಕೆಂದು(ಅಧಿಕವಿದ್ದದ್ದರಿಂದ) ಮಾಡಿದ ವಸ್ತುವನ್ನೇ ಬೇಡಬೇಕು. ಉದಾ: ಒಬ್ಬ ರೈತರ ಹತ್ತಿರ ಅನೇಕ ಗೋದಿ ಇದೆ; ಅವನಿಗೆ ಬಟ್ಟೆ ಬೇಕಾಗಿದೆ. ಮತ್ತು ಒಬ್ಬ ನೇಕಾರನ ಹತ್ತಿರ ಅಧಿಕ ಬಟ್ಟೆ ಇದೆ; ಆದರೆ ಅವನಿಗೆ ಗೋಧಿ ಬೇಕಾಗಿದೆ. ಕೇವಲ ಇಂಥ ಪ್ರಸಂಗಗಳಲ್ಲಿ ಸಾಟಿ ಪದ್ಧತಿಯು ಸರಿಯಾಗಿ ನಡೆಯುವದು. ರೈತನಿಗೆ ಬಟ್ಟೆಯ ಬದಲಾಗಿ ಜೋಳ, ಅಕ್ಕಿ ಅಥವಾ ಪಾತ್ರೆಗಳು ಬೇಕಾಗಿದ್ದರೆ ಇಲ್ಲವೇ ನೇಕಾರನಿಗೆ ಸಹ ಗೋದಿಯ ಬದಲಾಗಿ ಬೇರೆ ವಸ್ತುಗಳು ಬೇಕಾಗಿದ್ದರೆ ವಿನಿಮಯವು ನಡೆಯಲಾರದು. ವಿನಿಮಯ ವ್ಯವಹಾರವು ನಡೆಯಬೇಕಾದರೆ ಮೊದಲನೆಯವನಿಗೆ ಬೇಡಿಕೆ ಇದ್ದ ವಸ್ತುವನ್ನು ಎರಡನೆಯವನು ಕೊಡಲು ಸಿದ್ಧನಿರಬೇಕು ಹಾಗೂ ಎರಡನೆಯವನಿಗೆ ಬೇಕಾದ ವಸ್ತು ಮೊದಲನೆಯವನ ಹತ್ತಿರ ಇರಲೇಬೇಕು. ಆದರೆ ಇಂದಿನ ಬೇಡಿಕೆಗಳನ್ನು ಮತ್ತು ಸ್ವಾಧೀನತೆಗಳನ್ನು ಗಮನಿಸಿದಾಗ ಇಂಥ ದ್ವಿಮುಖ ಹೊಂದಾಣಿಕೆಯು ಅಸಾಧ್ಯ.

೨. ಬೆಲೆಗಳಲ್ಲಿ ಹಾನಿಯಿಲ್ಲದೇ ವಸ್ತುಗಳನ್ನು ಸುಲಭವಾಗಿ ವಿಭಾಗ ಹಾಗೂ ಉಪವಿಭಾಗ ಮಾಡಲು ಅನುಕೂಲವಿದ್ದರೆ ಮಾತ್ರ ವಸ್ತು ವಿನಿಮಯ ಪದ್ಧತಿಯು ಸಾಧ್ಯ. ಉದಾ: ಗಿರೀಶನ ಹತ್ತಿರ ಆಕಳು ಇದೆ; ಅವನಿಗೆ ಕಡ್ಡೀ ಪೆಟ್ಟಿಗೆ ಬೇಕಾಗಿದೆ. ರವಿಯ ಹತ್ತಿರ ಕಡ್ಡಿಪೆಟ್ಟಿಗೆಗಳು ಇವೆ. ಅವನಿಗೆ ಆಕಳು ಬೇಕಾಗಿದೆ. ಇಲ್ಲಿ ಬೇಡಿಕೆಗಳ ಹಾಗೂ ಸ್ವಾಧೀನತೆಗಳ ದ್ವಿಮುಖ ಹೊಂದಾಣಿಕೆಯಿದ್ದರೂ ವಿನಿಮಯವು ಅಷ್ಟು ಸುಲಭವಾಗಿ ನಡೆಯಲಾರದು. ಯಾಕೆಂದರೆ ಗಿರೀಶನಿಗೆ ಒಂದು ಕಡ್ಡಿಪೆಟ್ಟಿಗೆ ಅವಶ್ಯವಿದ್ದಾಗ ಅವನು ಇಡೀ ಒಂದು ಆಕಳವನ್ನು ಆ ಕಡ್ಡೀ ಪೆಟ್ಟಿಗೆಯ ಸಲುವಾಗಿ ವಿನಿಮಯ ಮಾಡಲಾರನು. ಆದರೆ ಕಡ್ಡಿ ಪೆಟ್ಟಿಗೆಯಷ್ಟೇ ಬೆಲೆಯಾಗುವ ಯಾವ ಭಾಗವನ್ನು ಹಾಗೂ ಎಷ್ಟನೇ ಭಾಗವನ್ನು(ಕಿವಿ, ಕಾಲು, ಕೋಡು ಹಾಗೂ ೧/೪, ೧/೮, ೧/೧೬) ವಿನಿಮಯ ಮಾಡುವನೆಂಬುದನ್ನು ಊಹಿಸಲ ಸಾಧ್ಯ. ಒಂದು ವೇಳೆ ಆಕಳ ಬಾಲವನ್ನು ಅಥವಾ ಒಂದು ಕಾಲನ್ನು

ಬೇರ್ಪಡಿಸಿ ಕಡ್ಡೀ ಪೆಟ್ಟಿಗೆಯ ಸಲುವಾಗಿ ವಿನಿಮಯ ಮಾಡಿದರೆ ಆಕಳು ಪೂರ್ಣ ಬೆಲೆಯನ್ನೇ ಕಳೆದುಕೊಳ್ಳುತ್ತದೆ.

೩. ವಸ್ತು ವಿನಿಮಯ ಪದ್ಧತಿಯಲ್ಲಿ ವಸ್ತುಗಳ ಬೆಲೆಗಳನ್ನು ನಿರ್ಣಯಿಸುವುದು ಅತಿ ಕಷ್ಟ. ಭಿನ್ನ ಭಿನ್ನ ವ್ಯಕ್ತಿಗಳು ಹೊಂದಿರುವ ಹಾಗೂ ಅವರಿಗೆ ಬೇಕಾಗುವ ವಸ್ತುಗಳನ್ನು ಯಾವ ಬೆಲೆಯ ಪ್ರಕಾರ ವಿನಿಮಯ ಮಾಡಬೇಕೆನ್ನುವುದು ಹೇಳಲಾಸಾಧ್ಯವಾದ ಮಾತು. ಸಾಮಾನ್ಯವಾಗಿ ವಿನಿಮಯದಲ್ಲಿ ಒಂದು ವಸ್ತುವನ್ನು ಸಾಮಾನ್ಯ ಮಾನದಂಡವೆಂದು ಪರಿಗಣಿಸಿ, ಅದರ ಮುಖಾಂತರ ಉಳಿದ ವಸ್ತುಗಳ ಬೆಲೆಗಳನ್ನು ನಿರ್ಣಯಿಸುವರು. ಆದರೆ ಇದರಲ್ಲಿ ಸಾಮಾನ್ಯ ಮಾನದಂಡವೆನ್ನುವುದೇ ಇಲ್ಲ. ಆದ್ದರಿಂದ ಪ್ರತಿಯೊಂದು ವಿನಿಮಯದಲ್ಲಿ ಒಂದು ದರವನ್ನು ನಿರ್ಧರಿಸಬೇಕಾಗುವುದು. ದಿನಾಲು ಸಾವಿರಾರು ವಿನಿಮಯ ದರಗಳನ್ನು ನಿರ್ಧರಿಸಬೇಕಾಗುವುದು.

೪. ಸಂಪತ್ತಿನ ಶೇಖರಣೆಯು ಸಾಟಿ ಪದ್ಧತಿಯಲ್ಲಿ ಸಾಧ್ಯವಾಗುವುದಿಲ್ಲ. ಉದಾ: 'ಅ' ಎಂಬ ವ್ಯಕ್ತಿಯ ಹತ್ತಿರ ಅಧಿಕ ಜೋಳ ಅಥವಾ ಗೋಧಿ ಇದ್ದರೆ ಅದನ್ನು ಬಹಳ ವರ್ಷಗಳವರೆಗೆ ಶೇಖರಿಸಲು ಸಾಧ್ಯವಾಗುವುದಿಲ್ಲ. 'ಬ' ಎಂಬವನಲ್ಲಿ ಅಧಿಕ ಸಂಖ್ಯೆಯಲ್ಲಿ ಆಕಳುಗಳು ಅಥವಾ ಕುರಿಗಳಿದ್ದರೆ ಅವುಗಳನ್ನು ವಸ್ತುಗಳಂತೆ ಸಂಗ್ರಹಿಸಿಡಲು ಆಗುವುದಿಲ್ಲ. ಒಂದು ವೇಳೆ ಹಾಗೆ ಮಾಡಿದರೆ ಅವುಗಳ ಬೆಲೆಗಳೇ ಇಲ್ಲದಂತಾಗುವವು.

ಸಾಟಿ ಪದ್ಧತಿಯ ಈ ಎಲ್ಲ ತೊಂದರೆಗಳಿಂದಾಗಿ ವ್ಯಾಪಾರವು ಕುಂಠಿತವಾಗಿ ಉತ್ಪಾದನೆಯು ಕಡಿಮೆಯಾಯಿತು. ಈ ದೋಷಗಳಿಂದ ಮುಕ್ತರಾಗಲು ಜನರು ಮೊದಲಿನಿಂದಲೂ ವಿವಿಧ ವಸ್ತುಗಳನ್ನು ಹಣವೆಂದು ಪರಿಗಣಿಸಹತ್ತಿದರು. ಉದಾ: ಕೆಲವು ಜನಾಂಗಗಳಲ್ಲಿ ಆಕಳು, ಎತ್ತು, ಹಂದಿ, ಕುದುರೆಗಳು ಹಣವಾಗಿದ್ದವು. ಕೆಲವರಲ್ಲಿ ಧಾನ್ಯಗಳು ಹಣವೆನ್ನಿಸಿಕೊಂಡವು. ಕೆಲವೆಡೆ ಕವಡೆ, ಮದ್ಯ, ತಂಬಾಕು, ಚಹಪುಡಿ ಮುಂತಾದವುಗಳು ಹಣವೆಂದು ಕರೆಯಲ್ಪಟ್ಟವು. ಇವೆಲ್ಲವುಗಳೂ ಅನೇಕ ನ್ಯೂನತೆಗಳಿಂದಾಗಿ ಎಲ್ಲ ಸಮಯಗಳಲ್ಲಿಯೂ ಎಲ್ಲರಿಂದ ಹಣವೆನ್ನಿಸಿ ಕೊಳ್ಳಲಿಲ್ಲ. ಮೂಲತಃ ಎಲ್ಲ ಜನರು ಎಲ್ಲ ವಿನಿಮಯಗಳಲ್ಲಿ ಒಂದು ವಸ್ತುವನ್ನು ಸಾಮಾನ್ಯವಾಗಿ ಮಧ್ಯವರ್ತಿಯೆಂದು ಒಪ್ಪಿದರೆ ಅದೇ ಹಣವಾಗುತ್ತದೆ. ಇದಲ್ಲದೇ ಆ ವಸ್ತುವು ಅಲ್ಪ ಪ್ರಮಾಣಕ್ಕೆ ಅಧಿಕ ಬೆಲೆಯುಳ್ಳದ್ದು, ಶಾಶ್ವತವು, ಸುಲಭವಾಗಿ ಸ್ಥಳಾಂತರಿಸಲು ಯೋಗ್ಯವಾದದ್ದು, ಸ್ಥಿರ ಬೆಲೆಯುಳ್ಳದ್ದೂ, ಸಹಜವಾಗಿ ಗುರುತಿಸಲು ಬರುವಂಥದೂ, ವಿಭಾಗಿಸಲು ಹಾಗೂ ಉಪ ವಿಭಾಗಿಸಲು ತೊಂದರೆಯಿರದಂಥ ಮತ್ತು ದುರ್ಲಭವಾದದ್ದೂ ಇರಬೇಕು. ಇವೆಲ್ಲವೂ ಯೋಗ್ಯ ಹಣದ ಲಕ್ಷಣಗಳು.

ಆಧುನಿಕ ಯುಗದಲ್ಲಿ ಹಣವು ಯಾರಿಗೂ ಅರಿಯದ ವಸ್ತುವಿರದಿದ್ದರೂ, ಅದರ ವ್ಯಾಖ್ಯೆಯನ್ನು ಹೇಳುವುದು ಅಷ್ಟು ಸುಲಭವಲ್ಲ. ಹಣವು ಯಾವುದೇ ವಸ್ತುವಿರಬಹುದು.

ಆದರೆ ಅದು ಎಲ್ಲ ವಸ್ತುಗಳ ವಿನಿಮಯದಲ್ಲಿ ಸಾಮಾನ್ಯ ಮಾನದಂಡವೆಂದು ಭಾಗವಹಿಸಲು ಹಾಗೂ ಭೂತ ಮತ್ತು ವರ್ತಮಾನಗಳ ಎಲ್ಲ ಋಣಗಳನ್ನು ತೀರಿಸಲು ಉಪಯೋಗಿಸಲಿಕ್ಕೆ ಸಾರ್ವತ್ರಿಕ ಒಪ್ಪಿಗೆ ಪಡೆದಂಥ ವಸ್ತುವೇ ಹಣ. "ಸಾರ್ವತ್ರಿಕ ಒಪ್ಪಿಗೆ"ಯು ಹಣದ ಮೂಲಭೂತ ಗುಣ. ನಮ್ಮ ದೇಶದಲ್ಲಿ ಕರೆನ್ಸಿ ನೋಟುಗಳು ಹಣವೆನ್ನಿಸಿಕೊಳ್ಳುವವು. ಆದರೆ ಬ್ಯಾಂಕುಗಳ ಚೆಕ್ಕುಗಳಲ್ಲ. ಯಾಕೆಂದರೆ ಕೆಲವರು ಎಲ್ಲ ವ್ಯವಹಾರಗಳಲ್ಲಿ ಚೆಕ್ಕುಗಳನ್ನು ಹಣವೆಂದು ಪರಿಗಣಿಸುವುದಿಲ್ಲ. ಕೇವಲ ಪರಿಚಯವಿದ್ದ ವ್ಯಕ್ತಿಗಳಿಂದಷ್ಟೇ ವ್ಯವಹಾರಗಳಲ್ಲಿ ಚೆಕ್ಕುಗಳನ್ನು ಸ್ವೀಕರಿಸುವರು. ಇಂಗ್ಲೆಂಡ್ ಹಾಗೂ ಅಮೆರಿಕೆಯಂಥ ಮುಂದುವರೆದ ದೇಶಗಳಲ್ಲಿ ಚೆಕ್ಕುಗಳಿಗೆ ವ್ಯವಹಾರಗಳಲ್ಲಿ ಸಾರ್ವತ್ರಿಕ ಒಪ್ಪಿಗೆಯಿದೆ. ಆದ್ದರಿಂದ ಅಲ್ಲಿ ಅವು ಕರೆನ್ಸಿ ನೋಟುಗಳ ಜೊತೆಗೆ ಹಣವೆಂದು ಕರೆಯಲ್ಪಡುತ್ತವೆ. ವಸ್ತು ಹಣ, ಲೋಹದ ಹಣ, ಶಾಸನಬದ್ಧ ಹಣ, ಕಾಗದದ ಹಣ, ಚೆಕ್ಕುಗಳು, ಸಾಂಕೇತಿಕ ಹಣ ಮುಂತಾದವುಗಳು ಹಣದ ಪ್ರಕಾರಗಳು.

ಹಣದ ವ್ಯಾಖ್ಯೆಯು ಅದರ ಕಾರ್ಯಗಳ ಮೇಲೆ ಅವಲಂಬಿಸಿದೆ. ಹಣವು ಯಾವ ಯಾವ ಕಾರ್ಯಗಳನ್ನು ನಿರ್ವಹಿಸುತ್ತದೆನ್ನುವದು ಎಲ್ಲರಿಗೂ ವಿದಿತವಿದ್ದರೂ ಹಣವೆಂದರೆ ಏನೆಂಬುದನ್ನು ಯಾರೂ ಹೇಳಲಾರರು. ಇದಕ್ಕೆ ಫ್ರಾನಿಸ್ ಎ.ವಾಕರ್ ಅವರ ವ್ಯಾಖ್ಯೆಯೇ ಸಾಕ್ಷಿ. "ಹಣವು ಏನು ಮಾಡುವದೋ ಅದೇ ಹಣ"(Money is what money does). ಆದ್ದರಿಂದ ಹಣದ ಕಾರ್ಯಗಳ ಮಾಹಿತಿಯಿಲ್ಲದೇ ಹಣದ ವ್ಯಾಖ್ಯೆಯನ್ನು ಕೊಡಲಾಗುವುದಿಲ್ಲ. ಎಫ್.ಎಮ್.ಟೇಲರ್ ಅವರು "ವಿನಿಮಯದ ಮಾಧ್ಯಮವಾಗಲು ವಿಶೇಷವಾಗಿ ನಿರ್ಮಿಸಿದ ಹಾಗೂ ಮೀಸಲಿರಿಸಿದ ವಸ್ತುವೇ ಹಣ..." ಎಂದು ಹಣದ ವ್ಯಾಖ್ಯೆಯನ್ನು ಕೊಟ್ಟಿರುವರು. ಪ್ರೊ.ಡಿ.ಎಚ್.ರಾಬರ್ಟ್ಸನ್‌ರು "ವಸ್ತುಗಳ ವಿನಿಮಯಗಳಲ್ಲಿ ಹಾಗೂ ಬೇರೆ ವಿಧದ ವ್ಯವಹಾರಿಕ ಋಣಗಳನ್ನು ತೀರಿಸುವಲ್ಲಿ ಸಾಮಾನ್ಯವಾಗಿ ಒಪ್ಪಿಗೆ ಪಡೆದಿರುವ ವಸ್ತುವೇ ಹಣ" ಎಂದು ಹೇಳಿದ್ದಾರೆ.

ಸಾಮಾನ್ಯವಾಗಿ ಹೇಳಬೇಕೆಂದರೆ, ವಿನಿಮಯದ ಮಾಧ್ಯಮವಾಗಿ ಮತ್ತು ಸಾಲಗಳನ್ನು ನಿರ್ಧರಿಸುವಾಗ ವಿಸ್ತೀರ್ಣವಾಗಿ ಉಪಯೋಗಿಸುವ ಹಾಗೂ ಒಪ್ಪಿಗೆ ಪಡೆದಿರುವ ಯಾವುದೇ ವಸ್ತುವು ಹಣವೆನ್ನಿಸಿಕೊಳ್ಳುವುದು.

ಹಣ(Money): ಮಾನವ ವಿವೇಚನಾ ಶಕ್ತಿಯುಳ್ಳ ಪ್ರಾಣಿಯಾಗಿದ್ದು ಸುಖೀ ಜೀವನ ನಡೆಸಲು ಇಚ್ಛಿಸುತ್ತಾನೆ. ತನ್ನ ಅವಶ್ಯಕ ಬಯಕೆಗಳನ್ನು ತೃಪ್ತಿ ಪಡಿಸಿಕೊಳ್ಳಲು ಸ್ವತಃ ಸರಕುಗಳನ್ನು ಉತ್ಪಾದಿಸಿಕೊಳ್ಳುತ್ತಾನೆ ಅಥವಾ ತನಗೆ ಬೇಕಾದ ಸರಕುಗಳನ್ನು ಬೇರೆಯವರಿಂದ ವಿನಿಮಯದ ಮೂಲಕ ಪಡೆಯುತ್ತಾನೆ. ಇಂತಹ ಚಟುವಟಿಕೆಗಳನ್ನು ಸುಸೂತ್ರವಾಗಿ ನಡೆಸಲು ಹಣವೆಂಬ ಸಾಧನವನ್ನು ಮಾನವ ರೂಪಿಸಿಕೊಂಡಿದ್ದಾನೆ.

ಮಾನವನ ಅತಿ ಮುಖ್ಯ ಸಂಶೋಧನೆಗಳಲ್ಲಿ ಹಣದ ಸಂಶೋಧನೆ ಒಂದು. ಇಂದಿನ ಆರ್ಥಿಕ ವ್ಯವಸ್ತೆಗಳೆಲ್ಲಾ ಪ್ರಧಾನವಾಗಿ ಹಣ ರೂಪಿ ಆರ್ಥಿಕ ವ್ಯವಸ್ಥೆಗಳಾಗಿವೆ. ಇಂದು ಮಾನವ ಆರ್ಥಿಕ ಚಟುವಟಿಕೆಗಳನ್ನು ಹಣದ ಮೂಲಕವೇ ಕೈಗೊಳ್ಳುತ್ತಿದ್ದಾನೆ. ಹೀಗಾಗಿ ಒಂದು ರಾಷ್ಟ್ರದ ಆರ್ಥಿಕ ಪ್ರಗತಿಯ ಮೇಲೆ ಹಣ ತನ್ನ ಪ್ರಭಾವವನ್ನು ಖಚಿತವಾಗಿ ಬೀರುತ್ತದೆ ಎಂದು ಅಭಿಪ್ರಾಯ ಪಡಬಹುದು. ಹಣದ ಸಂಶೋಧನೆಯ ಪ್ರಾಮುಖ್ಯತೆಯನ್ನು ಜಿಯೋಫ್ರಿ ಕ್ರೌಥರ್ ತನ್ನ ಪ್ರಸಿದ್ಧ ಗ್ರಂಥವಾದ "ಹಣದ ರೂಪು ರೇಷೆಗಳು" ಎನ್ನುವುದರಲ್ಲಿ ಈ ರೀತಿ ವಿವರಿಸುತ್ತಾನೆ. "ಜ್ಞಾನದ ಪ್ರತಿಯೊಂದು ಭಾಗವೂ ತನ್ನದೆ ಆದ ಆವಿಷ್ಕಾರಗಳನ್ನು ಹೊಂದಿದೆ. ಯಂತ್ರಶಾಸ್ತ್ರದಲ್ಲಿ ಚಕ್ರ, ವಿಜ್ಞಾನದಲ್ಲಿ ಬೆಂಕಿ, ರಾಜಕೀಯದಲ್ಲಿ ಓಟು ಯಾವ ರೀತಿ ಮಹತ್ವದ ಆವಿಷ್ಕಾರಗಳಾಗಿವೆಯೋ ಅದೇ ರೀತಿ ಅರ್ಥಶಾಸ್ತ್ರದಲ್ಲಿ ಹಣ ಮಹತ್ವದ ಆವಿಷ್ಕಾರವಾಗಿದೆ.

ಹಣ ಆಧುನಿಕ ಆರ್ಥಿಕ ವ್ಯವಸ್ಥೆಗಳಲ್ಲಿ ತೀರಾ ಅಗತ್ಯವಾದ ಸಾಧನವಾಗಿ ಪರಿಣಮಿಸಿದೆ. ಹಣವಿಲ್ಲದೇ ಏನನ್ನೂ ಸಾಧಿಸಲು ಸಾಧ್ಯವಿಲ್ಲ ಎಂಬುದಾಗಿಯೇ ಹೇಳಬಹುದು. ಇಂದು ಇಷ್ಟೊಂದು ಪ್ರಾಮುಖ್ಯತೆಯನ್ನು ಹೊಂದಿರುವ ಹಣ ಒಂದು ಕಾಲದಲ್ಲಿ ಅಸ್ತಿತ್ವದಲ್ಲಿರಲಿಲ್ಲ ಅಥವಾ ಹಣರಹಿತ ಅರ್ಥ ವ್ಯವಸ್ಥೆ ಅಸ್ತಿತ್ವದಲ್ಲಿತ್ತು ಎಂದರೆ ಕೂಡಲೆ ಯಾರೂ ನಂಬದಿರಬಹುದು. ಆದರೂ ಇದು ಸತ್ಯ ಸಂಗತಿ. ಮಾನವ ಹಣವನ್ನು ಆವಿಷ್ಕಾರಿಸುವುದಕ್ಕಿಂತ ಮುಂಚಿತವಾಗಿ ವಿನಿಮಯ ಕ್ರಿಯೆಯ ಸ್ವರೂಪ ಕುತೂಹಲಕಾರಿ ಸಂಗತಿಯಾಗಿತ್ತು. ಹಣದ ಆವಿಷ್ಕಾರಕ್ಕಿಂತ ಮೊದಲು ಸಾಟಿ ಪದ್ಧತಿ(Barter System) ಅಸ್ತಿತ್ವದಲ್ಲಿತ್ತು. ಹಣದ ಬಗ್ಗೆ ಹೆಚ್ಚು ವಿವರವಾಗಿ ತಿಳಿದುಕೊಳ್ಳುವುದಕ್ಕಿಂತ ಮೊದಲು ಸಾಟಿ ಪದ್ಧತಿ ಎಂದರೇನು? ಅದರ ಸ್ವರೂಪವೇನು ಮತ್ತು ಯಾವ ಕಾರಣಗಳಿಂದಾಗಿ ಅದು ಕಾಣೆಯಾಯಿತು ಎನ್ನುವುದನ್ನು ತಿಳಿದುಕೊಳ್ಳುವುದು ಅವಶ್ಯಕ.

ಸಾಟಿ ಪದ್ಧತಿ(Barter System): ಹಣದ ಆವಿಷ್ಕಾರಕ್ಕಿಂತ ಮುಂಚಿತವಾಗಿ ಸಾಟಿ ಪದ್ಧತಿ ಅಸ್ತಿತ್ವದಲ್ಲಿತ್ತು. ಯಾವುದೇ ಮಾಧ್ಯಮದ ಸಹಾಯವಿಲ್ಲದೇ ಸರಕುಗಳನ್ನು ಸರಕುಗಳಿಗೆ ನೇರವಾಗಿ ವಿನಿಮಯ ಮಾಡಿಕೊಳ್ಳುವ ಕ್ರಿಯೆಯೇ ಸಾಟಿ ಪದ್ಧತಿ. ಪುರಾತನ ಸಮಾಜದಲ್ಲಿ ಮಾನವನ ಬಯಕೆಗಳು ತುಂಬಾ ಮಿತವಾಗಿದ್ದವು. ಮಾನವ ತನ್ನ ಕೆಲವೇ ಕನಿಷ್ಠ ಬಯಕೆಗಳನ್ನು ಸಾಟಿ ಪದ್ಧತಿಯ ಮುಖಾಂತರವೇ ಪೂರೈಸಿಕೊಳ್ಳಬಹುದಾಗಿತ್ತು. ನಾಗರಿಕತೆ ಬೆಳೆಯುತ್ತಾ ಹೋದಂತೆ ಮಾನವನ ಬಯಕೆಗಳು ಮತ್ತು ವ್ಯಾಪಾರದ ಗಾತ್ರ ಹೆಚ್ಚಾಗಿ ಸಾಟಿ ಪದ್ಧತಿಯ ಮೂಲಕ ಮಾನವ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಅಶಕ್ತನಾದ. ಸಾಟಿ ಪದ್ಧತಿಯಲ್ಲಿ ಕ್ರಮೇಣವಾಗಿ ಹಲವಾರು ನ್ಯೂನತೆಗಳು ಕಾಣಲಾರಂಭಿಸಿದವು. ಈ ನ್ಯೂನತೆಗಳ ಪರಿಣಾಮವಾಗಿ ಸಾಟಿ ಪದ್ಧತಿ ಕ್ರಮೇಣವಾಗಿ ತನ್ನ ಅವಸಾನವನ್ನು ಕಂಡುಕೊಂಡಿತು ಎಂಬುದನ್ನು ವೀರಯ್ಯ ಕೆ.ಎಂ., ಹಣ, ಬ್ಯಾಂಕುಗಳು ಮತ್ತು ಸಾರ್ವಜನಿಕ ಅರ್ಥಶಾಸ್ತ್ರದಲ್ಲಿ ಭಾಷಾಂತರಿಸಿರುತ್ತಾರೆ.

ಹಣದ ಸಿದ್ಧಾಂತ: ಮಾನವ ಅನಾದಿ ಕಾಲದಿಂದಲೂ ತನ್ನ ಜೀವನವನ್ನು ಹಿತದಾಯಕವಾಗಿ ರೂಪಿಸಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಅದರಂತೆ ಮಾನವ ಕುಲ ತನ್ನ ಜೀವನವನ್ನು ಹಾಗೂ ದಿನನಿತ್ಯ ಕಾರ್ಯಗಳನ್ನು ಸರಳಗೊಳಿಸಲು ಸಂಶೋಧಿಸುತ್ತಾ ಬಂದಿದೆ. ಮಾನವನ ಅನೇಕ ಸಂಶೋಧನೆಯಲ್ಲಿ ಹಣ ಪ್ರಥಮ ಸ್ಥಾನ ಪಡೆದಿದೆ. ನಾಗರಿಕತೆಗಳ ಇತಿಹಾಸದಲ್ಲಿ ಹಣದ ಬೆಳವಣಿಗೆ ಒಂದು ಪ್ರಮುಖ ಮೈಲುಗಲ್ಲಾಗಿದೆ. ವಿಜ್ಞಾನಗಳಲ್ಲಿನ ಸಂಶೋಧನೆಗಳಂತೆ ಹಣದ ಸೃಷ್ಟಿಯು ಒಂದೇ ದಿನದಲ್ಲಿ ಆಗಿರುವುದಿಲ್ಲ. ಅದು ಕಾಲಾಂತರದಲ್ಲಿ ಮಾನವನ ನಾಗರಿಕತೆಯ ಹಲವು ಹಂತಗಳಲ್ಲಿ ಅವಶ್ಯಕತೆಗಳಿಗೆ ತಕ್ಕಂತೆ ಬೆಳವಣಿಗೆಯಾಗಿ ಈ ರೂಪ ಹೊಂದಿದೆ. ಆರ್ಥಿಕ ಚಟುವಟಿಕೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವ್ಯವಹಾರಗಳು ಬೆಳೆದಂತೆ ಹಣದ ಅನೇಕ ರೂಪಗಳು ಸೃಷ್ಟಿಯಾಗಿ ರೂಪಾಂತರಗೊಂಡು ಪ್ರಚಲಿತ ರೂಪ ಹೊಂದಿದೆ.

ಪುರಾತನ ಕಾಲದಲ್ಲಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ವಸ್ತು ರೂಪದ ಹಣ ಪ್ರಚಲಿತದಲ್ಲಿದ್ದುದನ್ನು ಆರ್ಥಿಕ ಇತಿಹಾಸ ಸಾರುತ್ತದೆ.

ಇವುಗಳಲ್ಲದೆ ಆಡುಗಳು, ದನಗಳು, ಹಂದಿಗಳು, ಪ್ರಾಣಿಗಳು, ಚರ್ಮ ಇತ್ಯಾದಿಗಳನ್ನು ಹಣವನ್ನಾಗಿ ಬಳಸಲಾಗುತ್ತಿತ್ತು. ವಸ್ತು ರೂಪದ ಹಣದ ಜೊತೆ ಜೊತೆಯಾಗಿ ಕಾಲಾಂತರದಲ್ಲಿ ವಸ್ತು ವಿನಿಮಯ ಪದ್ಧತಿಯೂ ಜಾರಿಯಲ್ಲಿತ್ತು. ವಸ್ತು ವಿನಿಮಯ ಪದ್ಧತಿಯಲ್ಲಿ ವ್ಯಾಪಾರಿಗಳು ಹಾಗೂ ಗ್ರಾಹಕರು ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತಿತ್ತು.

ವಸ್ತು ವಿನಿಮಯ ಪದ್ಧತಿಯ ಅನೇಕ ತೊಂದರೆಗಳ ಕಾರಣದಿಂದ ಮಾನವನ ಆರ್ಥಿಕ ಚಟುವಟಿಕೆಗಳಾದ ಉಪಭೋಗ, ಉತ್ಪಾದನೆ, ವಿನಿಮಯಗಳು ಅತೀ ಮಂದಗತಿಯಲ್ಲಿ ಸಾಗುತ್ತಿದ್ದವು. ವ್ಯಾಪಾರ ಕೇವಲ ವಾರದ ಸಂತೆಗಳಲ್ಲಿ, ಜಾತ್ರೆಗಳಲ್ಲಿ, ಉರುಸುಗಳಲ್ಲಿ ಮಾತ್ರ ನಡೆಯುತ್ತಿದ್ದವು. ಈ ದಿನಗಳಲ್ಲಿ ದೇವರ/ಪೀಠಗಳ ಜಾತ್ರೆ ಹಾಗೂ ಉರುಸುಗಳಲ್ಲಿ ಭಕ್ತಿ ಸಂಗಡ(ಪೇಠೆಯು) ಜನರ ಆಕರ್ಷಣೆಯಾಗಿತ್ತು. ಉದಾಹರಣೆಗಾಗಿ, ಕೊಡಗು ಜಿಲ್ಲೆಯಲ್ಲಿ ವಾರದ ಸಂತೆ ನಡೆಯುವ ಹಳ್ಳಿಯಾದ ಸೋಮವಾರಪೇಟೆ ಒಂದು ನಿದರ್ಶನವಾಗಿದೆ. ಈಗ ವಾರದ ಎಲ್ಲಾ ದಿನಗಳಲ್ಲೂ ಅಲ್ಲಿ ಪೇಟೆ ನಡೆಯುತ್ತಿದ್ದರೂ ಹೆಸರು ಮಾತ್ರ ಸೋಮವಾರಪೇಟೆ ಆಗಿಯೇ ಉಳಿದಿದೆ. ವಸ್ತುವಿನಿಮಯ ಪದ್ಧತಿಯ ಕಾಲದಲ್ಲಿ ಉದ್ಯೋಗ ಸೃಷ್ಟಿ, ಸಾರಿಗೆ ಅಭಿವೃದ್ಧಿ, ವ್ಯಾಪಾರ ಅಭಿವೃದ್ಧಿ–ತೆರಿಗೆ ಸಂಗ್ರಹಣೆ ಇತ್ಯಾದಿಗಳು ಅತಿ ಕನಿಷ್ಠ ಮಟ್ಟದಲ್ಲಿದ್ದವು. ಒಟ್ಟಿನಲ್ಲಿ ಆರ್ಥಿಕ ಪ್ರಗತಿ ಮಂದಗತಿಯಲ್ಲಿ ಸಾಗುತ್ತಿತ್ತು. ಸಾಟಿ ಪದ್ಧತಿಯು, ಕಾಲಾಂತರದಲ್ಲಿ ಕಡಿಮೆಯಾಗುತ್ತಾ ಲೋಹದ ಹಣದ ಸೃಷ್ಟಿಯಾಗಿ ವ್ಯಾಪಾರದಲ್ಲಿ ವಿನಿಮಯದ ಮಾಧ್ಯಮವಾಯಿತು(ರೇಣುಕಾರ್ಯ ಸಿ.ಕೆ.(ಸಂ), ಪ್ರಥಮ ಪಿಯುಸಿ ಅರ್ಥಶಾಸ್ತ್ರ, ೨೦೦೪, ಪು.೨೧೪-೨೧೫).

ಹಣ(Money): ಹಣ ಎಂದರೇನು? ಎನ್ನುವ ಪ್ರಶ್ನೆ ಆನೆ ಎಂದರೇನು? ಎನ್ನುವ ಪ್ರಶ್ನೆಯಂತಿದೆ. ಆನೆ ಎಂದರೇನು? ಎನ್ನುವ ಪ್ರಶ್ನೆಗೆ ಕೂಡಲೇ ಯಾವ ರೀತಿ ಉತ್ತರ ದೊರಕುವುದಿಲ್ಲವೋ ಅದೇ ರೀತಿ ಹಣ ಎಂದರೇನು? ಎನ್ನುವ ಪ್ರಶ್ನೆಗೂ ಕೂಡಲೇ ಖಚಿತವಾದ ಉತ್ತರ ದೊರಕುವುದಿಲ್ಲ. ಆನೆ ಎಂದರೇನು? ಎನ್ನುವ ಪ್ರಶ್ನೆಗೆ ಉತ್ತರಿಸಲು ಆನೆಯನ್ನು ವರ್ಣಿಸುವ ರೀತಿಯಲ್ಲಿಯೇ ಹಣ ಎಂದರೇನು? ಎನ್ನುವ ಪ್ರಶ್ನೆಗೆ ಉತ್ತರಿಸಲು ಹಣ ನಿರ್ವಹಿಸುವ ಕಾರ್ಯವನ್ನು ವಿವರಿಸಬೇಕಾಗುತ್ತದೆ. ಹಣಕ್ಕೆ ಸರ್ವಸಮ್ಮತವಾದ ವ್ಯಾಖ್ಯೆಯನ್ನು ನೀಡುವುದು ತುಂಬಾ ಕಷ್ಟ. ಅದಾಗ್ಯೂ ಅನೇಕ ಅರ್ಥಶಾಸ್ತ್ರಜ್ಞರು ಹಣವನ್ನು ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ. ಕೆಲವು ಅರ್ಥಶಾಸ್ತ್ರಜ್ಞರು ಸಂಕುಚಿತ ದೃಷ್ಟಿಕೋನದಿಂದ ಹಣವನ್ನು ವ್ಯಾಖ್ಯಾನಿಸಿದ್ದಾರೆ. ಸಂಕುಚಿತ ಅರ್ಥದಲ್ಲಿ ಹಣ ಕೇವಲ ಲೋಹದ ಹಣಕ್ಕೆ ಮಾತ್ರ ಅನ್ವಯವಾಗುತ್ತದೆ. ಆದರೆ ವಿಶಾಲಾರ್ಥದಲ್ಲಿ ಹಣವು ವಿನಿಮಯ ಮಾಧ್ಯಮವಾಗಿ ಕಾರ್ಯ ನಿರ್ವಹಿಸುವ ಎಲ್ಲಾ ವಸ್ತುಗಳಿಗೂ ಅನ್ವಯವಾಗುತ್ತದೆ.

ಹಣದ ಅರ್ಥ ವಿವರಣೆಯ ದೃಷ್ಟಿಯಿಂದ ವಿವಿಧ ಅರ್ಥಶಾಸ್ತ್ರಜ್ಞರು ಹಣಕ್ಕೆ ನೀಡಿರುವ ವ್ಯಾಖ್ಯೆಗಳನ್ನು ಪರಿಚಯ ಮಾಡಿಕೊಳ್ಳಬೇಕಾಗುತ್ತದೆ. ಎಫ್.ಎ.ವಾಕರ್‌ನ ಪ್ರಕಾರ "ಯಾವ ವಸ್ತುವು ಹಣದ ಕಾರ್ಯಗಳನ್ನು ನಿರ್ವಹಿಸುವುದೋ ಅದೇ ಹಣ". ಈ ವ್ಯಾಖ್ಯೆ ಹಣಕ್ಕೆ ಸರಿಯಾದ ಅರ್ಥ ವಿವರಣೆಯನ್ನು ನೀಡಿಲ್ಲ. ವಾಕರ್‌ನ ಅರ್ಥ ವಿವರಣೆಯಿಂದ ಹಣಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಶ್ನೆ ಕಾಣಿಸಿಕೊಳ್ಳುವುದು. ಅದೇನೆಂದರೆ ಹಣವು ಏನನ್ನು ಮಾಡುತ್ತದೆ? ಎನ್ನುವುದು. ಹಣವು ಏನನ್ನು ಮಾಡುತ್ತದೆ ಎನ್ನುವುದನ್ನು ತಿಳಿದುಕೊಳ್ಳಲು ಹಣ ನಿರ್ವಹಿಸುವ ಕಾರ್ಯಗಳಾವುವು? ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ವಾಕರ್‌ನ ವ್ಯಾಖ್ಯೆ ಹಣಕ್ಕೆ ಸಮರ್ಪಕವಾದ ಅರ್ಥ ವಿವರಣೆಯನ್ನು ನೀಡು ವುದಿಲ್ಲವೆಂದೇ ಹೇಳಬಹುದು.

ಕ್ರೌಥರ್‌ನ ಪ್ರಕಾರ "ವಿನಿಮಯ ಮಾಧ್ಯಮವಾಗಿ ಸರ್ವ ಸ್ವೀಕೃತವಾಗಿದ್ದು, ವಸ್ತುಗಳ ಮೌಲ್ಯವನ್ನು ಅಳೆಯುವ ಮತ್ತು ಸಂಗ್ರಹಿಸಿಡುವ ಸಾಧನವಾಗಿರುವ ಯಾವುದೇ ವಸ್ತುವನ್ನು ಹಣವೆಂದು ಕರೆಯಬಹುದು." ಕ್ರೌಥರ್ ತಮ್ಮ ವ್ಯಾಖ್ಯೆಯಲ್ಲಿ ಹಣ ಎನ್ನುವುದು ವಿನಿಮಯ ಮಾಧ್ಯಮವಾಗಿರಬೇಕು ಮೇಲಾಗಿ ಅದು ಸಾರ್ವಜನಿಕರ ಒಪ್ಪಿಗೆಯನ್ನು ಪಡೆದಿರಬೇಕು ಎಂದು ಹೇಳುವುದರ ಮೂಲಕ ಹಣಕ್ಕೆ ಸಮರ್ಪಕ ಅರ್ಥ ವಿವರಣೆ ನೀಡಲು ಪ್ರಯತ್ನಿಸಿದ್ದಾನೆ. ಡಿ.ಎಚ್.ರಾಬರ್ಟ್‌ಸನ್‌ನ ಪ್ರಕಾರ "ವಸ್ತುಗಳನ್ನು ಕೊಳ್ಳುವಾಗ ಅಥವಾ ಇತರ ಯಾವುದೇ ವ್ಯವಹಾರಿಕ ಕರಾರುಗಳನ್ನು ನಿರ್ವಹಿಸುವಾಗ ಸರ್ವ ಸ್ವೀಕೃತವಾಗಿ ಒಪ್ಪಿಕೊಳ್ಳಲಾಗುವ ವಸ್ತುವೇ ಹಣ." ಸೆಲಿಗ್‌ಮನ್ ಪ್ರಕಾರ "ಸಾರ್ವತ್ರಿಕವಾಗಿ ಸ್ವೀಕೃತವಾಗುವ ಯಾವುದೇ ವಸ್ತು ಹಣವಾಗಿದೆ." ಪ್ರೊ.ಇಲೈ(Ely) ಪ್ರಕಾರ "ಯಾವ ವಸ್ತು ವಿನಿಮಯ ಮಾಧ್ಯಮವಾಗಿ ಜನರಿಂದ ಜನರಿಗೆ

ಚಲಾವಣೆಯಾಗುತ್ತದೆಯೋ ಅದೇ ಹಣ." ಹಣದ ಈ ವಿವಿಧ ವ್ಯಾಖ್ಯೆಗಳನ್ನು ಪರಿಶೀಲಿಸಿದಾಗ ಕೆಲವರು ಹಣದ ಕಾರ್ಯಗಳಿಗೆ ವಿಶೇಷ ಮಹತ್ವ ನೀಡಿರುವುದು ಕಂಡುಬಂದರೆ, ಇನ್ನು ಕೆಲವರು ಹಣದ ವಿಶಿಷ್ಟ ಗುಣಗಳನ್ನು ಪರಿಚಯಿಸಿರುವುದು ಮತ್ತೆ ಕೆಲವರು ಹಣದಲ್ಲಿ ಅಡಕವಾಗಿರುವ ಕಾನೂನಿನ ಅಂಶಗಳನ್ನು ವಿವರಿಸಿರುವುದು ಕಂಡುಬರುತ್ತದೆ. ಹಣದ ವ್ಯಾಪ್ತಿ ವಿಶಾಲವಾದುದು ಎನ್ನುವುದರಲ್ಲಿ ಯಾವುದೇ ಭಿನ್ನಾಭಿಪ್ರಾಯಗಳಿಲ್ಲ. ಲೋಹದ ಹಣ, ಕರೆನ್ಸಿ, ನೋಟುಗಳು, ಚೆಕ್ ಮುಂತಾದವುಗಳು ಹಣ ಎನಿಸಿಕೊಳ್ಳುತ್ತವೆ. ಕರೆನ್ಸಿ ನೋಟುಗಳನ್ನು ಪ್ರಾತಿನಿಧಿಕ ಹಣವೆಂದು ಪರಿಗಣಿಸಬಹುದು. ಇವುಗಳಿಗೆ ಕಾನೂನಿನ ಬೆಂಬಲ ಇರುತ್ತದೆ. ಕರೆನ್ಸಿ ನೋಟುಗಳು ತುಂಬಾ ಮಹತ್ವದ ಪಾತ್ರವನ್ನು ಇಂದು ವಹಿಸುತ್ತಿವೆ. ಚೆಕ್, ಡ್ರಾಫ್ಟ್ ಮುಂತಾದವು ಪೂರ್ಣ ಪ್ರಮಾಣದ ಹಣವಲ್ಲ. ಕಾನೂನು ಬದ್ಧ ಹಣದಂತೆ ಇವುಗಳು ಸರ್ವ ಸ್ವೀಕೃತಿಯ ಲಕ್ಷಣವನ್ನು ಪಡೆದಿಲ್ಲ. ಇವುಗಳನ್ನು ಸಮೀಪ ಹಣ(Near Money)ವೆಂದೇ ಕರೆಯಲಾಗುತ್ತದೆ. ಹಣದ ಅರ್ಥ ವಿವರಣೆಯನ್ನು ಸಮರ್ಪಕವಾಗಿ ಅರಿಯುವ ದೃಷ್ಟಿಯಿಂದ ಹಣ ನಿರ್ವಹಿಸುವ ಕಾರ್ಯಗಳನ್ನು ಪರಿಚಯ ಮಾಡಿಕೊಳ್ಳ ಬೇಕಾಗುತ್ತದೆ(ವೀರಯ್ಯ ಕೆ.ಎಂ., ಹಣ, ಬ್ಯಾಂಕುಗಳು ಮತ್ತು ಸಾರ್ವಜನಿಕ ಅರ್ಥಶಾಸ್ತ್ರ, ೧೯೯೮, ಪು.೪-೭).

ಹಣ(Money): ಪ್ರೊ.ವಾಕರ್ ಎಂಬವರು ಹೀಗೆ ವ್ಯಾಖ್ಯೆ ನೀಡಿದ್ದಾರೆ. "ಹಣವು ಮಾಡುವ ಕೆಲಸವನ್ನು ಮಾಡುವ ವಸ್ತುವೇ ಹಣವು" ಆದರೆ ಈ ವ್ಯಾಖ್ಯೆಯು ಹಣವು ಯಾವ ಕಾರ್ಯಗಳನ್ನು ಮಾಡುತ್ತದೆಂಬುದನ್ನು ಸ್ಪಷ್ಟಪಡಿಸುವುದಿಲ್ಲ. ಜಿ.ಕ್ರೌಥರ್(G.Crowther) ಎಂಬುವರು ಹೀಗೆ ಹೇಳಿದ್ದಾರೆ. "ವಿನಿಮಯದ ಮಾಧ್ಯಮವೆಂದು ಸಾಮಾನ್ಯವಾಗಿ ಸ್ವೀಕರಿಸಲ್ಪಟ್ಟ ಮತ್ತು ಅದೇ ವೇಳೆಗೆ ಮೌಲ್ಯಮಾಪನ ಹಾಗೂ ಮೌಲ್ಯ ಸಂಗ್ರಹವೆಂದು ಕಾರ್ಯ ಮಾಡುವ ಯಾವುದೇ ವಸ್ತುವು ಹಣವಾಗಿದೆ." ಹೀಗೆ ಈ ವ್ಯಾಖ್ಯೆಯು ಹಣದ ಪ್ರಮುಖ ಕಾರ್ಯಗಳನ್ನು ಸೂಚಿಸಿ, ಇಂಥ ಕಾರ್ಯಗಳನ್ನು ಮಾಡುವ ಯಾವುದೇ ವಸ್ತುವು ಹಣವೆಂದು ಪರಿಗಣಿಸಲಾಗುತ್ತದೆಯೆಂದು ಸ್ಪಷ್ಟಪಡಿಸುತ್ತಿದೆ. ಹೀಗೆ ಹಣವು ವಿನಿಮಯದ ಮಾಧ್ಯಮವಾಗಿ, ಎಲ್ಲ ಸರಕು-ಸೇವೆಗಳ ಮೌಲ್ಯವನ್ನು ಅಳೆಯುವ ಮತ್ತು ಸಂಪತ್ತನ್ನು ಸಂಗ್ರಹಿಸುವ ಹಾಗೂ ಸ್ಥಳಾಂತರಿಸುವ ಸಾಧನವಾಗಿದೆ.

ಹಣದ ಕಾರ್ಯಗಳು: ಹಣವು ಇಂದು ಅನೇಕ ಕಾರ್ಯಗಳನ್ನು ಮಾಡುತ್ತದೆ. ಆದರೆ ಅದರ ಮುಖ್ಯ ಕಾರ್ಯಗಳನ್ನು ದ್ವಿಪದಿಯ ಪದ್ಯ ರೂಪದಲ್ಲಿ ಕೆಳಗಿನಂತೆ ಕೊಟ್ಟಿದೆ.

"ಹಣವು ನಿರ್ವಹಿಸುವ ಕಾರ್ಯಗಳು ನಾಲ್ಕು,
ಮಾಧ್ಯಮ, ಮಾಪನ, ಪ್ರಮಾಣ ಮತ್ತು ಸಂಗ್ರಹ"

೧. ಹಣವು ವಿನಿಮಯದ ಮಾಧ್ಯಮವಾಗಿದೆ: ಹಣವು ಎಲ್ಲ ಸರಕು-ಸೇವೆಗಳನ್ನು ವಿನಿಮಯ ಮಾಡಲು ಮಾಧ್ಯಮವೆಂದು ಉಪಯೋಗಿಸಲ್ಪಡುತ್ತದೆ. ಅಂದರೆ ಸರಕು ಅಥವಾ ಸೇವೆಗಳನ್ನು

ಕೊಳ್ಳಲು ಅಥವಾ ಮಾರಲು ಹಣವು ಮಾಧ್ಯಮವಾಗಿದೆ. ನಮ್ಮಲ್ಲಿರುವ ಸರಕು ಅಥವಾ ಸೇವೆಯನ್ನು ಹಣಕ್ಕೆ ಮಾರಾಟ ಮಾಡಿ, ಬಂದ ಹಣದಿಂದ ನಮಗೆ ಬೇಕಾಗುವ ಸರಕು ಅಥವಾ ಸೇವೆಗಳನ್ನು ಕೊಂಡುಕೊಳ್ಳಬಹುದು. ಹಣದ ಉಪಯೋಗದಿಂದ ನಮ್ಮ ಬಯಕೆಯನ್ನು ಸುಲಭವಾಗಿ ತೃಪ್ತಿಪಡಿಸಬಹುದು. ಹಣವು ವಸ್ತು–ವಿನಿಮಯ ಪದ್ಧತಿಯ ಪ್ರಮುಖ ದೋಷವಾದ 'ಬೇಡಿಕೆಗಳ ದ್ವಿಮುಖ ಹೊಂದಾಣಿಕೆಯ ಅಭಾವ'ವನ್ನು ನಿವಾರಿಸುವುದಲ್ಲದೆ, ವಿನಿಮಯವು ಸುಲಭ, ಸುಗಮ ಮತ್ತು ಅನುಕೂಲವಾಗುವಂತೆ ಮಾಡುತ್ತದೆ.

೨. ಹಣವು ಮೌಲ್ಯಮಾಪನದ ಸಾಧನವಾಗಿದೆ: ಹಣವು ಮೌಲ್ಯವನ್ನು ಅಳೆಯುವ ಸಾಮಾನ್ಯ ಸಾಧನವಾಗಿದೆ. ಅದು ಎಲ್ಲ ಸರಕು ಮತ್ತು ಸೇವೆಗಳ ಮೌಲ್ಯವನ್ನು ಅಳೆಯುತ್ತದೆ. ಸರಕು–ಸೇವೆಗಳ ಮೌಲ್ಯವನ್ನು ಹಣದ ರೂಪದಲ್ಲಿ ವ್ಯಕ್ತಪಡಿಸಿದಾಗ, ಅದಕ್ಕೆ 'ಬೆಲೆ' ಎಂದು ಕರೆಯಲಾಗುತ್ತದೆ. ಈ ಬೆಲೆಯನ್ನು ತುಲನೆ ಮಾಡಿ, ನಮಗೆ ಯಾವುದು ಹೆಚ್ಚು ಉಪಯುಕ್ತವೆಂಬುದನ್ನು ಅವುಗಳ ವಿನಿಮಯದ ಪ್ರಮಾಣವನ್ನು ಅಂದರೆ ದರವನ್ನು ನಿರ್ಧರಿಸುವುದು ಸುಲಭವಾಗುತ್ತದೆ. ಉದಾಹರಣೆಗೆ, ಒಂದು ಕ್ವಿಂಟಲ್ ಅಕ್ಕಿಗೆ ೧,೨೦೦ ರೂ. ಬೆಲೆ, ಟಿ.ವ್ಹಿ.ಸೆಟ್ಟಿಗೆ ರೂ.೪೦೦೦ ಬೆಲೆ, ಒಂದು ಪೆನ್ನಿಗೆ ೧೦ ರೂ., ಒಬ್ಬ ಗುಮಾಸ್ತನ ಸೇವೆಗೆ ತಿಂಗಳಿಗೆ ೨,೦೦೦ ರೂ. ಒಬ್ಬ ಕಾರ್ಮಿಕನ ಸೇವೆಗೆ ದಿನಕ್ಕೆ ೫೦ ರೂ. –ಹೀಗೆ ಪ್ರತಿಯೊಂದು ವಸ್ತುವನ್ನು ಅಥವಾ ಸೇವೆಯನ್ನು ಹಣದ ರೂಪದಲ್ಲಿ ವ್ಯಕ್ತಪಡಿಸಲಾಗುತ್ತದೆ.

೩. ಭಾವೀ ವ್ಯವಹಾರಗಳ ಪ್ರಮಾಣ: ಹಣದ ಮೂಲಕ ಲೇವಾದೇವಿ ವ್ಯವಹಾರಗಳನ್ನು ಅಂದರೆ ಸಾಲ ಕೊಡುವ ಮತ್ತು ಸಾಲ ತರುವ ವ್ಯವಹಾರಗಳನ್ನು ಸುಲಭವಾಗಿ ಕೈಕೊಳ್ಳಬಹುದು. ಅಂದರೆ ಹಣವು ಭಾವೀ ವ್ಯವಹಾರಗಳ ಪ್ರಮಾಣವಾಗಿದೆ. ವಸ್ತುಗಳನ್ನು ಸಾಲವಾಗಿ(ಅಂದರೆ ಉದ್ರಿಯಿಂದ) ಕೊಂಡಾಗ ಅವುಗಳಿಗೆ ಕೊಡಬೇಕಾದ ಹಣವನ್ನು ಕೆಲ ಸಮಯದ ನಂತರ ಕೊಡಬಹುದು. ಅದರಂತೆ ಹಣವನ್ನು ಸಾಲವಾಗಿ ತಂದಾಗ, ಕೆಲ ಸಮಯದ ನಂತರ ಅದನ್ನು ಸುಲಭವಾಗಿ ಹಿಂದಿರುಗಿಸಬಹುದು. ಹಣದ ಮೌಲ್ಯವು ಸಾಮಾನ್ಯವಾಗಿ ಕನಿಷ್ಠ ಹಲವಾರು ವರ್ಷಗಳವರೆಗಾದರೂ ಒಂದೇ ಸಮವಾಗಿರುತ್ತದೆ. ಅಂದರೆ ಹಣದ ಈಗಿನ ಮೌಲ್ಯ ಮತ್ತು ಭಾವೀ ಮೌಲ್ಯ ಸಾಮಾನ್ಯವಾಗಿ ಒಂದೇಯಾಗಿರುತ್ತದೆ. ಹೀಗಾಗಿ ಸಾಲ ಕೊಡುವವರಿಗಾಗಲಿ ಅಥವಾ ಸಾಲ ಪಡೆಯುವವರಿಗಾಗಲಿ ನಷ್ಟವಾಗುವುದಿಲ್ಲ. ಇದರಿಂದ ಪತ್ತಿನ ಸೌಲಭ್ಯಗಳು ಅಧಿಕವಾಗಿ ವ್ಯಾಪಾರೋದ್ಧಿಮೆಗಳು ಬೆಳೆಯುತ್ತವೆ. ಅನುಭೋಗಿಗಳು ಸರಕುಗನ್ನು ಪತ್ತಿನ ಮೇಲೆ(ಉದ್ರಿಯಿಂದ) ಪಡೆಯಬಹುದು. ಉತ್ಪಾದಕರು ಹಣಕಾಸಿನ ಸಂಸ್ಥೆಗಳಿಂದ ಹಣವನ್ನು ಪತ್ತಿನ ರೂಪದಲ್ಲಿ ಪಡೆಯಬಹುದು. ಸರಕಾರವು

ಸಾರ್ವಜನಿಕರಿಂದ ಹಣವನ್ನು ಸಲವಾಗಿ ಪಡೆದು ಹಲವಾರು ವರ್ಷಗಳ ನಂತರ ಹಿಂದಿರುಗಿಸಬಹುದು. ಹಣವು ಲೆಕ್ಕ ಪತ್ರಗಳನ್ನಿಡಲು ಅತ್ಯುಪಯುಕ್ತವಾದ ಸಾಧನವಾಗಿದೆ. ಒಂದು ವೇಲೆ ಹಣವಿಲ್ಲದಿದ್ದರೆ, ಖರೀದಿ ಮತ್ತು ಮಾರಾಟಗಳ ಹಾಗೂ ಕೊಡತಕ್ಕೊಳ್ಳುವ ವ್ಯವಹಾರಗಳ ಲೆಕ್ಕವನ್ನಿಡುವುದು ಬಹಳ ಕಠಿಣವಾಗುತ್ತಿತ್ತು.

೪. ಹಣವು ಮೌಲ್ಯ ಸಂಗ್ರಹದ ಸಾಧನವಾಗಿದೆ: ಹಲವು ಮೌಲ್ಯದ ಸಂಗ್ರಹಕ್ಕೆ ಅಂದರೆ ಸಂಪತ್ತಿನ ಸಂಗ್ರಹಕ್ಕೆ ಬಹಳೇ ಅನುಕೂಲವಾಗಿದೆ. ಸಂಪತ್ತನ್ನು ಹಣದ ರೂಪದಲ್ಲಿ ಕೆಲಸಮಯ ದವರೆಗೆ ಶೇಖರಿಸಿಟ್ಟರೂ, ಅದರ ಮೌಲ್ಯದಲ್ಲಿ ಬಹಳಷ್ಟು ಬದಲಾವಣೆ ಯಾಗುವುದಿಲ್ಲ. ಹಣವನ್ನು ಉಳಿತಾಯ ಮಾಡಿ, ಅದನ್ನು ನಮ್ಮ ಬಳಿ ಇಟ್ಟುಕೊಳ್ಳಬಹುದು ಅಥವಾ ಬ್ಯಾಂಕಿನಲ್ಲಿಡಬಹುದು ಅಥವಾ ಬಂಡವಾಳ ಪತ್ರದಲ್ಲಿ ತೊಡಗಿಸಬಹುದು. ಆಗ ಬಡ್ಡಿ– ಲಾಭಾಂಶವು ಸೇರಿ ಅದು ಹೆಚ್ಚಾಗುತ್ತ ಹೋಗುತ್ತದೆ. ಹಣದ ರೂಪದಲ್ಲಿ ಶೇಖರಿಸಿದ ಸಂಪತ್ತು ನಾಶವಾಗುವುದಿಲ್ಲ. ಆದರೆ ಸಂಪತ್ತನ್ನು ಆಹಾರ ಧಾನ್ಯ, ದನಕರು ಮೊದಲಾದವುಗಳ ರೂಪದಲ್ಲಿ ಸಂಗ್ರಹಿಸಿದಾಗ, ಅವು ಬಹುಕಾಲ ಬಾಳುವುದಿಲ್ಲ. ಈಗಿನ ಕಾಲದಲ್ಲಿ ಜನರು ಸಂಪತ್ತನ್ನು ಕೇವಲ ಹಣದ ರೂಪದಲ್ಲಿ ಮಾತ್ರವಲ್ಲ, ಆದಾಯ ಗಳಿಸುವ ಬಂಡವಾಳ ಪತ್ರಗಳ ರೂಪದಲ್ಲಿ ಸಹಿತ ಸಂಗ್ರಹಿಸುತ್ತಾರೆ.

೫. ಹಣವು ಮೌಲ್ಯವನ್ನು ಸ್ಥಳಾಂತರಿಸುವ ಸಾಧನವಾಗಿದೆ: ಇಮಾರತು, ಭೂಮಿ ಮೊದಲಾದ ಸ್ಥಾವರ ಆಸ್ತಿಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು ಬಾರದು. ಆದರೆ ಅವುಗಳನ್ನು ಮಾರಾಟ ಮಾಡಿ, ಬಂದ ಹಣದಿಂದ ಇತರ ಸ್ಥಳಗಳಲ್ಲಿರುವ ಅಂತಹ ಆಸ್ತಿಗಳನ್ನು ಕೊಂಡುಕೊಳ್ಳಬಹುದು. ಅದರಂತೆ ಬಹು ದೂರದ ಸ್ಥಳಕ್ಕೆ ಮೌಲ್ಯವನ್ನು ಕಳಿಸಲು ಹಣವು ಅತ್ಯುಪಯುಕ್ತವಾದ ಸಾಧನವಾಗಿದೆ. ಬ್ಯಾಂಕಿನ ಮೂಲಕ ಕೋಟಿಗಟ್ಟಲೆ ಹಣವನ್ನು ಅತಿ ಕಡಿಮೆ ವೆಚ್ಚದಲ್ಲಿ ಸುಲಭವಾಗಿ ಸುರಕ್ಷಿತವಾಗಿ ಬಹುದೂರದ ಸ್ಥಳಗಳಿಗೆ, ಅಲ್ಲದೆ ವಿದೇಶಗಳಿಗೂ ಸಹ ಕಳಿಸಿಕೊಡಬಹುದು(ಬಸವಾ ಕೆ.ಡಿ., ಅರ್ಥಶಾಸ್ತ್ರ ಪರಿಚಯ, ೧೯೯೫, ೨೦೦೦, ಪು.೨೧೨–೨೧೩).

ಹಣದ ಸಿದ್ಧಾಂತ(Theory of Money): ಪುರಾತನ ಕಾಲದಲ್ಲಿ ಮಾನವನ ಬಯಕೆಗಳು ಬಹಳ ಕಡಿಮೆಯಿದ್ದವು. ಬದುಕು ಸರಳವಾಗಿತ್ತು. ಅವರು ಬಹುತೇಕ ಸ್ವಾವಲಂಬಿಗಳಾಗಿದ್ದರು. ಆದುದರಿಂದ ಅವರಿಗೆ ಹಣದ ಅಗತ್ಯವಿರಲಿಲ್ಲ. ಆಗ ಮಾನವನು ತನ್ನಲ್ಲಿರುವ ವಸ್ತುಗಳನ್ನು ಇತರರಿಗೆ ಕೊಟ್ಟು, ಇತರರಲ್ಲಿರುವ ವಸ್ತುಗಳನ್ನು ತಾನು ಪಡೆಯುತ್ತಿದ್ದನು. ಇದನ್ನು "ಸಾಟಿ ವಿನಿಮಯ ಪದ್ಧತಿ" ಎನ್ನುತ್ತಾರೆ.

ಮಾನವನು ನಾಗರಿಕನಾದಂತೆ ಅವನ ಬಯಕೆಗಳು ಸಂಕೀರ್ಣಗೊಂಡವು. ಇದರಿಂದ ಪರಸ್ಪರ ಅವಲಂಬನೆ ಹೆಚ್ಚತೊಡಗಿತು. ಆಗ ಹಣದ ಅಗತ್ಯವುಂಟಾಯಿತು. ಹಾಗೂ ಅದರ

ಆವಿಷ್ಕಾರವೂ ಆಯಿತು. ಹಣವು ಮಾನವನ ಅದ್ಭುತ ಸಂಶೋಧನೆಗಳಲ್ಲಿ ಒಂದಾಗಿದೆ. ಜಗತ್ತಿನಲ್ಲಿ ಇದರ ಮಹತ್ವ ವರ್ಣನಾತೀತ. ಹಣವಿಲ್ಲದ ಬದುಕನ್ನು ಊಹಿಸುವುದೂ ಕಷ್ಟ. ಮಾನವನ ಆರ್ಥಿಕ ಚಟುವಟಿಕೆಗಳೆಲ್ಲವೂ ಹಣವನ್ನೇ ಅವಲಂಬಿಸಿವೆ.

ಹಣದ ಅರ್ಥ(Meaning Money): "ವಿನಿಮಯ ಮಾಧ್ಯಮವಾಗಿ ಎಲ್ಲರಿಂದ ಸ್ವೀಕರಿಸಲ್ಪಟ್ಟ ವಸ್ತುವೇ ಹಣ". ಸರಕು ಮತ್ತು ಸೇವೆಗಳ ವಿನಿಮಯದಲ್ಲಿ ಮಧ್ಯವರ್ತಿಯಾಗಿ ಹಣವನ್ನು ಬಳಸಲಾಗುತ್ತಿದೆ. ಕ್ರೌಥರ್‌ರವರ ಪ್ರಕಾರ "ವಿನಿಮಯ ಮಾಧ್ಯಮವೆಂದು ಸಾಮಾನ್ಯವಾಗಿ ಸ್ವೀಕರಿಸಲ್ಪಟ್ಟ ಮತ್ತು ಅದೇ ವೇಳೆಗೆ ಮೌಲ್ಯಮಾಪನ ಹಾಗೂ ಮೌಲ್ಯ ಸಂಗ್ರಹವೆಂದು ಕಾರ್ಯ ಮಾಡುವ ಯಾವುದೇ ವಸ್ತು ಹಣವಾಗಿದೆ." ರಾಬರ್ಟ್‌ಸನ್‌ರವರ ಪ್ರಕಾರ: "ಸರಕು-ಸೇವೆಗಳ ವಿನಿಮಯ ಕಾರ್ಯದಲ್ಲಿ ಸರ್ವರಿಂದ ಸ್ವೀಕರಿಸಲ್ಪಡುವ ವಸ್ತುವೇ ಹಣ."

ಹಣದ ಕಾರ್ಯಗಳು(Functions of Money): "ಹಣವು ಮಾಡುವ ಕೆಲಸವನ್ನು ಮಾಡುವ ವಸ್ತುವೇ ಹಣ" ಎಂದು ಪ್ರೊ.ವಾಕರ್ ಹೇಳಿದ್ದಾರೆ. ಹಣದ ಕಾರ್ಯಗಳನ್ನು ತಿಳಿದರೆ ಹಣದ ಸ್ಪಷ್ಟವಾದ ಅರ್ಥ ತಿಳಿಯುತ್ತದೆ. ಚುಟುಕಾಗಿ ಹೇಳುವುದಾದರೆ ಹಣವು ಮಾಧ್ಯಮ, ಮಾಪನ, ಪ್ರಮಾಣ ಮತ್ತು ಸಂಗ್ರಹ ಸಾಧನವಾಗಿ ಕಾರ್ಯ ಮಾಡುತ್ತದೆ. ಹಣದ ಕಾರ್ಯಗಳನ್ನು ಮುಖ್ಯವಾಗಿ ಎರಡು ಗುಂಪುಗಳಾಗಿ ವರ್ಗೀಕರಿಸಬಹುದು. ಅ. ಪ್ರಾಥಮಿಕ ಕಾರ್ಯಗಳು (Primary functions) ಆ. ಮಾಧ್ಯಮಿಕ ಕಾರ್ಯಗಳು (Secondary functions)

ಪ್ರಾಥಮಿಕ ಕಾರ್ಯಗಳು: ಹಣದ ಪ್ರಾಥಮಿಕ ಕಾರ್ಯಗಳು ಯಾವುದೆಂದರೆ

೧. ವಿನಿಮಯ ಮಾಧ್ಯಮ: ಹಣವು ಸರಕು-ಸೇವೆಗಳ ವಿನಿಮಯ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ನಮ್ಮಲ್ಲಿರುವ ಸರಕು-ಸೇವೆಗಳನ್ನು ಹಣಕ್ಕೆ ಮಾರಾಟ ಮಾಡುತ್ತೇವೆ. ಹಾಗೆಯೇ ನಮಗೆ ಬೇಕಾದ ಸರಕು-ಸೇವೆಗಳನ್ನು ಹಣದ ಮೂಲಕ ಕೊಳ್ಳುತ್ತೇವೆ. ಇದರಿಂದ ನಮಗೆ ಅಗತ್ಯವಾದ ಸರಕು-ಸೇವೆಗಳನ್ನು ಕೊಳ್ಳಲು, ಆ ಮೂಲಕ ನಮ್ಮ ವಿವಿಧ ಬಯಕೆಗಳನ್ನು ಈಡೇರಿಸಿಕೊಳ್ಳಲು ಹಣ ಸಹಾಯಕವಾಗಿದೆ. ಹಣದ ಈ ಕಾರ್ಯವು ಅತಿ ಮುಖ್ಯವಾದುದರಿಂದ ಇದನ್ನು 'ಹಣದ ಶರೀರ' ಎನ್ನುತ್ತಾರೆ.

೨. ಮೌಲ್ಯಮಾಪನ: ಹಣವು ಸರಕು-ಸೇವೆಗಳ ಮೌಲ್ಯವನ್ನು ಅಳೆಯುವ ಸಾಧನವಾಗಿ ಕೆಲಸ ಮಾಡುತ್ತದೆ. ಎಲ್ಲ ಸರಕುಗಳ ಮೌಲ್ಯವನ್ನು ಹಣದ ಮೂಲಕ ವ್ಯಕ್ತಪಡಿಸುತ್ತೇವೆ. ಇದರಿಂದ ವಿವಿಧ ವಸ್ತುಗಳ ಮೌಲ್ಯವನ್ನು ಹೋಲಿಕೆ ಮಾಡಲು ಸಾಧ್ಯವಾಗುತ್ತದೆ. ಉದಾಹರಣೆಗೆ ಅಕ್ಕಿಯು ೧ ಕಿ.ಗ್ರಾಂ ಗೆ ರೂ.೧೫ ಇದ್ದು, ರಾಗಿಗೆ ರೂ.೫ ಇದ್ದಾಗ, ೧ ಕಿ.ಗ್ರಾಂ ಅಕ್ಕಿಗೆ ೩ ಕಿ.ಗ್ರಾಂ ರಾಗಿ ಸಮ ಎಂದು ಹೇಳಬಹುದು. ಹೀಗೆ ಹಣವು ಎಲ್ಲ ವಸ್ತುಗಳ ಮೌಲ್ಯಮಾಪನ ಸಾಧನವಾಗಿದೆ. ಹಣದ ಈ ಕಾರ್ಯವನ್ನು 'ಹಣದ ಆತ್ಮ' ಎನ್ನುತ್ತಾರೆ.

ಮಾಧ್ಯಮಿಕ ಕಾರ್ಯಗಳು: ಹಣದ ಮಾಧ್ಯಮಿಕ ಕಾರ್ಯಗಳು ಯಾವುವೆಂದರೆ

೧. ಮೌಲ್ಯ ಸಂಗ್ರಹ: ಹಣವು ಮೌಲ್ಯ ಸಂಗ್ರಹದ ಸಾಧನವಾಗಿ ಕೆಲಸ ಮಾಡುತ್ತದೆ. ನಾವು ಗಳಿಸುವ ಸಂಪತ್ತನ್ನು ಹಣದ ಮೂಲಕ ದೀರ್ಘ ಕಾಲದವರೆಗೆ ಸಂಗ್ರಹಿಸಿಡಬಹುದು. ಅದು ಹಾಳಾಗುವುದಿಲ್ಲ ಅಥವಾ ಅದರ ಮೌಲ್ಯ ನಾಶವಾಗುವುದಿಲ್ಲ. ಬ್ಯಾಂಕ್ ಠೇವಣಿ ಅಥವಾ ಬಾಂಡುಗಳ ರೂಪದಲ್ಲಿ ಹಣವನ್ನು ಸಂಗ್ರಹಿಸಿಟ್ಟರೆ ಅದಕ್ಕೆ ಬಡ್ಡಿ ದೊರೆಯುತ್ತದೆ. ಇದರಿಂದ ಕಾಲ ಕಳೆದಂತೆ ಸಂಪತ್ತಿನ ಮೌಲ್ಯ ಹೆಚ್ಚುತ್ತದೆ.

೨. ಮೌಲ್ಯ ವರ್ಗಾವಣೆ: ಹಣವು ಮೌಲ್ಯವನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾವಣೆ ಮಾಡುವ ಕೆಲಸವನ್ನು ಮಾಡುತ್ತದೆ. ವ್ಯಕ್ತಿಯು ಒಂದೆಡೆಯಲ್ಲಿರುವ ತನ್ನ ಸ್ಥಿರಾಸ್ತಿಯನ್ನು ಮಾರಿ, ಬಂದ ಹಣದಿಂದ ಬೇರೊಂದೆಡೆಯಲ್ಲಿ ಅಂಥದೇ ಆಸ್ತಿಯನ್ನು ಕೊಳ್ಳಬಹುದು(ಕೆಂಪಯ್ಯ ಜಿ.ಎನ್., ಮೂಲ ಆರ್ಥಿಕ ಸಿದ್ಧಾಂತ, ೨೦೦೪, ಪು.೧೪೮-೧೪೯).

ಹಣದ ಅರ್ಥ: ಹಣವು ಮಾನವನ ಪ್ರಮುಖ ಸಂಶೋಧನೆಗಳಲ್ಲಿ ಒಂದಾಗಿದೆ. ಭೌತಶಾಸ್ತ್ರದಲ್ಲಿ ಚಕ್ರ, ರಸಾಯನಶಾಸ್ತ್ರದಲ್ಲಿ ಬೆಂಕಿ/ವಿದ್ಯುತ್‌ಶಕ್ತಿ, ರಾಜ್ಯಶಾಸ್ತ್ರದಲ್ಲಿ ಓಟು ಹೇಗೆ ಪ್ರಮುಖ ಪಾತ್ರ ವಹಿಸುತ್ತಿವೆಯೋ ಹಾಗೆ ಅರ್ಥಶಾಸ್ತ್ರದಲ್ಲಿ ಹಣವು ಪ್ರಮುಖ ಪಾತ್ರವಹಿಸುತ್ತಿದೆ. ಅದು ಮಾನವರ ದಿನನಿತ್ಯದ ವ್ಯವಹಾರದ ಅವಿಭಾಜ್ಯ ಅಂಗವಾಗಿದೆ.

ಹಣದ ಅರ್ಥವನ್ನು ನೀಡುವುದು ಹಾಗೂ ಅದನ್ನು ವ್ಯಾಖ್ಯಾನಿಸುವುದು ಕಷ್ಟಕರವಾಗಿದೆ. ಕೆಲವು ವ್ಯಾಖ್ಯೆಗಳು ತುಂಭಾ ಸೂಕ್ಷ್ಮವು ಕೆಲವು ವ್ಯಾಖ್ಯೆಗಳು ತುಂಬಾ ವಿಶಾಲವು ಆಗಿರುತ್ತವೆ. ಹಣವು ಸಾಮಾನ್ಯವಾಗಿ ಸರ್ವರಿಂದ ಸ್ವೀಕರಿಸಲ್ಪಡುವ ವಿನಿಮಯದ ಸಾಧನವೆಂದು ಮನ್ನಿಸಲ್ಪಟ್ಟ ಯಾವುದೇ ವಸ್ತುವಾಗಿದೆ.

ಅನೇಕ ಅರ್ಥಶಾಸ್ತ್ರಜ್ಞರು ಹಣದ ವ್ಯಾಖ್ಯೆಯನ್ನು ತಮ್ಮದೇ ಆದ ಅಭಿಪ್ರಾಯಗಳಲ್ಲಿ ವ್ಯಕ್ತಪಡಿಸಿದ್ದಾರೆ.

೧. ಫ್ರಾನ್ಸಿಸ್ ಎ.ವಾಕರರು ಈ ರೀತಿ ಹೇಳಿದ್ದಾರೆ: "ಹಣದ ಕಾರ್ಯವನ್ನು ನಿರ್ವಹಿಸುವ ವಸ್ತುವೇ ಹಣ."

೨. ಡಿ.ಎಚ್.ರಾಬರ್ಟ್‌ಸನ್‌ರು ಹಣದ ವ್ಯಾಖ್ಯೆಯನ್ನು ಈ ರಿತಿ ಬರೆದಿದ್ದಾರೆ: "ವ್ಯಾಪಾರ, ವ್ಯವಹಾರಗಳಲ್ಲಿ ಯಾವುದನ್ನು ಎಲ್ಲರೂ ಸ್ವೀಕರಿಸುತ್ತಾರೋ ಅದೇ ಹಣ."

೩. ಪ್ರೊ.ಜೋಫ್ರಿ ಕ್ರೌಥರ್ ಈ ರೀತಿ ವ್ಯಕ್ತಪಡಿಸಿದ್ದಾರೆ: "ವಿನಿಮಯದ ಮಾಧ್ಯಮವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾಗುವ ಮತ್ತು ಅದೇ ಸಮಯದಲ್ಲಿ ಮೌಲ್ಯಮಾಪನದ ಸಾಧನವಾಗಿ ಹಾಗೂ ಮೌಲ್ಯ ಸಂಚಯವಾಗಿ ಕೆಲಸ ಮಾಡುವ ಯಾವುದೇ ವಸ್ತು ಹಣ."

೪. ಆರ್.ಪಿ.ಕೇಂಟ್ ಹಣ ಎಂದರೆ: "ಸಾಮಾನ್ಯವಾಗಿ ಬಳಸುವ ಹಾಗೂ ವಿನಿಮಯದ ಮಾಧ್ಯಮವಾಗಿ, ಸಾರ್ವತ್ರಿಕವಾಗಿ ಸ್ವೀಕೃತವಾದ ಅವರು ಮೌಲ್ಯಮಾಪನದ ಸಾಧನವಾದ ಯಾವುದೇ ವಸ್ತು."

೫. ಜೆ.ಡಿ.ಎಚ್.ಕೋಲೆ ಹಣದ ಪ್ರಾಮುಖ್ಯತೆ ಏನೆಂದರೆ: "ಚಲಾವಣೆಯಲ್ಲಿ ಅದನ್ನು ಒಂದು ಕೈಯಿಂದ ಮತ್ತೊಂದು ಕೈಗೆ ವರ್ಗಾಯಿಸಬಹುದಾಗಿದೆ."

ಈ ಮೇಲಿನ ಎಲ್ಲಾ ವ್ಯಾಖ್ಯೆಗಳಲ್ಲಿ ಪ್ರೊ.ಕ್ರೋಥರವರ ವ್ಯಾಖ್ಯೆ ತುಂಬಾ ವಿಸ್ತೃತವಾದುದಾಗಿದೆ. ಏಕೆಂದರೆ, ಈ ವ್ಯಾಖ್ಯೆ ಹಣದ ಪ್ರಮುಖ ಮೂರು ಕಾರ್ಯಗಳನ್ನು ಸೂಚಿಸುತ್ತದೆ. ಅವುಗಳೆಂದರೆ ಹಣವು ವಿನಿಮಯದ ಮಾಧ್ಯಮವಾಗಿದೆ. ಮೌಲ್ಯಮಾಪನದ ಹಾಗೂ ಮೌಲ್ಯ ಸಂಗ್ರಹಣೆಯ ಸಾಧನವಾಗಿದೆ.

ಒಟ್ಟಿನಲ್ಲಿ ಹಣವೆಂದರೆ, ಕೇವಲ ನಾಣ್ಯಗಳು ಹಾಗೂ ಕರೆನ್ಸಿ ನೋಟುಗಳಲ್ಲದೆ, ಚೆಕ್ಕುಗಳೂ, ಟ್ರೇಝುರಿ ಬಿಲ್ಲುಗಳು, ಡಿಮಾಂಡ್ ಡ್ರಾಫ್ಟ್‌ಗಳು, ಕ್ರೆಡಿಟ್ ಕಾರ್ಡ್‌ಗಳು, ಸ್ಮಾರ್ಟ್ ಕಾರ್ಡ್‌ಗಳು ಇತ್ಯಾದಿ ಒಳಗೊಂಡಿವೆ. ಏಕೆಂದರೆ ಅವು ಸಹ ಹಣದ ಕಾರ್ಯಗಳನ್ನು ಮಾಡುತ್ತವೆ.

ಕೊನೆಯದಾಗಿ, ಹಣವು ವಿನಿಮಯದ ಮಾಧ್ಯಮವಾಗಿ, ಮೌಲ್ಯಮಾಪನ, ಮೌಲ್ಯ ಸಂಚಯ ಹಾಗೂ ಲೇವಾದೇವಿಯ ಸಾಧನವಾಗಿ ಸರ್ವರೂ ಸ್ವೀಕರಿಸುವ ಯಾವುದೇ ವಸ್ತುವಾಗಿದೆ.

ಪ್ರಚಲಿತ ಜಗತ್ತಿನಲ್ಲಿ ಪ್ರತಿಯೊಂದು ದೇಶವೂ ನನ್ನದೇ ಆದ ಹಣವನ್ನು ಹೊಂದಿವೆ (ರೇಣುಕಾರ್ಯ ಸಿ.ಕೆ.(ಸಂ), ಪ್ರಥಮ ಪಿಯುಸಿ ಅರ್ಥಶಾಸ್ತ್ರ, ೨೦೦೪, ಪು.೨೧೬-೨೧೭).

ಹಣದ ಮಾರುಕಟ್ಟೆ(Money Market) ಹಣದ ಮಾರುಕಟ್ಟೆಯ ಅರ್ಥ: 'ಹಣದ ಮಾರುಕಟ್ಟೆ' ಎಂಬ ಪದವು ಹಣವನ್ನು ಪಡೆಯುವ(ಸಾಲವಾಗಿ ಪಡೆಯುವ) ಮತ್ತು ನೀಡುವ(ಸಾಲ ನೀಡುವ) ಯಾವುದೇ ಒಂದು ನಿರ್ದಿಷ್ಟವಾದ ಸ್ಥಳ ಅಥವಾ ಕಚೇರಿಗೆ ಸಂಬಂಧಿಸಿಲ್ಲ. ಅದು ಒಂದು ಚಟುವಟಿಕೆಗೆ ಸಂಬಂಧಿಸಿರುತ್ತದೆ. ಅಂದರೆ ಅಲ್ಪಾವಧಿ ಸಾಲ ಸಾಧನಗಳಾದ ಖಜಾನೆ ಹುಂಡಿಗಳು, ವಿನಿಮಯ ಪತ್ರಗಳು, ಬ್ಯಾಂಕರುಗಳ ಸಮ್ಮತಿಗಾಗಿ ಪೆಡಯುವ ಮತ್ತು ಸಾಲವಾಗಿ ನೀಡುವ ಒಂದು ಚಟುವಟಿಕೆಗೆ ಅದು ಸಂಬಂಧಿಸಿರುತ್ತದೆ. ಅದು ಒಂದು ಅರ್ಥ ವ್ಯವಸ್ಥೆಯಲ್ಲಿ ಅಲ್ಪಾವಧಿ ಸಾಲ ಪತ್ರಗಳ ಖರೀದಿ, ವಿಕ್ರಮ ಮತ್ತು ವರ್ಗಾವಣೆಗಳನ್ನು ನಿರ್ವಹಿಸುವ ಎಲ್ಲಾ ಹಣಕಾಸು ಸಂಸ್ಥೆಗಳಿಗೆ ನೀಡಲಾಗಿರುವ ಒಂದು ಸಂಯುಕ್ತ ಹೆಸರಾಗಿದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಅದು ಅಲ್ಪಾವಧಿ ನಿಧಿಗಳ ಸಾಲ ಪಡೆಯುವಿಕೆ ಮತ್ತು ಸಾಲ ನೀಡುವಿಕೆಗಾಗಿರುವ ಒಂದು ಸಂಪೂರ್ಣವಾದ ಯಾಂತ್ರಿಕತೆಯಾಗಿದೆ.

ಇದು ಜಿ.ಕ್ರೌಥರ್ ಮತ್ತು ಮ್ಯಾಡೆನ್ ಮತ್ತು ನಾಡ್ಲರ್ ಅವರುಗಳು ನೀಡಿರುವ ವ್ಯಾಖ್ಯೆಗಳಿಂದ ಸ್ಪಷ್ಟವಾಗಿದೆ. ಕ್ರೌಥರ್‌ನ ಮಾತಿನಂತೆ, "ಹಣದ ಮಾರುಕಟ್ಟೆಯೆಂದರೆ, ವಿವಿಧ ಶ್ರೇಣಿಯ ಸಮೀಪದ ಹಣಗಳಲ್ಲಿ ವ್ಯವಹರಿಸುವ ವಿವಿಧ ಸಂಸ್ಥೆಗಳಿಗೆ ನೀಡಿರುವ ಸಾಮೂಹಿಕ ಹೆಸರಾಗಿದೆ."

ಮ್ಯಾಡನ್ ಮತ್ತು ನ್ಯಾಡ್ಲರ್‌ರವರ ಮಾತಿನಂತೆ "ಹಣದ ಮಾರುಕಟ್ಟೆಯೆಂದರೆ ಒಂದು ದೇಶದ ಹಣಕಾಸಿನ ವ್ಯವಹಾರದ ಬಹುಭಾಗ ನಿರ್ವಹಿಸಲ್ಪಡುವ ಒಂದು ಪ್ರಕ್ರಿಯೆಯಾಗಿದೆ."

ಹಣದ ಮಾರುಕಟ್ಟೆಯ ಲಕ್ಷಣಗಳು: ಹಣದ ಮಾರುಕಟ್ಟೆಯ ಮುಖ್ಯ ಲಕ್ಷಣಗಳೆಂದರೆ,

೧. ಹಣದ ಮಾರುಕಟ್ಟೆಯ ಅಲ್ಪಾವಧಿ ಹಣಕಾಸಿನ ಸಾಲ ಪಡೆಯುವುದಕ್ಕೆ ಮತ್ತು ಸಾಲ ನೀಡುವುದಕ್ಕೆ ಮಾತ್ರ ಸಂಬಂಧಿಸಿದೆ.

೨. ಹಣದ ಸಾಲ ಪಡೆಯಲು ಮತ್ತು ಸಾಲ ನೀಡಲು, ಸಾಲ ಪಡೆಯುವಾತ ಮತ್ತು ಸಾಲ ನೀಡುವಾತನು ಒಂದು ಸ್ಥಳದಲ್ಲಿ ಪರಸ್ಪರ ಭೇಟಿಯಾಗಬೇಕೆಂದಿಲ್ಲ. ಅವರು ದೂರವಾಣಿ, ತಂತಿ, ಅಂಚೆ ಅಥವಾ ಇನ್ನಾವುದೇ ಸಂಪರ್ಕ ಮಾಧ್ಯಮದ ಮೂಲಕ ವ್ಯವಹರಿಸಬಹುದು.

೩. ಸಮೀಪದ ಹಣ, ಅಂದರೆ ವಿನಿಮಯ ಪತ್ರ, ಖಜಾನೆ ಬಿಲ್ಲುಗಳು ಇತ್ಯಾದಿ ಅಲ್ಪಾವಧಿ ಉದ್ದರಿ ಸಾಧನಗಳನ್ನು ಹಣದ ಮಾರುಕಟ್ಟೆಯಲ್ಲಿ ವ್ಯವಹರಿಸಲಾಗುತ್ತದೆ.

೪. ಹಣದ ಮಾರುಕಟ್ಟೆಯು ಏಕರೂಪದ ಒಂದೇ ಮಾರುಕಟ್ಟೆಯಲ್ಲ. ಅದು ಕೆರೆ ಮಾರುಕಟ್ಟೆ, ಸ್ವೀಕೃತ ಮಾರುಕಟ್ಟೆ, ಸೋಡಿ ಮಾರುಕಟ್ಟೆ ಮತ್ತು ಸಹಸಾಲ ಮಾರುಕಟ್ಟೆ ಇತ್ಯಾದಿ ಅನೇಕ ವಿಶೇಷ ರೀತಿಯ ಉಪಮಾರುಕಟ್ಟೆಗಳನ್ನೊಳಗೊಂಡಿರುತ್ತದೆ.

೫. ಇನ್ನಾವುದೇ ಮಾರುಕಟ್ಟೆಯಲ್ಲಿರುವಂತೆ, ಹಣದ ಮಾರುಕಟ್ಟೆಯಲ್ಲಿಯೂ ಸಹ ಸಾಲ ಪಡೆದ ಮತ್ತು ಸಾಲವಾಗಿ ನೀಡಿದ ಹಣಕ್ಕೊಂದು ಬೆಲೆಯಿರುತ್ತದೆ. ಆ ಬೆಲೆಯನ್ನು ಬಡ್ಡಿಯೆಂದು ಕರೆಯಲಾಗುತ್ತದೆ.

೬. ಹಣದ ಮಾರುಕಟ್ಟೆಯಲ್ಲಿ ಬೃಹತ್ ಸಂಖ್ಯೆಯ ಸಾಲ ನೀಡುವವರೂ ಸಾಲ ಪಡೆಯುವವರೂ ಇರುತ್ತಾರೆ.

೭. ಹಣದ ಮಾರುಕಟ್ಟೆಯಲ್ಲಿ ಬೃಹತ್ ಪ್ರಮಾಣದ ಅಲ್ಪಾವಧಿ ಹಣಕಾಸು ವ್ಯವಹಾರವನ್ನು ನಡೆಸಲಾಗುತ್ತದೆ.

೮. ಹಣದ ಮಾರುಕಟ್ಟೆಯು ಕಾರ್ಯಶೀಲ ಬಂಡವಾಳದ ಮೂಲವಾಗಿದೆ.

೯. ಹಣದ ಮಾರುಕಟ್ಟೆಯಲ್ಲಿ ವಿವಿಧ ಸಂಲೇಖಗಳಿರುತ್ತವೆ. ಅವೆಂದರೆ, ಕರೆಹಣ(ಅಂತರ ಬ್ಯಾಂಕು ಸಾಲಗಳು) ಖಜಾನೆ ಹುಂಡಿಗಳು, ವ್ಯಾಪಾರಿ ಹುಂಡಿಗಳು ವಾಣಿಜ್ಯ ಪತ್ರಗಳು,

ಪ್ರಸಿದ್ಧ ಕಂಪೆನಿಗಳ ವಚನ ಪತ್ರಗಳು, ವಾಣಿಜ್ಯ ಬ್ಯಾಂಕುಗಳು ನೀಡುವ ಠೇವಣಿ ಪ್ರಮಾಣ ಪತ್ರ ಇತ್ಯಾದಿ.

೧೦. ಹಣದ ಮಾರುಕಟ್ಟೆಯಲ್ಲಿನ ವ್ಯಾಪಾರಿಗಳೆಂದರೆ, ಅಲ್ಪಾವಧಿ ಸಾಲ ನೀಡುವವರಾದ ಕೇಂದ್ರ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು, ಸೋಡಿ ಸಂಸ್ಥೆಗಳು, ಹುಂಡಿ ಬ್ರೋಕರ್‌ಗಳು, ವಿಮಾ ಕಂಪೆನಿಗಳು, ಹಣಕಾಸು ನಿಗಮಗಳು ಮತ್ತು ವ್ಯವಹಾರ ಸಂಸ್ಥೆಗಳು ಮತ್ತು ಅಲ್ಪಾವಧಿ ಸಾಲ ಪಡೆಯುವವರಾದ, ಸರ್ಕಾರ, ಅರೆ ಸರ್ಕಾರ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಕೈಗಾರಿಕಾ ಮತ್ತು ವ್ಯವಹಾರಿ ಸಂಸ್ಥೆಗಳು, ಶೇರು ವಿನಿಮಯ ವ್ಯಾಪಾರಿಗಳು, ಕೃಷಿಕರು ಮತ್ತು ಖಾಸಗಿ ವ್ಯಕ್ತಿಗಳು ಇತ್ಯಾದಿ(ರಾಮನ್ ಬಿ.ಎಸ್., ಭಾರತದ ಆರ್ಥಿಕತೆ, ೨೦೦೫, ಪು.೩೯೬-೩೯೭).

**ಹಣ, ಬ್ಯಾಂಕಿಂಗ್ ಮತ್ತು ಹಣಕಾಸು ನೀತಿ**

"ಸರಕುಗಳಿಗೆ ಮೌಲ್ಯ ಸಂದಾಯ ಮಾಡಲು ಮತ್ತು ವಾಣಿಜ್ಯ ಚಟುವಟಿಕೆಗಳ ಹಕ್ಕುಗಳನ್ನು ಪರಿಹರಿಸಲು ಬಳಸಲಾಗುವ ಸಾರ್ವತ್ರಿಕವಾಗಿ ಸ್ವೀಕಾರಾರ್ಹವಾದುದೇ ಹಣ" ಎಂಬುದಾಗಿ ಡಿ.ಹೆಚ್.ರಾಬರ್ಟ್‌ಸನ್ ಹೇಳಿದ್ದಾರೆ.

ಹಣದ ಅರ್ಥ(Meaning of Money): ಮಾನವನ ಸಂಶೋಧನೆಗಳಲ್ಲಿ ಹಣ ಮಹತ್ವದ್ದಾಗಿದೆ. ಹಣದ ಉಗಮದಿಂದಾಗಿ ಮಾನವನು ಸಾಟಿವಿನಿಮಯ ಪದ್ಧತಿ(Barter System)ಯಿಂದ ಉಂಟಾಗಬಹುದಾದ ಅನೇಕ ರೀತಿಯ ತೊಡಕುಗಳನ್ನು ನಿವಾರಿಸಿಕೊಳ್ಳುವ ಮೂಲಕ ತನ್ನ ಬದುಕನ್ನು ಸರಳವಾಗಿಸಿಕೊಂಡಿರುವನು. ಹೀಗಾಗಿ ಆಧುನಿಕ ನಾಗರೀಕ ಜಗತ್ತಿನಲ್ಲಿ ಹಣ ಮಹತ್ತರವಾದ ಹಾಗೂ ಅನಿವಾರ್ಯದ ವಸ್ತುವಾಗಿ ಪರಿಗಣಿಸಲ್ಪಟ್ಟಿದೆ. ಮಾನವನ ನಾಗರೀಕತೆಗೆ ಪೂರಕವಾದ ಅನೇಕ ಅಂಶಗಳನ್ನು ಹಣ ಪ್ರಧಾನವಾದುದು. ಹಣ ಕೊಳ್ಳುವ ಶಕ್ತಿಯನ್ನು ಪ್ರತಿನಿಧಿಸುವುದರಿಂದ ಮಹತ್ವ ಪೂರ್ಣದ್ದಾಗಿದೆ. ಯಾವುದೇ ಆರ್ಥಿಕತೆಗಳಲ್ಲಿ ಸರಕು ಮತ್ತು ಸೇವೆಗಳನ್ನು ಹಣದ ಬಳಕೆಯ ಮೂಲಕ ವಿನಿಮಯ ಮಾಡಬಹುದಾಗಿದೆ. ಹಣದ ರೂಪದಲ್ಲಿ ಸಂಪತ್ತಿನ ಸಂಗ್ರಹಣೆ ಸಾಧ್ಯವಾಗುವುದು. ಹಾಗೆಯೇ ಹಣವನ್ನು ಬಳಸಿಕೊಂಡು ಸರಕು ಮತ್ತು ಸೇವೆಗಳ ಆರ್ಥಿಕ ಮೌಲ್ಯಗಣನೆ ಮಾಡುವುದು ಕೂಡಾ ಸಾಧ್ಯವಿದೆ. ಹೀಗಾಗಿ ಹಲವಾರು ರೀತಿಯಲ್ಲಿ ಹಣ ಅತ್ಯಂತ ಪ್ರಮುಖವಾದ ಸ್ಥಾನವನ್ನು ಎಲ್ಲಾ ನಾಗರೀಕ ಜಗತ್ತಿನಲ್ಲೂ ಕೂಡಾ ಪಡೆದಿದೆ.

ಹಣದ ಆವಿಷ್ಕಾರಕ್ಕಿಂತ ಮೊದಲು ಸಾಟಿ ವಿನಿಮಯ ಪದ್ಧತಿ ಅಸ್ತಿತ್ವದಲ್ಲಿತ್ತು. ಸಾಟಿ ವಿನಿಮಯ ಪದ್ಧತಿಯೆಂದರೆ ಯಾವುದೇ ರೀತಿಯ ಮಾಧ್ಯಮದ ಸಹಾಯವಿಲ್ಲದೇ ಸರಕುಗಳನ್ನು ಸರಕುಗಳಿಗೆ ನೇರವಾಗಿ ವಿನಿಮಯ(Exchange) ಮಾಡಿಕೊಳ್ಳುವ ಕ್ರಿಯೆ ಎಂದರ್ಥ. ಅಂದಿನ

ಕಾಲದಲ್ಲಿ ಮಾನವನ ಬಯಕೆಗಳು ಬಹಳ ಮಿತವಾಗಿದ್ದವು. ಹೀಗಾಗಿ ಸಾಟಿ ವಿನಿಮಯ ಪದ್ಧತಿಯ ಮೂಲಕ ಮಾನವ ತನ್ನ ಮಿತವಾದ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಬಹುದಾಗಿದ್ದಿದವು. ನಾಗರೀಕತೆ ಬೆಳವಣಿಗೆಯಾದಂತೆ ಮಾನವನ ಬಯಕೆಗಳು ಅಪರಿಮಿತವಾಗತೊಡಗಿತು. ಇದರಿಂದ ವ್ಯಾಪಾರದ ಗಾತ್ರ ಅಧಿಕವಾಗಿ ಸಾಟಿ ವಿನಿಮಯ ಪದ್ಧತಿಯ ಮೂಲಕ ಮಾನವ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹೀಗಾಗಿ ಸಾಟಿ ವಿನಿಮಯ ಪದ್ಧತಿ ಕ್ರಮೇಣವಾಗಿ ಮಾಯವಾಗತೊಡಗಿತು.

ಸಾಟಿವಿನಿಮಯ ಪದ್ಧತಿಯಲ್ಲಿನ ನ್ಯೂನತೆಗಳನ್ನು ಸರಿಪಡಿಸುವ ಸಲುವಾಗಿ 'ಹಣ' ಎಂಬ ವಿನಿಮಯ ಸಾಧನವನ್ನು ಕಂಡುಹಿಡಿಯಲಾಯಿತು. ಹಣದ ಉಗಮ ವಿಭಿನ್ನ ಹಂತಗಳನ್ನು ದಾಟಿ ಬಂದಿದೆ. ಮೊದಲು ಜಗತ್ತಿನ ವಿವಿಧ ಪ್ರದೇಶಗಳಲ್ಲಿ ವಿವಿಧ ಸರಕುಗಳನ್ನು ಹಣವನ್ನಾಗಿ ಬಳಸಲ್ಪಡುತ್ತಿದ್ದರು. ಅಂದರೆ ಗ್ರೀಕರು ದನಕರುಗಳನ್ನು, ಅಮೇರಿಕದಲ್ಲಿನ ಇಂಡಿಯನ್ನರು ಹೊಗೆಸೊಪ್ಪನ್ನು ಹಾಗೂ ಆಫ್ರಿಕಾದವರು ಕಪ್ಪೆಚಿಪ್ಪನ್ನು 'ಹಣ' ಎಂದು ಬಳಸಲ್ಪಡುತ್ತಿದ್ದರು. ಕೆಲವು ಪ್ರದೇಶಗಳಲ್ಲಿ ಸರಕುಗಳನ್ನು ಹಣ ಎಂದು ಉಪಯೋಗಿಸುತ್ತಿದ್ದರಿಂದ 'ಸರಕುಹಣ' (Commodity Money) ಎಂದು ಕರೆಯುತ್ತಿದ್ದರು.

ಆಧುನಿಕ ಅರ್ಥ ವ್ಯವಸ್ಥೆಯು ಹಣರೂಪಿ ಅರ್ಥ ವ್ಯವಸ್ಥೆಯಾಗಿದೆ. ಹಣದ ಉಗಮವು ಮಾನವನ ನಾಗರಿಕತೆಯಷ್ಟೇ ಪ್ರಾಚೀನವಾದುದಾಗಿದೆ. ಹಣದ ಉಗಮಕ್ಕಿಂತ ಮೊದಲು ಸಾಟಿ ವಿನಿಮಯ ಪದ್ಧತಿ ಅಸ್ತಿತ್ವದಲ್ಲಿತ್ತು. ಆರ್ಥಿಕ ವಿಜ್ಞಾನ ಕ್ಷೇತ್ರದಲ್ಲಿ 'ಹಣ' ಒಂದು ಮಹತ್ವದ ಆವಿಷ್ಕಾರವೆಂದು ಪರಿಗಣಿಸಲ್ಪಟ್ಟಿದೆ. ಮಾನವನ ನಾಗರೀಕತೆಗೆ ಪೂರಕವಾದ ಅನೇಕ ಅಂಶಗಳಲ್ಲಿ 'ಹಣ' ಪ್ರಧಾನವಾದುದಾಗಿದೆ. ಪ್ರಸ್ತುತ ಆರ್ಥಿಕತೆಗಳೆಲ್ಲವೂ ಸಹ 'ಹಣರೂಪಿ' ಆರ್ಥಿಕತೆಗಳಾಗಿವೆ. ಅಂದರೆ ಆಧುನಿಕ ಮಾನವನು ತನ್ನ ಎಲ್ಲಾ ಆರ್ಥಿಕ ಚಟುವಟಿಕೆಗಳನ್ನು ಹಣದ ಉಪಯೋಗದ ಮೂಲಕವೇ ಕೈಗೊಳ್ಳುತ್ತಾನೆ. ಆದ್ದರಿಂದ ಪ್ರತಿ ಅರ್ಥ ವ್ಯವಸ್ಥೆಯೂ ಇಂದು ತನ್ನದೇಯಾದ ಹಣವನ್ನು ಹೊಂದಿದೆ. ವಿನಿಮಯ ಮಾಧ್ಯಮವಾಗಿ ಸಾರ್ವತ್ರಿಕವಾಗಿ ಸ್ವೀಕಾರವಾಗುವ ಯಾವುದೇ ವಸ್ತುವು 'ಹಣ' ಎನ್ನಿಸಿಕೊಳ್ಳುವುದು. ಹಣವು ವಿನಿಮಯ ಮಾಧ್ಯಮವಾಗಿದ್ದು ಸರಕು ಮತ್ತು ಸೇವೆಗಳನ್ನು ಕೊಳ್ಳುವ ಶಕ್ತಿಯನ್ನು ಹೊಂದಿರುತ್ತದೆ. ಹಣ ಎಂದರೇನು? ಎಂಬುದನ್ನು ಹಲವಾರು ಅರ್ಥಶಾಸ್ತ್ರಜ್ಞರು ಹಲವಾರು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳಲ್ಲಿ ಕೆಲವು ವ್ಯಾಖ್ಯಾನಗಳು ಈ ರೀತಿಯಾಗಿವೆ. ವಾಕರ್ ಎಂಬ ಅರ್ಥಶಾಸ್ತ್ರಜ್ಞರ ಪ್ರಕಾರ "ಹಣವು ಏನನ್ನು ಮಾಡುವುದೋ ಅದೇ ಹಣ"(ಚೌಡೇಗೌಡ ಎಂ., ಸಮಗ್ರ ಅರ್ಥಶಾಸ್ತ್ರ, ೨೦೦೭, ಪು.೧೭೦-೧೭೧)

ಹಣದ ಸಿದ್ಧಾಂತ: ಹಣವು ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿರಲಿಲ್ಲ. ಇದು ಏಕಾಏಕಿ ಹುಟ್ಟಿದ್ದಂತೂ ಅಲ್ಲ. ಹಣವೆಂಬುದು ಪ್ರಕೃತಿಯ ಕೊಡುಗೆಯೂ ಅಲ್ಲ. ಇದು ಮಾವನ

ಸಂಶೋಧನೆಗಳ ಫಲವಾಗಿ ಹುಟ್ಟಿ ಬಂದ ಒಂದು ವಿನಿಮಯ ಸಾಧನ. ಮಾನವನ ಜೀವಿತದ ಇತಿಹಾಸದ ಮಾರ್ಗ ಮಧ್ಯದಲ್ಲಿ ಕಂಡುಹಿಡಿಯಲ್ಪಟ್ಟ ಒಂದು ಸಾಧನ. ಹಣವು ಬಳಕೆಗೆ ಬರುವುದಕ್ಕಿಂತಲೂ ಮೊದಲು ಸಾಟಿ ವಿನಿಮಯ ಪದ್ಧತಿ ಜಾರಿಯಲ್ಲಿತ್ತು. ಪ್ರಾಚೀನ ಕಾಲದಲ್ಲಿ ಮಾನವನ ಬಯಕೆಗಳು ಮಿತವಾಗಿದ್ದವು ಮತ್ತು ಜೀವನ ಸರಳವಾಗಿದ್ದಿತು. ಆಗ ಜನರು ಸ್ವಯಂಪೂರ್ಣ ರಾಗಿದ್ದರು. ಹೀಗೆ ಸರಕುಗಳನ್ನು ನೇರವಾಗಿ ವಿನಿಮಯಿಸಿಕೊಳ್ಳುತ್ತಿದ್ದುದನ್ನು 'ಸಾಟಿ ವಿನಿಮಯ ಪದ್ಧತಿ'(Barter system) ಎಂದು ಕರೆಯಲಾಗಿತ್ತು.

ಕಾಲಕ್ರಮೇಣವಾಗಿ ಜನಸಂಖ್ಯೆ ಬೆಳೆಯುತ್ತಾ ಹೋದಂತೆ ಜನರ ಆಸೆ ಆಕಾಂಕ್ಷೆಗಳೂ ಹೆಚ್ಚಿದವು. ಬೃಹದಾಕಾರವಾಗಿ ಬೆಳೆದ ಈ ಆಸೆಗಳನ್ನು(ಬಯಕೆ) ಈಡೇರಿಸಲು ಬೇಕಾದ ವಸ್ತುಗಳನ್ನು ಸಾಟಿ ವಿನಿಮಯ ಪದ್ಧತಿಯಲ್ಲಿ ಪಡೆಯುವುದು ಕಷ್ಟವಾಯಿತು. ಸಾಟಿ ವಿನಿಮಯ ಪದ್ಧತಿಯಲ್ಲಿ ಮುಖ್ಯವಾಗಿ ಬಯಕೆಗಳ ಹೊಂದಾಣಿಕೆಯ ಅಭಾವ, ಸಾಮಾನ್ಯ ಮೌಲ್ಯಮಾಪನದ ಕೊರತೆ, ವಿಭಜನೆಯ ತೊಂದರೆ, ಮೌಲ್ಯಸಂಗ್ರಹದ ಸಮಸ್ಯೆ, ಸಾಲ ವ್ಯವಹಾರದ ಸಮಸ್ಯೆ ಮುಂತಾದ ಜಟಿಲ ಸಮಸ್ಯೆಗಳು ಹುಟ್ಟಿಕೊಂಡವು. ಬಯಕೆಗಳು ಅಪರಿಮಿತಗೊಂಡಂತೆಲ್ಲಾ ಮಾನವನು ವಿನಿಮಯದ ಜಟಿಲ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿರುವ ಮಾರ್ಗಗಳನ್ನು ಸಂಶೋಧಿಸಲು ಪ್ರಾರಂಭಿಸಿದ. ಈ ಸಂಶೋಧನೆಯ ಫಲವಾಗಿ ಮಹಾನ್ ವಿನಿಮಯ ಸಾಧನವಾದ ಹಣ ಲಭ್ಯವಾಯಿತು. ಹೀಗೆ ಸಾಟಿ ವಿನಿಮಯ ಪದ್ಧತಿಯ ದೋಷಗಳಿಂದಾಗಿ ಹಣದ ಶೋಧನೆಯಾಯಿತು.

ಹಣದ ಅರ್ಥವಿವರಣೆ(Meaning and definition of money): ನಾವು ಹಣವನ್ನು ನಿತ್ಯ ನೋಡುತ್ತೇವೆ. ಅದನ್ನು ನೂರಾರು ವರ್ಷಗಳಿಂದ ಬಳಸುತ್ತಾ ಬಂದಿದ್ದೇವೆ. ಆದಾಗ್ಯೂ ಹಣ ಎಂದರೇನು ಎಂಬ ಸರಳ ಪ್ರಶ್ನೆಗೆ ತೃಪ್ತಿಕರವಾದ ಉತ್ತರ ನೀಡುವುದು ಕಷ್ಟಕರ. ಹಣ ಎಂಬ ಪರಿಕಲ್ಪನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯನಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದ ವ್ಯಾಖ್ಯಾನಗಳು ಈ ಮುಂದಿನಂತಿವೆ.

ಎಫ್.ಎ.ವಾಕರ್ ಅವರ ಪ್ರಕಾರ 'ಹಣವು ಏನನ್ನು ಮಾಡುವುದೋ ಅದೇ ಹಣ' ಅಂದರೆ ವಾಕರ್ ಪ್ರಕಾರ ಹಣದ ಕಾರ್ಯಗಳನ್ನು ಮಾರುವ ವಸ್ತುವು ಹಣವಾಗುತ್ತದೆ.

ಡಿ.ಎಚ್.ರಾಬರ್ಟ್‌ಸನ್ ಅವರ ಪ್ರಕಾರ, "ಸರಕುಗಳಿಗೆ ಮೌಲ್ಯ ಕೊಡಲು ಮತ್ತು ಇತರ ರೀತಿಯ ವ್ಯವಹಾರ ಜವಾಬ್ದಾರಿಗಳನ್ನು ಪೂರೈಸಲು ಬಳಸಲಾಗುವ ಸರ್ವರಿಂದ ಮನ್ನಿಸಲ್ಪಟ್ಟ ಎಂಥಹುದೇ ಆದರೂ ಹಣವಾಗುತ್ತದೆ."

ಜಿ.ಕ್ರೌಥರ್ ಅವರು "ವಿನಿಮಯ ಸಾಧನವಾಗಿ ಸಾರ್ವತ್ರಿಕವಾಗಿ ಮನ್ನಿಸಲ್ಪಟ್ಟ ಯಾವುದೇ ಆದರೂ, ಅಂದರೆ ಸಾಲಗಳನ್ನು ಪಾವತಿಸಲು ಮತ್ತು ಇದೇ ವೇಳೆ ಮೌಲ್ಯಮಾಪನ ಮತ್ತು ಮೌಲ್ಯ ಸಂಗ್ರಹ ಸಾಧನವಾಗಿ ವರ್ತಿಸುವ ಸಾಧನ" ಎಂದು ಹಣವನ್ನು ವ್ಯಾಖ್ಯಾನಿಸಿದ್ದಾರೆ.

ಜಾನ್ ಮೇನಾರ್ಡ್ ಕೇನ್ಸ್ ಹಣವನ್ನು "ಬಟವಾಡೆಯ ಮೂಲಕ ಸಾಲದ ಒಪ್ಪಂದಗಳು ಮತ್ತು ಬೆಲೆಯ ಒಪ್ಪಂದಗಳನ್ನು ಪೂರೈಸಲಾಗುವ, ಮತ್ತು ಅದರ ರೂಪದಲ್ಲಿ ಸಾರ್ವತ್ರಿಕ ಕೊಳ್ಳುವ ಶಕ್ತಿಯನ್ನು ಹೊಂದಲಾಗುವ ಅಂಶ" ಎಂದು ವ್ಯಾಖ್ಯಾನಿಸಿದ್ದಾರೆ.

ರೇಮಂಡ್ ಪಿ.ಕೆಂಟ್ ಅವರ ಪ್ರಕಾರ, "ವಿನಿಮಯ ಸಾಧನವಾಗಿ ಅಥವಾ ಮೌಲ್ಯಮಾಪನ ಸಾಧನವಾಗಿ ಸಾಮಾನ್ಯವಾಗಿ ಬಳಸಲಾಗುವ ಮತ್ತು ಸಾರ್ವತ್ರಿಕವಾಗಿ ಮನ್ನಿಸಲ್ಪಡುವ ಏನೇ ಆದರೂ ಹಣವಾಗುತ್ತದೆ."

ಮೇಲಿನ ವ್ಯಾಖ್ಯಾನಗಳಲ್ಲಿ ಸ್ಪಷ್ಟವಾದಂತೆ, ವಿನಿಮಯ ಸಾಧನ ಮತ್ತು ಮೌಲ್ಯಮಾಪನ ಸಾಧನವಾಗಿ ಕಾರ್ಯನಿರ್ವಹಿಸುವ ಸರ್ವರಿಂದ ಮನ್ನಿಸಲ್ಪಟ್ಟ ಯಾವುದೇ ವಸ್ತು ಹಣವಾಗುತ್ತದೆ. ಸಾಮಾನ್ಯವಾಗಿ ಹಣವನ್ನು ಅದರ ಕಾರ್ಯಗಳ ಆಧಾರದ ಮೇಲೆ ವ್ಯಾಖ್ಯಾನಿಸಲಾಗುತ್ತದೆ.

ಹಣದ ಲಕ್ಷಣಗಳು(Charaeteristies of money): ಯಾವುದೇ ವಸ್ತುವನ್ನು ಹಣ ಎಂದು ಕರೆಯಬೇಕಾದರೆ ಅದು ಈ ಕೆಳಗಿನ ಗುಣಲಕ್ಷಣಗಳನ್ನು ಹೊಂದಿರಬೇಕಾಗುತ್ತದೆ. ಇವು ಒಳ್ಳೆಯ ಹಣದ ಲಕ್ಷಣಗಳು ಹೌದು.

೧. ಸರ್ವ ಸ್ವೀಕೃತಿ(General acceptability): ಹಣ ಎಂದು ಕರೆಸಿಕೊಳ್ಳುವ ವಸ್ತು ಸರ್ವರಿಂದ ಮನ್ನಿಸಲ್ಪಟ್ಟು ಸ್ವೀಕೃತಗೊಳ್ಳಬೇಕು. ಸಾರ್ವತ್ರಿಕ ಮನ್ನಣೆ ಇಲ್ಲದ ವಸ್ತು ಹಣವಾಗುವುದು ಸಾಧ್ಯವಿಲ್ಲ.

೨. ಬಾಳಿಕೆ ಬರುವಿಕೆ(Durability): ಹಣವು ದೀರ್ಘಕಾಲ ಬಾಳಿಕೆ ಬರುವಂತಿರಬೇಕು. ಅದನ್ನು ದೀರ್ಘಕಾಲ ಸಂಗ್ರಹಿಸಿಡುವಂತಿರಬೇಕು ಮತ್ತು ಅದು ಈ ಅವಧಿಯಲ್ಲಿ ತನ್ನ ಮೌಲ್ಯವನ್ನು ಕಳೆದುಕೊಳ್ಳಬಾರದು.

೩. ಸುಲಭ ಸಾಗಣೆ(Portability): ಹಣವೆಂದು ಬಳಸಲಾಗುವ ವಸ್ತುವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಲಭವಾಗಿ ಸಾಗಿಸುವಂತಿರಬೇಕು. ಸಾಗಾಣಿಕೆಯ ತೊಂದರೆಗಳು ಯಾವುದೇ ಕಾರಣಕ್ಕೂ ಎದುರಾಗಬಾರದು.

೪. ಗ್ರಾಹ್ಯತೆ(Coguizability): ಹಣವನ್ನು ಮಾಡಲಾದ ವಸ್ತುವನ್ನು ನೋಡಿದಾಕ್ಷಣ ಅಥವಾ ಮುಟ್ಟಿದಾಕ್ಷಣ ಗುರುತಿಸು ವಂತಿರಬೇಕು. ವಿವಿಧ ಮೌಲ್ಯದ ಹಣವು ಬಣ್ಣ, ಆಕಾರ, ತೂಕ ಮುಂತಾದ ವಿಷಯಗಳಲ್ಲಿ ಒಂದೇ ಆಗಿದ್ದು ಅದನ್ನು ಸುಲಭವಾಗಿ ಗುರುತಿಸುವಂತಿರಬೇಕು.

೫. ಏಕರೂಪತೆ(Uniformity): ಹಣವು ಒಂದೇ ಪ್ರಮಾಣ ಮತ್ತು ಗುಣಮಟ್ಟದಿಂದ ಏಕರೂಪತೆ ಹೊಂದಿರಬೇಕು. ಆಗ ಜನರು ಅದನ್ನು ಸುಲಭವಾಗಿ ಗುರುತಿಸುವುದು ಸಾಧ್ಯವಾಗುತ್ತದೆ.

೬. ವಿಭಾಜ್ಯತೆ(Divisibility): ಹಣವನ್ನು ವಿನಿಮಯದಲ್ಲಿ ಅನುಕೂಲವಾಗುವ ರೀತಿಯಲ್ಲಿ ಸಣ್ಣ ಸಣ್ಣ ಘಟಕಗಳಾಗಿ ಮೌಲ್ಯದಲ್ಲಿ ನಷ್ಟವಿಲ್ಲದಂತೆ ವಿಭಜಿಸುವುದು ಸಾಧ್ಯವಿರಬೇಕು.

೭. ಸ್ಥಿರತೆ(Stability): ಹಣವು ತನನ್ ಮೌಲ್ಯದಲ್ಲಿ ಸ್ಥಿರತೆ ಹೊಂದಿರಬೇಕು. ಅದನ್ನು ವಿನಿಮಯ ಮತ್ತು ಮೌಲ್ಯ ಸಂಗ್ರಹ ಸಾಧನವಾಗಿ ಬಳಸಲಾಗುವುದರಿಂದ ಅದು ತನ್ನ ಮೌಲ್ಯದಲ್ಲಿ ಏರಿಳಿತಕ್ಕೆ ಒಳಗಾಗಬಾರದು.

೮. ತುಷ್ಟಿಗುಣ(Utility): ಹಣವು ತುಷ್ಟಿಗುಣವನ್ನು ಹೊಂದಿರಬೇಕು. ಆಗ ಮಾತ್ರ ಅದು ಜನರಲ್ಲಿ ಭರವಸೆ ಮೂಡಿಸಿ ಸರ್ವ ಸ್ವೀಕೃತಿ ಪಡೆಯಬಲ್ಲದು.

೯. ಅವಿನಾಶಿ(Indestructibility): ಹಣವನ್ನು ಮೌಲ್ಯ ಸಂಗ್ರಹ ಸಾಧನವನ್ನಾಗಿ ಬಳಸಲಾಗುತ್ತದೆ. ಆದ್ದರಿಂದ ಅದು ವಿನಾಶ ಹೊಂದುವ ಗುಣವನ್ನು ಹೊಂದಿರಬಾರದು. ಅದು ಸಾಕಷ್ಟು ದೀರ್ಘಕಾಲ ಬಾಳಿಕೆ ಬರುವಂತಿರಬೇಕು.

೧೦. ಕೊರತೆ(Scarcity): ಹಣವು ಕೊರತೆಯಿಂದ ಕೂಡಿರಬೇಕು. ಅದರ ಪೂರೈಕೆಯು ಮಿತಿ ಮೀರಿದರೆ ಹಲವಾರು ಅನಾಹುತಗಳಿಗೆ ಎಡೆಯಾಗುತ್ತದೆ(ಕೃಷ್ಣಮೂರ್ತಿ ಎಚ್.ಆರ್., ಹೊಸಬೀಡು ಮೂಲ ಆರ್ಥಿಕ ಸಿದ್ಧಾಂತ, ೨೦೦೮, ಪು.೨೫೪-೨೫೬).

ಪೀಠಿಕೆ(Introduction): ಪುರಾತನ ಕಾಲದಲ್ಲಿ ಮಾನವನ ಬಯಕೆಗಳು ಬಹಳ ಪರಿಮಿತವಾಗಿದ್ದವು. ಅಲ್ಲದೆ ಸರಳವಾಗಿದ್ದವು. ಜನರು ತಮಗೆ ಅಗತ್ಯವಿದ್ದ ಎಲ್ಲಾ ವಸ್ತುಗಳನ್ನು ತಾವೇ ಉತ್ಪಾದಿಸಿ ಕೊಳ್ಳುತ್ತಿದ್ದುದರಿಂದ ಇತರರ ಮೇಲಿನ ಅವಲಂಬನೆ ಇರಲಿಲ್ಲ. ಸ್ವಾವಲಂಬನೆಯು ಪ್ರಾಚೀನ ಕಾಲದ ಜನಜೀವನದ ವಿಶಿಷ್ಠ ಲಕ್ಷಣವಾಗಿದ್ದಿತು. ಪ್ರತಿಯೊಂದು ಕುಟುಂಬವು ಪೂರ್ಣ ಸ್ವಾವಲಂಬಿಯಾಗಿದ್ದುದರಿಂದ ವಿನಿಮಯದ ಅಗತ್ಯವೇ ಇರಲಿಲ್ಲ. ಆದರೆ ಮಾನವನ ಬಯಕೆಗಳು ವೈವಿಧ್ಯಮಯವಾಗಿ ಬೆಳೆಯತೊಡಗಿದಂತೆ ವಸ್ತುಗಳ ವಿನಿಮಯದ ಅಗತ್ಯ ಉದ್ಭವಿಸಿತು. ಆಗ ಹಣವು ಅಸ್ತಿತ್ವದಲ್ಲಿಲ್ಲದಿದ್ದುದರಿಂದ ವಸ್ತುಗಳನ್ನು ವಸ್ತುವಿಗೆ ನೇರವಾಗಿ ವಿನಿಮಯ ಮಾಡಿಕೊಳ್ಳತೊಡಗಿದರು. ಆ ಪದ್ಧತಿಯೇ ಸಾಟಿ ವಿನಿಮಯ ಪದ್ಧತಿ.

ಸಾಟಿ ವಿನಿಮಯ ಪದ್ಧತಿ(Barter System): ಹಣದ ಸಹಾಯವಿಲ್ಲದೆ ವಸ್ತುಗಳನ್ನು ವಸ್ತುಗಳಿಗೆ ನೇರವಾಗಿ ವಿನಿಮಯಿಸಿಕೊಳ್ಳುವ ಪದ್ಧತಿಗೆ ಸಾಟಿ ವಿನಿಮಯ ಪದ್ಧತಿ ಎನ್ನುತ್ತೇವೆ.

ಸಾಟಿ ವಿನಿಮಯ ಪದ್ಧತಿಯ ಮೂಲಕ ಜನರು ತಮಗೆ ಬೇಕಾದ ಎಲ್ಲಾ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳಲು ಅವಕಾಶವಿದ್ದುದರಿಂದ ಪ್ರಾರಂಭದಲ್ಲಿ ತುಂಬಾ ಜನಪ್ರಿಯತೆ ಗಳಿಸಿತು. ಆ ಮಾನವನ ಬಯಕೆಗಳು ಕಡಿಮೆ ಇದ್ದುರಿಂದ ಕೆಲವೇ ವಸ್ತುಗಳ ನಡುವಿನ ವಿನಿಮಯದ ಮೂಲಕ ಬಯಕೆಗಳು ಈಡೇರುತ್ತಿದ್ದವು. ಆದರೆ ನಾಗರೀಕತೆ ಬೆಳೆದಂತೆ

ಜನಸಂಖ್ಯೆ ಹೆಚ್ಚಿದಂತೆ ಅಭಿರುಚಿಗಳು ವೈವಿಧ್ಯಮಯವಾದಂತೆ ಹಾಗೂ ಬಯಕೆಗಳು ಅಧಿಕಗೊಂಡಂತೆ ವಸ್ತುಗಳ ವಿನಿಮಯ ಪದ್ಧತಿಯು ಕಷ್ಟವಾಗತೊಡಗಿತು. ಈ ಪದ್ಧತಿಯಲ್ಲಿ ಹಲವು ತೊಡಕುಗಳು ಕಂಡುಬಂದವು. ಸಾಟಿ ವಿನಿಮಯ ಪದ್ಧತಿಯಲ್ಲಿ ಮುಖ್ಯವಾಗಿ ಈ ಕೆಳಗಿನ ತೊಡಕುಗಳು ಕಂಡುಬಂದವು ಅವುಗಳೆಂದರೆ.

೧. ಬಯಕೆಗಳ ದ್ವಿಮುಖ ಹೊಂದಾಣಿಕೆಯ ಅಭಾವ, ೨. ಸಾಮಾನ್ಯ ಮೌಲ್ಯಮಾಪನದ ಕೊರತೆ, ೩. ವಸ್ತುಗಳ ವಿಭಜನೆಯ ತೊಂದರೆ, ೪. ಸಂಪತ್ತಿನ ಸಂಗ್ರಹಣೆಯ ತೊಂದರೆ, ೫. ಸಾಲದ ವ್ಯವಹಾರದಲ್ಲಿ ಸಮಸ್ಯೆ, ೬. ಸೇವೆಗಳ ಮೌಲ್ಯಮಾಪನದ ತೊಂದರೆ, ೭. ಸಾಗಾಟದ ತೊಂದರೆ ಮುಂತಾದವು.

**ಹಣದ ವ್ಯಾಖ್ಯೆ ಮತ್ತು ಕಾರ್ಯಗಳು(Definitions and functions of money):** "ವಿನಿಮಯ ಸಾಧನ ಮತ್ತು ಮೌಲ್ಯಮಾಪನ ಸಾಧನವಾಗಿ ಕಾರ್ಯನಿರ್ವಹಿಸುವ, ಸಾರ್ವತ್ರಿಕವಾಗಿ ಮನ್ನಿಸಲ್ಪಡುವ ಯಾವುದೇ ವಸ್ತುವನ್ನು ಹಣ" ಎನ್ನುತ್ತೇವೆ.

ಹಣದ ವ್ಯಾಖ್ಯೆಗಳು(Definitions of Money): ಹಣವು ಚಿರಪರಿಚಿತವಾದ ವಸ್ತುವಾಗಿದ್ದರೂ ಅದಕ್ಕೆ ನಿರ್ದಿಷ್ಟ ಅರ್ಥ ವಿರಣೆ ಕೊಡುವುದು ತುಂಬಾ ಕಷ್ಟಕರ. ಆದಾಗ್ಯೂ ಸಹ ಹಣ ಎಂಬ ಪರಿಕಲ್ಪನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದ ವ್ಯಾಖ್ಯೆಗಳು ಈ ಕೆಳಗಿನಂತಿವೆ.

ಪ್ರೊ.ಎಫ್.ಎ.ವಾಕರ್‌ರವರ ಪ್ರಕಾರ "ಹಣ ಏನನ್ನು ಮಾಡುತ್ತದೆಯೋ ಅದೇ ಹಣ." ಡಿ.ಎಚ್.ರಾಬರ್ಟ್‌ಸನ್‌ರವರ ಪ್ರಕಾರ "ಸರಕುಗಳಿಗೆ ಮೌಲ್ಯ ಸಂದಾಯ ಮಾಡಲು ಹಾಗೂ ಎಲ್ಲಾ ರೀತಿಯ ವ್ಯವಹಾರ ನಿರ್ವಹಣೆಯಲ್ಲಿ ಸಾರ್ವತ್ರಿಕವಾಗಿ ಸ್ವೀಕೃತ ವಸ್ತುವೇ ಹಣ" ಎಂದಿದ್ದಾರೆ. ಕ್ರೌಥರ್‌ರವರ ಪ್ರಕಾರ "ಸಾರ್ವತ್ರಿಕವಾಗಿ ಸ್ವೀಕಾರರ್ಹವಾದ ವಿನಿಮಯ ಮಾಧ್ಯಮ ವಾದ ಮತ್ತು ಮೌಲ್ಯಮಾಪನ ಹಾಗೂ ಮೌಲ್ಯಸಂಗ್ರಹ ಸಾಧನವೇ ಹಣ" ಎಂದಿದ್ದಾರೆ.

ಈ ಎಲ್ಲಾ ವ್ಯಾಖ್ಯೆಗಳನ್ನು ಪರಿಶೀಲಿಸಿದಾಗ ಸರ್ವರಿಂದಲೂ ಮಾನ್ಯತೆ ಪಡೆದು, ವಿನಿಮಯ ಸಾಧನವಾಗಿಯೂ, ಮೌಲ್ಯಮಾಪನ ಸಾಧನವಾಗಿಯೂ, ಸಾರ್ವತ್ರಿಕವಾಗಿ ಸ್ವೀಕಾರ ವಾಗುವ ಹಾಗೂ ಮೌಲ್ಯ ಸಂಗ್ರಹದ ಸಾಧನವಾಗಿರುವ ಯಾವುದೇ ವಸ್ತುವನ್ನು ಹಣ ಎಂದು ಅರ್ಥೈಸಬಹುದು.

ಹಣದ ಕಾರ್ಯಗಳು(**Functions of Money**): ಹಣ ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ತುಂಬಾ ಪ್ರಧಾನವಾದ ಪಾತ್ರವನ್ನು ವಹಿಸುತ್ತದೆ. ಹಣವು ವಿನಿಮಯ ಮಾಧ್ಯಮವಾಗಿ ಹಾಗೂ ಮೌಲ್ಯ ಸಂಗ್ರಹ ಸಾಧನವಾಗಿ ಮೌಲ್ಯಮಾಪನದ ಸಾಧನವಾಗಿ ಕಾರ್ಯನಿರ್ವಹಿ

ಸುವುದರಿಂದ ಇತರ ವಸ್ತುಗಳಿಂದ ಭಿನ್ನತೆಯನ್ನು ಪಡೆದುಕೊಂಡಿದೆ. ಹಣವು ಕೊಳ್ಳುವ ಶಕ್ತಿಯನ್ನು ಹೊಂದಿರುವುದರಿಂದ ಅನೇಕ ಕಾರ್ಯಗಳನ್ನು ನಿರ್ವಹಿಸುತ್ತದೆ. ಹಣವು ನಿರ್ವಹಿಸುವ ಕಾರ್ಯಗಳನ್ನು ೪ ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ; ೧. ಪ್ರಾಥಮಿಕ ಕಾರ್ಯಗಳು (Primary Functions), ೨. ಮಾಧ್ಯಮಿಕ ಕಾರ್ಯಗಳು(Secondary Functions), ೩. ಪೂರಕ ಕಾರ್ಯಗಳು(Contingent functions) ೪. ಇತರ ಕಾರ್ಯಗಳು(Other Funcions)(ಸದಾಶಿವಯ್ಯ ಎಚ್.ಎಂ., ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ, ೨೦೧೪, ಪು.೩೦೨-೩೦೩)

"ಹಣ: ...ವಿದೇಶಗಳಿಗೂ ಕಳಿಸಿಕೊಡಬಹುದು" ಎಂಬ ಈ ಪಠ್ಯವನ್ನು ಕೆ.ಡಿ.ಬಸವಾ ಅವರು ಅರ್ಥಶಾಸ್ತ್ರ ಪರಿಚಯ(ಪು.೨೧೧-೨೨೦)ದಲ್ಲಿ ಭಾಷಾಂತರಿಸಿದ್ದಾರೆ. ಹಣದ ವ್ಯಾಖ್ಯೆಗಳೊಂದಿಗೆ ಅದರ ಅರ್ಥ ತಿಳಿಸಲು ಪ್ರಯತ್ನಿಸಿದ್ದಾರೆ. ಪಠ್ಯಕ್ರಮದ ಪ್ರಕಾರ ವಿವಿಧ ಅಂಶಗಳು ಇದರಲ್ಲಿ ಅಡಕವಾಗಿವೆ. ಉದಾ: ಮೂಲಕ ಸರಳ ಭಾಷೆಯಲ್ಲಿ ಭಾಷಾಂತರ ಮಾಡಿರುತ್ತಾರೆ. ಅಲ್ಲಲ್ಲಿ ಇಂಗ್ಲಿಷ್ ಪದಗಳನ್ನು ಪಾರಿಭಾಷಿಕ ಪದದ ಪರಿಭಾಷೆಗಾಗಿ ನೀಡಿರುತ್ತಾರೆ.

"ಹಣದ ಸಿದ್ಧಾಂತ: ಹಣ: ...ವಿನಿಮಯದ ಮಾಧ್ಯಮವಾಯಿತು" ಎಂದು ಸಿ.ಕೆ.ರೇಣುಕಾರ್ಯ ಇವರು ಸಂಪಾದಿಸಿದ ಅರ್ಥಶಾಸ್ತ್ರ(ಪು.೨೧೪-೨೪೬)ರಲ್ಲಿ ಜೆ.ಪಿ.ಪಿಂಜಾರ ಅವರು ಭಾಷಾಂತರಿಸಿರುತ್ತಾರೆ. ಪ್ರಥಮ ಪಿಯುಸಿ ತರಗತಿಯ ಪಠ್ಯಕ್ಕನುಗುಣವಾದ ಅಂಕಗಳೆಲ್ಲ ಇದರಲ್ಲಿ ಅಡಕವಾಗಿವೆ. ಹಣದ ಬೆಳವಣಿಗೆಯನ್ನು ಸ್ಥಂಬ ನಕ್ಷೆಯ ಮೂಲಕ ತೋರಿಸಿದ್ದಾರೆ. ಹಣದ ಪೂರೈಕೆಗೆ ಸಂಬಂಧಿಸಿದ ಕೋಷ್ಠಕದ ಸಂಗಡ ಪೈ ನಕ್ಷೆ ಬಳಸಿರುವುದು ವಿಶೇಷ. ಈ ಭಾಷಾಂತರವು ಪ್ರಾದೇಶಿಕ ಕನ್ನಡ ಬಳಕೆಯಾದುದನ್ನು ಗುರುತಿಸುವಂತಿದೆ. ಇಂಗ್ಲಿಷ ಪದ ಬಳಕೆ ಇರುವುದಿಲ್ಲ. ಪ್ರತಿ ಘಟಕದ ಅಂತ್ಯಕ್ಕೆ ಮುಖ್ಯಾಂಶಗಳ ಮತ್ತು ಪಾರಿಭಾಷಿಕ ಪಟ್ಟಿಗಳಣ್ನು ಕೊಟ್ಟಿರುವುದು ವಿಶೇಷವಾಗಿದೆ. ಇದು ಮಾದರಿ ಅನುವಾದವೆಂದು ಪರಿಗಣಿಸಬಹುದು.

"ಹಣದ ಸಿದ್ಧಾಂತ: ...ತನ್ನದೇ ಆದ ಹಣವನ್ನು ಹೊಂದಿದೆ" ಎಂಬ ಪಠ್ಯಭಾಗವು ಜಿ.ಎನ್.ಕೆಂಪಯ್ಯನವರು ಮೂಲ ಆರ್ಥಿಕ ಸಿದ್ಧಾಂತ(ಪು.೧೪೮-೧೬೯)ದಲ್ಲಿ ಭಾಷಾಂತರಿಸಿರುತ್ತಾರೆ. ಪಿಯುಸಿ ತರಗತಿಯ ಪಠ್ಯಕ್ರಮಕ್ಕೆ ಅನುಸಾರವಾಗಿ ಎಲ್ಲ ಅಂಶಗಳನ್ನು ಅಳವಡಿಸಲಾಗಿದೆ. ಆದರೆ ವಿಷಯದ ಪ್ರಮಾಣವು ಅತ್ಯಂತ ಸಂಕ್ಷಿಪ್ತ ಪ್ರಮಾಣದಲ್ಲಿರುವುದು ಒಂದು ಕೊರತೆ.

"ಹಣ: ಹಣವು ಪ್ರಾಚೀನ ...ಅನಾಹುತಗಳಿಗೆ ಎಡೆಯಾಗುತ್ತದೆ" ಎಂಬ ಭಾಷಾಂತರವನ್ನು ಎಚ್.ಆರ್.ಕೃಷ್ಣಮೂರ್ತಿ ಹೊಸಬೀಡು ಇವರು ಮೂಲ ಆರ್ಥಿಖ ಸಿದ್ಧಾಂತ(ಪು.೨೫೧-೨೯೧)ದಲ್ಲಿ ದಾಖಲು ಮಾಡಿರುತ್ತಾರೆ. ಈ ಭಾಷಾಂತರವು ಪಠ್ಯಕ್ರಮಕ್ಕೆ ಅನುಸಾರವಾದ ಅಂಶಗಳನ್ನು ಹೊಂದಿದೆ. ಚೆಕ್‌ನ ಮಾದರಿ, ಎಟಿಎಂ ಕಾರ್ಡಿನ ಮಾದರಿ ಚಿತ್ರ, ಹಣದ

ಕಾರ್ಯಗಳ ಚಿತ್ರ, ಹಣದುಬ್ಬರಕ್ಕೆ ಸಂಬಂಧಿಸಿದ ರೇಕಾಚಿತ್ರಗಳಿವೆ. ಅಗತ್ಯ ಮಾಹಿತಿಗಳನ್ನು ಒಳಗೊಂಡಿದೆ. ಪಾರಿಭಾಷಿಕ ಪದಗಳ ಜೊತೆಯಲ್ಲಿ ಇಂಗ್ಲಿಷ್ ಪದಗಳನ್ನು ಕೊಟ್ಟಿದ್ದಾರೆ. ಅಧ್ಯಯನಕಾರರಿಗೆ ಅನುಕೂಲವಾಗಲೆಂದು ಘಟಕದ ಕೊನೆಯಲ್ಲಿ ಮುಖ್ಯಾಂಶಗಳಿವೆ. ಬಳಸಿದ ಗ್ರಂಥಗಳ ಪಟ್ಟಿಯನ್ನೂ ಸಹ ಕೊಟ್ಟಿರುವುದು ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಗಲು ಬಹುದು.

"ಹಣದ ಮಾರುಕಟ್ಟೆ: ...ಕೃಷಿಕರು ಮತ್ತು ಖಾಸಗಿ ವ್ಯಕ್ತಿಗಳು ಇತ್ಯಾದಿ" ಎಂಬುದು ಬಿ.ಎಸ್.ರಾಮನ್‌ರವರ ಇಂಗ್ಲಿಷ್ ಕೃತಿಯನ್ನು ಕನ್ನಡೀಕರಿಸಿದ್ದು ಪಾರ್ಶ್ವನಾಥ ಅಜ್ರಿಯವರು. ಇವರು ಭಾರತದ ಆರ್ಥಿಕ ಅಭಿವೃದ್ಧಿ(ಪು.೩೯೬–೪೦೭)ಯಲ್ಲಿ ದಾಖಲಾಗಿದೆ. ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿದ್ದಾರೆ. ಸರಳ ಭಾಷೆಯಾದರೂ ಕೆಲವು ಪದಗಳು ಪ್ರಾದೇಶಿಕ ಪರಿಸರವನ್ನು ಪರಿಚಯಿಸುತ್ತವೆ.

"ಹಣ ಮತ್ತು ಬ್ಯಾಂಕು ವ್ಯವಹಾರ: ಪೀಠಿಕೆ: ...ಇತರ ಕಾರ್ಯಗಳು(other functions)" ಎಂಬುದಾಗಿ ಎಚ್.ಎಂ.ಸದಾಶಿವಯ್ಯ ಅವರು ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ (ಪು.೩೦೨–೩೧೫)ದಲ್ಲಿ ಭಾಷಾಂತರ ಮಾಡಿರುತ್ತಾರೆ. ದ್ವಿತೀಯ ಪಿಯುಸಿ ತರಗತಿ ಪಠ್ಯಕ್ಕೆ ಅನುಗುಣವಾಗಿ ಅಂಶಗಳು ಅಡಕವಾಗಿವೆ. ಆದರೆ ಹಣಕ್ಕೆ ಸಂಬಂಧಿಸಿದ ವ್ಯಾಖ್ಯೆಗಳು ಇರುವುದಿಲ್ಲ. ಹಣದ ಬೇಡಿಕೆಗೆ ಸಂಬಂಧಿಸಿದಂತೆ ವಿವರವುಳ್ಳ ಮಾಹಿತಿ ಇದೆ. ಹಣದ ಪೂರೈಕೆಯನ್ನು ಸಂಕೇತಾತ್ಮಕಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

"ಹಣದ ಪೂರೈಕೆ: ...ವಸ್ತುಗಳು ಹಣವೆನಿಸಿಕೊಳ್ಳುವುದು" ಎಂಬ ಭಾಷಾಂತರವು ಎಸ್.ಎಂ.ವೃಷಭೇಂದ್ರಸ್ವಾಮಿ(ಪಠ್ಯಪುಸ್ತಕ) ನಿರ್ದೇಶಕತ್ವದಲ್ಲಿನ ಪಠ್ಯಪುಸ್ತಕದಲ್ಲಿ ದಾಖಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರು ತಮ್ಮ ವ್ಯಾಪ್ತಿಯ ಪದವಿ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅನುಭವಿ ಮತ್ತು ಭಾಷಾ ಪ್ರೌಢಿಮೆಯುಳ್ಳ ಆಯ್ದ ಪ್ರಾಂಶುಪಾಲರು ಮತ್ತು ಉಪನ್ಯಾಸಕರುಗಳಿಂದ ಕ್ರಮಬದ್ಧವಾಗಿ ಭಾಷಾಂತರ ಮಾಡಿಸಿದ ಪಠ್ಯಪುಸ್ತಕವಿದು. ಇದು ಅಂದು ತುಂಬಾ ಶ್ರಮಪೂರ್ಣತೆ ಹೊಂದಿತ್ತು. ಈ ಪಠ್ಯದಲ್ಲಿ ಬಳಸಿದ ಭಾಷೆಗೂ ಇಂದಿನ ಪಠ್ಯಗಳಲ್ಲಿನ ಭಾಷೆಯಲ್ಲಿ ಅಂತರಗಳನ್ನು ಗುರುತಿಸಬಹುದಾಗಿದೆ. ಇದು ಕನ್ನಡ ಭಾಷಾ ಬೆಳವಣಿಗೆಯ ಸೂಚಕವೂ ಹೌದು. ಈ ಪಠ್ಯವು ಪಾರಿಭಾಷಿಕ ಪದಗಳ ಪಟ್ಟಿಯನ್ನು ಹೊಂದಿದೆ.

"ಹಣ: ಮಾನವ ....ಪರಿಚಯ ಮಾಡಿಕೊಳ್ಳಬೇಕಾಗುತ್ತದೆ" ಎಂಬುದಾಗಿ ಕೆ.ಎಂ. ವೀರಯ್ಯನವರು ಹಣ, ಬ್ಯಾಂಕುಗಳು ಮತ್ತು ಸಾರ್ವಜನಿಕ ಅರ್ಥಶಾಸ್ತ್ರ(ಪು.೧–೩೫)ದಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಪಠ್ಯವು ಪದವಿ ತರಗತಿಯ ಪಠ್ಯಪುಸ್ತಕವಾಗಿರುತ್ತದೆ. ಸರಳ

ಶೈಲಿಯ ಬರಹ ಇರುತ್ತದೆ. ಇಂಗ್ಲಿಷ ಪದ ಬಳಕೆ ತುಂಬಾ ಕಡಿಮೆ. ಅಧ್ಯಯನಕಾರರಿಗೆ ವಿವರವಾದ ಮಾಹಿತಿ ಸಿಗುವುದಾದರೂ, ಬರವಣಿಗೆ ಆಕರ್ಷಕತೆಯ ಕೊರತೆ ಹೊಂದಿದಂತಿದೆ. ಪ್ರಾದೇಶಿಕ ಭಾಷೆಯ ಒಳನೋಟಗಳಿಗೆ ಅವಕಾಶ ಮಾಡಿಕೊಟ್ಟಂತೆ ಕಂಡುಬರುತ್ತದೆ.

"ಹಣ, ಬ್ಯಾಂಕಿಂಗ್ ಮತ್ತು ಹಣಕಾಸು ನೀತಿ: ...ಅದೇ ಹಣ" ಎಂಬ ಪಠ್ಯ ಭಾಗ ವನ್ನು ಎಂ.ಚೌಡೇಗೌಡ ಅವರು ಸಮಗ್ರ ಅರ್ಥಶಾಸ್ತ್ರ(ಪು.೧೭-೨೨೮)ದ ಪಠ್ಯಪುಸ್ತಕದಲ್ಲಿ ಭಾಷಾಂತರಿಸಿರುತ್ತಾರೆ. ವಿವರವುಳ್ಳ ಮಾಹಿತಿಯನ್ನು ಪೂರೈಸಿದ ಇವರು ಪಾರಿಭಾಷಿಕ ಪದಗಳಿಗಾಗಿ ಅಗತ್ಯವಿರುವ ಕಡೆಯಲ್ಲಿ ಇಂಗ್ಲಿಷ ಪದ ನೀಡಿರುತ್ತಾರೆ. ಇವರು ಬಳಸಿದ ಭಾಷೆಯ ಹೆಚ್ಚು ಪ್ರಾದೇಶಿಕತೆಗೆ ಒತ್ತುಕೊಟ್ಟಂತೆ ಕಂಡುಬರುತ್ತದೆ. ಉದಾ: ಸಾರ್ವಜನಿಕರು ವಿಲೇವಾದಿ ರೂಪದಲ್ಲಿ ಹೊಂದಿರುವ ಹಣದ ದಾಸ್ತಾನು ಪ್ರಮಾಣವನ್ನು ಹಣದ ಪೂರೈಕೆ ಎಂದು ಕರೆಯುತ್ತಾರೆ. ಅದರಂತೆ Narrow money–ಪರಿಮಿತ ಹಣ, Broad money–ಸ್ಥೂಲ ಹಣ, Time Deposits–ಸಾವಧಿ ಠೇವಣಿಗಳು, Near money Assets–ಸಮೀಪವರ್ತಿ ಹಣ ಆಸ್ತಿಗಳು, Standard of Defferred payment–ವಿಳಂಬಿತ ಪಾವತಿಯ ಸಾಧನ ಇತ್ಯಾದಿಗಳು. ಸರಳ ಅಥವಾ ಸರಾಗವಾಗಿ ಸಂವಹನವಾಗುವಲ್ಲಿ ಇವರ ಭಾಷೆ ಕೊರತೆಯದ್ದಾಗಿದೆ. ಭಾಷಾಂತರಕಾರರ ಸ್ಥಳೀಯತೆಗೆ ಪೂರಕವಾಗಿದ್ದರೂ ವಿಸ್ತೃತವಾಗಿ ಯೋಚಿಸುವಾಗ ಈ ಅಭಿಪ್ರಾಯ ಬರುವುದು.

**೩.೪. ಬೇಡಿಕೆ(Demand)**

ಅರ್ಥವಿವರಣೆ(Meaning): ಸಾಮಾನ್ಯವಾಗಿ ಭಾಷೆಯಲ್ಲಿ ಬೇಡಿಕೆ ಎಂದರೆ ಬಯಕೆ ಅಥವಾ ಇಚ್ಛೆಯೆಂದು ಅರ್ಥೈಸುತ್ತಾರೆ. ಆದರೆ ಅರ್ಥಶಾಸ್ತ್ರದಲ್ಲಿ 'ಬೇಡಿಕೆ' ಎಂಬ ಪದಕ್ಕೆ ವಿಶೇಷ ಅರ್ಥವಿದೆ. ಒಬ್ಬ ವ್ಯಕ್ತಿಯು ಒಂದು ವಸ್ತುವನ್ನು ಕೇವಲ ಬಯಸಿದ ಮಾತ್ರಕ್ಕೆ ಅದು ಬೇಡಿಕೆಯಾಗಲಾರದು. ಉದಾಹರಣೆಗೆ, ರಸ್ತೆಯ ಬದಿಗೆ ಕುಳಿತ ಒಬ್ಬ ಭಿಕ್ಷುಕನಿಗೆ, ರಸ್ತೆಯ ಮೇಲೆ ಓಡಾಡುವ ಕಾರುಗಳನ್ನು ನೋಡಿ, ಒಂದು ಮೋಟರು ಕಾರು ಬೇಕೆಂಬ ಬಯಕೆಯುಂಟಾಗುತ್ತದೆ. ಅದು ಅವನ ಬಯಕೆ ಮಾತ್ರ, ಅದು ಬೇಡಿಕೆಯಾಗಲಾರದು, ಯಾಕೆಂದರೆ ಅದನ್ನು ಕೊಳ್ಳುವ ಶಕ್ತಿ ಅವನಿಗಿಲ್ಲ. ಕಾರಣ ಒಬ್ಬ ವ್ಯಕ್ತಿಯು ಒಂದು ವಸ್ತುವನ್ನು ಬಯಸಿದರೆ ಅದು ಬೇಡಿಕೆಯಲ್ಲ. ಆ ವಸ್ತುವನ್ನು ಕೊಳ್ಳಲು ಆಸಕ್ತಿ ಮತ್ತು ಕೊಂಡುಕೊಳ್ಳುವ ಶಕ್ತಿ(ಹಣ) ಅವನಲ್ಲಿರಬೇಕು. ಆದ್ದರಿಂದ ಕೊಳ್ಳುವ ಶಕ್ತಿಯಿಂದ ಬೆಂಬಲಿತ ಬಯಕೆಗೆ ಬೇಡಿಕೆ ಎನ್ನುತ್ತಾರೆ.

ಬೇಡಿಕೆ ಪದವು ಬೆಲೆಗೆ ಸಂಬಂಧಿಸಿದೆ. ಯಾವುದೇ ವಸ್ತುವನ್ನು ಖರೀದಿಸಲು ಪೇಟೆಗೆ ಹೋದಾಗ ಮೊದಲು ಆ ವಸ್ತುವಿನ ಬೆಲೆಯ ಬಗ್ಗೆ ವಿಚಾರಿಸುತ್ತೇವೆ. ಬೆಲೆ ಕೇಳಿದ ನಂತರ ಎಷ್ಟು ಖರೀದಿಸಬೇಕೆಂಬುದನ್ನು ನಿರ್ಧರಿಸುತ್ತೇವೆ. ಹೀಗೆ ಬೆಲೆ ಮತ್ತು ಬೇಡಿಕೆಗೆ ನಿಕಟ

ಸಂಬಂಧವಿದೆ. ಬೆಲೆಯಿಲ್ಲದೆ ಬೇಡಿಕೆಯಿಲ್ಲ. ಈ ಬೇಡಿಕೆಯು ನಿರ್ದಿಷ್ಟ ಸಮಯಕ್ಕೂ ಸಂಬಂಧಿಸಿದೆ. ಈಗ ಒಂದು ವಸ್ತುವಿನ ಬೆಲೆ ಕೇಳಿ ಅದನ್ನು ಖರೀದಿಸುತ್ತೇವೆ. ಆದರೆ ನಾಳೆ ಅದೇ ಬೆಲೆಗೆ ಆ ವಸ್ತು ನಮಗೆ ಬೇಡವಾಗಬಹುದು. ಆದ್ದರಿಂದ ನಿರ್ದಿಷ್ಟ ಸಮಯವೂ ಇಲ್ಲಿ ಮಹತ್ವದ್ದು. ಹೀಗೆ ಒಂದು ವಸ್ತುವಿಗೆ ಬೇಡಿಕೆಯಾಗಬೇಕಾದರೆ ಬಯಕೆ, ಬೆಲೆ, ಕೊಳ್ಳುವ ಶಕ್ತಿ ಮತ್ತು ನಿಗದಿತ ಸಮಯ ಇವೆಲ್ಲ ಒಟ್ಟು ಗೂಡಬೇಕು.

ಒಟ್ಟಿನಲ್ಲಿ, ಕೊಳ್ಳುವ ಮನಸ್ಸು ಮತ್ತು ಕೊಳ್ಳುವ ಶಕ್ತಿ ಇವೆರಡೂ ಒಟ್ಟುಗೂಡಿದರೆ ಬೇಡಿಕೆಯು ಉದ್ಭವವಾಗುತ್ತದೆ. ಒಬ್ಬನಲ್ಲಿ ಹಣವಿದೆ, ಆದರೆ ಅವನಿಗೆ ಸ್ಕೂಟರ್ ಕೊಳ್ಳುವ ಮನಸ್ಸಿಲ್ಲ. ಆಗ ಅವನಿಂದ ಸ್ಕೂಟರಿಗೆ ಬೇಡಿಕೆ ಹುಟ್ಟಲು ಸಾಧ್ಯವಿಲ್ಲ. ಒಬ್ಬ ಭಿಕ್ಷುಕನಿಗೆ ಸ್ಕೂಟರ್ ಹತ್ತುವ ಬಯಕೆ ಇದೆ. ಆದರೆ ಅವನಲ್ಲಿ ಅದನ್ನು ಖರೀದಿಸುವ ಹಣವಿಲ್ಲ. ಆದ್ದರಿಂದ ಅವನಿಂದಲೂ ಸ್ಕೂಟರಿಗೆ ಬೇಡಿಕೆ ಹುಟ್ಟಲು ಸಾಧ್ಯವಿಲ್ಲ. ಒಬ್ಬ ವ್ಯಾಪಾರಸ್ಥನಿಗೆ ಸ್ಕೂಟರ್ ಕೊಳ್ಳುವ ಬಯಕೆ ಇದೆ ಮತ್ತು ಅದಕ್ಕಾಗಿ ಅವನು ಹಣ ಕೊಡಲು ಸಿದ್ಧನಿದ್ದಾನೆ. ಆದ್ದರಿಂದ ಅವನ ಸ್ಕೂಟರ್ ಕೊಲ್ಲುವ ಬಯಕೆಯು ಬೇಡಿಕೆಯಾಗುತ್ತದೆ. ಹೀಗೆ ಒಂದು ವಸ್ತುವನ್ನು ಕೊಳ್ಳುವ ಮನಸ್ಸು ಮತ್ತು ಕೊಳ್ಳುವ ಶಕ್ತಿ(ಹಣ) ಇವೆರಡು ಕೂಡಿದರೆ ಬೇಡಿಕೆಯು ಹುಟ್ಟಿಕೊಳ್ಳುತ್ತದೆ.

ಬೇಡಿಕೆಯ ನಿಮಯ(Law of Demand): ಬೆಲೆ ಮತ್ತು ಬೇಡಿಕೆಗಳಲ್ಲಿ ನಿಕಟ ಸಂಬಂಧವಿದೆ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ಸಾಮಾನ್ಯವಾಗಿ ಒಂದು ವಸ್ತುವಿನ ಬೆಲೆಯಲ್ಲಿ ಬದಲಾವಣೆಯಾದರೆ ಅದರ ಬೇಡಿಕೆಯ ಪ್ರಮಾಣದಲ್ಲಿಯೂ ಬದಲಾವಣೆಯಾಗುತ್ತದೆ. ಅಂದರೆ ವಸ್ತುವಿನ ಬೆಲೆಯು ಹೆಚ್ಚಿದರೆ ಅದರ ಬೇಡಿಕೆಯ ಪ್ರಮಾಣವು ಕಡಿಮೆಯಾಗುತ್ತದೆ. ಇದಕ್ಕೆ ವಿರುದ್ಧವಾಗಿ ವಸ್ತುವಿನ ಬೆಲೆಯು ಕಡಿಮೆಯಾದರೆ ಅದರ ಬೇಡಿಕೆಯ ಪ್ರಮಾಣವು ಹೆಚ್ಚುತ್ತದೆ. ಅಂದರೆ ಬೆಲೆ ಮತ್ತು ಬೇಡಿಕೆಗಳಲ್ಲಿ ವಿರೋಧಿ ಸಂಬಂಧವಿದೆ. ಅವೆರಡು ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತವೆ. ಇದನ್ನು ವಿವರಿಸುವ ನಿಯಮಕ್ಕೆ ಬೇಡಿಕೆಯ ನಿಯಮವೆನ್ನುತ್ತಾರೆ. ಈ ನಿಯಮದ ಪ್ರಕಾರ, "ಇತರ ಸಂಗತಿಗಳು ಸ್ಥಿರವಾಗಿರುವಾಗ, ವಸ್ತುವಿನ ಬೆಲೆ ಹೆಚ್ಚಿದರೆ ಅದರ ಬೇಡಿಕೆಯು ಕಡಿಮೆಯಾಗುತ್ತದೆ ಮತ್ತು ಬೆಲೆ ಕಡಿಮೆಯಾದರೆ ಅದರ ಬೇಡಿಕೆಯು ಹೆಚ್ಚುತ್ತದೆ."(ಬದಾಮಿ ಎಂ.ಎಸ್., ಅರ್ಥಶಾಸ್ತ್ರ, ೧೯೯೬-೯೭, ಪು.೪೪-೪೫)

ಬೇಡಿಕೆ ಮತ್ತು ಬೇಡಿಕೆಯ ನಿಯಮ(Demand and Law of Demand): 'ಬೇಡಿಕೆ' ಎಂದರೆ ಕೇವಲ ಬಯಕೆ ಅಥವಾ ಆಶೆಯಲ್ಲ. ಮೋಟಾರ ಕಾರಿನಲ್ಲಿ ಐಷಾರಾಮದಿಂದ ತಿರುಗಾಡುವವರನ್ನು ನೋಡಿದರೆ ನಮಗೂ ಹಾಗೆ ತಿರುಗಾಡಬೇಕೆಂಬ ಬಯಕೆಯಾಗುತ್ತದೆ.

ಆದರೆ ಅದು ಬೇಡಿಕೆಯಾಗುವುದಿಲ್ಲ. ಅದು ಕೇವಲ ಆಶೆಯಾಗುತ್ತದೆ. ಏಕೆಂದರೆ ಮೋಟಾರ ಕಾರನ್ನು ಕೊಂಡುಕೊಳ್ಳಲು ನಮ್ಮ ಹತ್ತಿರ ಸಾಕಷ್ಟು ಹಣ ಇರಬೇಕು. ಮತ್ತು ಆ ಹಣವನ್ನು ಕೊಟ್ಟು ಅದನ್ನು ಕೊಳ್ಳುವ ಮನಸ್ಸೂ ಇರಬೇಕು. ಅಂದರೆ ಮಾತ್ರ ಅದು ಬೇಡಿಕೆಯಾಗುತ್ತದೆ. ಆದುದರಿಂದ ಬೇಡಿಕೆಗೆ ಮೂರು ಕರಾರುಗಳು ಪೂರೈಸಲ್ಪಡಬೇಕು. ೧. ನಮಗೆ ಆ ವಸ್ತುವು ಬೇಕೆಂಬ ಬಯಕೆಯಾಗಬೇಕು. ೨. ಆ ವಸ್ತುವನ್ನು ಕೊಳ್ಳಲು ನಮ್ಮ ಹತ್ತಿರ ಸಾಕಷ್ಟು ಹಣ ಇರಬೇಕು ಮತ್ತು ೩. ನಮಗೆ ಆ ವಸ್ತುವನ್ನು ಹಣ ಕೊಟ್ಟು ಕೊಂಡುಕೊಳ್ಳುವ ಮನಸ್ಸಿರಬೇಕು. ಹೀಗೆ ಬೇಡಿಕೆಯಲ್ಲಿ ಒಟ್ಟು ಮೂರು ಅಂಶಗಳು ಅಡಕವಾಗಿರುತ್ತವೆ.

೧. ಕೊಳ್ಳುವ ಬಯಕೆ ಇರಬೇಕು. ೨. ಕೊಳ್ಳುವ ಶಕ್ತಿ ಇರಬೇಕು. ೩. ಬೆಲೆ ಕೊಟ್ಟು ಕೊಳ್ಳುವ ಮನಸ್ಸು ಇರಬೇಕು. ಆದುದರಿಂದ ಕೊಳ್ಳುವ ಶಕ್ತಿ ಮತ್ತು ಬೆಲೆ ಕೊಟ್ಟು ಕೊಳ್ಳುವ ಮನಸ್ಸಿದ್ದರೆ ಮಾತ್ರ ಬಯಕೆಯು ಬೇಡಿಕೆಯಾಗುತ್ತದೆ.

ಬೇಡಿಕೆಯು ಯಾವಾಗಲೂ ಬೆಲೆಗೆ ಸಂಬಂಧಿಸಿರುತ್ತದೆ. ಯಾವುದೊಂದು ವಸ್ತುವಿಗೆ ಬೇಡಿಕೆಯಿದೆಯೆಂದರೆ ಯಾವ ಬೆಲೆಗೆ ಜನರು ಆ ವಸ್ತುವನ್ನು ಕೊಂಡುಕೊಳ್ಳುತ್ತಾರೆ ಮತ್ತು ಎಷ್ಟು ಕೊಂಡುಕೊಳ್ಳುತ್ತಾರೆ ಎಂಬುದನ್ನು ಹೇಳಬೇಕಾಗುತ್ತದೆ. ಬೆಲೆಯಿಲ್ಲದೆ ಬೇಡಿಕೆಯಲ್ಲ. ಉದಾಹರಣೆಗೆ, ಭಾರತದಲ್ಲಿ ೧೨,೦೦೦ ಮೋಟಾರು ಕಾರುಗಳಿಗೆ ಬೇಡಿಕೆಯಿದೆಯೆಂದರೆ ಅದಕ್ಕೆ ಅರ್ಥವಿಲ್ಲ. ಯಾವ ಬೆಲೆಗೆ ಜನರು ೧೨,೦೦೦ ಮೋಟಾರು ಕಾರುಗಳನ್ನು ಕೊಳ್ಳಲು ಸಿದ್ಧರಿದ್ದಾರೆಂಬುದೇ ಮುಖ್ಯ. ಬೆಲೆಯನ್ನು ಸೂಚಿಸದಿದ್ದರೆ ಬೇಡಿಕೆಗೆ ಅರ್ಥವಿಲ್ಲ. ಏಕೆಂದರೆ ಬೇಡಿಕೆಯ ಪ್ರಮಾಣವು ಬೆಲೆಯಲ್ಲಿನ ವ್ಯತ್ಯಾಸದಿಂದ ಬದಲಾಗುತ್ತದೆ. ಅಂದರೆ ಒಂದು ಬೆಲೆಗೆ ಇದ್ದ ಬೇಡಿಕೆಯು ಇನ್ನೊಂದು ಬೆಲೆಗೆ ಇರಲಾರದು. ಬೆಲೆಯಲ್ಲಿ ವ್ಯತ್ಯಾಸವಾದಂತೆ ಬೇಡಿಕೆಯಲ್ಲಿಯೂ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ, ಮೋಟಾರು ಕಾರಿನ ಬೆಲೆಯು ೧,೨೦,೦೦೦ ರೂ. ಗಳಿದ್ದಾಗ ಬೇಡಿಕೆಯು ೧೨,೦೦೦ ಕಾರುಗಳವರೆಗಿರಬಹುದು. ಬೆಲೆಯು ೧,೩೦,೦೦೦ ರೂ. ಗಳಿಗೇರಿದರೆ ಬೇಡಿಕೆಯು ೧೦,೦೦೦ ಕಾರುಗಳಿಗೆ ಇಳಿಯಬಹುದು. ಬೆಲೆಯು ೧,೮೦,೦೦೦ ರೂ. ಗಳಿಗೇರಿದರೆ ಬೇಡಿಕೆಯು ೮,೦೦೦ ಕಾರುಗಳೀಗೆ ಇಳಿಯಬಹುದು. ಇದು ಸರ್ವ ಸಾಮಾನ್ಯವಾದ ನಿಯಮ. ಬೆಲೆ ಹೆಚ್ಚಾದಾಗ ಬೇಡಿಕೆ ಕಡಿಮೆಯಾಗುತ್ತದೆ. ಬೆಲೆ ಕಡಿಮೆಯಾದಾಗ ಬೇಡಿಕೆ ಹೆಚ್ಚಾಗುತ್ತದೆ. ಅದರಂತೆ ಬೇಡಿಕೆಯು ಯಾವಾಗಲೂ ಕಾಲಕ್ಕೆ ಸಂಬಂಧಿಸಿರುತ್ತದೆ. ಭಾರತದಲ್ಲಿ ಒಂದು ಮೋಟಾರ ಕಾರಿನ ಬೆಲೆ ೧,೨೦,೦೦೦ ರೂ. ಗಳಿದ್ದಾಗ ೧೨,೦೦೦ ಮೋಟಾರ ಕಾರುಗಳ ಬೇಡಿಕೆ ಇದೆ ಎಂದರೆ ಯಾವ ಸಮಯಕ್ಕೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಬೇಡಿಕೆಯು ಕಾಲ ಕಾಲಕ್ಕೆ ಬದಲಾಗುತ್ತದೆ. ೩೦ ವರ್ಷಗಳ

ಹಿಂದೆ ಮೋಟಾರ ಕಾರುಗಳಿಗೆ ಬೇಡಿಕೆ ಕಡಿಮೆ ಇತ್ತು. ಇಂದು ಅವುಗಳಿಗೆ ಬೇಡಿಕೆ ಹೆಚ್ಚಾಗಿದೆ. ಅದುದರಿಂದ "ಬೇಡಿಕೆಯೆಂದರೆ ನಿರ್ದಿಷ್ಟ ಬೆಲೆಗೆ, ನಿರ್ದಿಷ್ಟ ಕಾಲಕ್ಕೆ ಗ್ರಾಹಕರು ಕೊಂಡುಕೊಳ್ಳುವ ಪ್ರಮಾಣ"ವೆಂದು ಹೇಳಬಹುದು(ಬಸವಾ ಕೆ.ಡಿ., ಅರ್ಥಶಾಸ್ತ್ರ ಪರಿಚಯ, ೧೯೯೫, ೨೦೦೦, ಪು.೪೬-೪೭).

ಬೇಡಿಕೆ(Demand): "ಅನುಭೋಗಿಯು ಒಂದು ನಿರ್ದಿಷ್ಟ ಸಮಯದಲ್ಲಿ ಒಂದು ಗೊತ್ತಾದ ಬೆಲೆಯಲ್ಲಿ ವಸ್ತುವನ್ನು ಕೊಳ್ಳುವ ಪ್ರಮಾಣಕ್ಕೆ ಬೇಡಿಕೆ ಎನ್ನುತ್ತೇವೆ." ಬೇಡಿಕೆ ಸಂಭವಿಸಬೇಕಾದರೆ ಅನುಭೋಗಿಯಲ್ಲಿ ಪ್ರಮುಖವಾಗಿ ಮೂರು ಅಂಶಗಳಿರಬೇಕು. ಅವುಗಳೆಂದರೆ, ೧. ಅನುಭೋಗಿಯಲ್ಲಿ ವಸ್ತುವಿನ ಬಗ್ಗೆ ಬಯಕೆಯಿರಬೇಕು. ೨. ವಸ್ತುವನ್ನು ಕೊಳ್ಳುವ ಸಾಮರ್ಥ್ಯವಿರಬೇಕು. ೩. ವಸ್ತುವನ್ನು ಕೊಳ್ಳುವ ಮನಸ್ಸಿರಬೇಕು. ಈ ಮೂವರಲ್ಲಿ ಯಾವೊಂದು ಅಂಶದ ಕೊರತೆಯಾದರೂ, ಬೇಡಿಕೆ ಸಂಭವಿಸುವುದಿಲ್ಲ. ಉದಾ: ಅನುಭೋಗಿಗೆ ಟಿ.ವ್ಹಿ.ಯ ಬೇಡಿಕೆಯಿದೆ ಎಂದರೆ, ಅವನಲ್ಲಿ ಟಿ.ವ್ಹಿ.ಯ ಬಗ್ಗೆ ಬಯಕೆಯಿರಬೇಕು. ಅವನಲ್ಲಿ ಅದನ್ನು ಕೊಳ್ಳಲು ಬೇಕಾಗುವಷ್ಟು ಹಣವಿರಬೇಕು ಹಾಗೂ ಅದನ್ನು ಹಣ ಕೊಟ್ಟು ಕೊಂಡು ತರುವ ಮನಸ್ಸಿರಬೇಕು. ಅನುಭೋಗಿಯು ವಸ್ತುಗಳನ್ನು ಕೊಳ್ಳುವ ಪ್ರಮಾಣವು ಬೆಲೆಯನ್ನು ಅವಲಂಬಿಸಿರುತ್ತದೆ. ವಸ್ತುಗಳ ಬೆಲೆ ಕಡಿಮೆ ಇದ್ದಾಗ ಹೆಚ್ಚು ವಸ್ತುಗಳನ್ನು, ಬೆಲೆ ಹೆಚ್ಚಿದ್ದಾಗ ಕಡಿಮೆ ವಸ್ತುಗಳನ್ನು ಕೊಳ್ಳಲಾಗುತ್ತದೆ. ಆದುದರಿಂದ ಬೇಡಿಕೆಯು ಸಾಮಾನ್ಯವಾಗಿ ಬೆಲೆಯನ್ನು ಅವಲಂಬಿಸಿದೆ(ಕೆಂಪಯ್ಯ ಜಿ.ಎನ್., ಮೂಲ ಆರ್ಥಿಕ ಸಿದ್ಧಾಂತ, ೨೦೦೪, ಪು.೬೭).

ಬೇಡಿಕೆ ಎಂಬ ಪರಿಕಲ್ಪನೆಗೆ ಅರ್ಥಶಾಸ್ತ್ರದಲ್ಲಿ ಪ್ರಮುಖ ಸ್ಥಾನವನ್ನು ಕಲ್ಪಿಸಲಾಗಿದೆ. ಇದು ಬೆಲೆಯನ್ನು ನಿರ್ಧರಿಸುವ ಪ್ರಮುಖ ಅಂಶಗಳಲ್ಲಿ ಒಂದಾಗಿದೆ.

ಬೇಡಿಕೆಯ ಅರ್ಥವಿವರಣೆ(Meaning of demand): ಸಾಮಾನ್ಯ ಅರ್ಥದಲ್ಲಿ ಬೇಡಿಕೆ ಎಂದರೆ 'ಆಸೆ' ಅಥವಾ 'ಬಯಕೆ' ಎಂದಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂಬ ಪರಿಕಲ್ಪನೆಗೆ ಒಂದು ವಿಶೇಷ ಅರ್ಥವನ್ನು ನೀಡಲಾಗಿದೆ. ಬೇಡಿಕೆಯು ಆಸೆ ಅಥವಾ ಬಯಕೆಗಿಂತ ಭಿನ್ನವಾಗಿದೆ. ಬಯಕೆ ಅಥವಾ ಆಸೆ ಎಂದರೆ ಕೇವಲ ಒಂದು ವಸ್ತುವನ್ನು ಪಡೆಯುವ ಹಂಬಲ ಅಥವಾ ಅಪೇಕ್ಷೆಯಾಗುತ್ತದೆ. ಈ ಹಂಬಲ ಅಥವಾ ಅಪೇಕ್ಷೆ ಅರ್ಥಶಾಸ್ತ್ರದಲ್ಲಿ ಬೇಡಿಕೆಯಾಗುವುದಿಲ್ಲ. ಏಕೆಂದರೆ, ಹಂಬಲ ಅಥವಾ ಆಸೆ ಎಂಬುದು ಬೇಡಿಕೆಯಾಗಬೇಕಾದರೆ ಅಪೇಕ್ಷಪಟ್ಟ ವಸ್ತುವನ್ನು ಕೊಳ್ಳುವ ಶಕ್ತಿಯಿರಬೇಕಾಗುತ್ತದೆ. ಉದಾಹರಣೆಗೆ ವಿದ್ಯಾರ್ಥಿಯೊಬ್ಬ ತಾನು ಮೋಟಾರ್ ಸೈಕಲ್ಲನ್ನು ಹೊಂದಬೇಕೆಂದು ಆಸೆಪಟ್ಟಿದ್ದು ಬೇಡಿಕೆಯಾಗಬೇಕಾದರೆ ಅವನು ಮೋಟಾರ್ ಸೈಕಲ್ಲನ್ನು ಕೊಳ್ಳುವ ಮನಸ್ಸು ಮತ್ತು ಶಕ್ತಿಯನ್ನು ಹೊಂದಿರಬೇಕಾಗುತ್ತದೆ.

ಆದ್ದರಿಂದ, ಅರ್ಥಶಾಸ್ತ್ರದಲ್ಲಿ ಯಾವುದೇ ವಸ್ತು ಅಥವಾ ಸೇವೆಯ ಬೇಡಿಕೆ ಎಂದರೆ ಆ ವಸ್ತು ಅಥವಾ ಸೇವೆಗಿರುವ ಆಸೆ ಮತ್ತು ಅದನ್ನು ಕೊಳ್ಳುವ ಸಾಮರ್ಥ್ಯ ಹಾಗು ಬೆಲೆಕೊಡುವ ಮನಸ್ಸಾಗಿರುತ್ತದೆ. ಒಂದು ಸರಕಿಗಿರುವ ಬೇಡಿಕೆಯನ್ನು ಯಾವಾಗಲೂ ಅದರ ಬೆಲೆ, ಪರಿಮಾಣ ಮತ್ತು ಕಾಲಕ್ಕೆ ಸಂಬಂಧಿಸಿದಂತೆ ತಿಳಿಯಪಡಿಸಲಾಗಿರುತ್ತದೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂದರೆ ಈ ಕೆಳಗಿನ ಮೂರು ಪ್ರಮುಖ ಅಂಶಗಳ ಸಮ್ಮಿಲನವಾಗಿದೆ. ೧. ವಸ್ತುವನ್ನು ಪಡೆಯುವ ಆಸೆ. ೨. ಆ ವಸುವನ್ನು ಕೊಂಡುಕೊಳ್ಳುವ ಮನಸ್ಸು ಮತ್ತು ೩. ಆ ವಸ್ತುವನ್ನು ಕೊಂಡುಕೊಳ್ಳುವ ಶಕ್ತಿ ಅಥವಾ ಸಾಮರ್ಥ್ಯ.

ಬೇಡಿಕೆ ಎಂಬ ಪರಿಕಲ್ಪನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದ ವ್ಯಾಖ್ಯಾನಗಳು ಮುಂದಿನಂತಿವೆ. ಸ್ಟೋನಿಯರ್ ಮತ್ತು ಹೇಗ್ ಅವರ ಪ್ರಕಾರ, "ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂದರೆ ಬಯಸಿದ ವಸ್ತುಗಳನ್ನು ಕೊಳ್ಳಲು ಸಾಕಾಗುವಷ್ಟು ಹಣದ ಬೆಂಬಲ ಪಡೆದ ಬಯಕೆಯಾಗಿದೆ." ಬೆನ್‌ಹ್ಯಾಂ ಮೇರೆಗೆ, "ಒಂದು ನಿರ್ದಿಷ್ಟ ಬೆಲೆಯಲ್ಲಿ ಯಾವುದಕ್ಕಾದರೂ ಬೇಡಿಕೆ ಎಂದರೆ ಆ ಬೆಲೆಯಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ ಅದನ್ನು ಕೊಂಡು ಕೊಂಡ ಪ್ರಮಾಣವಾಗಿದೆ. ಬೇಡಿಕೆ ಎಂದರೆ ಒಂದು ನಿರ್ದಿಷ್ಟ ಬೆಲೆಯಲ್ಲಿನ ಬೇಡಿಕೆ ಎಂದರ್ಥ. ಬೆಲೆಯನ್ನು ತಿಳಿಸಿಲ್ಲವೆಂದಾದಲ್ಲಿ ಈ ಪರಿಕಲ್ಪನೆಗೆ ಯಾವುದೇ ಪ್ರಾಮುಖ್ಯತೆ ಇರುವುದಿಲ್ಲ." ಹಿಬ್‌ಡನ್ ಅವರ ಪ್ರಕಾರ, "ಬೇಡಿಕೆ ಎಂದರೆ ಒಂದು ನಿರ್ದಿಷ್ಟ ಮಾರುಕಟ್ಟೆಯಲ್ಲಿ ಪ್ರತಿ ಕಾಲ ಘಟಕದ ವಿವಿಧ ಬೆಲೆಗಳಲ್ಲಿ ಕೊಂಡುಕೊಳ್ಳಲಾಗುವ ಸರಕುಗಳ ವಿವಿಧ ಪ್ರಮಾಣ ಗಳಾಗಿವೆ." ಆದ್ದರಿಂದ, ಬೇಡಿಕೆಯು ಅಸ್ತಿತ್ವದಲ್ಲಿರಬೇಕೆಂದರೆ ಮೂರು ಅಂಶಗಳ ಅವಶ್ಯಕತೆಯಿರುತ್ತದೆ. ಅವುಗಳೆಂದರೆ; ೧. ಸರಕೊಂದರ ಬೆಲೆ, ೨. ಪ್ರತಿ ಕಾಲ ಘಟಕದಲ್ಲಿ ಅನುಭೋಗಿಯು ಕೊಳ್ಳಲು ಸಿದ್ಧನಿರುವ ಸರಕಿನ ಪ್ರಮಾಣ ಮತ್ತು ೩. ಒಂದು ನಿರ್ದಿಷ್ಟ ಅವಧಿ. ಯಾವುದೇ ಸಂದರ್ಭದಲ್ಲಿ ಬೆಲೆ, ಕಾಲಾವಧಿ ಮತ್ತು ಪ್ರಮಾಣಗಳ ಉಲ್ಲೇಖವಿಲ್ಲದ ಬೇಡಿಕೆಗೆ ಅರ್ಥಬರುವುದಿಲ್ಲ. ಈ ಹಿನ್ನೆಲೆಯಲ್ಲಿ ಒಂದು ವಸ್ತುವಿನ ಬೇಡಿಕೆ ಎಂದರೆ ಒಂದು ಗೊತ್ತಾದ ಅವಧಿಯಲ್ಲಿ ಯಾವ ಬೆಲೆಯಲ್ಲಿ ಜನರು ಆ ವಸ್ತುವನ್ನು ಎಷ್ಟು ಪ್ರಮಾಣದಲ್ಲಿ ಕೊಂಡುಕೊಳ್ಳುತ್ತಾರೆ ಎಂಬುದಾಗಿರುತ್ತದೆ(ಕೃಷ್ಣಮೂರ್ತಿ ಎಚ್.ಆರ್., ಹೊಸಬೀಡು, ಮೂಲ ಆರ್ಥಿಕ ಸಿದ್ಧಾಂತ, ಪು.೯೮-೯೯).

ಪೀಠಿಕೆ(Introduction): ಬೇಡಿಕೆ ಮತ್ತು ಪೂರೈಕೆ ಅರ್ಥಶಾಸ್ತ್ರದಲ್ಲಿ ಎರಡು ಪ್ರಮುಖ ಚಲಪರಿಮಾಣಗಳು(variables). ಸರಕುಗಳಿಗೆ ಬೇಡಿಕೆ ಇರುವುದರಿಂದ ಇವುಗಳನ್ನು ಉತ್ಪಾದಿಸಿ ಪೂರೈಕೆ ಮಾಡಬೇಕಾಗುತ್ತದೆ. ಅಂದರೆ ಸರಕು ಮತ್ತು ಸೇವೆಗಳಿಗೆ ಬೇಡಿಕೆ ಇಲ್ಲದಿದ್ದರೆ

ಅವುಗಳನ್ನು ಉತ್ಪಾದಿಸುವ ಅವಶ್ಯಕತೆಯೇ ಬರುವುದಿಲ್ಲ. ಆ ಪ್ರಕಾರ ಬೇಡಿಕೆ ಮತ್ತು ಪೂರೈಕೆ ಒಂದಕ್ಕೊಂದು ಪೂರಕ(complementary)ವಾಗಿವೆ. ಬೇಡಿಕೆಯು ಯಾವಾಗಲೂ ಕಾಲ, ಪರಿಮಾಣ ಮತ್ತು ಬೆಲೆಗೆ ಸಂಬಂಧಿಸಿರುತ್ತದೆ. ಕೊಳ್ಳುವ ಶಕ್ತಿಯಿಂದ ಬೆಂಬಲಿತವಾದ ಆಸೆಯೇ ಬೇಡಿಕೆ. ಅರ್ಥಶಾಸ್ತ್ರದಲ್ಲಿ ಪೂರೈಕೆಗೆ ಬಹಳ ಮಹತ್ವದ ಸ್ಥಾನವಿದೆ. ವಸ್ತುಗಳ ಪೂರೈಕೆಯಾದಾಗ ಮಾತ್ರ ಅವು ಅನುಭೋಗಕ್ಕೆ ದೊರೆಯಲು ಸಾಧ್ಯ. ಬೇಡಿಕೆ ಮತ್ತು ಪೂರೈಕೆ ಎರಡನ್ನೂ ನಿರ್ದಿಷ್ಟ ಬೆಲೆ, ಅವಧಿ ಮತ್ತು ಪ್ರಮಾಣದಲ್ಲಿ ಹೇಳಬೇಕು. ಬೇಡಿಕೆ ಮತ್ತು ಪೂರೈಕೆ ಎರಡೂ ಬೆಲೆಯೊಡನೆ ವ್ಯತ್ಯಾಸಗೊಳ್ಳುತ್ತವೆ. ಬೇಡಿಕೆ ಮತ್ತು ಪೂರೈಕೆ ಒಟ್ಟಾಗಿ ಬೆಲೆಯನ್ನು ನಿರ್ಧರಿಸುತ್ತವೆ.

ಸಾಮಾನ್ಯ ಅರ್ಥದಲ್ಲಿ 'ಬೇಡಿಕೆ' ಎಂದರೆ 'ಬಯಕೆ' ಅಥವಾ 'ಆಸೆ' ಎಂದಾಗುತ್ತದೆ. ಅಂದರೆ ಅರ್ಥಶಾಸ್ತ್ರದಲ್ಲಿ ಬೇಡಿಕೆಯು ಆಸೆಗಿಂತ ಭಿನ್ನವಾಗಿದೆ. ಒಬ್ಬ ವ್ಯಕ್ತಿಯ ಕೇವಲ ಬಯಕೆ ಅಥವಾ ಆಸೆಯು ಬೇಡಿಕೆಯಾಗುವುದಿಲ್ಲ. ಉದಾಹರಣೆಗೆ ಭಿಕ್ಷುಕನಿಗೆ ಮಾರುತಿ ಕಾರಿನಲ್ಲಿ ತಿರುಗಾಡಬೇಕೆಂಬ ಬಯಕೆಯಾಗುತ್ತದೆ. ಆದರೆ ಅದು ಮಾರುತಿ ಕಾರಿನ ಬೇಡಿಕೆಯಾಗುವುದಿಲ್ಲ. ಏಕೆಂದರೆ ಅವನಿಗೆ ಮಾರುತಿ ಕಾರನ್ನು ಹಣ ಕೊಟ್ಟು ಕೊಳ್ಳುವ ಶಕ್ತಿಯಿಲ್ಲ. ಆದುದರಿಂದ ಬಯಕೆಯು ಬೇಡಿಕೆಯಾಗಲಾರದು. ಆದರೆ ಕೇವಲ ಬೆಲೆಯನ್ನು ಕೊಟ್ಟುಕೊಳ್ಳುವ ಶಕ್ತಿಯಿದ್ದರೆ ಅದು ಬೇಡಿಕೆಯಾಗಲಾರದು. ಏಕೆಂದರೆ ಒಬ್ಬ ಜಿಪುಣ ಸಾಹುಕಾರನ ಬಳಿ ಸಾಕಷ್ಟು ಹಣವಿದೆ. ಅಂದರೆ ಅವನಿಗೆ ಹಣಕೊಟ್ಟು ಕೊಳ್ಳುವ ಶಕ್ತಿ ಇದೆ. ಆದರೆ ಅವನಿಗೆ ಆ ಕಾರನ್ನು ಕೊಳ್ಳುವ ಮನಸ್ಸಿಲ್ಲ. ಆದ್ದರಿಂದ ಇದು ಸಹ ಬೇಡಿಕೆಯಾಗುವುದಿಲ್ಲ. ಆದುದರಿಂದ ಬಯಕೆಯು ಬೇಡಿಕೆಯಾಗಬೇಕಾದರೆ, ಬಯಕೆಯೊಡನೆ ಕೊಳ್ಳುವ ಶಕ್ತಿ ಮತ್ತು ಹಣ ಕೊಟ್ಟು ಕೊಳ್ಳುವ ಮನಸ್ಸು ಬೆಂಬಲಿತವಾಗಿರಬೇಕು. ಆದುದರಿಂದ ಕೊಳ್ಳುವ ಶಕ್ತಿ ಮತ್ತು ಬೆಲೆ ಕೊಟ್ಟು ಕೊಳ್ಳುವ ಮನಸ್ಸಿದ್ದರೆ ಮಾತ್ರ ಬಯಕೆಯು ಬೇಡಿಕೆಯಾಗುತ್ತದೆ. ಹೀಗೆ ಬಯಕೆಯು ಬೇಡಿಕೆಯಾಗಬೇಕಾದರೆ ಮೂರು ಅಂಶಗಳು ಬೆಂಬಲಿತವಾಗಿರಬೇಕು. ೧. ವಸ್ತುವನ್ನು ಕೊಳ್ಳುವ ಬಯಕೆ ಇರಬೇಕು. ೨. ವಸ್ತುವನ್ನು ಕೊಳ್ಳುವ ಶಕ್ತಿ ಇರಬೇಕು. ೩. ವಸ್ತುವನ್ನು ಬೆಲೆ ಕೊಟ್ಟು ಕೊಳ್ಳುವ ಮನಸ್ಸು ಇರಬೇಕು.

ವ್ಯಾಖ್ಯೆಗಳು(Definitions): ಬೇಡಿಕೆ ಎಂಬ ಪರಿಭಾವನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಸ್ಟೋನಿಯರ್ ಮತ್ತು ಹೇಗ್(Stonier and Hague) ಅವರ ಪ್ರಕಾರ ಬೇಡಿಕೆ ಎಂದರೆ "ಬಯಸಿದ ವಸ್ತುಗಳನ್ನು ಕೊಳ್ಳಲು ಸಾಕಾಗುವಷ್ಟು ಹಣದ ಬೆಂಬಲ ಪಡೆದ ಬಯಕೆಯಾಗಿದೆ." ಬೆನ್‌ಹ್ಯಾಂ(Benham)ರ ಪ್ರಕಾರ "ಒಂದು ನಿರ್ದಿಷ್ಟ ಬೆಲೆಯಲ್ಲಿ ಯಾವುದಕ್ಕಾದರೂ ಬೇಡಿಕೆ ಎಂದರೆ ಆ ಬೆಲೆಯಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ

ಅದನ್ನು ಕೊಂಡುಕೊಂಡ ಪ್ರಮಾಣವಾಗಿದೆ. ಬೇಡಿಕೆ ಎಂದರೆ ಒಂದು ನಿರ್ದಿಷ್ಟ ಬೆಲೆಯಲ್ಲಿನ ಬೇಡಿಕೆ ಎಂದರ್ಥ. ಬೆಲೆಯನ್ನು ತಿಳಿಸಿಲ್ಲವೆಂದಾದಲ್ಲಿ ಈ ಪರಿಭಾವನೆಗೆ ಯಾವುದೇ ಪ್ರಾಮುಖ್ಯತೆಯಿರುವುದಿಲ್ಲ." ಪ್ರೊ.ಚಾಪ್‌ಮನ್(Prof. Chappman)ರು ಹೇಳುವಂತೆ, "ಬೇಡಿಕೆ ಎಂಬುದು ಮಾನವನ ಬಯಕೆಯ ನಿರ್ದಿಷ್ಟವಾದ ಒಂದು ಪ್ರಮಾಣವನ್ನು ಸೂಚಿಸುತ್ತದೆ. ಅದು ಒಂದು ಬೆಲೆಗೆ ಅನ್ವಯಿಸುತ್ತದೆ. ಬೇಡಿಕೆಯು ಒಂದು ನಿರ್ದಿಷ್ಟವಾದ ಕಾಲದಲ್ಲಿ ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟವಾದ ಬೆಲೆಗೆ ಒಂದು ನಿರ್ದಿಷ್ಟವಾದ ಪ್ರಮಾಣದ ಸರಕಿನ ಕೊಳ್ಳುವಿಕೆಯನ್ನು ಸೂಚಿಸುತ್ತದೆ." ಸಿಲ್ವರ್‌ಮನ್(Silverman)ರು, "ಪರಿಣಾಮಕಾರಿ ಇಚ್ಛೆಯೆ ಬೇಡಿಕೆ" ಎಂದು ವ್ಯಾಖ್ಯಾನಿಸಿದ್ದಾರೆ.

ಬೇಡಿಕೆಯು ಯಾವಾಗಲೂ ಕಾಲ, ಪರಿಮಾಣ ಮತ್ತು ಬೆಲೆಗೆ ಸಂಬಂಧಿಸಿರುತ್ತದೆ. ಬೆಲೆ, ಅವಧಿ ಮತ್ತು ಪ್ರಮಾಣಗಳ ಉಲ್ಲೇಖವಿಲ್ಲದೆ ಬೇಡಿಕೆಗೆ ಅರ್ಥ ಬರುವುದಿಲ್ಲ. ಒಂದು ವಸ್ತುವಿನ ಬೇಡಿಕೆ ಎಂದರೆ ಯಾವ ಬೆಲೆಯಲ್ಲಿ ಜನರು ಆ ವಸ್ತುವನ್ನು ಎಷ್ಟು ಪ್ರಮಾಣದಲ್ಲಿ ಕೊಂಡುಕೊಳ್ಳುತ್ತಾರೆ ಎಂಬುದಾಗಿದೆ. ಉದಾಹರಣೆಗೆ ಭಾರತದಲ್ಲಿ ೪೦,೦೦೦ ಮಾರುತಿ ಕಾರುಗಳಿಗೆ ಬೇಡಿಕೆಯಿದೆ ಎಂದರೆ ಅದಕ್ಕೆ ಅರ್ಥವಿಲ್ಲ. ಯಾವ ಬೆಲೆಗೆ ಜನರು ೪೦,೦೦೦ ಮಾರುತಿ ಕಾರುಗಳನ್ನು ಕೊಳ್ಳಲು ಸಿದ್ಧರಿದ್ದಾರೆಂಬುದು ಮುಖ್ಯ. ಬೆಲೆಯಿಲ್ಲದೆ ಬೇಡಿಕೆಗೆ ಅರ್ಥವಿಲ್ಲ. ಏಕೆಂದರೆ ಬೇಡಿಕೆಯ ಪ್ರಮಾಣವು ವಸ್ತುವಿನ ಬೆಲೆಯಲ್ಲಿನ ವ್ಯತ್ಯಾಸದಿಂದ ಬದಲಾಗುತ್ತದೆ. ಉದಾಹರಣೆಗೆ ಮಾರುತಿ ಕಾರಿನ ಬೆಲೆಯು, ೨,೦೦,೦೦೦ ರೂ. ಗಳಿದ್ದಾಗ ಬೇಡಿಕೆಯು ೪೦,೦೦೦ ಕಾರುಗಳವರೆಗಿರಬಹುದು. ಬೆಲೆಯು ೧,೭೫,೦೦೦ ರೂ.ಗಳಿಗೆ ಇಳಿದರೆ ಬೇಡಿಕೆಯು ೬೦,೦೦೦ ಕಾರುಗಳಿಗೆ ಏರಬಹುದು. ಇದು ಸರ್ವ ಸಾಮಾನ್ಯ ನಿಯಮ. ಹಾಗೆಯೇ ಬೇಡಿಕೆಯು ಯಾವಾಗಲೂ ಕಾಲಕ್ಕೆ ಸಂಬಂಧಿಸಿರುತ್ತದೆ. ಭಾರತದಲ್ಲಿ ಒಂದು ಮಾರುತಿ ಕಾರಿನ ಬೆಲೆ ೩ ಲಕ್ಷ ರೂ.ಗಳಿದ್ದಾಗ ೫೦,೦೦೦ ಕಾರುಗಳ ಬೇಡಿಕೆ ಇದೆ ಎಂದರೆ ಯಾವ ಸಮಯಕ್ಕೆ? ಬೇಡಿಕೆಯು ಕಾಲಕಾಲಕ್ಕೆ ಬದಲಾಗುತ್ತದೆ. ೧೫ ವರ್ಷಗಳ ಹಿಂದೆ ಕಾರುಗಳಿಗೆ ಬೇಡಿಕೆ ಕಡಿಮೆಯಿತ್ತು. ಇಂದು ಅವುಗಳ ಬೇಡಿಕೆ ಹೆಚ್ಚಾಗಿದೆ. ಆದುದರಿಂದ ಬೇಡಿಕೆಯೆಂದರೆ ನಿರ್ದಿಷ್ಟ ಬೆಲೆಗೆ, ನಿರ್ದಿಷ್ಟ ಕಾಲಕ್ಕೆ ಗ್ರಾಹಕರು ಕೊಂಡುಕೊಳ್ಳುವ ಪ್ರಮಾಣವಾಗಿದೆ (ಬಸವರಾಜ ಕುಮ್ನೂರ, ಸೂಕ್ಷ್ಮ ಅರ್ಥಶಾಸ್ತ್ರ, ಭಾಗ ೧, ೨೦೧೩, ಪು.೧೭೭-೧೭೯).

ಪೀಠಿಕೆ(Introducion): ಆರ್ಥಿಕ ವಿಶ್ಲೇಷಣೆಯಲ್ಲಿ 'ಬೇಡಿಕೆ' ಪರಿಕಲ್ಪನೆಯು ಅತ್ಯಂತ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಏಕೆಂದರೆ ಬೇಡಿಕೆಯು ಉತ್ಪಾದನೆ, ವಿನಿಮಯ, ಹಂಚಿಕೆ ಇತ್ಯಾದಿ ಆರ್ಥಿಕ ಚಟುವಟಿಕೆಗಳ ಕೇಂದ್ರ ಬಿಂದುವಾಗಿದೆ. ಅರ್ಥವ್ಯವಸ್ಥೆಯಲ್ಲಿ

ವಸ್ತುಗಳು ಮತ್ತು ಸೇವೆಗಳಿಗೆ ಬೇಡಿಕೆಯಿದ್ದಾಗ ಮಾತ್ರ ಅವುಗಳ ಉತ್ಪಾದನೆ, ವಿನಿಮಯ ಮತ್ತು ಹಂಚಿಕೆಯ ಚಟುವಟಿಕೆಗಳು ನಡೆಯುತ್ತವೆ. ಒಂದು ವೇಳೆ ವಸ್ತುಗಳು ಮತ್ತು ಸೇವೆಗಳಿಗೆ ಬೇಡಿಕೆಯಿಲ್ಲದಿದ್ದರೆ ಅವುಗಳ ಉತ್ಪಾದನೆ ವಿನಿಮಯ ಮತ್ತು ಹಂಚಿಕೆಯ ಅವಶ್ಯಕತೆಯಿರುವುದಿಲ್ಲ. ಅಂತೆಯೇ ಆರ್ಥಿಕ ವಿಶ್ಲೇಷಣೆಯಲ್ಲಿ ಬೇಡಿಕೆ ಮತ್ತು ಪೂರೈಕೆಗಳ ಪ್ರಾಮುಖ್ಯತೆಯನ್ನು ಕುರಿತು ಖ್ಯಾತ ಅರ್ಥಶಾಸ್ತ್ರಜ್ಞ ಡಾ.ಆಲ್ಫ್ರೆಡ್ ಮಾರ್ಷಲ್‌ರವರು ಹೀಗೆ ಹೇಳುತ್ತಾರೆ. "ಆರ್ಥಿಕ ವಿಶ್ಲೇಷಣೆಯಲ್ಲಿ ಬೇಡಿಕೆ ಮತ್ತು ಪೂರೈಕೆಗಳು ಕತ್ತರಿಯ ಎರಡು ಅಲಗುಗಳಿದ್ದಂತೆ ಕತ್ತರಿಯ ಉಪಯೋಗದಲ್ಲಿ ಮೇಲಿನ ಅಲಗು ಪ್ರಮುಖವೊ ಅಥವಾ ಕೆಳಗಿನ ಅಲಗು ಪ್ರಮುಖವೊ ಎಂದು ನಿರ್ಧರಿಸುವುದು ಹೇಗೆ ಕಷ್ಟವೊ ಹಾಗೆಯೆ ಆರ್ಥಿಕ ವಿಶೇಷಣೆಯಲ್ಲಿ ಬೇಡಿಕೆ ಪ್ರಮುಖವೊ ಅಥವಾ ಪೂರೈಕೆ ಪ್ರಮುಖವೊ ಎಂದು ನಿರ್ಧರಿಸುವುದು ಕಷ್ಟ." ಆರ್ಥಿಕ ವಿಶ್ಲೇಷಣೆಯು ಅರ್ಥಪೂರ್ಣವು ಮತ್ತು ಪರಿಪೂರ್ಣವೂ ಆಗಬೇಕಾದರೆ ಬೇಡಿಕೆ ಮತ್ತು ಪೂರೈಕೆಗಳು ಅತ್ಯಂತ ಅವಶ್ಯಕ ಎಂಬುದು ಡಾ.ಮಾರ್ಷಲ್‌ರ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ.

ಬೇಡಿಕೆಯ ಅರ್ಥ(Meaning of Demand): 'ಬೇಡಿಕೆ' ಎಂದಾಕ್ಷಣ ಸಾಮಾನ್ಯವಾಗಿ ನಾವು 'ಒಲವು' 'ಆಸೆ', 'ಬಯಕೆ' ಎಂದು ಅರ್ಥೈಸುತ್ತೇವೆ. ಆದರೆ ಅರ್ಥಶಾಸ್ತ್ರದಲ್ಲಿ 'ಬೇಡಿಕೆ' ತನ್ನದೆ ಆದ ವಿಶಿಷ್ಟ ಅರ್ಥವನ್ನು ಪಡೆದುಕೊಂಡಿದೆ. ಅರ್ಥಶಾಸ್ತ್ರಜ್ಞರ ಪ್ರಕಾರ ಒಂದು ವಸ್ತು ಅಥವಾ ಸೇವೆಯ ಬಗೆಗಿನ ಒಬ್ಬ ವ್ಯಕ್ತಿಯ ಆಸೆ ಅಥವಾ ಬಯಕೆಯನ್ನು ನಾವು ಬೇಡಿಕೆಯೆಂದು ಪರಿಗಣಿಸಲು ಬರುವುದಿಲ್ಲ. ಏಕೆಂದರೆ ವಸ್ತು ಅಥವಾ ಸೇವೆಯ ಬಗ್ಗೆ ವ್ಯಕ್ತಿಯ ಮನಸ್ಸಿನಲ್ಲಿ ಆಸೆ ಅಥವಾ ಬಯಕೆಯ ಚಿಗುರೊಡೆಯಬಹುದು. ಆದರೆ ಹೀಗೆ ಚಿಗುರೊಡೆದ ಆಸೆಯು ವಸ್ತು ಅಥವಾ ಸೇವೆಯ ಖರೀದಿಯಲ್ಲಿ ಕಾರ್ಯಗತಗೊಂಡಾಗ ಮಾತ್ರ ಅದು ಆ ವಸ್ತು ಅಥವಾ ಸೇವೆಗಿರುವ 'ಬೇಡಿಕೆ'ಯಾಗುತ್ತದೆ. ಒಂದು ವೇಳೆ ಚಿಗುರೊಡೆದ ಆಸೆ ಆಸೆಯಾಗಿಯೆ ಮನಸ್ಸಿನಲ್ಲಿ ಉಳಿದರೆ ಅದು ಬೇಡಿಕೆಯಾಗುವುದಿಲ್ಲ. ಮನಸ್ಸಿನಲ್ಲಿನ ಆಸೆಯು ವಸ್ತುವನ್ನು ಕೊಳ್ಳುವ ಇಚ್ಛೆ, ಕೊಳ್ಳುವ ಸಾಮರ್ಥ್ಯದೊಂದಿಗೆ ಕಾರ್ಯರೂಪಕ್ಕೆ ಬಂದಾಗ ಅದು ಬೇಡಿಕೆಯಾಗುತ್ತದೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಒಂದು ವಸ್ತು ಅಥವಾ ಸೇವೆಗಿರುವ ಬೇಡಿಕೆಯೆಂದರೆ, ವಸ್ತು ಅಥವಾ ಸೇವೆಯ ಬಯಕೆ, ಅದನ್ನು ಕೊಳ್ಳುವ ಮನಸ್ಸು ಮತ್ತು ಕೊಳ್ಳುವ ಸಾಮರ್ಥ್ಯದಿಂದೊಡಗೂಡಿದ ಬಯಕೆ ಎಂದರ್ಥವಾಗುತ್ತದೆ. ಅಂದರೆ ಅರ್ಥಶಾಸ್ತ್ರದ ಪ್ರಕಾರ ಯಾವುದೆ ಒಂದು ವಸ್ತು ಅಥವಾ ಸೇವೆಗೆ ಬೇಡಿಕೆಯಿದೆಯೆಂದರೆ ಅದು ಕೆಳಗಿನ ಮೂರು ಕರಾರುಗಳನ್ನು ಪೂರೈಸಬೇಕಾಗುತ್ತದೆ. ೧. ವಸ್ತು ಅಥವಾ ಸೇವೆಯ ಬಗ್ಗೆ ಬಯಕೆ(ಆಸೆ)ಯಿರಬೇಕು. ೨. ವಸ್ತು ಅಥವಾ ಸೇವೆಯನ್ನು ಕೊಳ್ಳುವ ಮನಸ್ಸಿರಬೇಕು. ೩. ವಸ್ತು ಅಥವಾ ಸೇವೆಯನ್ನು ಕೊಳ್ಳುವ ಸಾಮರ್ಥ್ಯವಿರಬೇಕು.

ಬೇಡಿಕೆಯ ಬಗ್ಗೆ ವಿವಿಧ ಅರ್ಥಶಾಸ್ತ್ರಜ್ಞರು ಕೊಟ್ಟ ವ್ಯಾಖ್ಯೆಗಳು ಈ ಕೆಳಗಿನಂತಿವೆ.

ಸ್ಟೋನಿಯರ್ ಮತ್ತು ಹೇಗ್‌ರವರ ಪ್ರಕಾರ ಬೇಡಿಕೆಯೆಂದರೆ "ಬಯಸಿದ ವಸ್ತುಗಳನ್ನು ಕೊಳ್ಳಲು ಸಾಕಾಗುವಷ್ಟು ಹಣದ ಬೆಂಬಲ ಪಡೆದ ಬಯಕೆಯಾಗಿದೆ." ಸಿಲ್ವರ್‌ಮನ್ ಅವರ ಪ್ರಕಾರ ಬೇಡಿಕೆಯೆಂದರೆ "ಪರಿಣಾಮಕಾರಿ ಇಚ್ಛೆಯೇ ಬೇಡಿಕೆ." ಚಾಪ್‌ಮನ್‌ರ ಪ್ರಕಾರ "ಬೇಡಿಕೆಯು ಮಾನವನ ಬಯಕೆಯ ಒಂದು ನಿರ್ದಿಷ್ಟ ಪ್ರಮಾಣವನ್ನು ಸೂಚಿಸುತ್ತಿದ್ದು ಅದು ಬೆಲೆಗೆ ಅನ್ವಯಿಸುತ್ತದೆ. ಬೇಡಿಕೆಯು ಒಂದು ನಿರ್ದಿಷ್ಟವಾದ ಕಾಲದಲ್ಲಿ ಒಂದು ನಿರ್ದಿಷ್ಟವಾದ ಬೆಲೆಗೆ ಒಬ್ಬ ವ್ಯಕ್ತಿಯು ಕೊಳ್ಳುವ ಸರಕಿನ ನಿರ್ದಿಷ್ಟವಾದ ಪ್ರಮಾಣವನ್ನು ಸೂಚಿಸುತ್ತದೆ." ಫೆಡ್ರಿಕ್ ಬೆನ್‌ಹ್ಯಾಮ್‌ರ ಪ್ರಕಾರ "ಒಂದು ನಿರ್ದಿಷ್ಟ ಬೆಲೆಯಲ್ಲಿ ಯಾವುದಕ್ಕಾದರೂ ಬೇಡಿಕೆಯಿದೆ ಎಂದರೆ ಆ ಬೆಲೆಯಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ ಅದನ್ನು ಖರೀದಿಸಿದ ಪ್ರಮಾಣವಾಗಿದೆ."

ಮೇಲಿನ ವ್ಯಾಖ್ಯೆಗಳನ್ನು ಗಮನಿಸಿದಾಗ ಬೇಡಿಕೆಯೆಂಬುದು ಮನಸ್ಸು, ಬೆಲೆ, ಕಾಲ, ಪ್ರಮಾಣ ಇತ್ಯಾದಿಗಳೊಂದಿಗೆ ಸಂಬಂಧಿಸಿದುದಾಗಿದೆ. ಒಂದು ವಸ್ತು ಅಥವಾ ಸೇವೆಗಿರುವ ಬೇಡಿಕೆಯನ್ನು ಹೇಳಬೇಕಾದರೆ ಇವುಗಳಿಗೆ ಸಂಬಂಧಿಸಿಯೆ ಹೇಳಬೇಕಾಗುತ್ತದೆ(ಗುರುಬಸಪ್ಪ ಟಿ.ಆರ್. ಮತ್ತು ಮಲ್ಲೇಶಪ್ಪ ಕುಂಬಾರ, ಸೂಕ್ಷ್ಮ ಅರ್ಥಶಾಸ್ತ್ರ, ೨೦೧೩, ಪು.೧೬೮-೧೬೯).

**ಬೇಡಿಕೆಯ ವಿಶ್ಲೇಷಣೆ(DEMAND ANALYSIS): ಪೀಠಿಕೆ(Introduction):** ಬೇಡಿಕೆ ಮತ್ತು ಪೂರೈಕೆ ಅರ್ಥಶಾಸ್ತ್ರದಲ್ಲಿ ಎರಡು ಪ್ರಮುಖ ಚಲ ಪರಿಮಾಣಗಳು (Variables). ಸರಕುಗಳಿಗೆ ಬೇಡಿಕೆ ಇರುವುದರಿಂದ ಅವುಗಳನ್ನು ಉತ್ಪಾದಿಸಿ ಪೂರೈಕೆ ಮಾಡಬೇಕಾಗುತ್ತದೆ. ಅಂದರೆ ಸರಕು ಮತ್ತು ಸೇವೆಗಳಿಗೆ ಬೇಡಿಕೆ ಇಲ್ಲದಿದ್ದರೆ ಅವುಗಳನ್ನು ಉತ್ಪಾದಿಸುವ ಅವಶ್ಯಕತೆಯೇ ಬರುವುದಿಲ್ಲ. ಆ ಪ್ರಕಾರ ಬೇಡಿಕೆ ಮತ್ತು ಪೂರೈಕೆ ಒಂದಕ್ಕೊಂದು ಪೂರಕವಾಗಿವೆ. ಮಾರುಕಟ್ಟೆಯಲ್ಲಿ ಒಂದು ವಸ್ತುವಿನ ಬೆಲೆಯು ನಿರ್ಣಯವಾಗಬೇಕಾದರೆ ಬೇಡಿಕೆ ಮತ್ತು ಪೂರೈಕೆಗಳು ಅಗತ್ಯವಿರುತ್ತದೆ. ಕೇವಲ ಬೇಡಿಕೆಯಾಗಲಿ, ಪೂರೈಕೆಯಾಗಲಿ ಬೆಲೆಯನ್ನು ನಿರ್ಧರಿಸಲು ಸಾಧ್ಯವಿಲ್ಲ. ಆದುದರಿಂದಲೇ ಪ್ರೊ.ಮಾರ್ಷಲ್ ಅವರು ವಸ್ತುವಿನ ಬೆಲೆ ನಿರ್ಧರಿಸುವಲ್ಲಿ ಬೇಡಿಕೆ ಮತ್ತು ಪೂರೈಕೆಗೆ ಸಮನಾದ ಸ್ಥಾನವನ್ನು ಕೊಟ್ಟಿದ್ದಾರೆ.

ಬೇಡಿಕೆಯ ಅರ್ಥ ವಿವರಣೆ(Meaning of Demand): ಸಾಮಾನ್ಯ ಅರ್ಥದಲ್ಲಿ ಬೇಡಿಕೆ ಎಂದರೆ "ಬಯಕೆ" ಅಥವಾ "ಆಸೆ" ಎಂದಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಬೇಡಿಕೆಯು ಆಸೆಗಿಂತ ಭಿನ್ನವಾಗಿದೆ. ಒಬ್ಬ ವ್ಯಕ್ತಿಯ ಆಸೆಯು ಬೇಡಿಕೆಯಾಗುವುದಿಲ್ಲ. ಮಾನವ ತಾನು ಬಯಸಿದ್ದನ್ನು ಕೊಂಡುಕೊಳ್ಳಬೇಕಾದರೆ ಅವನಿಗೆ ಕೊಳ್ಳುವ ಶಕ್ತಿಯಿರಬೇಕಾಗುತ್ತದೆ. ಉದಾಹರಣೆ: ಭಿಕ್ಷುಕನಿಗೆ ಮಾರುತಿ ಕಾರನ್ನು ಕೊಂಡುಕೊಳ್ಳಬೇಕೆಂಬ ಬಯಕೆಯಾಗುತ್ತದೆ. ಆದರೆ ಅದು

ಮಾರುತಿ ಕಾರಿನ ಬೇಡಿಕೆಯಾಗುವುದಿಲ್ಲ. ಏಕೆಂದರೆ ಅವನಿಗೆ ಮಾರುತಿ ಕಾರನ್ನು ಹಣಕೊಟ್ಟು ಕೊಂಡುಕೊಳ್ಳುವ ಶಕ್ತಿಯಿಲ್ಲ. ಆದುದರಿಂದ ಬಯಕೆಯು ಬೇಡಿಕೆಯಾಗಲಾರದು.

ಆದರೆ ಕೇವಲ ಬೆಲೆಯನ್ನು ಕೊಟ್ಟು ಕೊಳ್ಳುವ ಶಕ್ತಿಯಿದ್ದರೆ ಅದು ಬೇಡಿಕೆಯಾಗಲಾರದು. ಏಕೆಂದರೆ ಒಬ್ಬ ಜಿಪುಣ ಸಾಹುಕಾರನ ಬಳಿ ಸಾಕಷ್ಟು ಹಣವಿದೆ. ಅಂದರೆ ಅವನಿಗೆ ಹಣ ಕೊಟ್ಟು ಕೊಳ್ಳುವ ಶಕ್ತಿಯಿದೆ. ಆದರೆ ಅವನಿಗೆ ಕಾರನ್ನು ಕೊಳ್ಳುವ ಮನಸ್ಸಿಲ್ಲ. ಆದುದರಿಂದ ಬಯಕೆಯು ಬೇಡಿಕೆಯಾಗಬೇಕಾದರೆ, ಬಯಕೆಯೊಡನೆ ಕೊಳ್ಳುವ ಶಕ್ತಿ ಮತ್ತು ಕೊಳ್ಳುವ ಮನಸ್ಸು ಬೆಂಬಲಿತವಾಗಿರಬೇಕು. ಆದುದರಿಂದ ಕೊಳ್ಳುವ ಶಕ್ತಿ ಮತ್ತು ಬೆಲೆ ಕೊಟ್ಟು ಕೊಳ್ಳುವ ಮನಸ್ಸಿದ್ದರೆ ಮಾತ್ರ ಬಯಕೆಯು ಬೇಡಿಕೆಯಾಗುತ್ತದೆ. ಒಟ್ಟಾರೆ ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂದರೆ ಈ ಕೆಳಗಿನ ೩ ಅಂಶಗಳು ಅವಶ್ಯಕ. ೧. ವಸ್ತುವನ್ನು ಕೊಳ್ಳುವ ಬಯಕೆ(ಆಸೆ). ೨. ವಸ್ತುವನ್ನು ಕೊಳ್ಳುವ ಶಕ್ತಿ ಅಥವಾ ಸಾಮರ್ಥ್ಯ. ೩. ಆ ವಸ್ತುವನ್ನು ಕೊಂಡುಕೊಳ್ಳುವ ಮನಸ್ಸು.

**ಬೇಡಿಕೆಯ ಅರ್ಥ(Meaning of Demand)**: ಒಬ್ಬ ವ್ಯಕ್ತಿಯು ಒಂದು ನಿರ್ದಿಷ್ಟ ಸಮಯದಲ್ಲಿ, ನಿರ್ದಿಷ್ಟ ಬೆಲೆಯಲ್ಲಿ ಇಂತಿಷ್ಟು ಪ್ರಮಾಣದಲ್ಲಿ ಸರಕುಗಳನ್ನು ಕೊಂಡುಕೊಳ್ಳುವುದನ್ನು ಬೇಡಿಕೆ ಎನ್ನಲಾಗುತ್ತದೆ.

**ಬೇಡಿಕೆಯ ವ್ಯಾಖ್ಯೆಗಳು(Definitions of Demand)**: ಬೇಡಿಕೆ ಎಂಬ ಪರಿಭಾವನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದ ವ್ಯಾಖ್ಯೆಗಳು ಈ ಕೆಳಗಿನಂತಿವೆ.

ಸಿಲ್ವರ್‌ಮನ್‌ರವರ ಪ್ರಕಾರ "ಪರಿಣಾಮಕಾರಿ ಇಚ್ಛೆಯೇ ಬೇಡಿಕೆ." ಸ್ಟೋನಿಯರ್ ಮತ್ತು ಹೇಗ್ ಪ್ರಕಾರ "ಬೇಡಿಕೆ ಎಂದರೆ ಬಯಸಿದ ವಸ್ತುಗಳನ್ನು ಕೊಳ್ಳಲು ಸಾಕಾಗುವಷ್ಟು ಹಣದ ಬೆಂಬಲ ಪಡೆದ ಬಯಕೆಯಾಗಿದೆ."

ಒಟ್ಟಾರೆ ಬೇಡಿಕೆಯು ಅಸ್ತಿತ್ವದಲ್ಲಿರಬೇಕಾದರೆ ೩ ಅಂಶಗಳ ಅವಶ್ಯಕತೆಯಿರುತ್ತದೆ. ಬೇಡಿಕೆಯು ಯಾವಾಗಲು ಬೆಲೆ, ನಿರ್ದಿಷ್ಟ ಅವಧಿ, ಮತ್ತು ಸರಕಿನ ಪ್ರಮಾಣಕ್ಕೆ ಸಂಬಂಧಿಸಿರುತ್ತದೆ (ಸದಾಶಿವಯ್ಯ ಎಚ್.ಎಂ., ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ, ೨೦೧೪, ಪು.೮೬-೮೭).

ಸಮಾರೋಪ: ಅರ್ಥಶಾಸ್ತ್ರವು ಜಾಗತಿಕ ವಿಷಯವಾಗಿದೆ. ಅದರ ಪರಿಭಾಷೆ ಎಲ್ಲರಿಗೂ ಒಂದೇ ರೀತಿಲ್ಲಿ ಅರ್ಥ ನೀಡಬೇಕು. ಇಂಗ್ಲಿಷ್ ಮೂಲದಲ್ಲಿನ ಪಠ್ಯಸಾಮಗ್ರಿಗಳು ಕನ್ನಡಿಗರಿಗೆ ಅವರ ಭಾಷೆಯಲ್ಲಿ ದೊರಕಬೇಕು. ಈ ಉದ್ದೇಶದಿಂದ ರೂಪಿಸಲ್ಪಟ್ಟ ಸಾಮಗ್ರಿಗಳು ಅವಸರ

ಅಥವಾ ಅಚಾತುರ್ಯದಿಂದ ತಪ್ಪು ಸಂದೇಶ ರವಾನೆಯಾಗಬಾರದು. ಬೇಡಿಕೆಗೆ ಸಂಬಂಧಿಸಿದ ಪರಿಕಲ್ಪನೆಗಳು ಮತ್ತು ಇತರ ಅಂಶಗಳ ಬಳಕೆ ಹೇಗೆ ಮಾಡಲಾಗಿದೆಂಬುದನ್ನು ಪ್ರಯತ್ನಿಸಲು ಸ್ಯಾಂಪಲ್‌ಗಾಗಿ ಕೆಲವು ಪಠ್ಯಸಾಮಗ್ರಿಗಳನ್ನು ರ‍್ಯಾಂಡಂ ವಿಧಾನದಲ್ಲಿ ತೆಗೆದುಕೊಳ್ಳಲಾಗಿದೆ. ಅವುಗಳನ್ನು ಈಗ ಪರಿಶೀಲಿಸೋಣ.

೧. "ಬೇಡಿಕೆ: ...ಅರ್ಥ ಬೇಡಿಕೆಯು ಹೆಚ್ಚುತ್ತದೆ" ಈ ಭಾಷಾಂತರ ಅರ್ಥಶಾಸ್ತ್ರ, ೧೯೯೬: ೪೪-೫೦ರಲ್ಲಿ ಎಂ.ಎಸ್.ಬಾದಾಮಿಯವರು ದಾಖಲಿಸಿದ್ದಾರೆ. ಬೇಡಿಕೆಯ ಅರ್ಥವನ್ನು ದೃಷ್ಟಾಂತದೊಂದಿಗೆ ವಿವರವಾಗಿ ನೀಡಿದ್ದಾರೆ. ಈ ಪಠ್ಯಭಾಗದಲ್ಲಿ ಬೇಡಿಕೆಯ ನಿಯಮ, ಬೇಡಿಕೆಯನ್ನು ನಿರ್ಧರಿಸುವ ಸಂಗತಿಗಳು, ಬೇಡಿಕೆಯ ಸ್ಥಿತಿಸ್ಥಾಪಕತ್ವ, ಸ್ಥಿತಿಸ್ಥಾಪಕತ್ವದ ಮಹತ್ವ ಮತ್ತು ಅನುಭೋಗಿಯ ಅಧಿಕ ತೃಪ್ತಿಗಳಂಥ ಅಂಶಗಳಣ್ನು ಒಳಗೊಂಡಿರುತ್ತದೆ. ಇವರು 'ಬಯಕೆ' ಮತ್ತು 'ಬೇಡಿಕೆ'ಯ ನಡುವಿನ ಅಂತರ ತಿಳಿಸಿದ್ದಾರೆ. ಬೇಡಿಕೆಯ ನಿಯಮ ಹೇಳುವ ಸಂದರ್ಭದಲ್ಲಿ ಬೇಡಿಕೆಯ ಪಟ್ಟಿ ಮತ್ತು ರೇಖಾಚಿತ್ರ ಕೊಟ್ಟಿರುತ್ತಾರೆ. ಆದರೆ ಬೇಡಿಕೆಯ ಸ್ಥಿತಿಸ್ಥಾಪಕತ್ವದ ವಿಧಗಳನ್ನು ವಿವರಿಸುವಾಗ ರೇಖಾಚಿತ್ರಗಳನ್ನು ಉಪಯೋಗಿಸುವ ಅಗತ್ಯತೆ ಇತ್ತು. ಇದು ಅಧ್ಯಯನಕಾರರಿಗೆ ವಿಷಯ ಗ್ರಹಿಕೆಗೆ ಸಹಕಾರಿಯಾಗುತ್ತಿತ್ತು.

೨. "ಬೇಡಿಕೆ ಮತ್ತು ಬೇಡಿಕೆಯ ನಿಯಮ: ಬೇಡಿಕೆ ಎಂದರೇನು?: ....ಹೇಳಬಹುದು" ಎಂಬುದಾಗಿ ಕೆ.ಡಿ.ಬಸವ ಅವರು ಅರ್ಥಶಾಸ್ತ್ರ(ಪು.೪೬-೬೪)ರಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಪಠ್ಯವು ಬೇಡಿಕೆಯ ಅರ್ಥ, ಬೇಡಿಕೆಯ ಕರಾರುಗಳು, ಬೇಡಿಕೆಯ ನಿಯಮ ಮತ್ತು ಬೇಡಿಕೆಯ ರೇಖೆ, ಬೇಡಿಕೆಯ ನಿಯಮಕ್ಕೆ ಅಪವಾದಗಳು, ಬೇಡಿಕೆಯನ್ನು ನಿರ್ಧರಿಸುವ ಅಂಶಗಳು, ಬೇಡಿಕೆಯ(ಬೆಲೆ) ಸ್ಥಿತಿಸ್ಥಾಪಕತ್ವ ಮತ್ತು ಅದರ ವಿಧಗಳು, ಅನುಭೋಗಿಯ ಅಧಿಕತೃಪ್ತಿ ಎಂಬ ಅಂಶಗಳನ್ನು ಒಳಗೊಂಡಿರುತ್ತದೆ. ಇವರು ಬೇಡಿಕೆಯ ಪಟ್ಟಿಯಲ್ಲಿ ಕನ್ನಡ ಅಂಕಿಗಳನ್ನೆ ಬಳಸಿದ್ದಾರೆ. ರೇಖಾ ಚಿತ್ರಗಳು(೨.೨) ಇಂಗ್ಲಿಷ ಅಂಕಿಗಳನ್ನು ಮತ್ತು ಅಕ್ಷರಗಳಿಗೆ ಕನ್ನಡ ಅಕ್ಷರ ಬಳಸಿದಂತೆ ಬೇಡಿಕೆಯ ರೇಖೆಗೂ ಕನ್ನಡ ಅಕ್ಷರ ಬಳಸಿರುತ್ತರೆ. ಇದು ಅನುಭೋಗಿಯ ಅಧಿಕತೃಪ್ತಿಯ ಪಟ್ಟಿ ಮತ್ತು ರೇಖಾ ಚಿತ್ರ ಹಾಗೂ ಬೇಡಿಕೆಯ ಸ್ಥಿತಿಸ್ಥಾಪಕತ್ವದ ರೇಖಾಚಿತ್ರಗಳಣ್ನು ಗಮನಿಸಬಹುದು. ಅಲ್ಲದೇ ಈ ಐದು ರೇಖಾಚಿತ್ರಗಳು ಒಟ್ಟಿಗೆ ಇವೆ ಮತ್ತು ಮಾಹಿತಿಯು ಬೇರೆ ಕಡೆ ಇರುತ್ತದೆ. ಇದು ಅಧ್ಯಯನಕಾರರಿಗೆ ಗೊಂದಲವಾಗುವ ಸಾಧ್ಯತೆ ಇದೆ.

೩. "ಬೇಡಿಕೆ: ....ಬೆಲೆಯನ್ನು ಅವಲಂಬಿಸಿದೆ" ಎಂಬ ಪಠ್ಯವನ್ನು ಜಿ.ಎನ್.ಕೆಂಪಯ್ಯನವರು ಮೂಲ ಆರ್ಥಿಕ ಸಿದ್ಧಾಂತ(ಪು.೬೭-೭೫)ದಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಪಠ್ಯ

ಭಾಗವು ಬೇಡಿಕೆಯ ಅರ್ಥ ಮತ್ತು ಬೇಡಿಕೆಯ ಕರಾರುಗಳು, ಬೇಡಿಕೆಯ ಬಿಂಬಕವು ಸೂತ್ರದೊಂದಿಗೆ ಇದೆ. ಬೇಡಿಕೆಯ ನಿಯಮವು ಪಟ್ಟಿ ಮತ್ತು ರೇಖೆಯೊಂದಿಗಿರುತ್ತದೆ. ಕಲ್ಪನೆಗಳು, ಬೇಡಿಕೆಯ ಸ್ಥಿತಿಸ್ಥಾಪಕತೆ ಮತ್ತು ವಿಧಗಳು ರೇಖಾಚಿತ್ರಗಳೊಂದಿಗಿವೆ. ಅನುಭೋಗಿಯ ಅಧಿಕ ತೃಪ್ತಿಯು ಉದಾಹರಣೆಯೊಂದಿಗೆ ಹೇಳಲ್ಪಟ್ಟಿದೆ. ಆದರೆ ತುಂಬಾ ಸಂಕ್ಷಿಪ್ತ ಮಾಹಿತಿ ಒಳಗೊಂಡಿದೆ. ಬೇಡಿಕೆಯ ಸ್ಥಿತಿಸ್ಥಾಪಕಗಳ ವಿವಿಧ ಪ್ರಮಾಣಗಳನ್ನು ತಿಳಿಯಲು ಸೂತ್ರವನ್ನು ಪ್ರಯೋಗಿಸಿ ಮಾಹಿತಿ ಹೆಚ್ಚಿಸಿದ್ದಾರೆ. ಆದರೆ ವಿವರಣೆಗಿಂತ ಇದು ಪರೀಕ್ಷೆಗೆ ತಯಾರಿಸಿದ ಪಠ್ಯದಂತಿದೆ ಎಂಬ ಅಭಿಪ್ರಾಯ ಬರುವ ಸಾಧ್ಯತೆಗಳಿವೆ.

೪. "ಬೇಡಿಕೆ: ...ಕೊಂಡುಕೊಳ್ಳುತ್ತಾರೆ ಎಂಬುದಾಗಿರುತ್ತದೆ." ಈ ಪಠ್ಯ ಭಾಗದ ಭಾಷಾಂತರವನ್ನು ಎಚ್.ಆರ್.ಕೃಷ್ಣಮೂರ್ತಿ ಹೊಸಬೀಡು ಇವರು ಮೂಲ ಆರ್ಥಿಕ ಸಿದ್ಧಾಂತ ಎಂಬ ಪಠ್ಯಪುಸ್ತಕ(ಪು.೯೮-೧೧೬)ದಲ್ಲಿ ದಾಖಲು ಮಾಡಿರುತ್ತಾರೆ. ಈ ಭಾಗವು ಬೇಡಿಕೆಯ ಅರ್ಥ, ಬಿಂಬಕ, ನಿಯಮ, ಅನುಸೂಚಿ, ರೇಖೆ, ಅಪವಾದಗಳು, ಬೆಲೆ ಬೇಡಿಕೆ ಸ್ಥಿತಿಸ್ಥಾಪಕತ್ವ ಮತ್ತು ಅದರ ವಿಧಗಳು, ಅನುಭೋಗಿಯ ಅಧಿಕ ತೃಪ್ತಿ ಎಂಬ ಅಂಶಗಳನ್ನು ಒಳಗೊಂಡಿರುತ್ತದೆ. ಇವರು ವಿಸ್ತಾರವಾದ ಮಾಹಿತಿಯನ್ನು ನೀಡಿದ್ದಾರೆ. ಅಗತ್ಯಕ್ಕೆ ತಕ್ಕಂತೆ ಅಂಕಿ-ಅಂಶ, ರೇಖಾಚಿತ್ರ, ಸೂತ್ರಗಳನ್ನು ಕೊಟ್ಟಿರುತ್ತಾರೆ. ಬೇಡಿಕೆಯ ಕರಾರುಗಳು ಮತ್ತು ವ್ಯಾಖ್ಯೆಗಳೂ ಇವೆ. ಮಾಹಿತಿ ಪಿಯುಸಿ ಹಂತಕ್ಕೆ ಸ್ವಲ್ಪ ಪ್ರಮಾಣ ಹೆಚ್ಚಿಗೆ ಅನಿಸಿದರೂ ಜ್ಞಾನದ ದೃಷ್ಟಿಯಿಂದ ಸೂಕ್ತವಾಗಿದೆ. ವಿವರವುಳ್ಳ ಮಾಹಿತಿ ಎಂದಿಗೂ ನಷ್ಟವಲ್ಲ ನಿಜ. ಆದರೆ ಅಧ್ಯಯನದ ಕಾಲ ಮಿತಿಯನ್ನೂ ಗಮನಿಸುವುದು ಸೂಕ್ತ.

೫. "ಬೇಡಿಕೆಯ ವಿಶ್ಲೇಷಣೆ: .....ಸರಕಿನ ಪ್ರಮಾಣಕ್ಕೆ ಸಂಬಂಧಿಸಿರುತ್ತದೆ" ಎಂಬುದಾಗಿ ಎಚ್.ಎಂ.ಸದಾಶಿವಯ್ಯ ಇವರು ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ(ಪು.೮೬-೧೨೩)ದಲ್ಲಿ ಭಾಷಾಂತರಿಸಿದ್ದಾರೆ. ಈ ಪಠ್ಯಭಾಗವು ಪಠ್ಯಕ್ರಮಕ್ಕೆ ಅನುಸಾರವಾಗಿದೆ. ಪರಿಷ್ಕೃತ ಪಠ್ಯಕ್ರಮವು ಪದವಿ ಹಂತದ ಪಠ್ಯವನನು ಒಳಗೊಂಡ ಸಂಕ್ಷಿಪ್ತ ಭಾಗವಾಗಿದೆ. ಪಾರಿಭಾಷಿಕ ಪದಗಳ ಮುಂದೆ ಅಗತ್ಯವಿದ್ದಲ್ಲೆಲ್ಲಾ ಆವರಣದಲ್ಲಿ ಇಂಗ್ಲಿಷ್ ಪದಗಳನ್ನು ಬಳಸಿರುವುದು ಅಧ್ಯಯನಕಾರರಿಗೆ ಉಪಯುಕ್ತವಾಗಲಿದೆ. ಬೇಡಿಕೆಯ ಸ್ಥಿತಿಸ್ಥಾಪಕತ್ವವನ್ನು ಸೂತ್ರ ಬಳಸಿ ಸಾಕಷ್ಟು ಅಂಕಿ-ಸಂಖ್ಯೆ ಬಳಕೆಯ ಮೂಲಕ ಅಧಿಕ ಮಾಹಿತಿ ನೀಡಿದ್ದಾರೆ. ರೇಖಾಚಿತ್ರದ ಮೂಲಕ ವಿಷಯ ಮನವರಿಕೆಗಾಗಿ ಸರಳ ವಿಧಾನ ಅನುಸರಿಸಿರುವುದನ್ನು ಪರಿಶೀಲಿಸಬಹುದು. ರೇಖಾಚಿತ್ರದಲ್ಲಿನ ಕೆಲವು ಸಂಕೇತಾಕ್ಷರಗಳು ಅನುಮಾನ ಮೂಡಿಸುತ್ತವೆ. ಉದಾ: ಬೇಡಿಕೆ ರೇಖೆಯ ಅಂಚಿನಲ್ಲಿ D,Dಎಂಬುದನ್ನು D,D1ಎಂಬುದು.

೬. "ಬೇಡಿಕೆ ವಿಶ್ಲೇಷಣೆ: ....ಕೊಂಡುಕೊಳ್ಳುವ ಪ್ರಮಾಣವಾಗಿದೆ" ಎಂಬುದಾಗಿ ಬಸವರಾಜ ಕುಮ್ನೂರರವರು ಸೂಕ್ಷ್ಮ ಅರ್ಥಶಾಸ್ತ್ರ ಭಾಗ ೧(ಪು.೧೭೬-೨೩೦)ದಲ್ಲಿ ಭಾಷಾಂತರ

ಮಾಡಿರುವುದನ್ನು ದಾಖಲಿಸಿರುತ್ತಾರೆ. ಇದು ಗುಲಬರ್ಗಾ ವಿಶ್ವವಿದ್ಯಾಲಯದ ಬಿ.ಎ.ಪದವಿ ತರಗತಿಯ ಪಠ್ಯಪುಸ್ತಕವಾಗಿರುತ್ತದೆ. ಇದು ಪೀಠಿಕೆ, ಬೇಡಿಕೆಯ ಅರ್ಥ ಮತ್ತು ವ್ಯಾಖ್ಯೆಗಳು ತ್ತು ಪಠ್ಯಕ್ರಮಕ್ಕೆ ಅನುಗುಣವಾಗಿ ತುಂಬಾ ವಿವರವುಳ್ಳ ಮಾಹಿತಿಯನ್ನು ನೀಡಿದ್ದಾರೆ. ಪದವಿ ಹಂತದ ವಿದ್ಯಾರ್ಥಿಗಳಿಗೆ ಜ್ಞಾನವನ್ನು ಒದಗಿಸುತ್ತದೆ. ಬೇಡಿಕೆಯ ಸ್ಥಿತಿಸ್ಥಾಪಕತ್ವದ ಪ್ರಕಾರಗಳು (Types of Elasticity of Demond), ಇದರಲ್ಲಿ, ಮೂರು ವಿಧಗಳನ್ನು ಮತ್ತು ಬೆಲೆ ಬೇಡಿಕೆ ಸ್ಥಿತಿ ಸ್ಥಾಪಕತ್ವದ ವಿಧಗಳೆಂದು, ಇದರಲ್ಲಿ ಐದು ಪ್ರಕಾರಗಳನ್ನು ವಿವರವಾಗಿ ನೀಡಿದ್ದಾರೆ. ಬೇಡಿಕೆ ಅಂದಾಜು(ಊಹಿಸುವಿಕೆ)(Demond) ಎಂಬ ಅಂಶವನ್ನು ತುಂಬಾ ವಿವರವಾಗಿ ನೀಡಿದ್ದಾರೆ. ಇವುಗಳಲ್ಲಿ ಅನೇಕ ಅಂಶಗಳು ಪಿಯುಸಿ ತರಗತಿಗೆ ಪರಿಚಯವಾಗಿರುವುದಿಲ್ಲ. ಅಗತ್ಯವಿದ್ದ ಕಡೆಗೆ ಕೋಷ್ಟಕ, ಸೂತ್ರ ಮತ್ತು ರೇಖಾ ಚಿತ್ರಗಳನ್ನು ಬಳಸಿ ಅಧ್ಯಯನ ಪರಿಣಾಮಕಾರಿಯಾಗುವಂತೆ ರೂಪಿಸಿದ್ದಾರೆ. ಈ ಘಟಕದ ಕೊನೆಗೆ ನೆನಪಿಡಲು ಅನುಕೂಲವಾಗು ವಂತೆ ಮುಖ್ಯಾಂಶಗಳನ್ನು ಕೊಟ್ಟಿದ್ದಾರೆ. ಆದರೆ ೧ನೇ ಸೆಮೆಸ್ಟರಿಗಾಗಿ ರೂಪಿಸಿದ ಈ ಪಠ್ಯ ಭಾರವಾಗದಿರದು.

೭. "ಬೇಡಿಕೆಯ ವಿಶ್ಲೇಷಣೆ: ಪೀಠಿಕೆ: ...ಸಂಬಂಧಿಸಿಯೆ ಹೇಳಬೇಕಾಗುತ್ತದೆ." ಈ ಪಠ್ಯ ಭಾಗದ ಭಾಷಾಂತರವನ್ನು ಟಿ.ಆರ್.ಗುರುಬಸಪ್ಪ ಮತ್ತು ಉಲ್ಲೇಶಪ್ಪ ಕುಂಬಾರ ಇವರು ಸೂಕ್ಷ್ಮ ಅರ್ಥಶಾಸ್ತ್ರ ಭಾಗ-೧(ಪು.೧೬೭-೨೨೫)ರಲ್ಲಿ ದಾಖಲಿಸಿದ್ದಾರೆ. ಇವರೂ ಸಹ ಕುಮ್ನೂರ ಅವರಂತೆ ಪಠ್ಯಕ್ರಮಕ್ಕನುಗುಣವಾಗಿ ಪಠ್ಯಪುಸ್ತಕ ಭಾಷಾಂತರವನ್ನು ವಿವರವಾಗಿ ಮಾಡಿರುತ್ತಾರೆ. ಆದರೆ ಅವರು ಮಾಡಿದ ಪ್ರಮಾಣಕ್ಕಿಂತ ಸ್ವಲ್ಪ ಕಡಿಮೆ ಪ್ರಮಾಣದಲ್ಲಿದೆ. ಕೆಲವು ಪಾರಿಭಾಷಿಕ ಪದಗಳು ಭಿನ್ನವಾಗಿವೆ. ಉದಾ: Demond Forecastingನ್ನು 'ಬೇಡಿಕೆಯ ಮುನ್ಸೂಚನೆ' ಎಂಬುದಾಗಿ ಬಳಸಿದ್ದಾರೆ. ಈ ಎರಡೂ ಪಠ್ಯಪುಸ್ತಕಗಳು ಒಂದೇ ತರಗತಿ ಮತ್ತು ಒಂದೇ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ್ದರೂ ಭಾಷಾಂತರಕಾರರು ಬೇರೆ ಬೇರೆಯಾಗಿರುವ ಕಾರಣ ವ್ಯತ್ಯಾಸಗಳಿರುತ್ತವೆಂಬುದನ್ನು ಗುರುತಿಸಲು ಇವು ಸಹಕಾರಿಯಾಗಿವೆ.

**೩.೫. ಪೂರೈಕೆ(Supply)**

ಅರ್ಥವಿವರಣೆ: ಸಾಮಾನ್ಯವಾದ ಭಾಷೆಯಲ್ಲಿ ಉತ್ಪಾದಕರು ಹೊಂದಿರುವ ಉತ್ಪಾದಿಸಲ್ಪಟ್ಟ ಸರಕುಗಳ ಸಂಗ್ರಹಕ್ಕೆ ಪೂರೈಕೆ ಎನ್ನುತ್ತಾರೆ. ಆದರೆ ಅರ್ಥಶಾಸ್ತ್ರದಲ್ಲಿ ಅದಕ್ಕೆ ವಿಶಿಷ್ಟ ಅರ್ಥವಿದೆ. ಒಂದು ನಿರ್ದಿಷ್ಟ ಬೆಲೆಗೆ ಮಾರಾಟಕ್ಕಾಗಿ ಪೇಟೆಗೆ ಒದಗಿಸಲ್ಪಟ್ಟ ಸರಕುಗಳ ಪ್ರಮಾಣಕ್ಕೆ ಪೂರೈಕೆ ಎನ್ನುತ್ತಾರೆ. ಬೆಲೆ ಮತ್ತು ಬೇಡಿಕೆಗಳಲ್ಲಿ ಸಂಬಂಧವಿರುವುದನ್ನು ನಾವೀಗಾಗಲೇ ತಿಳಿದಿದ್ದೇವೆ. ಅದರಂತೆ ಬೆಲೆ ಮತ್ತು ಪೂರೈಕೆಗಳ ನಡುವೆ ನಿಕಟವಾದ ಸಂಬಂಧವಿದೆ. ಬೇರೆ ಬೇರೆ ಬೆಲೆಗಳಿರುವಾಗ ಪೂರೈಕೆಯೂ ಬೇರೆ ಬೇರೆಯಾಗಿರುತ್ತದೆ. ಒಂದು ವಸ್ತುವಿನ ಬೆಲೆ ೧೦ರೂ. ಇರುವಾಗ ಉತ್ಪಾದಕನು

೫೦೦ ವಸ್ತುಗಳನ್ನು ಮಾರಲು ಸಿದ್ಧನಿರುತ್ತಾನೆ. ಆಗ ಅವನು ೫೦೦ ವಸ್ತುಗಳನ್ನಷ್ಟೇ ಪೇಟೆಗೆ ತರುತ್ತಾನೆ. ಇದು ಅವನ ಪೂರೈಕೆ. ಸಾಮಾನ್ಯವಾಗಿ ವಸ್ತುವಿನ ಬೆಲೆ ಹೆಚ್ಚಿದ್ದಾಗ ಅವನು ಹೆಚ್ಚು ವಸ್ತುಗಳನ್ನು ಮಾರಬಯಸುತ್ತಾನೆ. ಕಾರಣ ಹೆಚ್ಚು ವಸ್ತುಗಳನ್ನು ಪೂರೈಸುತ್ತಾನೆ. ಉತ್ಪಾದಕನು ಪ್ರತಿದಿನ ಎಷ್ಟೇ ವಸ್ತುಗಳನ್ನು ಉತ್ಪಾದಿಸಬಹುದು. ಆದರೆ ಅದಕ್ಕೆಲ್ಲ ಪೂರೈಕೆ ಎನ್ನಲಾಗದು. ಈಗಿನ ಬೆಲೆಗೆ ಅವನು ಮಾರಾಟ ಮಾಡಲು ಸಿದ್ದನಾಗಿ ಪೇಟೆಗೆ ತರುವ ವಸ್ತುಗಳ ಪ್ರಮಾಣಕ್ಕೆ ಮಾತ್ರ ಪೂರೈಕೆ ಎನ್ನುತ್ತೇವೆ.

ಪೂರೈಕೆ ಮತ್ತು ಸಂಗ್ರಹಗಳಲ್ಲಿ ವ್ಯತ್ಯಾಸ: ಅನೇಕ ಸಲ ಪೂರೈಕೆ ಮತ್ತು ಸಂಗ್ರಹಗಳೆರಡನ್ನು ಒಂದೆ ಎಂಬಂತೆ ಅರ್ಥೈಸುತ್ತೇವೆ. ಆದರೆ ಇದು ಸರಿಯಲ್ಲ. ಅವೆರಡರಲ್ಲಿ ವ್ಯತ್ಯಾಸವಿದೆ. ಉತ್ಪಾದಕರು ಪ್ರತಿದಿನ ಅನೇಕ ವಸ್ತುಗಳನ್ನು ಉತ್ಪಾದಿಸುತ್ತಾರೆ. ಅವುಗಳನ್ನು ತಮ್ಮ ದಾಸ್ತಾನು ಮಳಿಗೆಗಳಲ್ಲಿ ಸಂಗ್ರಹಿಸಿಡುತ್ತಾರೆ. ಹೀಗೆ ಸಂಗ್ರಹಿಸಿಟ್ಟ ವಸ್ತುಗಳ ಪ್ರಮಾಣಕ್ಕೆ ಸಂಗ್ರಹವೆನ್ನುತ್ತಾರೆ. ವಸ್ತುವಿನ ಬೆಲೆಯು ಅವನಿಗೆ ಅನುಕೂಲವೆನಿಸಿದರೆ ಆ ಸಂಗ್ರಹದೊಳಗಿಂದ ಕೆಲವು ವಸ್ತುಗಳನ್ನು ಮಾರಾಟಕ್ಕಾಗಿ ಬಿಡುಗಡೆ ಮಾಡುತ್ತಾನೆ. ಹೀಗೆ ನಿರ್ದಿಷ್ಟ ಬೆಲೆಗೆ ಮಾರಾಟಕ್ಕಾಗಿ ಪೇಟೆಗೆ ತರುವ ವಸ್ತುವಿನ ಪ್ರಮಾಣಕ್ಕೆ ಪೂರೈಕೆ ಎನ್ನುತ್ತಾರೆ. ಉದಾಹರಣೆಗಾಗಿ, ಸಕ್ಕರೆ ಕಾರ್ಖಾನೆಯ ಮಾಲಿನು ಪ್ರತಿದಿನ ೫೦೦ ಚೀಲ ಸಕ್ಕರೆ ಉತ್ಪಾದಿಸುತ್ತಾನೆ. ಸಕ್ಕರೆಯ ಬೆಲೆ ಪ್ರತಿ ಚೀಲಕ್ಕೆ ಒಂದು ಸಾವಿರ ರೂ. ಇರುವಾಗ ಅವನು ಕೇವಲ ೧೦೦ ಚೀಲ ಸಕ್ಕರೆಯನ್ನು ಮಾತ್ರ ಮಾರಲು ಬಯಸುತ್ತಾನೆ. ಆಗ ೧೦೦ ಚೀಲ ಸಕ್ಕರೆಗೆ ಮಾತ್ರ ಪೂರೈಕೆ ಎನ್ನುತ್ತೇವೆ. ಇನ್ನುಳಿದ ೪೦೦ ಚೀಲಕ್ಕೆ ಪೂರೈಕೆ ಎನ್ನುವುದಿಲ್ಲ. ಅದಕ್ಕೆ ಸಂಗ್ರಹ ಎನ್ನುತ್ತೇವೆ. ಸಕ್ಕರೆ ಬೆಲೆ ಹೆಚ್ಚಿದಂತೆ ಅವನು ಹೆಚ್ಚು ಮಾರಾಟ ಮಾಡಬಯಸುತ್ತಾನೆ. ಆಗ ಪೂರೈಕೆ ಹೆಚ್ಚಾಗುತ್ತದೆ. ಈ ಉದ್ದೇಶಕ್ಕಾಗಿಯೇ, ಅಂದರೆ ಬೆಲೆ ಹೆಚ್ಚಿದಾಗ ಹೆಚ್ಚು ಮಾರಾಟ ಮಾಡುವುದಕ್ಕಾಗಿಯೇ ಅವನು ಆ ವಸ್ತುಗಳನ್ನು ಸಂಗ್ರಹಿಸಿಡುತ್ತಾನೆ. ಬೆಲೆ ಬಹಳ ಹೆಚ್ಚಿದಾಗ ಅವನು ಉತ್ಪಾದಿಸಿದ ಎಲ್ಲ ವಸ್ತುಗಳನ್ನು ಮಾರಾಟ ಮಾಡಲು ಸಿದ್ಧನಾಗುತ್ತಾನೆ. ಆಗ ಅವನ ಸಂಗ್ರಹ ಮತ್ತು ಪೂರೈಕೆ ಸಮನಾಗಬಹುದು. ಅಂದರೆ, ಸಂಗ್ರಹದಲ್ಲಿದ್ದುದನ್ನೆಲ್ಲ ಮಾರಬಹುದು. ಸಾಮಾನ್ಯವಾಗಿ ಸಂಗ್ರಹವು ಪೂರೈಕೆಗಿಂತ ಹೆಚ್ಚಾಗಿರುತ್ತದೆ. ಆದರೆ ಬೇಗನೆ ನಶಿಸಿ ಹೋಗುವ ವಸ್ತುಗಳಾದ ಹಾಲು, ಹಣ್ಣು, ಕಾಯಿಪಲ್ಲೆ ಮುಂತಾದ ವಸ್ತುಗಳನ್ನು ಬಹುದಿನಗಳವರೆಗೆ ಸಂಗ್ರಹಿಸಿಡಲು ಸಾಧ್ಯವಿಲ್ಲ. ಕಾರಣ ಅವುಗಳನ್ನು ಬೇಗನೆ ಮಾರಲು ಪ್ರಯತ್ನಿಸುತ್ತಾರೆ. ಅವುಗಳನ್ನು ಸಂಗ್ರಹಿಸಿಡದೆ ಎಲ್ಲವನ್ನೂ ಪೂರೈಸುತ್ತಾರೆ. ಆದರೆ ದೀರ್ಘಾವಧಿ ಬಾಳಿಕೆ ಬರುವ ಯಂತ್ರಗಳು, ಬಟ್ಟೆ, ರೇಡಿಯೊ, ಗಡಿಯಾರ ಮುಂತಾದ ವಸ್ತುಗಳನ್ನು ಸಂಗ್ರಹಿಸಿಟ್ಟು ಬೆಲೆ ಹೆಚ್ಚಿದಂತೆ ಹೆಚ್ಚು ಪೂರೈಸುತ್ತಾರೆ. ಕಾರಣ ಸಂಗ್ರಹದಲ್ಲಿರುವ ವಸ್ತುಗಳು ಪೂರೈಕೆ ಎನಿಸಿಕೊಳ್ಳುವುದಿಲ್ಲ. ಆದರೆ ನಿರ್ದಿಷ್ಟ ಬೆಲೆಗೆ ಮಾರಾಟಕ್ಕಾಗಿ ಪೇಟೆಗೆ ತರಲಾದ ವಸ್ತುವಿನ ಪ್ರಮಾಣಕ್ಕೆ ಮಾತ್ರ ಪೂರೈಕೆ ಎನ್ನುತ್ತೇವೆ.

ಪೂರೈಕೆಯ ನಿಯಮ: ಒಂದು ವಸ್ತುವಿನ ಬೆಲೆ ಮತ್ತು ಅದರ ಪೂರೈಕೆಗೆ ಸಂಬಂಧವಿದೆ ಎಂಬುದನ್ನು ತಿಳಿದಿದ್ದೇವೆ. ಆ ಸಂಬಂಧವನ್ನೆ ಪೂರೈಕೆಯ ನಿಯಮವು ವಿವರಿಸುತ್ತದೆ. ಈ ನಿಯಮದ ಪ್ರಕಾರ, "ಇತರ ಸಂಗತಿಗಳು ಸಮನಾಗಿದ್ದಾಗ, ಒಂದು ವಸ್ತುವಿನ ಬೆಲೆ ಏರಿದರೆ ಅದರ ಪೂರೈಕೆಯು ಹೆಚ್ಚುತ್ತದೆ. ಆ ವಸ್ತುವಿನ ಬೆಲೆ ಇಳಿದರೆ ಅದರ ಪೂರೈಕೆಯು ಕಡಿಮೆಯಾಗುತ್ತದೆ." ಅಂದರೆ ಬೆಲೆ ಹೆಚ್ಚಿದಂತೆ ಪೂರೈಕೆ ಹೆಚ್ಚುತ್ತದೆ ಮತ್ತು ಬೆಲೆ ಕಡಿಮೆಯಾದಂತೆ ಪೂರೈಕೆಯೂ ಕಡಿಮೆಯಾಗುತ್ತದೆ. ಹೀಗೆ ಬೆಲೆ ಮತ್ತು ಪೂರೈಕೆಗಳು ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ. ಅವೆರಡೂ ನೇರ ಸಂಬಂಧವನ್ನು ಹೊಂದಿವೆ(ಬದಾಮಿ ಎಂ.ಎಸ್., ಅರ್ಥಶಾಸ್ತ್ರ, ೧೯೯೬-೯೭, ಪು.೧೦೪-೧೦೫).

ಪೂರೈಕೆ ಎಂದರೇನು?: ಪೂರೈಕೆ ಎಂದರೆ ಸಾಮಾನ್ಯವಾಗಿ ಉತ್ಪಾದಕರ ಬಳಿಯಲ್ಲಿ ದೊರೆಯುವ ತಯಾರಿ ವಸ್ತುಗಳ 'ಸಂಗ್ರಹ'ವೆಂದು ತಿಳಿದುಕೊಳ್ಳುವುದುಂಟು. ಆದರೆ ಇದು ತಪ್ಪು. ಒಂದು ನಿರ್ದಿಷ್ಟ ಬೆಲೆಗೆ ಪೇಟೆಗೆ ಮಾರಾಟಮಾಡಲು ಪ್ರತ್ಯಕ್ಷವಾಗಿ ಒದಗಿಸಲ್ಪಟ್ಟ ವಸ್ತುಗಳ ಪ್ರಮಾಣಕ್ಕೆ ಪೂರೈಕ"ಎಂದು ಕರೆಯುತ್ತಾರೆ. ಅಂದರೆ ಒಂದು ವಸ್ತುವಿನ ಪೂರೈಕೆಯು ಸಾಮಾನ್ಯವಾಗಿ ಅದರ ದಾಸ್ತಾನಿಗಿಂತ ಕಡಿಮೆ ಇರುತ್ತದೆಂದು ಅರ್ಥವಾಗುತ್ತದೆ. ಕ್ವಚಿತ್ತವಾಗಿ ಪೂರೈಕೆಯು ದಾಸ್ತಾನಿನಷ್ಟೇ ಇರಬಹುದು. ಅಂತಹ ಸಂದರ್ಭದಲ್ಲಿ ಸಂಗ್ರಹ ಮಾಡಿದೆಲ್ಲವನ್ನೂ ಮಾರಾಟಕ್ಕೆ ಬಿಡುಗಡೆ ಮಾಡಿದಾಗ ಮಾತ್ರ ಪೂರೈಕೆಯು ಮತ್ತು ಸಂಗ್ರಹವೂ(ದಾಸ್ತಾನು) ಸಮವಾಗಿರುತ್ತವೆ. ಆದರೆ ಪೂರೈಕೆಯು ಸಂಗ್ರಹಕ್ಕಿಂತ ಎಂದೂ ಹೆಚ್ಚಾಗಲಾರದು. ಬಾಳಿಕೆ ಬರುವ ವಸ್ತುಗಳ ವಿಷಯದಲ್ಲಿ ಪೂರೈಕೆಯು ಸಾಮಾನ್ಯವಾಗಿ ಸಂಗ್ರಹಕ್ಕಿಂತ ಕಡಿಮೆಯಾಗಿರುತ್ತದೆ. ಆದರೆ ಬೇಗನೇ ನಶಿಸಿ ಹೋಗುವಂತಹ ವಸ್ತುಗಳ ವಿಷಯದಲ್ಲಿ ಮಾತ್ರ ಪೂರೈಕೆ ಮತ್ತು ಸಂಗ್ರಹಗಳು ಸಮಪ್ರಮಾಣ ದಲ್ಲಿರುತ್ತವೆ. ಪೂರೈಕೆಯು ವಸ್ತುವನ್ನು ಪೂರೈಸುವ ಮಾರಾಟಗಾರರ ಇಷ್ಟ ಮತ್ತು ಸಾಮರ್ಥ್ಯಗಳನ್ನು ಅವಲಂಬಿಸಿರುತ್ತದೆ. ಬೇಡಿಕೆಯಂತೆ ಪೂರೈಕೆಯು ಸಹ ಸಾಪೇಕ್ಷವಾಗಿದೆ, ತುಲನಾತ್ಮಕವಾಗಿದೆ. ಅದು ಬೆಲೆ, ಕಾಲ ಮತ್ತು ಸ್ಥಳಗಳೊಂದಿಗೆ ಬದಲಾಗುತ್ತ ಹೋಗುತ್ತದೆ. ವಿವಿಧ ಬೆಲೆಗಳಿಗೆ ಉತ್ಪಾದಕರು ವಿವಿಧ ಪ್ರಮಾಣಗಳಲ್ಲಿ ವಸ್ತುಗಳನ್ನು ಮಾರಾಟ ಮಾಡಲು ಇಷ್ಟಪಡುತ್ತಾರೆ. ಅವರು ಬೆಲೆ ಹೆಚ್ಚು ಇದ್ದಾಗ ಹೆಚ್ಚು ಹೆಚ್ಚು ಪೂರೈಸುತ್ತಾರೆ; ಬೆಲೆ ಕಡಿಮೆ ಇದ್ದಾಗ ಕಡಿಮೆ ಪೂರೈಸುತ್ತಾರೆ. ಯಾವ ಪ್ರಕಾರವಾಗಿ ಗ್ರಾಹಕನು ಬೆಲೆಯನ್ನು ತಿಳಿದುಕೊಳ್ಳದೇ ತನ್ನ ಬೇಡಿಕೆಯ ಪ್ರಮಾಣವನ್ನು ತಿಳಿಸಲಾರನೋ ಅದೇ ಪ್ರಕಾರವಾಗಿ ಮಾರಾಟಗಾರನು ಸಹ ಬೆಲೆಯನ್ನು ತಿಳಿದುಕೊಳ್ಳದೆ ತನ್ನ ಪೂರೈಕೆಯ ಪ್ರಮಾನವನ್ನು ತಿಳಿಸಲಾರನು. ಆದುದರಿಂದ ಬೆಲೆಯು ಪೂರೈಕೆ ಮತ್ತು ಬೇಡಿಕೆಗಳೆರಡಕ್ಕೂ ಸಂಬಂಧಿಸಿದ ಸಾಮಾನ್ಯ ಅಂಶವಾಗಿದೆ. ಅದು ಬೇಡಿಕೆ ಮತ್ತು ಪೂರೈಕೆಗಳನ್ನು ಹೊಂದಾಣಿಸುವ ಕಾರ್ಯವನ್ನು ಮಾಡುತ್ತದೆ.

ಪೂರೈಕೆಯ ನಿಯಮ(Law of Supply): ಬೆಲೆಯು ಉತ್ಪಾದನೆಯ ವೆಚ್ಚಕ್ಕಿಂತಲೂ ಅಧಿಕವಾಗಿದ್ದಾಗ ಉತ್ಪಾದನೆಯು ಲಾಭದಾಯಕ ವಾಗುತ್ತದೆ. ಆದುದರಿಂದ ಉತ್ಪಾದಕರು ಹೆಚ್ಚು ಉತ್ಪಾದಿಸಿ ಹೆಚ್ಚು ಪ್ರಮಾಣದಲ್ಲಿ ಪೂರೈಸುತ್ತಾರೆ. ಇದಕ್ಕೆ ವಿರುದ್ಧವಾಗಿ, ಬೆಲೆ ಕಡಿಮೆ ಇದ್ದಾಗ ಲಾಭದ ಪ್ರಮಾಣವು ಕಡಿಮೆ ಇರುತ್ತದೆ. ಆಗ ಉತ್ಪಾದಕರು ಕಡಿಮೆ ಪ್ರಮಾಣದಲ್ಲಿ ಪೂರೈಸುತ್ತಾರೆ. ಬೆಲೆಯು ಉತ್ಪಾದನೆಯ ವೆಚ್ಚಕ್ಕಿಂತಲೂ ಕಡಿಮೆಯಾದರೆ ಉತ್ಪಾದನೆಯು ನಷ್ಟದಾಯಕವಾಗುತ್ತದೆ. ಆದುದರಿಂದ ಉತ್ಪಾದಕರು ತಮ್ಮ ಉತ್ಪಾದನೆಯನ್ನು ಮತ್ತು ಪೂರೈಕೆಯನ್ನು ಕಡಿಮೆ ಮಾಡುತ್ತಾರೆ. ಹೀಗೆ ಪೂರೈಕೆಯು ಮುಖ್ಯವಾಗಿ ಬೆಲೆಯನ್ನೇ ಅವಲಂಬಿಸಿರುತ್ತದೆ. ಬೆಲೆ ಏರಿದರೆ ಪೂರೈಕೆಯು ಹೆಚ್ಚಾಗುತ್ತದೆ. ಬೆಲೆ ಇಳಿದಂತೆ ಪೂರೈಕೆಯು ಕಡಿಮೆಯಾಗುತ್ತದೆ. ಬೆಲೆ ಮತ್ತು ಪೂರೈಕೆಗಳೆರಡೂ ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ. ಬೆಲೆ ಮತ್ತು ಪೂರೈಕೆಗಳಲ್ಲಿರುವ ಈ ಸಂಬಂಧವನ್ನು ವ್ಯಕ್ತಪಡಿಸಲು ಪೂರೈಕೆಯ ನಿಯಮವನ್ನು ರಚಿಸಲಾಗಿದೆ. ಅದು ಹೀಗಿದೆ. "ಇತರ ಎಲ್ಲ ಸ್ಥಿತಿಗತಿಗಳು ಸರಿ ಇದ್ದಾಗ, ವಸ್ತುವಿನ ಪೂರೈಕೆಯು ಅದರ ಬೆಲೆ ಏರಿದಂತೆ ಹೆಚ್ಚಾಗುತ್ತದೆ ಮತ್ತು ಅದರ ಬೆಲೆ ಇಳಿದಂತೆ ಕಡಿಮೆಯಾಗುತ್ತದೆ" ಹೀಗೆ ವಸ್ತುವಿನ ಪೂರೈಕೆಯು ಅದರ ಬೆಲೆಯ ದಿಕ್ಕಿನಲ್ಲಿ ಚಲಿಸುತ್ತದೆ.

ಪೂರೈಕೆಯ ಪಟ್ಟಿ: ಬೇಡಿಕೆಯ ಪಟ್ಟಿಯಂತೆ ಪೂರೈಕೆಯ ಪಟ್ಟಿಯನ್ನು ನಾವು ತಯಾರಿಸಬಹುದು. ಇಂತಹ ಪಟ್ಟಿಯು ವಸ್ತುವಿನ ಬೆಲೆ ಮತ್ತು ಅದರ ಪೂರೈಕೆಗಳಲ್ಲಿರುವ ಸಂಬಂಧವನ್ನು ತೋರಿಸುತ್ತದೆ. ಮಾರಾಟಗಾರನೊಬ್ಬನ ಪೂರೈಕೆಯ ಪಟ್ಟಿಯು(Individual supply Schedule)ಬೇರೆ ಬೇರೆ ಬೆಲೆಗೆ ಅವನು ಎಷ್ಟು ಸರಕುಗಳನ್ನು ಪೂರೈಸುತ್ತಾನೆಂಬುದನ್ನು ತೋರಿಸುತ್ತದೆ. ವಸ್ತುವಿನ ಬೆಲೆ ಹೆಚ್ಚು ಇದ್ದಾಗ ಹೆಚ್ಚು ಪ್ರಮಾಣದಲ್ಲಿಯೂ ಹಾಗೂ ಬೆಲೆ ಕಡಿಮೆ ಇದ್ದಾಗ ಕಡಿಮೆ ಪ್ರಮಾಣದಲ್ಲಿಯೂ ಪೂರೈಸುತ್ತಾನೆಂದು ಈ ಮೊದಲು ಹೇಳಿದೆ. ಸಾಮಾನ್ಯವಾಗಿ ಎಲ್ಲ ಮಾರಾಟಗಾರರು ಒಂದೇ ರೀತಿಯಾಗಿ ವರ್ತಿಸುವುದರಿಂದ ಎಲ್ಲ ಮಾರಾಟಗಾರರ ಪೂರೈಕೆಯ ಪಟ್ಟಿಯು ಒಂದೇ ಪ್ರಕಾರವಾಗಿ ಇರುತ್ತದೆ. ಪ್ರತಿಯೊಬ್ಬ ಮಾರಾಟಗಾರನ ಪೂರೈಕೆಯ ಪಟ್ಟಿಯನ್ನು ತಯಾರಿಸಿ ಅವೆಲ್ಲವುಗಳನ್ನು ಕೂಡಿಸುವುದರಿಂದ ಪೇಟೆಯ ಪೂರೈಕೆಯ ಪಟ್ಟಿಯು(Market Supply Schedule) ತಯಾರಾಗುತ್ತದೆ(ಬಸವಾ ಕೆ.ಡಿ., ಅರ್ಥಶಾಸ್ತ್ರ ಪರಿಚಯ, ೧೯೯೫, ೨೦೦೦, ಪು.೧೨೬-೧೨೭).

ಪೂರೈಕೆಯ ಅರ್ಥ: "ಒಂದು ನಿರ್ದಿಷ್ಟ ಅವಧಿಯಲ್ಲಿ ಮತ್ತು ಒಂದು ನಿರ್ದಿಷ್ಟ ಬೆಲೆಯಲ್ಲಿ ಮಾರಾಟ ಮಾಡಲು ಮಾರುಕಟ್ಟೆಗೆ ಸಾಗಿಸಲ್ಪಡುವ ಸರಕುಗಳ ಪ್ರಮಾಣಕ್ಕೆ ಪೂರೈಕೆ ಎನ್ನುತ್ತಾರೆ". ಉದಾಹರಣೆ: ಒಬ್ಬ ರೈತನು ೧೦೦ ಚೀಲ ಭತ್ತವನ್ನು ಬೆಳೆದಿದ್ದಾನೆಂದು ಭಾವಿಸೋಣ. ಅವನು ಅದರಲ್ಲಿ ೬೦ ಚೀಲ ಭತ್ತವನ್ನು ಮಾರಾಟ ಮಾಡಲು ಮಾರುಕಟ್ಟೆಗೆ ಸಾಗಿಸುತ್ತಾನೆಂದು ಭಾವಿಸೋಣ. ಆಗ ೬೦ ಚೀಲಗಳು ಮಾತ್ರ ಆತನ ಪೂರೈಕೆಯೆನಿಸುತ್ತದೆ. ಹೀಗೆ ಮಾರುಕಟ್ಟೆಗೆ ಸಾಗಿಸಲ್ಪಟ್ಟ ಎಲ್ಲ ವ್ಯಕ್ತಿಗಳ ಒಟ್ಟು ಪೂರೈಕೆಯನ್ನು ಮಾರುಕಟ್ಟೆಯ ಪೂರೈಕೆ ಎಂದು ಕರೆಯಲಾಗುತ್ತದೆ.

ಪೂರೈಕೆಯ ನಿಯಮ(Law of Supply): ಪೂರೈಕೆಯ ನಿಯಮವು ಬೆಲೆ ಮತ್ತು ಪೂರೈಕೆಗಳ ನಡುವಿನ ಸಂಬಂಧವನ್ನು ವಿವರಿಸುತ್ತದೆ. ಬೆಲೆಯಲ್ಲದೆ ಇತರೆ ಅಂಶಗಳೂ ಪೂರೈಕೆಯ ಮೇಲೆ ಪ್ರಭಾವ ಬೀರುವುದರಿಂದ 'ಇತರೆ ಅಂಶಗಳು ಸ್ಥಿರವಿದ್ದಾಗ' ಎಂಬ ಶರತ್ತಿನೊಂದಿಗೆ ಪೂರೈಕೆಯ ನಿಯಮವನ್ನು ರೂಪಿಸಲಾಗಿದೆ. "ಇತರೆ ಅಂಶಗಳು ಸ್ಥಿರವಿದ್ದು, ಒಂದು ವಸ್ತುವಿನ ಬೆಲೆ ಹೆಚ್ಚಾದರೆ ಪೂರೈಕೆ ಹೆಚ್ಚುತ್ತದೆ. ಅದೇ ವಸ್ತುವಿನ ಬೆಲೆ ಕಡಿಮೆಯಾದರೆ ಪೂರೈಕೆಯೂ ಕಡಿಮೆಯಾಗುತ್ತದೆ." ಇದೇ ಪೂರೈಕೆಯ ನಿಯಮ. ಇಲ್ಲಿ ಬೆಲೆ ಮತ್ತು ಪೂರೈಕೆಯ ನಡುವೆ ನೇರ ಸಂಬಂಧವಿದೆ.

ಪೂರೈಕೆಯ ಪಟ್ಟಿ: ಪೂರೈಕೆಯ ನಿಯಮವನ್ನು ಪೂರೈಕೆ ಪಟ್ಟಿಯ ಸಹಾಯದಿಂದ ವಿವರಿಸಬಹುದು. ವಿವಿಧ ಬೆಲೆಗಳಲ್ಲಿ ಪೇಟೆಗೆ ಪೂರೈಕೆಯಾಗುವ ಸರಕಿನ ಪ್ರಮಾಣವನ್ನು ಈ ಪಟ್ಟಿಯು ಸೂಚಿಸುತ್ತದೆ. ಒಬ್ಬ ಮಾರಾಟಗಾರನು ವಿವಿಧ ಬೆಲೆಗಳಲ್ಲಿ ಮಾರುಕಟ್ಟೆಗೆ ಮಾರಾಟ ಮಾಡಲು ತರುವ ಸರಕುಗಳ ಪ್ರಮಾಣವನ್ನು 'ವೈಯಕ್ತಿಕ ಪೂರೈಕೆ ಪಟ್ಟಿ'ಯು ಸೂಚಿಸುತ್ತದೆ. ವಿವಿಧ ಮಾರಾಟಗಾರರು ಬೇರೆ ಬೇರೆ ಬೆಲೆಗಳಲ್ಲಿ ಮಾರಾಟ ಮಾಡಲು ಪೇಟೆಗೆ ಸಾಗಿಸಿದ ಸರಕಿನ ಒಟ್ಟು ಪ್ರಮಾಣವನ್ನು 'ಮಾರುಕಟ್ಟೆ ಪೂರೈಕೆ ಪಟ್ಟಿ' ಸೂಚಿಸುತ್ತದೆ(ಕೆಂಪಯ್ಯ ಜಿ.ಎನ್., ಮೂಲ ಆರ್ಥಿಕ ಸಿದ್ಧಾಂತ, ೨೦೦೪, ಪು.೭೮-೭೯).

ಪೂರೈಕೆ: 'ಪೂರೈಕೆ'ಗೆ ಅರ್ಥಶಾಸ್ತ್ರದಲ್ಲಿ ಮಹತ್ವದ ಸ್ಥಾನವಿದೆ. 'ಅನುಭೋಗ' ಅಥವಾ 'ಬೇಡಿಕೆ' ಆರ್ಥಿಕ ಚಟುವಟಿಕೆಗಳ ಉಗಮಸ್ಥಾನ. ಅನುಭೋಗಕ್ಕೆ ವಸ್ತುಗಳ ಉತ್ಪಾದನೆ ಅಂದರೆ ಪೂರೈಕೆ ಇರಬೇಕು. ಪೂರೈಕೆ ಇಲ್ಲದಿದ್ದರೆ ಬೇಡಿಕೆಗೆ ಅರ್ಥವಿಲ್ಲ. ಪೂರೈಕೆ ಮತ್ತು ಬೇಡಿಕೆಗಳು ಜಂಟಿಯಾಗಿ ಬೆಲೆ ನಿರ್ಧಾರ ಮಾಡುತ್ತವೆ. ಆದುದರಿಂದಲೇ ಪೂರೈಕೆ ಬಹಳ ಪ್ರಮುಖವಾದ ಅಂಶ.

ಪೂರೈಕೆಯ ಅರ್ಥ: 'ಪೂರೈಕೆ' ಎಂದರೆ ಸಾಮಾನ್ಯವಾಗಿ ಉತ್ಪಾದಕರ ಬಳಿಯಲ್ಲಿ ದೊರೆಯುವ ಸಿದ್ಧ ವಸ್ತುಗಳ ಸಂಗ್ರಹವೆಂದು ತಿಳಿಯುವುದುಂಟು. ಆದರೆ ಇದು ಸರಿಯಲ್ಲ. ಅರ್ಥಶಾಸ್ತ್ರದಲ್ಲಿ ಪೂರೈಕೆಯೆಂದರೆ ಒಂದು ನಿರ್ದಿಷ್ಟ ಬೆಲೆಗೆ ಮಾರುಕಟ್ಟೆಗೆ ಮಾರಾಟ ಮಾಡಲು ಒದಗಿಸಿದ ವಸ್ತುಗಳ ಪ್ರಮಾಣ. ಇಂತಿಷ್ಟು ಬೆಲೆಗೆ ಇಂತಿಷ್ಟು ಬೇಡಿಕೆ ಎಂದು ಹೇಳುವಂತೆ ಪೂರೈಕೆ ವಿಷಯದಲ್ಲಿ ಸಹ ಇಂತಿಷ್ಟು ಬೆಲೆಗೆ ಇಂತಿಷ್ಟು ಪೂರೈಕೆ ಎಂದು ಪ್ರಮಾಣವನ್ನು ಸ್ಪಷ್ಟಪಡಿಸುತ್ತೇವೆ. ಗ್ರಾಹಕರು ಬೇರೆ ಬೇರೆ ಬೆಲೆಗಳಿರುವಾಗ ಬೇರೆ ಬೇರೆ ಪ್ರಮಾಣದಲ್ಲಿ ವಸ್ತುಗಳನ್ನು ಬೇಡುತ್ತಾರೆ. ಅದೇ ರೀತಿ ಮಾರಾಟಗಾರರು ಬೇರೆ ಬೇರೆ ಬೆಲೆಗಳಿರುವಾಗ ಬೇರೆ ಬೇರೆ ಪ್ರಮಾಣದಲ್ಲಿ ವಸ್ತುಗಳನ್ನು ಪೂರೈಕೆ ಮಾಡುತ್ತಾರೆ. ಯಾವ ಪ್ರಕಾರವಾಗಿ ಗ್ರಾಹಕರು ಬೆಲೆಯನ್ನು ತಿಳಿದುಕೊಳ್ಳದೆ ತಮ್ಮ ಬೇಡಿಕೆಯ ಪ್ರಮಾಣವನ್ನು ತಿಳಿಸಲಾರರೋ ಅದೇ ಪ್ರಕಾರವಾಗಿ ಮಾರಾಟಗಾರರು ಸಹ ಸರಕುಗಳ ಬೆಲೆಯನ್ನು ತಿಳಿದುಕೊಳ್ಳದೆ ಪೂರೈಕೆಯ ಪ್ರಮಾಣವನ್ನು ತಿಳಿಸಲಾರರು. ಆದುದರಿಂದ

ಬೆಲೆಯು ಪೂರೈಕೆ ಮತ್ತು ಬೇಡಿಕೆಗಳೆರಡಕ್ಕೂ ಸಂಬಂಧಿಸಿದ ಸಾಮಾನ್ಯ ಅಂಶವಾಗಿದೆ. ಪೂರೈಕೆಯು ವ್ಯಕ್ತಿಯಿಂದ ವ್ಯಕ್ತಿಗೆ, ಅದರಂತೆ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಾ ಹೋಗುತ್ತದೆ. ಅಲ್ಲದೇ ಅದು ಕಾಲ ಕಾಲಕ್ಕೂ ಬದಲಾಗುತ್ತದೆ. ಅಂದರೆ ಪೂರೈಕೆಯು ಎಲ್ಲ ಕಾಲಕ್ಕೂ, ಎಲ್ಲ ಸ್ಥಳಗಳಲ್ಲಿಯೂ ಮತ್ತು ಎಲ್ಲ ವ್ಯಕ್ತಿಗಳಲ್ಲಿಯೂ ಒಂದೇ ಪ್ರಮಾಣದಲ್ಲಿ ಇರಲಾರದು.

ಪೂರೈಕೆ ಮತ್ತು ಸಂಗ್ರಹ: ಪೂರೈಕೆ ಮತ್ತು ಸಂಗ್ರಹ ಒಂದೇ ಅಲ್ಲ. ಆದ್ದರಿಂದ ಅವುಗಳ ನಡುವಣ ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಅವಶ್ಯಕ. ಸಂಗ್ರಹವೆಂದರೆ ಪರಿಸ್ಥಿತಿ ಅನುಕೂಲವಾಗಿದ್ದರೆ ಮಾರುಕಟ್ಟೆಗೆ ಪೂರೈಸಲ್ಪಡಬಹುದಾದ ವಸ್ತುಗಳ ಪ್ರಮಾಣ. ಪೂರೈಕೆಯೆಂದರೆ ಒಂದು ನಿರ್ದಿಷ್ಟ ಬೆಲೆಗೆ ಮಾರುಕಟ್ಟೆಯಲ್ಲಿ ಮಾರಾಟಕ್ಕಿರುವ ವಸ್ತುಗಳ ಪ್ರಮಾಣ. ಪೂರೈಕೆ ಎಂಬುದು ಸಂಗ್ರಹದ ಒಂದು ಭಾಗ ಅಷ್ಟೆ. ಅದು ಎಂದೂ ಸಂಗ್ರಹಕ್ಕಿಂತ ಹೆಚ್ಚಾಗಲಾರದು.

ಬೆಲೆಯ ಪರಿಸ್ಥಿತಿ ಮಾರಾಟಗಾರರಿಗೆ ಅನುಕೂಲವಾಗುವವರೆಗೆ ವಸ್ತುಗಳನ್ನು ಸಂಗ್ರಹದಲ್ಲಿ ಡುವ ಪ್ರವೃತ್ತಿ ಇರುತ್ತದೆ. ಬೆಲೆ ಅನುಕೂಲವಿದ್ದರೆ ಸಂಗ್ರಹವಿರುವ ಎಲ್ಲ ವಸ್ತುಗಳ ಪೂರೈಕೆಯಾಗ ಬಹುದು. ಮಾರುಕಟ್ಟೆಯಲ್ಲಿರುವ ಬೆಲೆ ಮತ್ತು ಬೇಡಿಕೆಯ ಪರಿಸ್ಥಿತಿಯಿಂದ ಪೂರೈಕೆಯ ಪ್ರಮಾಣ ನಿರ್ಧರಿಸಲ್ಪಡುತ್ತದೆ. ಬೆಲೆಗಳು ಏರಿದರೆ ವಸ್ತುಗಳನ್ನು ಅಧಿಕ ಪ್ರಮಾಣದಲ್ಲಿ ಸಂಗ್ರಹದಿಂದ ಮಾರುಕಟ್ಟೆಗೆ ಪೂರೈಸಲಾಗುವುದು. ಬೆಲೆಗಳು ಇಳಿದರೆ ವಸ್ತುಗಳನ್ನು ಕಡಿಮೆ ಪ್ರಮಾಣದಲ್ಲಿ ಪೂರೈಸಲಾಗುವುದು. ಸಂಗ್ರಹದಲ್ಲಿರುವ ವಸ್ತುಗಳನ್ನು ಪೂರೈಕೆಗಾಗಿಯೇ ಕಾಯ್ದಿಡಲಾಗುವುದು. ಅನುಕೂಲ ಬೆಲೆ ದೊರಕುವವರೆಗೆ ಅವುಗಳನ್ನು ಪೂರೈಸಲಾಗುವುದಿಲ್ಲ.

ಹಾಲು, ಹಣ್ಣು, ತರಕಾರಿ, ಮೊಟ್ಟೆ, ಮೀನು, ಮಾಂಸ ಮುಂತಾದ ಬೇಗ ನಾಶವಾಗುವ ಗುಣ ಹೊಂದಿರುವ ವಸ್ತುಗಳ ವಿಚಾರದಲ್ಲಿ ಪೂರೈಕೆ ಮತ್ತು ಸಂಗ್ರಹ ಒಂದೇ ಆಗಿರುತ್ತದೆ. ನಷ್ಟವಾಗುವುದಕ್ಕಿಂತ ಬಂದಷ್ಟು ಬೆಲೆಗೆ ಅವುಗಳನ್ನು ಮಾರಬೇಕಾಗುತ್ತದೆ. ಬಾಳಿಕೆ ಬರುವ ವಸ್ತುಗಳ ವಿಚಾರದಲ್ಲಿ ಪೂರೈಕೆ ಮತ್ತು ಸಂಗ್ರಹ ಬೇರೆ ಬೇರೆಯಾಗಿರುತ್ತದೆ. ಏಕೆಂದರೆ ಬಾಳಿಕೆ ಬರುವ ವಸ್ತುಗಳನ್ನು ಕೆಲಕಾಲ ಯೋಗ್ಯ ಬೆಲೆ ದೊರೆಯುವವರೆಗೆ ಸಂಗ್ರಹದಲ್ಲಿಡುವುದು ಸಾಧ್ಯವಿರುತ್ತದೆ(ರೇಣುಕಾರ್ಯ ಸಿ.ಕೆ.(ಸಂ), ಮೊದಲ ವರ್ಷದ ಪಿಯುಸಿ ಅರ್ಥಶಾಸ್ತ್ರ, ೨೦೦೪, ಪು.೯೮-೯೮).

ಪೂರೈಕೆ(Supply): ಪೂರೈಕೆ ಎಂಬ ಪರಿಕಲ್ಪನೆಯು ಅರ್ಥಶಾಸ್ತ್ರದ ಒಂದು ಮಹತ್ವಪೂರ್ಣ ಅಧ್ಯಯನ ವಿಚಾರವಾಗಿದೆ. ಪೂರೈಕೆ ರೇಖೆಯು ಸರಕು ಮತ್ತು ಸೇವೆಗಳ ಉತ್ಪಾದನೆ ಮತ್ತು ಬೆಲೆ ನಿರ್ಧಾರದ ಒಂದು ಪ್ರಮುಖ ವಿಶ್ಲೇಷಣಾ ಸಾಧನವಾಗಿದೆ.

ಪೂರೈಕೆಯ ಅರ್ಥವಿವರಣೆ(Meaning of Supply): ಸಾಮಾನ್ಯ ಅರ್ಥದಲ್ಲಿ ಪೂರೈಕೆ ಎಂದರೆ ಅಸ್ತಿತ್ವದಲ್ಲಿರುವ ಸರಕುಗಳ ಅಥವಾ ವಸ್ತುಗಳ ಒಟ್ಟು ಸಂಗ್ರಹವಾಗಿದೆ. ಆದರೆ ಅರ್ಥಶಾಸ್ತ್ರದಲ್ಲಿ

ಪೂರೈಕೆ ಎಂಬ ಪರಿಕಲ್ಪನೆಗೆ ಒಂದು ವಿಶಿಷ್ಟವಾದ ಅರ್ಥವಿದೆ. ಅರ್ಥಶಾಸ್ತ್ರದಲ್ಲಿ ಪೂರೈಕೆ ಎಂದರೆ ಒಂದು ನಿರ್ದಿಷ್ಟ ಅವಧಿ ಮತ್ತು ಬೆಲೆಯಲ್ಲಿ ಮಾರಾಟ ಮಾಡಲು ತರಲಾಗಿರುವ ಸರಕುಗಳ ಪ್ರಮಾಣವಾಗಿದೆ. ಅಂದರೆ ಪೂರೈಕೆ ಎಂಬುದು ಯಾವಾಗಲೂ ಒಂದು ನಿರ್ದಿಷ್ಟ ಬೆಲೆ ಮತ್ತು ಅವಧಿಗೆ ಸಂಬಂಧಿಸಿರುತ್ತದೆ. ಆದ್ದರಿಂದ, ಒಂದು ನಿರ್ದಿಷ್ಟ ಉತ್ಪನ್ನದ ಪೂರೈಕೆ ಎಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿನ ವಿವಿಧ ಬೆಲೆಗಳಲ್ಲಿ ಉತ್ಪಾದಕರು ಮಾರಾಟ ಮಾಡಲು ತಯಾರಿರುವ ಆ ಉತ್ಪನ್ನದ ಪ್ರಮಾಣಗಳಾಗಿವೆ. ಪೂರೈಕೆ ಎಂಬ ಪರಿಕಲ್ಪನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದ ವ್ಯಾಖ್ಯಾನಗಳು ಈ ಮುಂದಿನಂತಿದೆ. ಹಾರ್ವೆ ಅವರ ಪ್ರಕಾರ, "ಒಂದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಪ್ರಮಾಣದ ಸರಕುಗಳನ್ನು ಮಾರಾಟಕ್ಕಿಡಲಾಗಿದೆ" ಎಂದು ಪೂರೈಕೆಯನ್ನು ವ್ಯಾಖ್ಯಾನಿಸಬಹುದು. ಮ್ಯಾಕೋನೆಲ್ಡ್ ಅವರ ಪ್ರಕಾರ, "ಕೆಲವೊಂದು ನಿರ್ದಿಷ್ಟ ಅವಧಿಯಲ್ಲಿ ಸಾಧ್ಯವಿರುವ ಬೆಲೆಗಳ ಸರಮಾಲೆಯ ಪ್ರತಿಯೊಂದು ನಿರ್ದಿಷ್ಟ ಬೆಲೆಯಲ್ಲಿ ಉತ್ಪಾದನಾಕಾರನು ಉತ್ಪಾದಿಸಿ ಮಾರುಕಟ್ಟೆಗೆ ಮಾರಾಟಕ್ಕೆ ಲಭ್ಯವಿರುವಂತೆ ಮಾಡಲು ಸಾಧ್ಯವಿರುವ ಮತ್ತು ಸಾಮರ್ಥ್ಯವಿರುವ ಸರಕ್ಕೊಂದರ ವಿವಿಧ ಮೊತ್ತಗಳನ್ನು ತೋರಿಸುವ ಒಂದು ಅನುಸೂಚಿಯನ್ನು ಪೂರೈಕೆ ಎಂದು ವ್ಯಾಖ್ಯಾನಿಸ ಬಹುದು." ಮೇಯರ್ಸ್ ಹೇಳುವಂತೆ, "ಒಂದು ತತ್‌ಕ್ಷಣದ ಅವಧಿ ಅಥವಾ ಒಂದು ನಿರ್ದಿಷ್ಟ ಅವಧಿಯಲ್ಲಿ ಸಾಧ್ಯವಿರುವ ಎಲ್ಲಾ ಬೆಲೆಗಳಲ್ಲಿ ಮಾರಾಟ ಮಾಡಲು ಒದಗಿಸಲಾಗಿರುವ ಒಂದು ಸರಕಿನ ವಿವಿಧ ಪ್ರಮಾಣಗಳ ಒಂದು ಅನುಸೂಚಿಯನ್ನು ನಾವು ಪೂರೈಕೆ ಎಂದು ವ್ಯಾಖ್ಯಾನಿಸ ಬಹುದು." ಹೀಗೆ ಒಂದು ನಿರ್ದಿಷ್ಟ ಬೆಲೆಯಲ್ಲಿ ಮಾರಾಟ ಮಾಡಲು ಮಾರುಕಟ್ಟೆಯಲ್ಲಿ ಪ್ರತ್ಯಕ್ಷವಾಗಿ ಒದಗಿಸಲ್ಪಟ್ಟ ವಸ್ತುಗಳ ಪ್ರಮಾಣವನ್ನು ಪೂರೈಕೆ ಎನ್ನಲಾಗುವುದು. ಪೂರೈಕೆಯು ಒಂದು ಸಾಪೇಕ್ಷ ಪರಿಕಲ್ಪನೆಯಾಗಿದ್ದು ಅದು ಸದಾ ವಸ್ತುವಿನ ಬೆಲೆ ಮತ್ತು ಒಂದು ನಿರ್ದಿಷ್ಟ ಕಾಲಾವಧಿಗೆ ಸಂಬಂಧಿಸಿರುತ್ತದೆ. ಪೂರೈಕೆಯ ನಿರ್ಧಾರದಲ್ಲಿ ಮಾರಾಟಗಾರನ 'ಮಾರುವ ಶಕ್ತಿ'(ಸಾಮರ್ಥ್ಯ) ಮತ್ತು 'ಮಾರುವ ಮನಸ್ಸು' ಪ್ರಮುಖ ಪಾತ್ರವಹಿಸುತ್ತವೆ. ಅದೇ ರೀತಿ ಪೂರೈಕೆಯು ಸರಕುಗಳ ಉತ್ಪಾದನೆ ಮತ್ತು ಕೊರತೆಯನ್ನೂ ಅವಲಂಬಿಸಿರುತ್ತದೆ.

ಪೂರೈಕ ಮತ್ತು ಸಂಗ್ರಹ(Supply and Stock): ಸಾಮಾನ್ಯ ಸಂದರ್ಭಗಳಲ್ಲಿ ಪೂರೈಕೆ ಮತ್ತು ಸಂಗ್ರಹ ಎಂಬ ಪದಗಳನ್ನು ಒಂದೇ ಎಂದು ಭಾವಿಸಲಾಗುತ್ತದೆ. ಆದರೆ ವಾಸ್ತವವಾಗಿ ಈ ಎರಡು ಪದಗಳ ನಡುವೆ ಮೂಲಭೂತವಾದ ವ್ಯತ್ಯಾಸವಿದೆ. ಸಂಗ್ರಹ ಎಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದನೆಯಾದ ವಸ್ತುಗಳ ಒಟ್ಟು ಪ್ರಮಾಣವಾಗಿದೆ. ಸಂಗ್ರಹ 'ಸುಪ್ತ ಪೂರೈಕೆ'(Potential supply)ಯಾಗಿದೆ. ಅಂದರೆ ಮಾರುಕಟ್ಟೆಯಲ್ಲಿ ಸ್ಥಿತಿಗತಿಗಳು ಅನುಕೂಲಕರವಾಗಿದ್ದರೆ ಮಾರಾಟಕ್ಕೆ ಕೂಡಲೇ ತರಬಹುದಾದ ವಸ್ತುಗಳ ಪ್ರಮಾಣವನ್ನು ಸಂಗ್ರಹ ಎನ್ನಲಾಗುತ್ತದೆ. ಆದರೆ ಪೂರೈಕೆ ಎಂಬುದು ಉತ್ಪಾದನೆಯಾದ ಒಟ್ಟು ಪ್ರಮಾಣದಲ್ಲಿ ಒಂದು ನಿರ್ದಿಷ್ಟ ಬೆಲೆ ಮತ್ತು ಅವಧಿಯಲ್ಲಿ

ಮಾರಲು ಒದಗಿಸುವ ವಸ್ತುಗಳ ಪ್ರಮಾಣವಾಗಿದೆ. ಆದ್ದರಿಂದ ಪೂರೈಕೆ ಎಂಬುದು ಸಂಗ್ರಹದ ಒಂದು ಭಾಗ ಅಷ್ಟೆ. ಈ ಸಂಗ್ರಹ ಉತ್ಪಾದನೆಯಿಂದ ಸೃಷ್ಟಿಯಾಗಿರುತ್ತದೆ. ಉದಾಹರಣೆಗೆ ಒಬ್ಬ ರೈತ ೧೦೦ ಕ್ವಿಂಟಲ್ ರಾಗಿಯನ್ನು ಬೆಳೆಯುತ್ತಾನೆಂದು ಕೊಳ್ಳೋಣ. ಇದನ್ನು ಪೂರ್ತಿ ಮಾರುವ ಗುರಿಯನ್ನು ಅವನು ಹೊಂದಿದ್ದಾನಾದರೂ ಯಾವುದೋ ಒಂದು ನಿರ್ದಿಷ್ಟ ಬೆಲೆಯಲ್ಲಿ ಕೇವಲ ೫೦ ಕ್ವಿಂಟಲ್ ರಾಗಿಯನ್ನು ಮಾರಾಟಕ್ಕೆಂದು ಮಾರುಕಟ್ಟೆಗೆ ತರುತ್ತಾನೆ. ಈ ಸನ್ನಿವೇಶದಲ್ಲಿ ೧೦೦ ಕ್ವಿಂಟಲ್ ರಾಗಿ ಸಂಗ್ರಹವಾದರೆ ೫೦ ಕ್ವಿಂಟಲ್ ರಾಗಿ ಪೂರೈಕೆಯಾಗುತ್ತದೆ.

ತರಕಾರಿ, ಹಾಲು, ಮೊಟ್ಟೆ, ಮೀನು, ಹಣ್ಣುಗಳು ಮುಂತಾದ ಬೇಗ ನಾಶವಾಗುವ ಗುಣ ಹೊಂದಿರುವ ವಸ್ತುಗಳ ವಿಚಾರದಲ್ಲಿ ಸಂಗ್ರಹ ಮತ್ತು ಪೂರೈಕೆ ಒಂದೇ ಆಗಿರುತ್ತವೆ. ಆದರೆ ಬಾಳಿಕೆ ಬರುವ ವಸ್ತುಗಳ ವಿಚಾರದಲ್ಲಿ ಸಂಗ್ರಹ ಮತ್ತು ಪೂರೈಕೆ ಬೇರೆ ಬೇರೆಯಾಗಿರುತ್ತವೆ. ಏಕೆಂದರೆ, ಬಾಳಿಕೆ ಬರುವ ವಸ್ತುಗಳನ್ನು ಕೆಲದಿನಗಳ ಕಾಲ ದಾಸ್ತಾನಿಟ್ಟು ಮಾರುಕಟ್ಟೆಯಲ್ಲಿ ಅನುಕೂಲಕರ ಸನ್ನಿವೇಶವಿದ್ದಾಗ ಮಾರಾಬಹುದಾಗಿದೆ. ಆದರೆ ಬೇಗ ನಾಶವಾಗುವ ವಸ್ತುಗಳನ್ನು ಕೂಡಲೇ ಮಾರಬೇಕಾಗುತ್ತದೆ. ಇಲ್ಲವಾದಲ್ಲಿ ಅವುಗಳು ನಾಶವಾಗುತ್ತವೆ(ಕೃಷ್ಣಮೂರ್ತಿ ಎಚ್.ಆರ್., ಹೊಸಬೀಡು, ಮೂಲ ಆರ್ಥಿಕ ಸಿದ್ಧಾಂತ, ೨೦೦೮, ಪು.೧೨೪-೧೨೫).

**ಪೂರೈಕೆಯ ವಿಶ್ಲೇಷಣೆ(Supply Analysis):** ಪೀಠಿಕೆ: ಸಾಮಾನ್ಯವಾಗಿ ಉತ್ಪಾದಕರು ಮತ್ತು ಮಾರುವವರ ಬಳಿ ಲಭ್ಯವಿರುವ ವಸ್ತುಗಳ ಸಂಗ್ರಹವೇ ಪೂರೈಕೆ. ಆದರೆ ಅರ್ಥಶಾಸ್ತ್ರದಲ್ಲಿ ಪೂರೈಕೆ ಎಂದರೆ ಒಂದು ನಿರ್ದಿಷ್ಟ ಬೆಲೆಗೆ ಮಾರಾಟ ಮಾಡಲು ಮಾರುಕಟ್ಟೆಯಲ್ಲಿ ಪ್ರತ್ಯಕ್ಷವಾಗಿ ಒದಗಿಸಲ್ಪಟ್ಟ ವಸ್ತುಗಳ ಪ್ರಮಾಣ. ಆದುದರಿಂದ ಯಾವುದೊಂದು ವಸ್ತುವಿನ ಪೂರೈಕೆಯು ಅದರ ಬೆಲೆಯನ್ನೇ ಅವಲಂಬಿಸಿರುತ್ತದೆ. ವಸ್ತುವಿನ ಬೆಲೆಯು ಏರಿದಂತೆ ಪೂರೈಕೆಯು ಹೆಚ್ಚಾಗುತ್ತದೆ. ಮತ್ತು ಬೆಲೆಯು ಕಡಿಮೆಯಾದಾಗ ಪೂರೈಕೆಯು ಕಡಿಮೆಯಾಗುತ್ತದೆ. ಬೇಡಿಕೆಯಂತೆ ಪೂರೈಕೆಯು ಒಂದು ನಿರ್ದಿಷ್ಟ ಕಾಲಾವಧಿಗೆ ಸಂಬಂಧಿಸಿರುತ್ತದೆ. ಅರ್ಥಶಾಸ್ತ್ರದಲ್ಲಿ ಹಾರ್ವೆಯವರ ಪ್ರಕಾರ, ಪೂರೈಕೆ ಎಂದರೆ, "ಒಂದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಸರಕುಗಳು ಮಾರಾಟಕ್ಕೆ ಒದಗುತ್ತವೆಯೋ ಅದುವೇ ಪೂರೈಕೆ". ಪ್ರೊ.ಮೇಯರ್ಸ್ ಹೇಳುವಂತೆ "ಒಂದು ನಿರ್ದಿಷ್ಟ ಸಾಧ್ಯವಿರುವ ಎಲ್ಲಾ ಬೆಲೆಗಳಲ್ಲಿ ಮಾರಾಟ ಮಾಡಲು ಒದಗಿಸಲಾಗಿರುವ ಒಂದು ಸರಕಿನ ವಿವಿಧ ಪ್ರಮಾಣವೇ ಪೂರೈಕೆ."

ಇನ್ನೊಬ್ಬ ಖ್ಯಾತ ಅರ್ಥಶಾಸ್ತ್ರಜ್ಞ ಮೆಕೋಲಸ್ ಹೇಳುವಂತೆ "ನಿಶ್ಚಿತ ಅವಧಿಯಲ್ಲಿ ವಿವಿಧ ಸಾಧ್ಯತಾ ಬೆಲೆಗಳಲ್ಲಿ ನಿರ್ದಿಷ್ಟವಾದ ಪ್ರತಿಯೊಂದು ಬೆಲೆಗೆ ಉತ್ಪಾದಕನು ಉತ್ಪಾದಿಸಲು ಬಯಸುವ ಮತ್ತು ಉತ್ಪಾದಿಸುವ ಸಾಧ್ಯವಾಗುವ ಹಾಗೂ ಮಾರಾಟಕ್ಕೆ ಸಾಧ್ಯವಾಗುವಂತೆ ಮಾಡುವ ಒಂದು ವಸ್ತುವಿನ ವಿವಿಧ ಪ್ರಮಾಣಗಳನ್ನು ತೋರಿಸುವ ಒಂದು ನಕ್ಷೆಯೇ ಪೂರೈಕೆ."

ಪೂರೈಕೆ ಮತ್ತು ಸಂಗ್ರಹ(Supply and Stock): ಕೆಲವು ಸಂದರ್ಭದಲ್ಲಿ ಪೂರೈಕೆ ಮತ್ತು ಸಂಗ್ರಹ ಎಂಬ ಪದಗಳು ಒಂದೇ ಅರ್ಥದಲ್ಲಿ ಬಳಸಲಾಗುತ್ತದೆ. ಆದರೆ ವಾಸ್ತವವಾಗಿ ಈ

ಎರಡು ಪದಗಳ ಮಧ್ಯ ಮೂಲಭೂತವಾದ ವ್ಯತ್ಯಾಸವಿದೆ. ಸಂಗ್ರಹ ಎಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದನೆಯಾದ ಒಟ್ಟು ಸರಕುಗಳ ಪ್ರಮಾಣವಾಗಿದೆ. ಸಂಗ್ರಹ 'ಸುಪ್ತ ಪೂರೈಕೆ'ಯಾಗಿದೆ. ಅಂದರೆ ಮಾರಾಟಕ್ಕೆ ಕೂಡಲೇ ತರಬಹುದಾದ ವಸ್ತುಗಳ ಪ್ರಮಾಣವನ್ನು ಸಂಗ್ರಹ ಎನ್ನಲಾಗುತ್ತದೆ. ಆದರೆ ಪೂರೈಕೆ ಉತ್ಪಾದನೆಯಾದ ಒಟ್ಟು ಪ್ರಮಾಣದಲ್ಲಿ ಒಂದು ನಿರ್ದಿಷ್ಟ ಬೆಲೆ ಮತ್ತು ಅವಧಿಯಲ್ಲಿ ಮಾರಲು ಒದಗಿಸುವ ವಸ್ತುಗಳ ಪ್ರಮಾಣವಾಗಿದೆ. ಆದುದರಿಂದ ಪೂರೈಕೆ ಎಂಬುದು ಸಂಗ್ರಹದ ಒಂದು ಭಾಗವೇ ಆಗಿದೆ. ಉದಾಹರಣೆಗೆ ಒಬ್ಬ ಉತ್ಪಾದಕ ೫೦,೦೦೦ ಬಣ್ಣದ ಟಿ.ವಿ. ಉತ್ಪಾದಿಸುತ್ತಾನೆಂದು ತಿಳಿದುಕೊಳ್ಳೋಣ. ಇದನ್ನು ಪೂರ್ತಿ ಮಾರುವ ಗುರಿಯನ್ನು ಹೊಂದಿದ್ದಾನೆ. ಆದರೆ ಯಾವುದೋ ಒಂದು ನಿರ್ದಿಷ್ಟ ಬೆಲೆಯಲ್ಲಿ ಕೇವಲ ೩೦,೦೦೦ ಟಿ.ವಿ.ಗಳನ್ನು ಮಾರಾಟಕ್ಕೆಂದು ಮಾರುಕಟ್ಟೆಗೆ ತರುತ್ತಾನೆ. ಈ ಸನ್ನಿವೇಶದಲ್ಲಿ ೨೦,೦೦೦ ಬಣ್ಣದ ಟಿ.ವಿ.ಗಳು ಸಂಗ್ರಹವಾದರೆ ೩೦,೦೦೦ ಬಣ್ಣದ ಟಿ.ವಿ.ಯು ಪೂರೈಕೆಯಾಗುತ್ತದೆ(ಬಸವರಾಜ ಕಮ್ಮೂರ, ಸೂಕ್ಷ್ಮ ಅರ್ಥಶಾಸ್ತ್ರ, ಭಾಗ ೧, ೨೦೧೩, ಪು.೨೩೮-೨೩೯).

ಪೀಠಿಕೆ: ಆರ್ಥಿಕ ವಿಶ್ಲೇಷಣೆಯಲ್ಲಿ ಬೇಡಿಕೆಯಷ್ಟೇ ಪ್ರಾಮುಖ್ಯತೆಯನ್ನು ಹೊಂದಿರುವ ಇನ್ನೊಂದು ಪರಿಕಲ್ಪನೆಯೆಂದರೆ 'ಪೂರೈಕೆ'. ಅನುಭೋಗಿಯೋರ್ವ ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಮಾರುಕಟ್ಟೆಯಲ್ಲಿ ವಸ್ತುಗಳಿಗೆ ಬೇಡಿಕೆ ಸಲ್ಲಿಸುತ್ತಾನೆ. ಆದರೆ, ಆತನ ಬೇಡಿಕೆಯು ಈಡೇರಬೇಕಾದರೆ ಮಾರುಕಟ್ಟೆಯಲ್ಲಿ ವಸ್ತುವಿನ ಪೂರೈಕೆಯಾಗಬೇಕು. ಅಂದಾಗ ಮಾತ್ರ ಅನುಭೋಗಿಯು ವಸ್ತುವನ್ನು ಖರೀದಿಸಿ ತನ್ನ ಬಯಕೆಯನ್ನು ತೃಪ್ತಿಪಡಿಸಿಕೊಳ್ಳಬಹುದು. ಅದೇ ರೀತಿ ಅರ್ಥವ್ಯವಸ್ಥೆಯಲ್ಲಿ ಪ್ರತಿಯೊಬ್ಬ ಉತ್ಪಾದಕನ ಉದ್ದೇಶ ಆದಾಯವನ್ನು ಗಳಿಸುವುದಾಗಿರುತ್ತದೆ. ಉತ್ಪಾದಕನ ಈ ಉದ್ದೇಶ ಈಡೇರಬೇಕಾದರೆ ಆತ ತಾನು ಉತ್ಪಾದಿಸಿದ ವಸ್ತುವನ್ನು ಮಾರುಕಟ್ಟೆಗೆ ಪೂರೈಕೆ ಮಾಡಿ ಮಾರಾಟ ಮಾಡಿದಾಗ ಮಾತ್ರ ಸಾಧ್ಯವಾಗುತ್ತದೆ. ಹೀಗೆ ಅನುಭೋಗಿಗಳು ಮತ್ತು ಉತ್ಪಾದಕರಿಬ್ಬರ ದೃಷ್ಟಿಯಿಂದ ಪೂರೈಕೆ ಅತ್ಯಂತ ಮಹತ್ವದ್ದಾಗಿದೆ.

ಪೂರೈಕೆಯ ಅರ್ಥ: ಪೂರೈಕೆಯೆಂದರೆ ಉತ್ಪಾದನೆ ಮಾಡಿದ ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಒದಗಿಸುವ ವಸ್ತುಗಳ ಪ್ರಮಾಣವಾಗಿದೆ. ಪ್ರೊ.ಹಾರ್ವೆ ಎಂಬ ಅರ್ಥಶಾಸ್ತ್ರಜ್ಞರ ಪ್ರಕಾರ, ಪೂರೈಕೆ ಎಂದರೆ "ಒಮದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಸರಕುಗಳು ಮಾರಾಟಕ್ಕೆ ಒದಗುತ್ತವೆಯೋ ಆದುವೆ ಪೂರೈಕೆಯಾಗಿದೆ." ಪ್ರೊ.ಮೇಯರ್ಸ್‌ರ ಪ್ರಕಾರ "ಒಂದು ನಿರ್ದಿಷ್ಟ ಸಾಧ್ಯವಿರುವ ಎಲ್ಲಾ ಬೆಲೆಗಳಲ್ಲಿ ಮಾರಾಟ ಮಾಡಲು ಒದಗಿಸಲಾಗಿರುವ ಒಂದು ಸರಕಿನ ವಿವಿಧ ಪ್ರಮಾಣವೇ ಪೂರೈಕೆ."

ಮೇಲಿನ ವ್ಯಾಖ್ಯೆಗಳ ಪ್ರಕಾರ ಪೂರೈಕೆಯೆಂದರೆ ವಿವಿಧ ಬೆಲೆಗಳಲ್ಲಿ ಮಾರುಕಟ್ಟೆಯಲ್ಲಿ ಉತ್ಪಾದಕರು ಮಾರಾಟಕ್ಕೆ ಒದಗಿಸುವ ಒಂದು ವಸ್ತುವಿನ ನಿರ್ದಿಷ್ಟ ಪ್ರಮಾಣವಾಗಿದೆ(ಗುರುಬಸಪ್ಪ ಟಿ.ಆರ್. ಮತ್ತು ಮಲ್ಲೇಶಪ್ಪ ಕುಂಬಾರ, ಸೂಕ್ಷ್ಮ ಅರ್ಥಶಾಸ್ತ್ರ, ೨೦೧೩, ಪು.೨೩೦).

ಪೂರೈಕೆ(Supply): ಪೂರೈಕೆ ಎಂಬ ಪದಕ್ಕೆ ಅರ್ಥಶಾಸ್ತ್ರದಲ್ಲಿ ವಿಶಿಷ್ಟ ಸ್ಥಾನ ಲಭ್ಯವಿದೆ. ಪೂರೈಕೆ ಬೆಲೆ ನಿರ್ಧಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಏಕೆಂದರೆ ಪೂರೈಕೆ ಮತ್ತು ಬೇಡಿಕೆಗಳು ಸೇರಿಕೊಂಡು ಬೆಲೆಯನ್ನು ನಿರ್ಧರಿಸುವುದು. ಒಂದು ವಸ್ತುವಿನ ಬೇಡಿಕೆಯು ಪೂರೈಕೆಗಿಂತ ಹೆಚ್ಚಾಗಿದ್ದರೆ ಆ ವಸ್ತುವಿನ ಬೆಲೆ ಅಧಿಕವಾಗುತ್ತದೆ. ಒಂದು ವೇಳೆ ಪೂರೈಕೆಯು ಬೇಡಿಕೆಗಿಂತ ಹೆಚ್ಚಾಗಿದ್ದರೆ ವಸ್ತುವಿಗೆ ಕಡಿಮೆ ಬೆಲೆ ನಿರ್ಧಾರವಾಗುತ್ತದೆ. ಒಟ್ಟಾರೆ ಪೂರೈಕೆಯು ವಸ್ತುಗಳ ಬೆಲೆ ನಿರ್ಧಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

ಪೂರೈಕೆಯ ಅರ್ಥ (Meaning of Supply): ಸಾಮಾನ್ಯ ಅರ್ಥದಲ್ಲಿ ಪೂರೈಕೆ ಎಂದರೆ ಉತ್ಪಾದಕರು ಮತ್ತು ಮಾರುವವರ ಬಳಿ ಲಭ್ಯವಿರುವ ವಸ್ತುಗಳ ಸಂಗ್ರಹವಾಗಿದೆ. ಆದರೆ ಅರ್ಥಶಾಸ್ತ್ರದಲ್ಲಿ ಪೂರೈಕೆ ಎಂಬ ಪದಕ್ಕೆ ವಿಶಿಷ್ಟವಾದ ಅರ್ಥವಿದೆ.

"ಒಂದು ನಿರ್ದಿಷ್ಟ ಅವಧಿಯಲ್ಲಿ ಮತ್ತು ಒಂದು ನಿರ್ದಿಷ್ಟ ಬೆಲೆಯಲ್ಲಿ ಮಾರಾಟಗಾರರು ಮಾರಾಟ ಮಾಡಲು ಮಾರುಕಟ್ಟೆಗೆ ತರಲಾಗಿರುವ ಸರಕುಗಳ ಪ್ರಮಾಣವನ್ನು ಪೂರೈಕೆ ಎನ್ನುತ್ತೇವೆ." ಆದುದರಿಂದ ಯಾವುದೊಂದು ವಸ್ತುವಿನ ಪೂರೈಕೆಯು ಅದರ ಬೆಲೆಯನ್ನು ಅವಲಂಬಿಸಿರುತ್ತದೆ. ವಸ್ತುವಿನ ಬೆಲೆಯು ಏರಿದಂತೆ ಪೂರೈಕೆಯು ಹೆಚ್ಚಾಗುತ್ತದೆ ಮತ್ತು ಬೆಲೆಯು ಕಡಿಮೆಯಾದಾಗ ಪೂರೈಕೆಯು ಕಡಿಮೆಯಾಗುತ್ತದೆ. ಬೇಡಿಕೆ ಮತ್ತು ಪೂರೈಕೆಯು ಒಂದು ನಿದಿಷ್ಟ ಅವಧಿಗೆ ಸಂಬಂಧಿಸಿರುತ್ತದೆ. ಒಟ್ಟಾರೆ ಪೂರೈಕೆಯು ಯಾವಾಗಲು ಒಂದು ನಿರ್ದಿಷ್ಟ ಬೆಲೆ ಮತ್ತು ಕಾಲಾವಧಿಗೆ ಸಂಬಂಧಿಸಿರುತ್ತದೆ(ಸದಾಶಿವಯ್ಯ ಎಚ್.ಎಂ., ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ, ೨೦೧೪, ಪು.೧೮೯).

ಸಮಾರೋಪ: ಸಾಮಾನ್ಯ ಪದ ಬಳಕೆ ಮತ್ತು ಅರ್ಥಶಾಸ್ತ್ರದಲ್ಲಿನ ಪದ ಬಳಕೆಯ ಪರಿಕಲ್ಪನೆ ಭಿನ್ನವಾಗಿರುತ್ತದೆ. ಅನೇಕ ಸಂದರ್ಭಗಳಲ್ಲಿ ಈ ಭಿನ್ನತೆಯನ್ನು ಗಮನಿಸದೇ ಸಾಮಾನ್ಯ ಅರ್ಥದಂತೆ ಅರ್ಥಶಾಸ್ತ್ರದ ಪಠ್ಯಸಾಮಗ್ರಿಗಳಲ್ಲಿ ಬಳಕೆಯಾಗುವ ಅಪಾಯವಿದೆ. ಆದ್ದರಿಂದ ಪೂರೈಕೆಯ ಪರಿಭಾಷೆಯ ಪಠ್ಯಗಳಲ್ಲಿ ರ್‍ಯಾಂಡ್‌ಂ ಆಗಿ ಆಯ್ಕೆ ಮಾಡಿದ ವಿವಿಧ ಪಠ್ಯ ಸಾಮಗ್ರಿಗಳ ಪರಿಶೀಲನೆ ಮಾಡಲಾಗುವುದು. ಯಾರು ಯಾರು ಹೇಗೆ ಭಾಷೆಯನ್ನು ಬಳಸಿದ್ದಾರೆಂಬುದನ್ನು ಪರಿಶೀಲನೆಯ ಪ್ರಯತ್ನವಿದು. ಈಗ ಅವುಗಳ ಪರಿಶೀಲನೆ ನಡೆಸೋಣ.

೧. "ಪೂರೈಕೆ: ಅವೆರಡೂ ನೇರ ಸಂಬಂಧವನ್ನು ಹೊಂದಿವೆ." ಈ ಪಠ್ಯಭಾಗವನ್ನು ಎಂ.ಎಸ್.ಬಾದಾಮಿಯವರು ಅರ್ಥಶಾಸ್ತ್ರವೆಂಬ ಪಠ್ಯಪುಸ್ತಕ ೧೯೬೬: ೧೦೪-೧೦೯ರಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಪಠ್ಯ ಭಾಗದಲ್ಲಿ ಪೂರೈಕೆಯ ಅರ್ಥ, ನಿಯಮ, ಪೂರೈಕೆ ಮತ್ತು ಸಂಗ್ರಹ, ಪೂರೈಕೆಯ ನಿರ್ಧರಿಸುವ ಸಂಗತಿಗಳು, ಪೂರೈಕೆಯ ಸ್ಥಿತಿಸ್ಥಾಪತ್ವ ಎನ್ನುವ ಅಂಶಗಳನ್ನು ಒಳಗೊಂಡಿದೆ. ಈ ಭಾಷಾಂತರ ಸರಳ ಭಾಷೆಯಲ್ಲಿದೆ. ಇದು ಕೋಷ್ಟಕ ಮತ್ತು ಒಂದು ರೇಖಾಚಿತ್ರವನ್ನು ಒಳಗೊಂಡಿದೆ. ಇದರಲ್ಲಿನ ವಿಶೇಷ ಪದಗಳಿವೆ.

'ಇತರ ಸಂಗತಿಗಳ ಸಮನಗಿದ್ದಾಗ', 'ಏಕವಚನ ಸ್ಥಿತಿಸ್ಥಾಪಕತ್ವ' ಇಂಥ ಪದಗಳನ್ನು ಗುರುತಿಸಬಹುದಾಗಿದೆ.

೨. "ಪೂರೈಕೆ ಮತ್ತು ಪೂರೈಕೆಯ ನಿಯಮ: ತಯಾರುತ್ತದೆ" ಎಂಬುದಾಗಿ ಕೆ.ಡಿ.ಬಸವಾರವರು ಅರ್ಥಶಾಸ್ತ್ರ ಪರಿಚಯ ೧೯೫೫, ೨೦೦೦: ೧೨೬-೧೩೨ರಲ್ಲಿ ಭಾಷಾಂತರ ಮಾಡಿರುತ್ತಾರೆ. ಪೂರೈಕೆಯ ಅರ್ಥವನ್ನು ಸಂಗ್ರಹ ಮತ್ತು ಪೂರೈಕೆಯ ನಡುವಿನ ಅಂತರ ಬಿಡಿಸುವ ಮೂಲ ಅರ್ಥ ನೀಡುವ ಪ್ರಯತ್ನ ಮಾಡಿದ್ದಾರೆ. ಪೂರೈಕೆಯ ನಿಯಮ, ಈ ನಿಯಮಕ್ಕೆ ಇರುವ ಅಪವಾದಗಳು, ಪೂರೈಕೆಯನ್ನು ನಿರ್ಧರಿಸುವ ಅಂಶಗಳು, ಪೂರೈಕೆಯ ಸ್ಥಿತಿಸ್ಥಾಪಕತ್ವ ಮತ್ತು ಅದರ ವಿಧಗಳನ್ನು ಇದು ಒಳಗೊಂಡಿದೆ. ಪೂರೈಕೆಯ ಪಟ್ಟಿ, ರೇಕಾಚಿತ್ರ ಮತ್ತು ಪೂರೈಕೆಯ ಸ್ಥಿತಿಸ್ಥಾಪಕತ್ವ ಐದು ವಿಧಗಳ ಅರ್ಥವನ್ನು ರೇಖಾ ನಕ್ಷೆಯ ಮೂಲಕ ಅನುವಾದಿಸಲಾಗಿದೆ. ಈ ಭಾಷಾಂತರದಲ್ಲಿ Individual supply schedule–ಮಾರಾಟಗಾರನೊಬ್ಬನ ಪೂರೈಕೆಯ ಪಟ್ಟಿ, Market supply schedule–ಪೇಟೆಯ ಪೂರೈಕೆಯ ಪಟ್ಟಿ, unit Elastic supply–ಸರಿಸಮಾನ ಸ್ಥಿತಿಸ್ಥಾಪಕತ್ವವಿರುವ ಪೂರೈಕೆ ಇತ್ಯಾದಿ ಪದಗಳ ಬಳಕೆಯಾಗಿದೆ.

೩. "ಉತ್ಪಾದನೆ-ಪೂರೈಕೆ: ಮಾರುಕಟ್ಟೆ ಪೂರೈಕೆ ಪಟ್ಟಿ ಸೂಚಿಸುತ್ತದೆ." ಅರ್ಥಶಾಸ್ತ್ರದ ಮೂಲ ಸಿದ್ಧಾಂತದ ಪುಟ ೭೮-೭೯ರಲ್ಲಿ ಜಿ.ಎನ್.ಕೆಂಪಯ್ಯ ಭಾಷಾಂತರ ಮಾಡಿರುತ್ತಾರೆ. ಪೂರೈಕೆಯ ಅರ್ಥ, ಬಿಂಬಕ, ನಿಯಮ, ಪಟ್ಟಿ, ಪೂರೈಕೆಯ ರೇಖೆ ಮತ್ತು ಪೂರೈಕೆಯ ಅಪವಾದಗಳನ್ನು ಈ ಪಠ್ಯ ಒಳಗೊಂಡಿದೆ. ಬಿಂಬಕದಲ್ಲಿ ಸೂತ್ರಗಳನ್ನು ಮತ್ತು ಇಂಗ್ಲಿಷಿನ ಸಂಕೇತಾಕ್ಷರಗಳನ್ನು ಬಳಸಲಾಗಿದೆ. ಅನುವಾದದ ಪ್ರಮಾಣ ಸಂಕ್ಷಿಪ್ತವಾಗಿದೆ.

೪. "ಪೂರೈಕೆ: ....ಸಂಗ್ರಹದಲ್ಲಿಡುವುದು ಸಾಧ್ಯವಿರುತ್ತದೆ" ಎಂಬುದು ಸಿ.ಕೆ.ರೇಣುಕಾರ್ಯ ಇವರು ಸಂಪಾದಿಸಿದ ಅರ್ಥಶಾಸ್ತ್ರ ೨೦೦೪: ೯೭-೧೦೧ರಲ್ಲಿ ಎಸ್.ಎನ್.ನಾಯಕ್‌ರವರು ಭಾಷಾಂತರಿಸಿದ ಪಠ್ಯ ಭಾಗವಾಗಿರುತ್ತದೆ. ಇಲ್ಲಿ ಪೀಠಿಕಾ ಭಾಗದಲ್ಲಿ ಸ್ವಲ್ಪ ಮಾಹಿತಿ ಇರುತ್ತದೆ. ಪೂರೈಕೆಯ ಅರ್ಥ, ಪೂರೈಕೆ ಮತ್ತು ಸಂಗ್ರಹ, ಪೂರೈಕೆಯ ಬಿಂಬಿಕ, ನಿಯಮ, ಅನುಸೂಚಿಗಳಿವೆ. ಒಂದು ಅನುಸೂಚಿ ಮತ್ತು ಅದಕ್ಕೆ ಸಂಬಂಧಿಸಿದ ರೇಖಾಚಿತ್ರವಿದೆ. 'ಮಾರಾಟ ಮಾಡಲು ಒದಗಿಸಿದ', 'ವಸ್ತುಗಳನ್ನು ಬೇಡುತ್ತಾರೆ' ಇಂಥ ವಿಶೇಷ ಪದಗಳ ಬಳಕೆ ಕಂಡುಬರುತ್ತದೆ.

೫. "ಪೂರೈಕೆ: .......ಅವುಗಳು ನಾಶವಾಗುತ್ತವೆ" ಎಂಬುದನ್ನು ಎಚ್.ಆರ್.ಕೃಷ್ಣಮೂರ್ತಿ ಹೊಸಬಿಂದು ಇವರು ಮೂಲ ಅರ್ಥಿಕ ಸಿದ್ಧಾಂತ(ಪು.೧೨೪-೧೨೭)ದಲ್ಲಿ ಭಾಷಾಂತರಿಸಿ

ದ್ದಾರೆ. ಇವರು ಪೂರೈಕೆಯ ಅರ್ಥ ತಿಳಿಸುವುದರೊಂದಿಗೆ ಪೂರೈಕೆಯ ವ್ಯಾಖ್ಯೆಗಳನ್ನು ಭಾಷಾಂತರಿಸಿದ್ದಾನೆ. ಪೂರೈಕೆ ಮತ್ತು ಸಂಗ್ರಹ ವಿವರವಾಗಿ ದೃಷ್ಟಾಂತದ ಮೂಲಕ ತಿಳಿಸಿದ್ದಾರೆ. ಬಿಂಬಕವನ್ನು ಒಂದು ಪೂರೈಕೆಯ ಸೂತ್ರದಲ್ಲಿ ಸಂಕೇತಾಕ್ಷರ ಕೊಟ್ಟು, ನಂತರ ಅವುಗಳ ವಿವರಣೆ ಇರುತ್ತದೆ. ಪೂರೈಕೆಯ ನಿಯಮವು ವಿಶ್ಲೇಷಣಾತ್ಮಕವಾಗಿದೆ. ಪೂರೈಕೆಯ ಅನುಸೂಚಿ ಮತ್ತು ರೇಖಾಚಿತ್ರಗಳು ಪೂರಕವಾಗಿವೆ. ಕಲ್ಪನೆಗಳು ನಂತರ ಪೂರೈಕೆ ನಿಯಮಕ್ಕೆ ಅಪವಾದಗಳು ವಿವರವಾಗಿವೆ. ಬಳಸಿದ ಭಾಷೆ ಗ್ರಾಂಥಿಕ ಭಾಷೆಯಾಗಿದೆ.

೬. "ಪೂರೈಕೆ: ....ಕಾಲಾವಧಿಗೆ ಸಂಬಂಧಿಸಿರುತ್ತದೆ." ಈ ಭಾಷಾಂತರ ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ ೨೦೧೪: ೧೮೯–೨೦೯ರಲ್ಲಿ ಎಚ್.ಎಂ.ಸದಾಶಿವಯ್ಯ ಇವರು ದಾಖಲಿಸಿರುತ್ತಾರೆ. ಈ ಪಠ್ಯದಲ್ಲಿ ಪೂರೈಕೆಯ ಅರ್ಥ, ಉದ್ಯಮ ಘಟಕದ ಪೂರೈಕೆ ರೇಖೆ, ಪೂರೈಕೆಯನ್ನು ನಿರ್ಧರಿಸುವ ಅಂಶಗಳು, ಪೂರೈಕೆಯ ಬಿಂಬಕ, ಅನುಸೂಚಿ, ನಿಯಮ, ಸ್ಥಿತಿಸ್ಥಾಪಕತ್ವ ಮತ್ತು ಅದರ ವಿಧಗಳು ಈ ಅಂಶಗಳು ಪಠ್ಯದಲ್ಲಿ ಅಡಕವಾಗಿವೆ. ಈ ಪಠ್ಯದ ಪ್ರಮಾಣವು ಪದವಿ ಹಂತದಲ್ಲಿದ್ದಂತೆ ಇದೆ. ವಿವಿಧ ರೇಖಾಚಿತ್ರಗಳು, ಅನುಸೂಚಿ, ಲೆಕ್ಕಾಚಾರಗಳು ಅಧಿಕವಾಗಿವೆ. ಗಣಿತದ ಬಳಕೆ ಅಧಿಕ ಪ್ರಮಾಣದಲ್ಲಿದೆ. ಸರಳ ಭಾಷೆ ಇದೆ.

೭. "ಪೂರೈಕೆಯ ವಿಶ್ಲೇಷಣೆ: ........ಟಿ.ವಿ.ಯು ಪೂರೈಕೆಯಾಗುತ್ತದೆ" ಎಂಬುದನ್ನು ಬಸವರಾಜ ಕುಮಾರ ಅವರು ಸೂಕ್ಷ್ಮ ಅರ್ಥಶಾಸ್ತ್ರ ೨೦೧೩: ೨೩೮–೨೫೭ರ ಪಠ್ಯಪುಸ್ತಕದಲ್ಲಿ ಭಾಷಾಂತರಿಸಿದ್ದಾರೆ. ಪೀಠಿಕೆಯಲ್ಲಿ ವ್ಯಾಖ್ಯೆಗಳನ್ನು ತಿಳಿಸುವ ಮೂಲಕ ಅರ್ಥ ಹೇಳಿದ್ದಾರೆ. ಪೂರೈಕೆ ಮತ್ತು ಸಂಗ್ರಹ, ನಿಯಮ, ಅನುಸೂಚಿ, ಅಪವಾದಗಳು, ಪೂರೈಕೆಯಲ್ಲಿನ ಬದಲಾವಣೆ, ಪೂರೈಕೆಯನ್ನು ನಿರ್ಧರಿಸುವ ಅಂಶಗಳು, ಪೂರೈಕೆಯ ಸ್ಥಿತಿಸ್ಥಾಪಕತ್ವ ಮತ್ತು ಅದರ ವಿಧಗಳು, ಪೂರೈಕೆಯ ಸ್ಥಿತಿಸ್ಥಾಪಕತ್ವವನ್ನು ನಿರ್ಧರಿಸುವ ಅಂಶಗಳು, ಈ ಪಠ್ಯದಲ್ಲಿ ಬಳಸಿದ ಭಾಷೆಯು ಸರಳವಾದದ್ದಾಗಿದೆ. ಇದು ಪದವಿ ಹಂತದ ಪಠ್ಯವಾದ ಕಾರಣ ಇನ್ನಷ್ಟು ಮಾಹಿತಿ ಪೂರೈಸಿದ್ದರೆ ಅಧ್ಯಯನಕಾರರಿಗೆ ಉಪಯುಕ್ತ ಮತ್ತು ಜ್ಞಾನದಾಯಕವಾಗುತ್ತಿತ್ತು. ಪೂರೈಕೆಯ ಸ್ಥಿತಿಸ್ಥಾಪಕತ್ವವನ್ನು ನಿರ್ಧರಿಸುವ ಅಂಶಗಳು ವಿವರವಾಗಿ ನೀಡಿದ್ದಾರೆ.

೮. "ಪೀಠಿಕೆ: ...ವಸ್ತುವಿನ ನಿರ್ದಿಷ್ಟ ಪ್ರಮಾಣವಾಗಿದೆ." ಈ ಪಠ್ಯಭಾಗದ ಭಾಷಾಂತರವನ್ನು ಟಿ.ಆರ್.ಗುರುಬಸಪ್ಪ ಮತ್ತು ಮಲ್ಲೇಶಪ್ಪ ಕುಂಬಾರ ಇವರು ಸೂಕ್ಷ್ಮ ಅರ್ಥಶಾಸ್ತ್ರ-೧(ಪು.೨೨೯–೨೬೦)ರಲ್ಲಿ ದಾಖಲು ಮಾಡಿರುತ್ತಾರೆ. ಈ ಪಠ್ಯದ ಭಾಷಾಂತರವು ಪೀಠಿಕೆ, ಅರ್ಥ, ಪಟ್ಟಿ, ನಿಯಮ, ಪೂರೈಕೆಯ ಬದಲಾವಣೆ, ಪೂರೈಕೆಯನ್ನು ನಿರ್ಧರಿಸುವ ಅಂಶಗಳು, ಪೂರೈಕೆಯ ಸ್ಥಿತಿಸ್ಥಾಪಕತ್ವ ಮತ್ತು ಅದರ ಪ್ರಕಾರಗಳು, ಪೂರೈಕೆ ಸ್ಥಿತಿಸ್ಥಾಪಕತ್ವವನ್ನು

ನಿರ್ಧರಿಸುವ ಅಂಶಗಳು, ಮಾರುಕಟ್ಟೆ ಸಮತೋಲನ ಎಂಬ ಅಂಶಗಳನ್ನು ಒಳಗೊಂಡಿದೆ. ಅಗತ್ಯವಿದ್ದೆಡೆ ಪಟ್ಟಿ ಮತ್ತು ರೇಖಾಚಿತ್ರಗಳನ್ನು ಬಳಸಲಾಗಿದೆ. ಪಾರಿಭಾಷಿಕ ಪದಗಳ ಮುಂದೆ ಆವರಣದಲ್ಲಿ ಇಂಗ್ಲಿಷ್ ಪದ ನೀಡಿರುವುದು ಸೂಕ್ತವಾಗಿದೆ. ವಿಷಯ ವಿಶ್ಲೇಷಣೆ ಇನ್ನಷ್ಟು ವಿಸ್ತಾರವಾಗಬೇಕಿತ್ತು. ಭಾಷೆ ಸರಳವಾಗಿದೆ.

**೩.೬. ಕೃಷಿ(Agriculture)**

ಸ್ವಾತಂತ್ರ್ಯಕ್ಕಿಂತ ಮೊದಲು ಗೇಣಿದಾರರಿಗೆ ತಾವು ಉಪಜೀವನಕ್ಕಾಗಿ ಉಳುವ ಭೂಮಿಯಲ್ಲಿ ಸ್ಥಿರವಾಗಿ ನೆಲೆಸಲು ಯಾವುದೇ ರಕ್ಷಣೆಯಿರಲಿಲ್ಲ. ಹೊಲದೊಡೆಯರು ತಮಗೆ ಸರಿಬರದಾಗ, ಒಬ್ಬ ರೈತನನ್ನು ಬಿಡಿಸಿ ಮತ್ತೊಬ್ಬನಿಗೆ ಭೂಮಿಯನ್ನು ಸಾಗುವಳಿಗಾಗಿ ಕೊಡುತ್ತಿದ್ದರು. ರೈತರಿಂದ ತೆಗುದುಕೊಳ್ಳುವ ಗೇಣಿಯಾದರೂ ನ್ಯಾಯಸಮ್ಮತವಾಗಿರಲಿಲ್ಲ. ರೈತರು ತಾವು ಉಳುವ ಭೂಮಿಯಲ್ಲಿ ಯಾವುದೇ ಸುಧಾರಣೆಗಳನ್ನು ಕೈಗೊಂಡರೆ, ಅದಕ್ಕೆ ಪರಿಹಾರ ದೊರೆಯುತ್ತಿರಲಿಲ್ಲ. ಈ ಎಲ್ಲ ಅನ್ಯಾಯಗಳನ್ನು ತೊಡೆದುಹಾಕಲು ಅನೇಕ ರಾಜ್ಯಗಳಲ್ಲಿ ಕಾನೂನುಗಳನ್ನು ಜಾರಿಗೊಳಿಸಲಾಯಿತು. ಮೊದಲನೆಯ ಯೋಜನೆಯಲ್ಲಿ ಗೇಣಿಯ ದರವನ್ನು ಒಟ್ಟು ಹುಟ್ಟುವಳಿಯ ೧/೩ ಇಲ್ಲವೆ ೧/೪ಕ್ಕೆ ನಿಗದಿಗೊಳಿಸಲಾಯಿತು. ದ್ವಿತೀಯ ಯೋಜನೆಯಲ್ಲಿ ಭೂಸುಧಾರಣೆಗಳನ್ನು ತೀವ್ರಗತಿಯಿಂದ ಕಾರ್ಯಗತಗೊಳಿಸಲಾಯಿತು. ಯೋಜನಾವಧಿಯಲ್ಲಿ ಸಣ್ಣಪುಟ್ಟ ಹಿಡುವಳಿಗಳ ಕ್ರೋಢೀಕರಣ ಕಾರ್ಯವು ರಭಸದಿಂದ ನಡೆಯಿತೆನ್ನಬಹುದು. ಕೆಲವು ರಾಜ್ಯಗಳಲ್ಲಿ ಹಿಡುವಳಿಗಳ ಪುನರ್‌ವಿಭಜನೆ ಇಲ್ಲವೆ ಛಿದ್ರೀಕರಣವನ್ನು ತಡೆಹಿಡಿಯಲಾಯಿತು. ಮೊದಲನೆಯ ಹಾಗೂ ಎರಡನೆಯ ಯೋಜನೆಗಳ ಅವಧಿಯಲ್ಲಿ ೩೬೦ ಲಕ್ಷ ಎಕರೆ ಭೂಮಿಯನ್ನು ಕ್ರೋಡೀಕರಿಸಲಾಯಿತು. ಈ ಕಾರ್ಯ ತೃತೀಯ ಯೋಜನೆಯಲ್ಲಿ ಮುಂದುವರಿಯಿತು. ಸಹಕಾರೀ ಬೇಸಾಯ ಪದ್ಧತಿಯಿಂದ ಹಿಡುವಳಿಗಳ ಛಿದ್ರೀಕರಣವನ್ನು ತಡೆಯಬಹುದಾಗಿದೆ. ಆಹಾರಧಾನ್ಯಗಳ ಮತ್ತು ಕಚ್ಚಾ ಸರಕುಗಳ ಅಧಿಕ ಉತ್ಪಾದನೆಗೆ ಹಿಡುವಳಿಗಳು ವಿಶಾಲವಾಗಿರಬೇಕೆಂಬುದು ಸರ್ವಸಮ್ಮತವಾದ ಸಂಗತಿ. ಹಿಡುವಳಿಗಳು ವಿಶಾಲವಾದರೆ ಯಾಂತ್ರೀಕರಣ ಸಾಧ್ಯವಾಗುತ್ತದೆ. ಸಹಕಾರೀ ಬೇಸಾಯ ಪದ್ಧತಿಯಲ್ಲಿ ಎಲ್ಲ ಭೂಮಾಲಿಕರು ಸೇರಿ, ಭೂಸಾಗುವಳಿಯನ್ನು ಮಾಡುವರು. ವೈಯಕ್ತಿಕ ಭೂ ಒಡೆತನಕ್ಕೆ ಯಾವುದೇ ಧಕ್ಕೆ ಬರುವುದಿಲ್ಲ. ಸಾಗುವಳಿಯ ಉತ್ಪನ್ನವನ್ನು ಭೂಮಿಯ ಆಕಾರ ಮತ್ತು ಮೌಲ್ಯಗಳಿಗನುಗುಣವಾಗಿ ವಿತರಣೆ ಮಾಡಲಾಗುತ್ತದೆ. ಸದಸ್ಯರಿಂದ ಚುನಾಯಿಸಲ್ಪಟ್ಟ ಸಮಿತಿಯು ಸಾಗುವಳಿಯ ಆಡಳಿತವನ್ನು ನಿರ್ವಹಿಸುತ್ತದೆ. ಭಾರತದಲ್ಲಿ ಈ ಪದ್ಧತಿಯು ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಹೆಚ್ಚು ಅನುಕೂಲವಾಗಿರುವುದೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಸಹಕಾರೀ ಬೇಸಾಯದ ಮಹತ್ವವನ್ನು ರೈತರಿಗೆ ತಿಳಿಸುವ ಕಾರ್ಯವನ್ನು ಪಂಚಾಯಿತಿ ರಾಜ್ಯ ಸಂಸ್ಥೆಗಳಿಗೆ ವಹಿಸಿಕೊಡಲಾಗಿದೆ.

ಕೃಷಿಯ ಉತ್ಪಾದನೆ : ಕೃಷಿಯ ಉತ್ಪಾದನೆ ಒಕ್ಕಲಿಗರು ಉಪಯೋಗಿಸುವ ಬೀಜಗಳು, ಗೊಬ್ಬರ, ಸಲಕರಣೆ ಮೊದಲಾದವುಗಳನ್ನವಲಂಬಿಸಿದೆ. ಇಂದು ದೇಶದಲ್ಲಿ 'ಹಸಿರು ಕ್ರಾಂತಿ'

ಚಳುವಳಿಯು ವ್ಯಾಪಕವಾಗಿದೆ. ಆಹಾರಧಾನ್ಯ ಮತ್ತು ಸರಕುಗಳ ಕೊರತೆಯನ್ನು ನೀಗಿ ದೇಶವನ್ನು ಸ್ವಯಂಪೂರ್ಣತೆಯತ್ತ ಸಾಗಿಸುವುದು ಆದ್ಯಕರ್ತವ್ಯವಾಗಿದೆ. ಈ ಗುರಿಯ ಯಶಸ್ವಿಗಾಗಿ ಸರಕಾರ ಮತ್ತು ಜನತೆಯಲ್ಲಿ ಸಹಕಾರ ಅತ್ಯಗತ್ಯ. ಹಸಿರುಕ್ರಾಂತಿಯ ಯಶಸ್ಸಿಗಾಗಿ ಕೃಷಿ ಸಂಶೋಧನಾ ಸಂಸ್ಥೆ ಮತ್ತು ಕೃಷಿ ವಿಜ್ಞಾನ ವಿಶ್ವವಿದ್ಯಾಲಯಗಳು ತುಂಬಾ ಶ್ರಮಿಸುತ್ತಿವೆ. ಸುಧಾರಿತ ಬೀಜ, ರಾಸಾಯನಿಕ ಗೊಬ್ಬರಗಳ ಉಪಯೋಗವನ್ನು ರೈತರಿಗೆ ತಿಳಿಸಿಕೊಡಲಾಗುತ್ತಿದೆ. ಸುಧಾರಿತ ತಳಿಗಳ ಸಹಾಯದಿಂದ ವರ್ಷದಲ್ಲಿ ೩ ಇಲ್ಲವೆ ೪ ಸಲ ಬೆಳೆಗಳನ್ನು ತೆಗೆದುಕೊಳ್ಳಬಹುದಾಗಿದೆ. ಸರಕಾರವು ದೇಶದಾದ್ಯಂತ ಟ್ರ್ಯಾಕ್ಟರ ಕೇಂದ್ರಗಳನ್ನು ಸ್ಥಾಪಿಸಿ, ರೈತರಿಗೆ ಆಧುನಿಕ ಸಲಕರಣೆಗಳನ್ನು ಒದಗಿಸುತ್ತಿದೆ. ಬೆಳೆಗಳ ರೋಗ ನಿವಾರಣೆಗಾಗಿ ಔಷಧಗಳನ್ನು ಸಿಂಪಡಿಸುವ ಕಾರ್ಯವು ಕೂಡ ಭರದಿಂದ ಸಾಗುತ್ತಿದೆ. ರೈತರು ಹೊಸಬೇಸಾಯ ವಿಧಾನಗಳ ಬಗ್ಗೆ ಇಂದು ಜಾಗೃತರಾಗಿದ್ದಾರೆ. ರಾಸಾಯನಿಕ ಗೊಬ್ಬರದ ಉಪಯೋಗ ನಾಲ್ಕನೆಯ ಯೋಜನೆಯ ಕೊನೆಗೆ ೩.೭೦ ದಶ ಲಕ್ಷ ಟನ್ನುಗಳಿಗೆ ಮಿಕ್ಕಬಹುದಾಗಿದೆ. ಕ್ರಿಮಿನಾಶಕ ಔಷಧಗಳನ್ನು ಬೆಳೆಗಳಿಗೆ ಸಿಂಪಡಿಸುವ ಕಾರ್ಯ ಸಂಚಾರಿ ವಾಹನಗಳ ಮೂಲಕ ಸಾಗುತ್ತಿದೆ. ಯಾಂತ್ರಿಕ ಸಲಕರಣೆಗಳ ಉಪಯೋಗವೂ ದಿನೇ ದಿನೇ ಹೆಚ್ಚುತ್ತಿದೆ. ಟ್ರಾಕ್ಟರುಗಳಿಗೆ ಇಂದು ೭೦,೦೦೦ ದಷ್ಟು ಬೇಡಿಕೆ ಇದೆ. ೧೯೭೩–೭೪ರ ಕೊನೆಗೆ ಈ ಬೇಡಿಕೆಯ ಮಟ್ಟ ೯೦,೦೦೦ಕ್ಕೆ ಮಿಕ್ಕಬಹುದಾಗಿದೆ. ಕೃಷಿಗೆ ಬೇಕಾದ ಸಲಕರಣೆಗಳನ್ನು ಉತ್ಪಾದಿಸುವ ಸಂಸ್ಥೆಗಳು ಅನೇಕ ರಾಜ್ಯಗಳಲ್ಲಿ ಸ್ಥಾಪಿಸಲ್ಪಟ್ಟಿವೆ. ಅಲ್ಲಲ್ಲಿ ಪ್ರಯೋಗಗಳ ಮೂಲಕ ರೈತರಿಗೆ ಹೊಸವಿಧಾನಗಳ ಉಪಯೋಗದ ಬಗ್ಗೆ ತರಬೇತಿ ಶಿಕ್ಷಣವನ್ನೀಯಲಾಗುತ್ತಿದೆ.

ಆರ್ಥಿಕ ಪ್ರಗತಿಗೆ ಕೃಷಿ ಅಭಿವೃದ್ಧಿ ಅಗತ್ಯ: ದೇಶದ ಎಲ್ಲ ಆರ್ಥಿಕ ಚಟುವಟಿಕೆಗಳು ಪರೋಕ್ಷ ಹಾಗೂ ಅಪರೋಕ್ಷವಾಗಿ ಕೃಷಿ ರಂಗಕ್ಕೆ ಕೇಂದ್ರೀಕೃತಗೊಂಡಿದ್ದರಿಂದ ಆರ್ಥಿಕ ಪ್ರಗತಿಗೆ ಕೃಷಿ ಅಭಿವೃದ್ಧಿಯು ಅಗತ್ಯವಾಗಿದೆ. ಸರಕಾರದ ಹಣಕಾಸಿನ ಸ್ಥಿತಿ–ಗತಿಗಳು ಕೃಷಿಯನ್ನವಲಂಬಿಸಿವೆಯಲ್ಲದೆ ಕೃಷಿಯ ವ್ಯಾಪಾರ, ಸಾರಿಗೆ–ಸಂಪರ್ಕ, ಬ್ಯಾಂಕು ಮತ್ತು ವಾಣಿಜ್ಯ ಮುಂತಾದ ತೃತೀಯ ವಲಯದ ಚಟುವಟಿಕೆಗಳಿಗೆ ಮೂಲ ಆಧಾರವಾಗಿದೆ. ಉದ್ದಿಮೆ ಸರಕುಗಳಿಗೆ ಕೃಷಿ ವಲಯವು ಒಳ್ಳೆಯ ಮಾರುಕಟ್ಟೆಯಾಗಿದೆ. ಕೃಷಿಕರು ಗ್ರಾಹಕರ ವಸ್ತುಗಳನ್ನು ಕೃಷಿ ಸಲುವಳಿ ಮತ್ತು ಇತರ ಸಾಮಾನುಗಳನ್ನು ಕೊಳ್ಳುವದರಿಂದ ಅಂಥ ಉದ್ದಿಮೆಗಳಿಗೆ ಪ್ರೋತ್ಸಾಹ ಸಿಕ್ಕು ಅವು ತೀವ್ರಗತಿಯಿಂದ ಬೆಳೆಯುತ್ತವೆ. ದೇಶದ ಆರ್ಥಿಕ ದೃಷ್ಟಿಯಿಂದ ಕೃಷಿಯನ್ನು ಸುಧಾರಿಸಿ ರೈತರ ಉತ್ಪನ್ನವನ್ನು ಹೆಚ್ಚಿಸಬೇಕು. ಇದರಿಂದ ಉದ್ದಿಮೆ ಸರಕುಗಳಿಗೆ ಬೇಡಿಕೆ ಹೆಚ್ಚಾಗಿ ಉದ್ಯಮೀಕರಣವು ತ್ವರಿತಗೊಳ್ಳುವುದು. ಕೃಷಿಯನ್ನು ಸುಧಾರಿಸದಿದ್ದರೆ ಔದ್ಯೋಗಿಕ ವಿಕಾಸವು ಸ್ಥಿರಗೊಳ್ಳಲಾರದು. ಪ್ರೊ. ಆರ್ಥರ್ ಲೇವಿಸ್ ಅವರು "ಯಾವುದೇ ರಾಷ್ಟ್ರವು ಆರ್ಥಿಕ ರಂಗದಲ್ಲಿ ಪ್ರಗತಿಯನ್ನು ಹೊಂದಬೇಕಾದರೆ ವ್ಯವಸಾಯ ಭದ್ರ ಬುನಾದಿಯಿರಬೇಕಾಗುತ್ತದೆ" ಎಂದು ಹೇಳುವ ಅಭಿಪ್ರಾಯ ನಿರ್ವಿವಾದ ಸಂಗತಿಯಾಗಿದೆ.

ಹೀಗೆ ಕೃಷಿಯು ರಾಷ್ಟ್ರೀಯ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದರೂ ಅದು ಕುಗ್ಗಿದ ಉದ್ದಿಮೆಯಾಗಿ ಪರಿಣಮಿಸಿದೆ. ಒಟ್ಟು ಜನಸಂಖ್ಯೆಯ ಶೇಕಡಾ ೭೦ ರಷ್ಟು ಜನರು ಕೃಷಿಯನ್ನವಲಂಬಿಸಿದ್ದರೂ ಆಹಾರ ವಿಷಯದಲ್ಲಿ ಇನ್ನೂ ಸ್ವಾವಲಂಬನೆ ಸಾಧಿಸಲಾಗಿಲ್ಲ. ಕೃಷಿಕನು ಬಡತನದಲ್ಲಿ ನರಳುತ್ತಿದ್ದಾನೆ. ಅವನ ಬಡತನಕ್ಕೆ ಕೃಷಿಯು ಮೂಲ ಕಾರಣವಾಗಿರದೆ ಕೃಷಿಯನ್ನು ಯಾಂತ್ರೀಕೃತ ಪದ್ಧತಿಗೆ ಅಳವಡಿಸದಿರುವುದೇ ಮುಖ್ಯ ಕಾರಣವಾಗಿದೆ. ಯೋಜನೆಗಳಲ್ಲಿ ಉದ್ದಿಮೆಗಳ ಅಭಿವೃದ್ಧಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು, ಸಮತೋಲನಾಭಿವೃದ್ಧಿಯನ್ನು ಕಡೆಗಣಿಸಿದ್ದರಿಂದ ಕೃಷಿ ರಂಗಕ್ಕೆ ಸಾಕಷ್ಟು ಗಮನ ಕೊಡುತ್ತಿಲ್ಲ. ಕೃಷಿಕರಿಗೆ ಯಂತ್ರೋಪಕರಣ ಅಧಿಕ ಇಳುವರಿ ನೀಡುವ ಬಿತ್ತನೆ ಬೀಜ, ಕೀಟನಾಶಕ, ರಾಸಾಯನಿಕ ಗೊಬ್ಬರ ಮತ್ತು ನೀರಾವರಿ ಮುಂತಾದ ಕೃಷಿ ಸಲುವಳಿ ಸೌಲಭ್ಯ ಸಕಾಲಕ್ಕೆ ಒದಗಿಸದೇ ಇರುವುದರಿಂದ ಕೃಷಿ ಉದ್ದಿಮೆ ಲಾಭದಾಯಕವಾಗಿ ಪರಿಣಮಿಸಿಲ್ಲ.

ರಾಷ್ಟ್ರದ ಆರ್ಥಿಕ ಜೀವನವನ್ನು ಸುಧಾರಿಸಬೇಕಾದರೆ ಕೃಷಿ ವಲಯವನ್ನು ಪುನರ್ಘಟಿಸಬೇಕು. ಪ್ರೊ. ರ್‍ಯಾಗ್ನರ್ ನರ್ಕ್ಸ್ ಅವರ ಅಭಿಪ್ರಾಯದಂತೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಬೇಕಾದರೆ ಕೃಷಿ ವಲಯದಲ್ಲಿದ್ದ ತಲೆ ಮರೆಸಿದ ನಿರುದ್ಯೋಗ (Disguised Unemployment) ಸಮಸ್ಯೆಯನ್ನು ಬಗೆಹರಿಸಬೇಕು. ಹೆಚ್ಚು ಹೆಚ್ಚು ಪೂರಕ ಉದ್ದಿಮೆಗಳನ್ನು ಸ್ಥಾಪಿಸಿ ಕೃಷಿಯಲ್ಲಿ ತೊಡಗಿದ ಹೆಚ್ಚುವರಿ (Surplus) ಶ್ರಮಿಕರಿಗೆ ಉದ್ಯೋಗಾವಕಾಶ ಕಲ್ಪಿಸಿ ಕೊಟ್ಟಿದ್ದಾದರೆ, ಔದ್ಯೋಗೀಕರಣವಾದಂತೆ ಕೃಷಿಯಲ್ಲಿಯೂ ಕ್ರಾಂತಿಯಾಗಲು ಸಾಧ್ಯವಿದೆ. ತತ್ಪರಿಣಾಮವಾಗಿ ಉದ್ದಿಮೆ ಹಾಗೂ ಕೃಷಿ ರಂಗಗಳು ಅಭಿವೃದ್ಧಿ ಜೊತೆ ಜೊತೆಯಾಗಿ ಸಾಗಿ ತೀವ್ರ ಆರ್ಥಿಕ ಪ್ರಗತಿಯಾಗುವುದು. ಕೃಷಿ ಸುಧಾರಣೆಯು ಆರ್ಥಿಕ ಪ್ರಗತಿಯ ಒಂದು ಅಂಗವಾಗಿದೆ ಎಂಬುದು ನಿರ್ವಿವಾದ ಸಂಗತಿಯಾಗಿದೆ.

ಭಾರತದಲ್ಲಿ ಕೃಷಿ ಹಿಂದುಳಿಯಲು ಮುಖ್ಯ ಕಾರಣಗಳು: ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಆಹಾರೋತ್ಪಾದನೆ ಹೆಚ್ಚುವದರಲ್ಲಿ ರಾಷ್ಟ್ರದಲ್ಲಿಯ ಕೃಷಿ ಸಂಸೋಧನೆಯು ಮಹತ್ವದ ಕಾಣಿಕೆ ನೀಡಿದೆ. ಆದರೆ ಅತ್ಯಾಧುನಿಕ ಕೃಷಿ ತಾಂತ್ರಿಕ ವಿಧಾನದ ಅಳವಡಿಕೆ ಹಾಗೂ ಹೆಚ್ಚು ಇಳುವರಿ ನೀಡುವ ಬಿತ್ತನೆ ಬೀಜಗಳ ಬಳಕೆಯು ಆಹಾರ ಧಾನ್ಯ ಮತ್ತು ಧಾನ್ಯೇತರ ವಸ್ತುಗಳ ಉತ್ಪಾದನೆಯಲ್ಲಿ ತೀವ್ರ ಅಸಮತೆಯನ್ನುಂಟು ಮಾಡಿದೆ. ತೀವ್ರ ಪ್ರಯತ್ನ ನಡೆಸಿದಾಗ್ಯೂ ಉಳುಮೆಯ ಕಾರ್ಯ ಸಮರ್ಥತೆಯು ಇನ್ನೂ ತೀರಾ ಕೆಳಮಟ್ಟದಲ್ಲಿದೆ ಎಂಬುದು ಸ್ವಾತಂತ್ರ್ಯಾನಂತರದೀಚೆಗೆ ನಡೆಸಿದ ಸಂಶೋಧನೆಯ ವಿಶ್ಲೇಷಣೆಯಿಂದ ಕಂಡುಬಂದಿದೆ. ಭಾರತದಲ್ಲಿ ಪ್ರತಿ ಎಕರೆವಾರು ಉತ್ಪಾದನೆಯು ಇತರ ರಾಷ್ಟ್ರಗಳ ಎಕರೆವಾರು ಉತ್ಪಾದನೆಗಿಂತ ತೀರ ಕಡಿಮೆಯಿರುತ್ತದೆ. ೧೯೦೧ರಿಂದ ೧೯೪೭ರಲ್ಲಿ ಕೃಷಿ ಹುಟ್ಟುವಳಿಗಳ ಉತ್ಪಾದನೆಯ ಸೂಚ್ಯಾಂಕ ೧೦೦ ರಿಂದ ೧೧೩ ರಷ್ಟಕ್ಕೆ ಏರಿತು. ಸ್ವಾತಂತ್ರ್ಯಾನಂತರದೀಚೆಗೆ "ಭಾರತೀಯ ಕೃಷಿ ಸಂಶೋಧನಾ ಮಂಡಳಿ" ಆಹಾರ ಧಾನ್ಯಗಳ ವಿಚಾರಣಾ ಸಮಿತಿ ಮತ್ತು ಡಾ. ರಾಂಗನೇಕರ ಅವರ ವರದಿಗಳನ್ವಯ ಪ್ರತಿ ಎಕರೆವಾರು ಕೃಷಿ ಉತ್ಪಾದನೆ ಕಡಿಮೆಯಾಗುತ್ತಿದೆ ಎಂದು ಕಂಡುಬಂದಿದೆ. ಇತ್ತೀಚೆಗೆ ಕೃಷಿ ಸುಧಾರಣೆಯ ಪ್ರಯತ್ನದ

ಫಲವಾಗಿ ೧೯೪೯-೫೦ ರಿಂದ ೧೯೭೦-೭೧ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ಶೇಕಡಾ ೪೬ರಷ್ಟು ಹೆಚ್ಚಾಯಿತು. ಈ ಭಾಗವನ್ನು ಐ.ಟಿ.ಹಟ್ಟಿಯವರು ಭಾರತೀಯ ಅರ್ಥಶಾಸ್ತ್ರ, ೧೯೭೬: ೧೦೧-೧೦೨ರಲ್ಲಿ ಭಾಷಾಂತರಿಸಿರುತ್ತಾರೆ.

ಭಾರತದ ಅರ್ಥವ್ಯವಸ್ಥೆಯನ್ನು ಮುಖ್ಯವಾಗಿ ಎರಡು ಕ್ಷೇತ್ರಗಳಾಗಿ ವಿಂಗಡಿಸಬಹುದು. ೧. ಕೃಷಿ ಕ್ಷೇತ್ರ ೨. ಕೈಗಾರಿಕಾ ಕ್ಷೇತ್ರ

ಭಾರತದ ಆರ್ಥಿಕ ಜೀವನದಲ್ಲಿ ಕೃಷಿಯ ಮಹತ್ವ : ಭಾರತದ ಅರ್ಥ ವ್ಯವಸ್ಥೆಯನ್ನು ಕೃಷಿಯ ಅರ್ಥವ್ಯವಸ್ಥೆ ಎಂದು ಹೇಳಬಹುದು. ಭಾರತ ಕೃಷಿ ಪ್ರಧಾನ ದೇಶ. ಬಹಳ ಹಿಂದಿನಿಂದಲೂ ಕೃಷಿ ನಮ್ಮ ದೇಶದ ಜನರ ಪ್ರಧಾನ ಉದ್ದಿಮೆಯಾಗಿದೆ. ಕೃಷಿಯು ಮಾನವನ ಅತಿ ಪುರಾತನ ಉದ್ಯೋಗ. ಸುಮಾರು ೮೦೦೦ ವರ್ಷಗಳಷ್ಟು ಹಿಂದೆಯೇ ಮಾನವ ಕೃಷಿಯನ್ನು ಪ್ರಾರಂಭಿಸಿದ್ದ. ಮಣ್ಣಿನಲ್ಲಿ ಕೆಲಸ ಮಾಡಿ ದಿನ ಕಳೆಯುತ್ತಿದ್ದ ಮನುಷ್ಯನಿಗೆ ಆಗ ಕೃಷಿ ಒಂದು ಜೀವನ ಕ್ರಮವೇ ಆಗಿತ್ತು. ಇಂದಿಗೂ ನಮ್ಮ ದೇಶದಲ್ಲಿ ಅದರ ಸ್ಥಾನ ಕಡಿಮೆಯಾಗಿಲ್ಲ. ದೇಶದ ಆರ್ಥಿಕ ಪ್ರಗತಿಯಲ್ಲಿ ಕೃಷಿ ಮಹತ್ತರವಾದ ಸ್ಥಾನವನ್ನು ಹೊಂದಿದೆ. ಪ್ರತಿ ವರ್ಷವೂ ಅದು ಶೇಕಡ ೩೭ರಷ್ಟು ಆದಾಯವನ್ನು ರಾಷ್ಟ್ರದ ಬೊಕ್ಕಸಕ್ಕೆ ನೀಡುತ್ತದೆ. ಅಮೆರಿಕ, ಇಂಗ್ಲೆಂಡ್ ಮುಂತಾದ ಮುಂದುವರಿದ ರಾಷ್ಟ್ರಗಳು ಕೈಗಾರಿಕೆಗಳನ್ನು ಹೆಚ್ಚಾಗಿ ಅವಲಂಬಿಸಿರುತ್ತವೆ. ಆದರೆ ಭಾರತದಲ್ಲಿ ಬಂಡವಾಳದ ಕೊರತೆ ತೀವ್ರವಿರುವುದರಿಂದ ಕೃಷಿಯೇ ನಮ್ಮ ದೇಶದ ಬೆನ್ನಲುಬಾಗಿದೆ. ಕೃಷಿಯನ್ನು ಕಡಿಮೆ ಬಂಡವಾಳದಿಂದ ಕೈಗೊಳ್ಳಬಹುದು. ಅದು ವ್ಯಕ್ತಿಯ ಜೀವನಕ್ಕೆ ದಾರಿಮಾಡಿಕೊಡುತ್ತದೆ. ಸ್ವಾತಂತ್ರ್ಯ ಮತ್ತು ಸಾಹಸಗಳನ್ನು ಬಯಸುವ ಮನೋವೃತ್ತಿ ಇರುವವರಿಗೆ ಕೃಷಿಗಿಂತಲೂ ಉತ್ತಮವಾದ ಉದ್ದಿಮೆ ಇನ್ನೊಂದಿಲ್ಲ. ಈ ಉದ್ದಿಮೆಯಿಂದ ಯಾರೊಬ್ಬರಿಗೂ ಹಿಂಸೆಯಾಗಲಿ, ಬದುಕಿನ ಏರುಪೇರುಗಳಾಗಲಿ, ವ್ಯಾಪಾರದ ಏರಿಳಿತಗಳಾಗಲೀ ಆಗುವುದಿಲ್ಲ. ಕೃಷಿಯನ್ನು ಬೇಸಾಯವೆಂದೂ, ಒಕ್ಕಲುತನವೆಂದೂ ಕರೆಯುವುದು ರೂಢಿ. ಕೃಷಿಯನ್ನು ಮೂಲಭೂತ ಕೈಗಾರಿಕೆ ಎಂದು ಹೇಳಬಹುದು. ಇದು ಎಲ್ಲಾ ಕ್ಷೇತ್ರಗಳ ಅಭಿವೃದ್ಧಿಗೂ ಪೂರಕವಾಗಿದೆ. ಇದರ ನೆರವಿನಿಂದಲೇ ಬಹಳಷ್ಟು ಕೈಗಾರಿಕೆಗಳು ನಡೆಯಲು ಸಾಧ್ಯ. ಕೃಷಿ ನಮ್ಮ ಅರ್ಥವ್ಯವಸ್ಥೆಯಲ್ಲಿ ಎಷ್ಟರ ಮಟ್ಟಿನ ಪ್ರಾಮುಖ್ಯತೆ ಪಡೆದಿದೆ ಎನ್ನುವುದು ಕೆಳಗಿನ ಅಂಶಗಳಿಂದ ಸ್ಪಷ್ಟವಾಗುತ್ತದೆ.

೧. ಆಹಾರದ ಪೂರೈಕೆ ೨. ಕಚ್ಚಾ ವಸ್ತುಗಳ ಪೂರೈಕೆ ೩. ಪ್ರಾಣಿಗಳಿಗೆ ಮೇವಿನ ಪೂರೈಕೆ ೪. ಸರಕಾರಕ್ಕೆ ಆದಾಯ ೫. ಆರ್ಥಿಕಾಭಿವೃದ್ಧಿ ೬. ಉದ್ಯೋಗದ ಪೂರೈಕೆ ೭. ರಾಷ್ಟ್ರ ರಕ್ಷಣೆ ಈ ವಿಚಾರವನ್ನು ಡಿ.ವೆಂಕಟರಾವ್ ಇವರು ೧೯೮೮ರಲ್ಲಿ ಭಾಷಾಂತರಿಸಿರುತ್ತಾರೆ.

**ಕೃಷಿ ಕ್ಷೇತ್ರ (Agriculture Sector) :** ಭಾರತದ ಅರ್ಥವ್ಯವಸ್ಥೆಯಲ್ಲಿ ಕೃಷಿ ಅತ್ಯಂತ ಪ್ರಮುಖ ಮತ್ತು ವ್ಯಾಪಕ ಕ್ಷೇತ್ರವಾಗಿದೆ. ಈ ಕ್ಷೇತ್ರ ಹಲವಾರು ಸಮಸ್ಯೆಗಳನ್ನು ಒಳಗೊಂಡಿದೆ. ಈ ಕ್ಷೇತ್ರದ ಬೆಳವಣಿಗೆಯಲ್ಲಿ ಅನೇಕ ಕಾರ್ಯಕ್ರಮಗಳು ಯಶಸ್ವಿಯಾಗಿವೆ, ಕೆಲವು ಸೋತಿವೆ. ಸ್ವಾತಂತ್ರ್ಯ

ಪೂರ್ವದಲ್ಲಿ ಕೃಷಿ ಸಂಬಂಧವಾಗಿ ಕೆಲವು ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದ್ದವು. ಯಂತ್ರಗಳನ್ನು ಬಳಸಲು ಪತ್ರಿಕೆಗಳಲ್ಲಿ ಪ್ರಚಾರ ನಡೆಯುತ್ತಿತ್ತು. ಕೃಷಿ ಸಾಲದ ಭಾರವನ್ನಿಳಿಸುವ ಕೆಲವು ಕಾಯಿದೆಗಳಾದವು. ಗ್ರಾಮೀಣ ಸಹಕಾರಿ ಸಂಘಗಳನ್ನು ರಚಿಸಲಾಯಿತು. ಕೆಲವು ನೀರಾವರಿ ಯೋಜನೆಗಳು ಕಾರ್ಯಗತವಾಗಿದ್ದವು. ಗ್ರಾಮೀಣ ಜನತೆಯೂ ಯಾಂತ್ರೀಕರಣ ಮತ್ತು ಹೊಸ ವಿಧಾನಗಳಿಗೆ ಕೂಡಲೇ ಮನವೊಲಿಯುವ ರೀತಿಯಲ್ಲಿರಲಿಲ್ಲ. ಸರ್ಕಾರಕ್ಕೂ ತೀವ್ರ ಉತ್ಕಟ ಉದ್ದೇಶಗಳಾಗಲೀ ಪ್ರಯತ್ನಗಳಾಗಲಿ ಬೇಕಿರಲಿಲ್ಲ. ಈ ಕಾರಣಗಳಿಂದ ಕೃಷಿ ಕ್ಷೇತ್ರದಲ್ಲಿ ಬೆಳವಣಿಗೆ ಆಗಿರಲಿಲ್ಲ. ಆದ್ದರಿಂದ ಕೃಷಿಯ ಸ್ಥಿತಿ ಅತ್ಯಂತ ಹೀನಮಟ್ಟಕ್ಕೆ ಇಳಿದಿತ್ತು.

ಕೃಷಿಯನ್ನು ಕುಟುಂಬದ ಅಗತ್ಯಗಳನ್ನು ಬೆಳೆದುಕೊಳ್ಳಲು ಮಾತ್ರ ಕೈಗೊಳ್ಳಲಾಗುತ್ತಿತ್ತು. ಮನೆ ಮಂದಿಗಾಗುವಷ್ಟು ಕಾಳುಕಡ್ಡಿ ಬೆಳೆದರೆ ಸಾಕೆಂಬ ಭಾವನೆಯಿತ್ತು. ಹೆಚ್ಚು ಬೆಳೆದು ಮಾರಬೇಕೆಂಬ ಇರಾದೆ ಇರಲಿಲ್ಲ. ಕೃಷಿ ಕ್ಷೇತ್ರದ ಉತ್ಪಾದಕತೆ ತುಂಬಾ ಕಡಿಮೆಯಿತ್ತು. ಭೂ ಹಿಡುವಳಿ ಅನಾರ್ಥಿಕವಾಗಿತ್ತು. ಛಿದ್ರ ಹಾಗೂ ಚೆಲ್ಲಾಪಿಲ್ಲಿಯಾದ ಭೂ ಹಿಡುವಳಿ ಸಾಮಾನ್ಯವಾಗಿತ್ತು. ಬೇಸಾಯಗಾರ ಒಡೆಯನಲ್ಲ, ಒಡೆಯ ಬೇಸಾಯಗಾರನಲ್ಲ ಎಂಬ ಸ್ಥಿತಿಯಿದ್ದು ಇವರಿಬ್ಬರ ನಡುವೆ ಭೂಮಿ ಸೊರಗಿತು, ಇಲ್ಲವೇ ಅತಿ ಶೋಷಣೆಗೆ ಒಳಗಾಯಿತು. ಭೂ ಹಿಡುವಳಿಗೆ ಮಿತಿಯಿಲ್ಲವಾಗಿ ಜಮೀನ್ದಾರಿ, ರೈತವಾರಿ, ಮಹಲ್ವಾರಿ ಪದ್ಧತಿಗಳು ವಿಜೃಂಭಿಸುತ್ತಿದ್ದವು. ಗೇಣಿದಾರರೂ ಭೂ ಮಾಲೀಕರೂ ಶೋಷಣೆಗೆ ಒಳಪಟ್ಟಿದ್ದರು.

ನೀರಾವರಿ ಸೌಲಭ್ಯ ಸಾಲದಾಗಿತ್ತು. ಬೀಜಗಳು ಉತ್ತಮ ದರ್ಜೆಯವಾಗಿರುತ್ತಿರಲಿಲ್ಲ. ಗೊಬ್ಬರಗಳೂ ಸಾಕಷ್ಟು ಪ್ರಮಾಣದಲ್ಲಿ ದೊರೆಯದೆ ರಸಗೊಬ್ಬರದ ಬಳಕೆ ತಿಳಿದಿರಲಿಲ್ಲ. ಕೀಟನಾಶಕದ ಬಳಕೆಯಿರಲಿಲ್ಲ. ಬೇಸಾಯದ ಉಪಕರಣಗಳು ದಕ್ಷವಾಗಿರಲಿಲ್ಲ. ವೈಜ್ಞಾನಿಕ ಕೃಷಿ, ಮಿಶ್ರತಳಿ, ಸಸ್ಯಸಂರಕ್ಷಣೆ, ಧಾನ್ಯ ಸಂಗ್ರಹ ಇವುಗಳ ಬಗ್ಗೆ ರೈತರು ತಿಳಿದಿರಲಿಲ್ಲ. ಈ ಭಾಗವನ್ನು ಡಿ.ಎಸ್.ಎನ್.ಮೂರ್ತಿಯವರು ಆಧುನಿಕ ಭಾರತದ ಆರ್ಥಿಕ ಸಮಸ್ಯೆಗಳು ೧೯೮೮:೧೩೮–೧೩೯ರಲ್ಲಿ ಅನುವಾದಿಸಿದ್ದಾರೆ.

ಕೃಷಿ (ವ್ಯವಸಾಯ) (Agriculture) : ಇತರ ಅಲ್ಪಾಭಿವೃದ್ಧಿ ದೇಶಗಳಂತೆ ಭಾರತವೂ ಕೃಷಿ ಪ್ರಧಾನವಾದ ದೇಶವಾಗಿದೆ. ಕೃಷಿಯು ಭಾರತದ ಆರ್ಥಿಕತೆಯ ಬೆನ್ನು ಮೂಳೆಯಂತಿದೆ. ಕೃಷಿಯು ಗ್ರಾಮೀಣ ಪ್ರದೇಶಗಳ ಆಧಾರಿತ ಕಸುಬಾಗಿದ್ದು ಭಾರತವು ಹಳ್ಳಿಗಳ ನಾಡಾಗಿದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭೪.೩ ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಮತ್ತು ಶೇ. ೬೯ರಷ್ಟು ಜನರು ತಮ್ಮ ಜೀವನ ನಿರ್ವಹಣೆಗಾಗಿ ನೇರವಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ. ಆದ್ದರಿಂದ 'ಭಾರತವು ಹಳ್ಳಿಗಳಲ್ಲಿ ವಾಸಿಸುತ್ತಿದೆ' (India lives in villages) ಎಂಬ ಮಾತು ಸುಸಂಬದ್ಧವೇ ಆಗಿದೆ. ಕೃಷಿಯು ಭಾರತದ ಆರ್ಥಿಕತೆಯ ಅತಿ ದೊಡ್ಡ ಹಾಗೂ ಪ್ರಮುಖವಾದ ಕ್ಷೇತ್ರವಾಗಿದೆ.

ಯಾವುದೇ ಆರ್ಥಿಕತೆಯನ್ನು ಮೂರು ವಿಶಾಲ ಗುಂಪುಗಳಾಗಿ ವಿಂಗಡಿಸಬಹುದು. ಅವೆಂದರೆ ೧. ಪ್ರಾಥಮಿಕ ವಲಯ (Primary Sector) ೨. ದ್ವಿತೀಯ ವಲಯ (Secondary Sector) ೩. ತೃತೀಯ ವಲಯ(Tertiary Sector). ಕೃಷಿಯು ಜೀವನಾಧಾರ ಕಸುಬಾಗಿರುವುದರಿಂದ ಅದು ಪ್ರಾಥಮಿಕ ವಲಯವೆಂದು ಪರಿಗಣಿಸಲ್ಪಟ್ಟಿದೆ. ಕೈಗಾರಿಕೆಯು ದ್ವಿತೀಯ ವಲಯವೆಂತಲೂ, ಸಾರಿಗೆ ಸಂಪರ್ಕ, ಹಣಕಾಸು ಮತ್ತು ಬ್ಯಾಂಕೋದ್ಯಮ ಮತ್ತು ಇತರ ಹಲವಾರು ಸೇವೆಗಳು ತೃತೀಯ ವಲಯವೆಂತಲೂ ಪರಿಗಣಿಸಲ್ಪಟ್ಟಿವೆ. ಮಾನವ ಜೀವನ ನಿರ್ವಹಣೆಗೆ ಅತ್ಯಗತ್ಯವಾದ ಆಹಾರವನ್ನು ಒದಗಿಸುವ ಮೂಲವಾಗಿರುವುದರಿಂದ ಕೃಷಿಯು ಮೂಲಾಧಾರ ಕಸುಬೆಂದು ಬಗೆಯಲ್ಪಟ್ಟಿದೆ. ಯಾವುದೇ ದೇಶವಾದರೂ ಕೃಷಿಯ ಅಭಿವೃದ್ಧಿಯ ಮೂಲಕವೇ ಇತರ ವಲಯಗಳ ಅಭಿವೃದ್ಧಿಗೆ ಮಾರ್ಗವನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಇಂದು ಅಭಿವೃದ್ಧಿ ಹೊಂದಿರುವ ದೇಶಗಳೆಲ್ಲವೂ ಒಂದು ಕಾಲದಲ್ಲಿ ಕೃಷಿ ಪ್ರಧಾನ ಆರ್ಥಿಕತೆಗಳೇ ಆಗಿದ್ದವು. ಕೃಷಿ ವಲಯದ ಅಭಿವೃದ್ಧಿಯ ಭದ್ರ ತಳಪಾಯದ ಮೇಲೆಯೇ ಕೈಗಾರಿಕೆ, ಸಾರಿಗೆ-ಸಂಪರ್ಕ ಮತ್ತು ಇತರ ವಲಯಗಳನ್ನು ಅಭಿವೃದ್ಧಿಪಡಿಸಬೇಕಾಗುತ್ತದೆ. ಪ್ರಾರಂಭದಲ್ಲಿ ಕೃಷಿಯ ಪ್ರಗತಿಯನ್ನು ನಿರ್ಲಕ್ಷಿಸಿದರೆ ಆರ್ಥಿಕಾಭಿವೃದ್ಧಿಗೆ ನೆಲೆಯೇ ಇರುವುದಿಲ್ಲ, ದಿಕ್ಕೇ ತೋರುವುದಿಲ್ಲ.

ಕೃಷಿ ಪ್ರಧಾನ ಆರ್ಥಿಕತೆಗಳನ್ನು ಹಿಂದುಳಿದ ದೇಶಗಳೆಂತಲೂ, ಕೈಗಾರಿಕಾಭಿವೃದ್ಧಿ ಸಾಧಿಸಿದ ಆರ್ಥಿಕತೆಗಳನ್ನು ಮುಂದುವರಿದ ದೇಶಗಳೆಂತಲೂ ಕರೆಯುವುದು ಆರ್ಥಿಕ ಸಾಹಿತ್ಯದಲ್ಲಿ ರೂಢಿಯಾಗಿದೆ. ಕೃಷಿ ಪ್ರಾಬಲ್ಯ ದೇಶವಾಗಿರುವ ಭಾರತವು ಈ ತಾತ್ವಿಕ ವಿಂಗಡಣೆಗೆ ಹೊರತಾಗಿಲ್ಲ. ಭಾರತವು ಅಭಿವೃದ್ಧಿ ಹೊಂದುತ್ತಿರುವ ದೇಶವಾಗಿದ್ದು ಹಿಂದುಳಿದ ದೇಶಗಳ ಸಾಲಿಗೆ ಸೇರಿದೆ. ಕಳೆದ ನಾಲ್ಕುವರಿ ದಶಕಗಳ ಅವಧಿಯಲ್ಲಿ ಕೈಗಾರಿಕೀಕರಣಕ್ಕಾಗಿ ನಡೆಸಿದ ಹಲವಾರು ಪ್ರಯತ್ನಗಳ ನಡುವೆಯೂ ಭಾರತವು ಇಂದು ಕೃಷಿ ಪ್ರಧಾನ ದೇಶವಾಗಿಯೇ ಉಳಿದಿದೆ. ಭಾರತದ ಆರ್ಥಿಕತೆಯಲ್ಲಿ ಕೃಷಿಯ ಪ್ರಾಮುಖ್ಯತೆಯನ್ನು ಈ ಕೆಳಗಿನ ಅಂಶಗಳ ಸಹಾಯದಿಂದ ವಿವರಿಸಬಹುದು.

೧. ಜೀವನೋಪಾಯದ ಮೂಲ ೨. ಉದ್ಯೋಗಾವಕಾಶಗಳ ಮೂಲ ೩. ರಾಷ್ಟ್ರೀಯ ಆದಾಯಕ್ಕೆ ಕೊಡುಗೆ ೪. ಕೈಗಾರಿಕೋತ್ಪನ್ನಗಳಿಗೆ ಮಾರುಕಟ್ಟೆ ೫. ಕೈಗಾರಿಕಾ ಹೂಡುವಳಿಗಳ ಮೂಲ ೬. ಸರಕಾರದ ವರಮಾನದ ಮೂಲ ೭. ರಫ್ತು ಗಳಿಕೆ ೮. ಸಾರಿಗೆ ವರಮಾನಕ್ಕೆ ಕೊಡುಗೆ ೯. ಬೆಲೆಯ ಸ್ಥಿಮಿತತೆಗೆ ನೆರವು ಎಂಬುದನ್ನು ಎಚ್.ಆರ್.ಕೃಷ್ಣೇಗೌಡ ಅವರು ೧೯೯೮:೭೫-೭೭ರಲ್ಲಿ ಭಾಷಾಂತರಿಸಿರುತ್ತಾರೆ.

ಕೃಷಿ ಮಾನವನ ಚಟುವಟಿಕೆಗಳಲ್ಲಿ ಬಹುಮುಖ್ಯವಾದ ಮತ್ತು ಅತ್ಯಂತ ಪುರಾತನವಾದ ಚಟುವಟಿಕೆಯಾಗಿದೆ. ಜಗತ್ತಿನ ಬಹುಜನರ ಜೀವನೋಪಾಯದ ಮಾರ್ಗವಾದ ಕೃಷಿ ಒಂದು ರೀತಿಯಲ್ಲಿ ಮಾನವ ಮತ್ತು ಪ್ರಕೃತಿಯ ನಡುವಿನ ಹೊಂದಾಣಿಕೆಯ ಕಸುಬು. ಏಕೆಂದರೆ, ಕೃಷಿ ಹೆಚ್ಚಾಗಿ ಪ್ರಕೃತಿಯನ್ನು ಅವಲಂಬಿಸಿರುತ್ತದೆ. ಯಾವುದೇ ದೇಶದ ಅಭಿವೃದ್ಧಿ ನೇರವಾಗಿ ಕೃಷಿಯನ್ನು

ಅವಲಂಬಿಸಿರುತ್ತದೆ. ಎಲ್ಲಾ ದೇಶಗಳೂ ಒಂದಲ್ಲ ಒಂದು ಹಂತದಲ್ಲಿ ಕೃಷಿ ಪ್ರಧಾನವಾದ ರಾಷ್ಟ್ರಗಳೇ ಆಗಿದ್ದವೆಂಬುದನ್ನು ಮನಗಾಣಬೇಕು.

**ಭಾರತದ ಅರ್ಥವ್ಯವಸ್ಥೆಯಲ್ಲಿ ಕೃಷಿ ಪ್ರಾಮುಖ್ಯತೆ (Importance of agriculture in Indian economy) :** ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿದ್ದು ಶೇಕಡ ೬೫ಕ್ಕಿಂತಲೂ ಅಧಿಕ ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಭಾರತದ ಆರ್ಥಿಕ ರಚನೆ ಕೃಷಿಯನ್ನು ಅವಲಂಬಿಸಿರುವುದರಿಂದ 'ಕೃಷಿ ಭಾರತದ ಆರ್ಥಿಕತೆಯ ಬೆನ್ನೆಲುಬು' ಎಂದು ಪರಿಗಣಿಸಲ್ಪಟ್ಟಿದೆ. ದೇಶದಲ್ಲಿ ಕೃಷಿ ಜೀವನಾಧಾರ ಕಸುಬಾಗಿರುವುದರಿಂದ ಅದನ್ನು 'ಪ್ರಾಥಮಿಕ ವಲಯ' ಎಂದೂ ಕರೆಯಲಾಗಿದೆ. ಭಾರತದ ಆರ್ಥಿಕತೆಯಲ್ಲಿ ಕೃಷಿಯ ಪ್ರಾಮುಖ್ಯತೆಯನ್ನು ಈ ಕೆಳಗಿನ ಅಂಶಗಳು ವಿವರಿಸುತ್ತವೆ.

೧. ರಾಷ್ಟ್ರಾದಾಯದಲ್ಲಿ ದೊಡ್ಡ ಪಾಲು (Greater share in national income) : ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಕೈಗಾರೀಕರಣಕ್ಕಾಗಿ ನಡೆಸಿದ ಹಲವಾರು ಪ್ರಯತ್ನಗಳ ನಡುವೆಯೂ ಭಾರತ ಇಂದಿಗೂ ಕೃಷಿ ಪ್ರಧಾನ ರಾಷ್ಟ್ರವಾಗಿಯೇ ಉಳಿದಿದೆ. ಅದು ರಾಷ್ಟ್ರಾದಾಯಕ್ಕೆ ಗಮನಾರ್ಹವಾದ ಕೊಡುಗೆ ಸಲ್ಲಿಸುತ್ತಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಕೃಷಿ ಒಟ್ಟು ದೇಶೀಯ ಉತ್ಪನ್ನದಲ್ಲಿ ಶೇಕಡ ೭೦ ಹಾಗೂ ೧೯೫೦-೫೧ರಲ್ಲಿ ಶೇಕಡ ೫೬.೫ರಷ್ಟು ಪಾಲನ್ನು ಹೊಂದಿತ್ತು. ಈ ಪ್ರಮಾಣ ೧೯೯೨-೯೩ರ ವೇಳೆಗೆ ಶೇಕಡಾ ೩೧.೯ ಮತ್ತು ಪ್ರಸ್ತುತ ಶೇಕಡಾ ೨೩ಕ್ಕೆ ಇಳಿದಿದೆಯಾದರೂ ಕೃಷಿ ಇಂದಿಗೂ ತನ್ನ ಪ್ರಾಮುಖ್ಯತೆ ಕಳೆದುಕೊಂಡಿಲ್ಲ.

೨. ಗರಿಷ್ಟ ಉದ್ಯೋಗ (Largest employment) : ಕೃಷಿ ಭಾರತದಲ್ಲಿ ಗರಿಷ್ಟ ಪ್ರಮಾಣದ ಉದ್ಯೋಗ ಒದಗಿಸುತ್ತಿರುವ ಕ್ಷೇತ್ರವಾಗಿದೆ. ಶೇಕಡ ೬೫ಕ್ಕಿಂತಲೂ ಅಧಿಕ ಸಂಖ್ಯೆಯ ಜನರು ಕೃಷಿ ಕಸುಬನ್ನು ಅವಲಂಬಿಸಿದ್ದು ಅದು ಬಹುಜನರ ಜೀವನಾಧಾರ ಕಸುಬಾಗಿ ಉಳಿದಿದೆ.

೩. ಆಹಾರ ಪೂರೈಕೆ (Supply of food) : ದೇಶದಲ್ಲಿ ಬೃಹದಾಕಾರವಾಗಿ ಬೆಳೆಯುತ್ತಿರುವ ಜನಸಂಖ್ಯೆಗೆ ಆಹಾರ ಪೂರೈಸುವ ಕೆಲಸವನ್ನು ಕೃಷಿ ಮಾಡುತ್ತಿದೆ. ೧೯೫೦-೫೧ರಲ್ಲಿ ೫೦.೨ ಮಿ. ಟನ್‌ಗಳಿದ್ದ ಆಹಾರ ಉತ್ಪಾದನೆ ೨೦೦೩-೦೪ರ ವೇಳೆಗೆ ೨೧೨.೨ ಮಿ. ಟನ್ನುಗಳಿಗೇರಿದ್ದು ಭಾರತ ಆಹಾರ ಉತ್ಪಾದನೆಯಲ್ಲಿ ಹೆಚ್ಚೂ ಕಡಿಮೆ ಸ್ವಾವಲಂಬನೆ ಸಾಧಿಸಿದೆ.

೪. ಕೈಗಾರಿಕಾಭಿವೃದ್ಧಿ (Industrial development) : ಭಾರತದಲ್ಲಿ ಕೃಷಿ ಕೈಗಾರಿಕಾಭಿವೃದ್ಧಿಗೆ ತನ್ನದೇ ಆದ ಕೊಡುಗೆಗಳನ್ನು ಸಲ್ಲಿಸುತ್ತಿದೆ. ಕೃಷಿ ಕೈಗಾರಿಕೆಗಳಲ್ಲಿ ಉದ್ಯೋಗ ನಿರತರಾಗಿರುವವರಿಗೆ ಆಹಾರ ಪೂರೈಸುವುದರ ಜೊತೆಗೆ ಕೈಗಾರಿಕಾ ಸರಕುಗಳಿಗೆ ಮಾರುಕಟ್ಟೆ ಒದಗಿಸುತ್ತಿದೆ. ಇಷ್ಟಲ್ಲದೆ ಹತ್ತಿಬಟ್ಟೆ, ಸೆಣಬು, ಸಕ್ಕರೆ, ವನಸ್ಪತಿ ಮುಂತಾದ ಕೈಗಾರಿಕೆಗಳಿಗೆ ಕಚ್ಚಾ ಸಾಮಗ್ರಿ ಪೂರೈಸುತ್ತಿದೆ. ಅನೇಕ ಕೃಷಿ ಆಧಾರಿತ (Agro-based) ಕೈಗಾರಿಕೆಗಳಿಗೆ ಕೃಷಿ ಜನ್ಮ ನೀಡಿದೆ.

೫. ವಿದೇಶಿ ವ್ಯಾಪಾರಕ್ಕೆ ಕೊಡುಗೆ (Contribution to foreign trade) : ಬಹಳ ಹಿಂದಿನಿಂದಲೂ ವಿದೇಶಿ ವ್ಯಾಪಾರ ಕ್ಷೇತ್ರಕ್ಕೆ ಕೃಷಿ ಕ್ಷೇತ್ರದ ಕೊಡುಗೆ ಅಪಾರವಾಗಿದೆ. ಕೃಷಿ ಸರಕುಗಳಾದ

ಹತ್ತಿಬಟ್ಟೆ, ಸೆಣಬು, ಕಾಫಿ, ಟೀ, ಗೋಡಂಬಿ, ತಂಬಾಕು, ವನಸ್ಪತಿ ಎಣ್ಣೆ, ಸಕ್ಕರೆ, ಸಾಂಬಾರ ಪದಾರ್ಥಗಳು ಮುಂತಾದವು ಒಂದು ಕಾಲದಲ್ಲಿ ಒಟ್ಟು ರಫ್ತು ಪ್ರಮಾಣದಲ್ಲಿ ಶೇಕಡಾ ೭೫ರಷ್ಟು ಪಾಲು ಹೊಂದಿದ್ದವು. ಇತ್ತೀಚಿನ ದಿನಗಳಲ್ಲಿ ಕೃಷಿ ಸಾಮಗ್ರಿಗಳ ಪಾಲು ಶೇಕಡ ೧೦ ಕ್ಕಿಂತಲೂ ಅಧಿಕವಿದ್ದು ಅದು ವಿದೇಶಿ ವಿನಿಮಯ ಗಳಿಕೆಯ ಪ್ರಮುಖ ಮೂಲವಾಗಿದೆ.

೬. ಸರ್ಕಾರಕ್ಕೆ ಆದಾಯ (Revenue to government) : ಕೃಷಿ ಸರ್ಕಾರಕ್ಕೆ ಆದಾಯ ತರುವ ಪ್ರಮುಖ ಮೂಲವಾಗಿದೆ. ಅದು ದೇಶದಲ್ಲಿನ ಅಧಿಕ ಸಂಖ್ಯೆಯ ಜನರ ತಲಾದಾಯ ಹೆಚ್ಚಿಸುವುದರ ಮೂಲಕ ಅವರ ತೆರಿಗೆ ಕಟ್ಟುವ ಸಾಮರ್ಥ್ಯವನ್ನು ವೃದ್ಧಿಗೊಳಿಸುತ್ತಿದೆ. ರಾಷ್ಟ್ರಾದಾಯಕ್ಕೆ ಕೃಷಿಯ ಕೊಡುಗೆ ಅಪಾರವಾಗಿದೆ.

೭. ಬಂಡವಾಳ ಸಂಚಯನದ ಮೂಲ (Source of capital formation) : ಭಾರತದಲ್ಲಿ ಕೃಷಿ ಬಂಡವಾಳ ಸಂಚಯನದ ಪ್ರತ್ಯಕ್ಷ ಮತ್ತು ಪರೋಕ್ಷ ಮೂಲವಾಗಿದೆ. ಅಧಿಕ ಸಂಖ್ಯೆಯ ಜನರು ಕೃಷಿಯನ್ನೇ ಅವಲಂಬಿಸಿರುವುದರಿಂದ ಉಳಿತಾಯ ಮತ್ತು ಬಂಡವಾಳ ಸಂಚಯನ ಕೃಷಿಯಿಂದ ಆಗುತ್ತಿದೆ.

೮. ಪ್ರಾಣಿಗಳಿಗೆ ಮೇವು (Supply of fodder) : ಭಾರತದಲ್ಲಿ ದನ, ಕರು, ಎತ್ತು, ಎಮ್ಮೆ, ಕುರಿ, ಮೇಕೆ, ಕೋಳಿ ಮುಂತಾದ ಪ್ರಾಣಿ ಪಕ್ಷಿಗಳಿಗೆ ಆಹಾರ ಮತ್ತು ಮೇವನ್ನು ಒದಗಿಸುವ ಕೆಲಸದಲ್ಲಿ ಕೃಷಿ ನಿರತವಾಗಿದೆ. ಅಲ್ಲದೆ ಪಶುಸಂಗೋಪನೆ, ಕೋಳಿ ಸಾಕಾಣಿಕೆ ಮುಂತಾದವು ಕೃಷಿ ಕ್ಷೇತ್ರದ ಲಾಭದಾಯಕ ಉಪಕಸುಬುಗಳಾಗಿವೆ.

೯. ಕೈಗಾರಿಕೋತ್ಪನ್ನಗಳಿಗೆ ಮಾರುಕಟ್ಟೆ(Market for industrial products): ಕೃಷಿ ಕೈಗಾರಿಕೆಗಳ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ಒದಗಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಕೃಷಿ ಮೂಲದಿಂದ ಹಾಗೂ ಕೃಷಿ ಕ್ಷೇತ್ರದಲ್ಲಿ ಬದುಕು ಸಾಗಿಸುತ್ತಿರುವ ಜನರಿಂದ ಕೈಗಾರಿಕಾ ಸರಕುಗಳಿಗೆ ಬೇಡಿಕೆ ಬರುತ್ತಿದ್ದು ಇದರಿಂದ ಕೈಗಾರಿಕಾ ಬೆಳವಣಿಗೆಗೆ ಉತ್ತಮ ಪ್ರೋತ್ಸಾಹ ದೊರೆಯುತ್ತಿದೆ.

೧೦. ರಾಷ್ಟ್ರ ರಕ್ಷಣೆ(National defence) : ಭಾರತದಲ್ಲಿ ಕೃಷಿ ರಾಷ್ಟ್ರ ರಕ್ಷಣೆ ಕೆಲಸದಲ್ಲಿ ನಿರತವಾಗಿದೆ. ಸೈನ್ಯಗಳಿಗೆ ಕಷ್ಟಸಹಿಷ್ಣುಗಳಾದ ಸೈನಿಕರನ್ನು ಪೂರೈಸುವುದರ ಜೊತೆಗೆ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಿ ನಮ್ಮ ದೇಶದ ಕೃಷಿಕರು ರಾಷ್ಟ್ರ ರಕ್ಷಣಾ ಶಕ್ತಿಯನ್ನು ಹೆಚ್ಚಿಸಿದ್ದಾರೆ.

೧೧. ಬೆಲೆ ಸ್ಥಿರತೆ(Price stabillity): ದೇಶದಲ್ಲಿ ಬೆಲೆ ಸ್ಥಿರತೆ ಕಾಪಾಡುವಲ್ಲಿ ಕೃಷಿ ಕ್ಷೇತ್ರ ಪ್ರಮುಖ ಪಾತ್ರವಹಿಸುತ್ತಿದೆ. ಭಾರತೀಯರ ಒಟ್ಟು ಅನುಭೋಗ ವೆಚ್ಚದಲ್ಲಿ ಶೇಕಡ ೮೦ಕ್ಕಿಂತಲೂ ಅಧಿಕ ವರಮಾನ ಕೃಷಿ ಸಾಮಗ್ರಿಗಳ ಮೇಲೆ ವ್ಯಯವಾಗುತ್ತಿದೆ. ಆದ್ದರಿಂದ ಕೃಷಿ ಸಾಮಗ್ರಿಗಳ ಬೆಲೆಯಲ್ಲಿ ಸ್ಥಿರತೆ ಕಾಪಾಡುವ ಅವಶ್ಯಕತೆ ಇದೆ. ಕೃಷಿ ಸಾಮಗ್ರಿಗಳನ್ನು ವೇಗವಾಗಿ ಉತ್ಪಾದಿಸುವುದು ಸಾಧ್ಯವಿರುವುದರಿಂದ ಹಣದುಬ್ಬರದ ಸನ್ನಿವೇಶಗಳಿಗೆ ಆಸ್ಪದವಿರುವುದಿಲ್ಲ.

೧೨. ತೃತೀಯ ವಲಯದ ಬೆಳವಣಿಗೆ (Development of tertiary sector): ವ್ಯಾಪಾರ, ವಾಣಿಜ್ಯ, ವಿಮೆ, ಬ್ಯಾಂಕಿಂಗ್, ಸಾರಿಗೆ, ಅಂಚೆ ಮುಂತಾದ ತೃತೀಯ ವಲಯದ ಉದ್ಯಮಗಳ ಬೆಳವಣಿಗೆಗೆ ಕೃಷಿ ವಲಯುದ ಕೊಡುಗೆ ಅಪಾರವಾಗಿದೆ. ಈ ವಲಯುಗಳು ಅಭಿವೃದ್ಧಿಗೊಂಡಂತೆಲ್ಲ ದೇಶ ತ್ವರಿತಗತಿಯ ಬೆಳವಣಿಗೆ ಸಾಧಿಸುವುದು ಸಾಧ್ಯವಾಗುತ್ತದೆ.

೧೩. ಆಯ-ವ್ಯಯ ಪತ್ರದ ಮೇಲೆ ಪ್ರಭಾವ(Influence of Government budgets): ಭಾರತದಲ್ಲಿ ಕೃಷಿ ಪ್ರಧಾನ ಕಸುಬಾಗಿರುವುದರಿಂದ ಈ ಕ್ಷೇತ್ರವನ್ನು ಅಲಕ್ಷಿಸಿ ಸರ್ಕಾರದ ಆಯ-ವ್ಯಯ ಪತ್ರಗಳು ಘೋಷಣೆಗೊಳ್ಳುವುದು ಕಷ್ಟ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ತಮ್ಮ ಆಯವ್ಯಯ ಪತ್ರವನ್ನು ಮಂಡಿಸುವ ವೇಳೆ ಕೃಷಿ ಅಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು, ತೆರಿಗೆ ರಿಯಾಯಿತಿಗಳು, ಸಹಾಯಧನಗಳು, ಬೆಂಬಲ ಬೆಲೆ ಮತ್ತು ಇತರ ರಿಯಾಯಿತಿ ಮತ್ತು ಪ್ರೋತ್ಸಾಹಕಗಳನ್ನು ಘೋಷಿಸಬೇಕಾಗುತ್ತದೆ.

೧೪. ಅನುಭೋಗದ ಬುಟ್ಟಿಯಲ್ಲಿ ಅಗ್ರಸ್ಥಾನ (Main role in consumption basket): ಭಾರತ ಒಂದು ಹಿಂದುಳಿದ ದೇಶ. ಜನರ ತಲಾದಾಯ ಕಡಿಮೆ ಇದೆ. ಆದ್ದರಿಂದ ಜನರು ತಮ್ಮ ಆದಾಯದ ಹೆಚ್ಚಿನ ಭಾಗವನ್ನು ಆಹಾರ ಸಾಮಗ್ರಿಗಳ ಮೇಲೆ ವ್ಯಯ ಮಾಡುತ್ತಾರೆ. ಗ್ರಾಹಕರ ಅನುಭೋಗದ ಬುಟ್ಟಿಯಲ್ಲಿ ಕೃಷಿ ಸಾಮಗ್ರಿಗಳದೇ ಸಿಂಹಪಾಲು.

೧೫. ರಾಜಕೀಯ ಮತ್ತು ಸಾಮಾಜಿಕ ಮಹತ್ವ (Political and Social significance): ಭಾರತದಲ್ಲಿ ಕೃಷಿ ರಾಜಕೀಯ ಮತ್ತು ಸಾಮಾಜಿಕ ಮಹತ್ವ ಪಡೆದಿದೆ. ಸಾಮಾಜಿಕ ಸೌಹಾರ್ದತೆ ಮತ್ತು ರಾಜಕೀಯ ಸ್ಥಿರತೆ ಕಾಪಾಡುವಲ್ಲಿ ರೈತರು ನಿರ್ಣಾಯಕ ಪಾತ್ರವಹಿಸುತ್ತಿದ್ದಾರೆ. ಧೈರ್ಯವಂತ ಮತ್ತು ಬುದ್ಧಿವಂತ ರೈತರು ದೇಶದ ಆಸ್ತಿಯಿದ್ದ ಹಾಗೆ. ದೇಶದ ಸರ್ವಾಂಗೀಣ ಬೆಳವಣಿಗೆ ಅಂತಿಮವಾಗಿ ಕೃಷಿಕರು ಮತ್ತು ಕೃಷಿಕ್ಷೇತ್ರವನ್ನು ಅವಲಂಬಿಸಿದೆ.

ಹೀಗೆ ಕೃಷಿ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೇಂದ್ರಸ್ಥಾನ ಪಡೆದಿದೆ. ಅದು ದೇಶದ ಆರ್ಥಿಕತೆಯಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ರಕ್ಷಣಾ ಪ್ರಾಮುಖ್ಯತೆ ಪಡೆದಿದ್ದು ಅದನ್ನು ಉಪೇಕ್ಷಿಸಿ ಭಾರತ ಮುನ್ನಡೆಯುವಂತಿಲ್ಲ. ಈ ಪಠ್ಯ ಭಾಗವನ್ನು ಎಚ್.ಆರ್.ಕೃಷ್ಣಮೂರ್ತಿಯವರು ಭಾರತದ ಆರ್ಥಿಕ ಅಭಿವೃದ್ಧಿ, ೨೦೦೫:೧೪೬-೧೭೧ರಲ್ಲಿ ಭಾಷಾಂತರಿಸಿರುತ್ತಾರೆ.

**ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ: ಪ್ರಾಥಮಿಕ ವಲಯದ ಕ್ರಾಂತಿಗಳು**

ಬೇಸಾಯ, ಹೈನುಗಾರಿಕೆ, ಪಶುಸಂಗೋಪನೆ, ಪುಷ್ಪಕೃಷಿ, ಮೀನುಗಾರಿಕೆ, ಅರಣ್ಯ, ಗಣಿಗಾರಿಕೆ ಇತ್ಯಾದಿಗಳು ಆರ್ಥಿಕತೆಯ ಪ್ರಾಥಮಿಕ ವಲಯದ ಚಟುವಟಿಕೆಗಳೆಂದು ಕರೆಸಿಕೊಳ್ಳುತ್ತವೆ. ಭಾರತ ಕೃಷಿ ಪ್ರಧಾನ ರಾಷ್ಟ್ರ. ೧೯೭೦ರ ದಶಕದವರೆಗೆ ಭಾರತದ ಕೃಷಿರಂಗ ಬಹಳ ಹಿಂದುಳಿದಿತ್ತು. ಹಸಿರುಕ್ರಾಂತಿಯಿಂದಾಗಿ ಕೃಷಿರಂಗದ ಸ್ವರೂಪವೇ ಬದಲಾಗಿ ಹೋಯಿತು. ಹಸಿರುಕ್ರಾಂತಿಯ ಬಳಿಕ ನೀಲಕ್ರಾಂತಿ, ಶ್ವೇತಕ್ರಾಂತಿ, ಪೀತಕ್ರಾಂತಿ ಮತ್ತು ಸುವರ್ಣಕ್ರಾಂತಿಗಳು ಸಂಭವಿಸಿ ಭಾರತದ

ಪ್ರಾಥಮಿಕ ವಲಯದ ಸ್ವರೂಪ ಬದಲಾಗಿ ಹೋಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯಿಂದ ಪ್ರಾಥಮಿಕ ವಲಯದಲ್ಲಿ ಸಂಭವಿಸಿದ ಕ್ರಾಂತಿಗಳ ಸಂಕ್ಷಿಪ್ತ ನೋಟ ಇಲ್ಲಿದೆ.

**ಹಸಿರುಕ್ರಾಂತಿ:** ಭಾರತವು ಸುಧಾರಿತ ತಳಿಯ ಬೀಜ, ರಸಗೊಬ್ಬರ ಮತ್ತು ಸಮರ್ಪಕ ನೀರಿನ ಬಳಕೆಯಿಂದ ಆಹಾರ ಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸಿದುದನ್ನು ಹಸಿರುಕ್ರಾಂತಿ (Green Revolution) ಎಂದು ಕರೆಯಲಾಗುತ್ತದೆ. ಹಸಿರು ಕ್ರಾಂತಿ ೧೯೬೦ರ ದಶಕದಲ್ಲಿ ಭಾರತದಲ್ಲಿ ಆರಂಭವಾಯಿತು. ಆರಂಭದಲ್ಲಿ ಅದು ಗೋಧಿ ಬೆಳೆಗಷ್ಟೇ ಸೀಮಿತವಾಗಿದ್ದರೂ ಆ ಬಳಿಕ ಅದರ ವ್ಯಾಪ್ತಿ ಹೆಚ್ಚಾಯಿತು. ಇಂದು ಭಾರತ ವಿಶ್ವದಲ್ಲಿ ಅತ್ಯಧಿಕ ಅಕ್ಕಿ ನಿರ್ಯಾತ ಮಾಡುವ ದೇಶಗಳ ಪೈಕಿ ಎರಡನೆಯ ಸ್ಥಾನದಲ್ಲಿ ಮತ್ತು ಅತ್ಯಧಿಕ ಗೋಧಿ ನಿರ್ಯಾತ ಮಾಡುವ ದೇಶಗಳ ಪೈಕಿ ಏಳನೆಯ ಸ್ಥಾನದಲ್ಲಿದೆ. ಇದು ಹಸಿರುಕ್ರಾಂತಿಯ ಪರಿಣಾಮವಾಗಿದೆ.

**ಶ್ವೇತ ಕ್ರಾಂತಿ :** ಭಾರತವು ಹೈನುಗಾರಿಕಾ ಕ್ಷೇತ್ರದಲ್ಲಿ ಮಾಡಿದ ಅಪೂರ್ವ ಸಾಧನೆಯನ್ನು ಕ್ಷೀರ ಅಥವಾ ಶ್ವೇತಕ್ರಾಂತಿ(White Revolution) ಎಂದು ಕರೆಯಲಾಗುತ್ತದೆ.

೧೯೫೦ರಲ್ಲಿ ಭಾರತದಲ್ಲಿ ಪ್ರತಿಯೊಬ್ಬನಿಗೆ ದಿನಕ್ಕೆ ೧೩೨ ಗ್ರಾಂ ಹಾಲು ಲಭ್ಯವಾಗುತ್ತಿತ್ತು. ೨೦೦೩ರಲ್ಲಿ ಅದು ೨೧೪ ಗ್ರಾಂಗಳಿಗೇರಿರುವುದು ಬಹುದೊಡ್ಡ ಸಾಧನೆಯಾಗಿದೆ. ಆಪರೇಶನ್ ಫ್ಲಡ್ I, II ಮತ್ತು III ಕಾರ್ಯಕ್ರಮಗಳು ಶ್ವೇತಕ್ರಾಂತಿಗೆ ಕಾರಣವಾಗಿದೆ. ೧೯೫೦-೫೧ರಲ್ಲಿ ಭಾರತ ೧೭ ದಶಲಕ್ಷ ಟನ್ನು ಹಾಲು ಉತ್ಪಾದಿಸುತ್ತಿತ್ತು. ೧೯೯೦-೯೧ರಲ್ಲಿ ೫೪ ದಶಲಕ್ಷ ಟನ್ನು, ೧೯೯೬-೯೭ರಲ್ಲಿ ೬೯ ದಶಲಕ್ಷ ಟನ್ನು ಮತ್ತು ೨೦೦೧-೦೨ರಲ್ಲಿ ೮೫ ದಶಲಕ್ಷ ಟನ್ನು ಹೀಗೆ ಭಾರತ ಹಾಲು ಉತ್ಪಾದನೆಯಲ್ಲಿ ದೊಡ್ಡ ಸಾಧನೆ ಮಾಡಿದೆ.

**ನೀಲಕ್ರಾಂತಿ :** ಭಾರತವು ಮೀನುಗಾರಿಕಾ ಕ್ಷೇತ್ರದಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ನೀಲಕ್ರಾಂತಿ(Blue Revolution) ಎಂದು ಕರೆಯಲಾಗುತ್ತದೆ.

ಭಾರತವು ಸುಮಾರು ೮೦೦೦ ಕಿ.ಮೀ. ಸಮುದ್ರ ತೀರವನ್ನು ಹೊಂದಿದೆ. ದೇಶದಲ್ಲಿ ಸುಮಾರು ೪೫೦೦೦ ಯಾಂತ್ರೀಕೃತ ದೋಣಿಗಳಿದ್ದು ೬೦ ದಶಲಕ್ಷ ಮೀನುಗಾರರಿದ್ದಾರೆ. ಭಾರತ ಪ್ರತಿ ವರ್ಷ ಸುಮಾರು ರೂ. ೬೪ ಬಿಲಿಯನ್ ಮೌಲ್ಯದ ಸಾಗರೋತ್ಪನ್ನಗಳನ್ನು ನಿರ್ಯಾತ ಮಾಡುತ್ತಿದೆ. ಮೀನುಗಾರಿಕೆಯಲ್ಲಿ ಭಾರತ ವಿಶ್ವದಲ್ಲಿ ಏಳನೆಯ ಸ್ಥಾನದಲ್ಲಿದೆ.

**ಪೀತ ಕ್ರಾಂತಿ :** ಭಾರತವು ಎಣ್ಣೆಬೀಜ ಕಾಳುಗಳ ಕ್ಷೇತ್ರದಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ಪೀತ ಕ್ರಾಂತಿ ಅಥವಾ ಹಳದಿ ಕ್ರಾಂತಿ (Yellow Revolution) ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಸುಮಾರು ೨೩ ದಶಲಕ್ಷ ಹೆಕ್ಟೇರು ಭೂಮಿಯಲ್ಲಿ ಎಣ್ಣೆ ಕಾಳುಗಳನ್ನು ಬೆಳೆಯಲಾಗುತ್ತದೆ. ತೆಂಗಿನಕಾಯಿ, ನೆಲಗಡಲೆ, ಹರಳು, ಸಾಸಿವೆ, ಎಳ್ಳು, ಕಡಲೆ, ಸೋಯಾಬೀನ್, ಸೂರ್ಯಕಾಂತಿ ಬೀಜ ಮುಂತಾದವುಗಳಿಂದ ಎಣ್ಣೆಯನ್ನು ಪಡೆಯಲಾಗುತ್ತದೆ. ಭಾರತದಲ್ಲಿ ಸುಮಾರು ೨೦ ದಶಲಕ್ಷ ಟನ್ನು ಎಣ್ಣೆ ಉತ್ಪಾದನೆಯಾಗುತ್ತದೆ.

**ಸುವರ್ಣಕ್ರಾಂತಿ :** ಭಾರತವು ಹೂವುಗಳ, ಹಣ್ಣುಗಳ ಮತ್ತು ತೋಟಗಾರಿಕಾ ಬೆಳೆಯಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ಸುವರ್ಣಕ್ರಾಂತಿ (Golden Fevolution) ಎಂದು ಕರೆಯಲಾಗುತ್ತದೆ.

ಭಾರತವು ವಿಶ್ವದಲ್ಲಿ ಅತ್ಯಧಿಕ ಹಣ್ಣು ಬೆಳೆಯುವ ದೇಶವಾಗಿದೆ. ೨೦೦೨-೦೩ರಲ್ಲಿ ೪೭.೫ ದಶಕೋಟಿ ಟನ್ನು ಹಣ್ಣು ವಿಶ್ವದಲ್ಲಿ ಉತ್ಪಾದನೆಯಾಗಿದ್ದು ಭಾರತ ಒಂದೇ ೪.೭ ದಶಕೋಟಿ ಟನ್ನು ಹಣ್ಣು ಉತ್ಪಾದಿಸಿತ್ತು. ವಿಶ್ವದ ಒಟ್ಟು ಉತ್ಪಾದನೆಯಲ್ಲಿ ಭಾರತ ಪಾಲು ಶೇ. ೧೦ರಷ್ಟು, ೨೦೦೩-೦೪ರಲ್ಲಿ ಭಾರತ ರೂ. ೩೫೬ ಕೋಟಿ ಮೌಲ್ಯದ ಹಣ್ಣುಗಳನ್ನು ನಿರ್ಯಾತ ಮಾಡಿತ್ತು. ಮಾವಿನ ಹಣ್ಣಿನ ನಿರ್ಯಾತವೊಂದರಿಂದಲೇ ಭಾರತ ರೂ. ೧೧೧ ಕೋಟಿ ಗಳಿಸಿತ್ತು. ಈ ಕಾರಣಕ್ಕಾಗಿಯೇ ಹಣ್ಣುಗಳ ಕ್ಷೇತ್ರದ ಸಾಧನೆಯನ್ನು ಸುವರ್ಣಕ್ರಾಂತಿಯೆಂದು ಕರೆಯುವುದು. ಭಾರತದಲ್ಲಿ ಸುಮಾರು ೯೦೦೦೦ ಹೆಕ್ಟೇರು ಭೂಮಿಯಲ್ಲಿ ಹೂಗಳನ್ನು ಬೆಳಸಲಾಗುತ್ತದೆ. ಕರ್ನಾಟಕವು ದೇಶದಲ್ಲಿ ಅತ್ಯಧಿಕ ಹೂಗಳನ್ನು ಬೆಳೆಯುವ ರಾಜ್ಯವಾಗಿದೆ. ಕರ್ನಾಟಕದಲ್ಲಿ ೨೧೦೦೦ ಹೆಕ್ಟೇರು ಭೂಮಿ ಪುಷ್ಪ ಕೃಷಿಗೆ ಬಳಕೆಯಾಗುತ್ತಿದೆ. ಭಾರತವು ವರ್ಷಕ್ಕೆ ಸುಮಾರು ೩೦ ದಶಲಕ್ಷ ಡಾಲರ್ ಮೌಲ್ಯದ ಹೂಗಳನ್ನು ನಿರ್ಯಾ ಮಾಡುತ್ತದೆ. ಪುಷ್ಪ ಕೃಷಿಯು ೩೦೦೦ ಜನರಿಗೆ ನೇರವಾಗಿ ಮತ್ತು ೧೨೦೦೦ ಜನರಿಗೆ ಪರೋಕ್ಷವಾಗಿ ಉದ್ಯೋಗ ನೀಡುತ್ತದೆ.

**ಕಾಮನಬಿಲ್ಲು ಕ್ರಾಂತಿ :** ರಾಷ್ಟ್ರೀಯ ಕೃಷಿ ನೀತಿ ೨೦೦೦ ಹಸಿರು ಕ್ರಾಂತಿ, ಶ್ವೇತಕ್ರಾಂತಿ ಮತ್ತು ನೀಲಕ್ರಾಂತಿಯನ್ನು ಮುಂದುವರಿಸುವುದಾಗಿ ಹೇಳಿದೆ, ಹಸಿರು, ಶ್ವೇತ ಮತ್ತು ನೀಲ ಕ್ರಾಂತಿಗಳನ್ನು ಒಟ್ಟಾಗಿ ಕಾಮನಬಿಲ್ಲು ಕ್ರಾಂತಿ (Rainbow Revolution) ಎಂದು ಕರೆಯಲಾಗುತ್ತದೆ.

ಕೃಷಿ ರಂಗದಲ್ಲಿ ವಾರ್ಷಿಕ ಶೇ. ೪ಕ್ಕಿಂತ ಹೆಚ್ಚಿನ ಬೆಳವಣಿಗೆ ದರವನ್ನು ಸಾಧಿಸುವುದು, ಗುತ್ತಿಗೆ ಕೃಷಿ ಮೂಲಕ ಖಾಸಗಿ ಕ್ಷೇತ್ರದ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸುವುದು, ಬೆಂಬಲ ಬೆಲೆ ಮೂಲಕ ರೈತರನ್ನು ಉತ್ತೇಜಿಸುವುದು, ರಾಷ್ಟ್ರೀಯ ಕೃಷಿ ವಿಮಾ ಯೋಜನೆಯ ಅನುಷ್ಠಾನ, ಕೃಷಿ ಸರಕುಗಳ ಸಂಚಾರ ನಿರ್ಬಂಧ ತೊಡೆದು ಹಾಕುವುದು ಇವು ಕಾಮನಬಿಲ್ಲು ಕ್ರಾಂತಿಯ ಮುಖ್ಯಾಂಶಗಳಾಗಿವೆ. ಇದನ್ನು ಸಿ.ಕೆ.ರೇಣುಕಾರ್ಯ(ಸಂ), ಅರ್ಥಶಾಸ್ತ್ರ, ೨೦೦೬:೧೪೯-೧೪೧ರಲ್ಲಿ ಸಂಪಾದಿಸಿರುತ್ತಾರೆ.

**ಭಾರತದಲ್ಲಿ ಒಕ್ಕಲುತನ : ಅರ್ಥವ್ಯವಸ್ಥೆಯಲ್ಲಿ ಕೃಷಿಯ ಸ್ಥಾನ (The Place of Agricutlture in the Indian Economy) :** ಅನಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಕೃಷಿಯು ಆರ್ಥಿಕ ಚಟುವಟಿಕೆಯ ಬಹುದೊಡ್ಡ ವಲಯವಾಗಿದೆ. ಕೃಷಿಯು ಕೇವಲ ಆಹಾರ ಮತ್ತು ಕಚ್ಚಾ ವಸ್ತುಗಳನ್ನು ಒದಗಿಸದೆ ಅತ್ಯಧಿಕ ಪ್ರಮಾಣದ ಜನಸಂಖ್ಯೆಗೆ ಉದ್ಯೋಗಾವಕಾಶಗಳನ್ನು ಒದಗಿಸಿದೆ. ದೇಶದ ಆರ್ಥಿಕಾಭಿವೃದ್ಧಿಯ ಪ್ರಾರಂಭದ ಹಂತದಲ್ಲಿ, ಇದು ವ್ಯವಸಾಯೋತ್ಪನ್ನಗಳನ್ನು ರಫ್ತು ಮಾಡಿ ವಿದೇಶಿ ವಿನಿಮಯಗಳಿಸಿ, ಬಂಡವಾಳ ಸರಕುಗಳನ್ನು ಆಮದು ಮಾಡಿಕೊಂಡು, ಕೈಗಾರಿಕಾ ಬೆಳವಣಿಗೆಗೆ ಉತ್ತೇಜನಕಾರಿಯಾಗಿದೆ. ಕೃಷಿಯಲ್ಲಿ ಸಾಧಿಸಿದ ಅಗಾಧ ಪ್ರಗತಿಯ ಫಲವಾಗಿ

ಇಂಗ್ಲೆಂಡ, ಅಮೆರಿಕಾ ಮುಂತಾದ ದೇಶಗಳು ಇಂದು ಕೈಗಾರಿಕಾಭಿವೃದ್ಧಿ ಹೊಂದಿ ಆರ್ಥಿಕಾಭಿವೃದ್ಧಿಯ ಶಿಖರವನ್ನು ತಲುಪಿವೆ. ಅನಭಿವೃದ್ಧಿ ಹೊಂದಿದ ರಾಷ್ಟ್ರಗಳ ಆರ್ಥಿಕತೆಯಲ್ಲಿ ವ್ಯವಸಾಯವು ಬೆನ್ನೆಲುಬಿದ್ದಂತೆ. ಅದು ಶೇ. ೬೦ ರಷ್ಟು ಜನರಿಗೆ ಉದ್ಯೋಗಾವಕಾಶವನ್ನು ಒದಗಿಸಿದೆ.

೧. ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ೨. ಜನಸಂಖ್ಯೆ ಮತ್ತು ಕೃಷಿ ಕಾರ್ಮಿಕರು ೩. ಆಹಾರದ ಮೂಲವಾಗಿದೆ ೪. ಉದ್ದಿಮೆಗಳಿಗೆ ಆಧಾರ ಸ್ತಂಭವಾಗಿದೆ ೫. ಕೈಗಾರಿಕೋತ್ಪನ್ನಗಳಿಗೆ ಮಾರುಕಟ್ಟೆ ಒದಗಿಸುತ್ತದೆ. ೬. ಒಕ್ಕಲುತನವು ತೃತೀಯ ರಂಗಕ್ಕೆ ಆಧಾರವಾಗಿದೆ ಇತ್ಯಾದಿ. ಈ ಭಾಗವು ಬಸವರಾಜ ಕುಮಾರ ಅವರಿಂದ ೨೦೦೪ರಲ್ಲಿ ಭಾಷಾಂತರಿಸಲ್ಪಟ್ಟಿದೆ.

### ೩.೭. ಕೈಗಾರಿಕೆ

ಕೈಗಾರಿಕಾ ರಂಗದಲ್ಲಿ ಇತ್ತೀಚಿಗೆ ಯಾಂತ್ರಿಕ ಸಹಾಯದಿಂದ ಸಾಧಿಸುತ್ತಿರುವ ನಮ್ಮ ದೇಶದ ಆರ್ಥಿಕ ಪ್ರಗತಿಯಲ್ಲಿ ವಿದೇಶಿ ವ್ಯಾಪಾರ, ಅದರಲ್ಲೂ ಆಮದು ವ್ಯಾಪಾರವು ಅತಿ ಮುಖ್ಯವಾಗಿದೆ. ನಮ್ಮ ಕೈಗಾರಿಕೆಗಳು ವಿದೇಶಗಳಿಂದ ಕೆಲವು ಅತಿ ಮುಖ್ಯವಾದ ಕೈಗಾರಿಕಾ ಕಚ್ಚಾ ವಸ್ತುಗಳು (Raw materials) ರಾಸಾಯನಿಕ ಮತ್ತು ಲೋಹ ಸಂಬಂಧ ವಸ್ತುಗಳು, ವಿದ್ಯುತ್ ಯಂತ್ರಗಳು ಮತ್ತು ತಾಂತ್ರಿಕ ನೆರವುಗಳನ್ನು ಆಮದು ಮಾಡಿಕೊಳ್ಳುತ್ತಿವೆ. ಪ್ರಸ್ತುತ ನಮ್ಮ ದೇಶವು ಹೀಗೆ ಇತರ ದೇಶಗಳ ಮೇಲೆ ಆಧಾರಪಟ್ಟಿದ್ದರೂ ಕ್ರಮೇಣ ಸ್ವಾವಲಂಬಿ ಸ್ಥಿತಿಯನ್ನು ಮುಟ್ಟಬೇಕೆಂಬ ಗುರಿಯನ್ನಿಟ್ಟುಕೊಂಡಿದೆ. ನಮ್ಮಲ್ಲಿ ಸಾಕಷ್ಟು ವಿದೇಶಿ ವಿನಿಮಯ ಹಣವಿಲ್ಲದಿರುವುದರಿಂದ ನಮ್ಮಲ್ಲಿ ತಯಾರಾದ ವಸ್ತುಗಳನ್ನು ವಿದೇಶಗಳಿಗೆ ರಫ್ತು ಮಾಡಲೇಬೇಕಾಗಿದೆ. ಹೀಗೆ ಮಾಡುವುದರಿಂದ ಕೆಲವು ಮುಖ್ಯ ವಸ್ತುಗಳ ಪೂರೈಕೆಯು ಒಳ ಮಾರುಕಟ್ಟೆಯಲ್ಲಿ (Home Market) ವಿರಳವಾಗಿ ಅಂತಹ ವಸ್ತುಗಳ ಕೊರತೆ ಬರಬಹುದು. ಆದಾಗಲೂ ಜನಾಂಗವು ರಾಷ್ಟ್ರ ಪ್ರಗತಿಗಾಗಿ ಅಂತಹ ಬಿಕ್ಕಟ್ಟುಗಳನ್ನು ಮನಃಪೂರ್ವಕವಾಗಿ ಸಹಿಸಿಕೊಳ್ಳದೆ ಬೇರೆ ಮಾರ್ಗವಿಲ್ಲ. ಇತ್ತೀಚಿಗೆ ಅಂದರೆ ೧೯೭೧ರಲ್ಲಿ ನಮ್ಮ ದೇಶದ ಮೇಲೆ ಪಾಕಿಸ್ತಾನವು ನಡೆಸಿದ ಯುದ್ಧದ ಪರಿಣಾಮದಿಂದ ನಮ್ಮ ವಿದೇಶಿ ವ್ಯಾಪಾರವು ಇನ್ನು ಮುಂದೆ ಅನೇಕ ಆತಂಕ ಮತ್ತು ತೊಂದರೆಗಳನ್ನು ಅನುಭವಿಸ ಬೇಕಾಗಬಹುದು. ಅದರಲ್ಲೂ ಮುಖ್ಯವಾಗಿ ಅಮೆರಿಕಾ ಮತ್ತು ಅದನ್ನು ಹಿಂಬಾಲಿಸುವ ಆ ದೇಶಗಳೊಡನೆ ನಮ್ಮ ವ್ಯಾಪಾರವು ಇಳಿಮುಖವಾಗಬಹುದು. ಇದರಿಂದ ಆ ದೇಶಗಳಿಂದ ನಾವು ಆಮದು ಮಾಡಿಕೊಳ್ಳುತ್ತಿದ್ದ ಮುಖ್ಯ ವಸ್ತುಗಳು ಇನ್ನು ಮುಂದೆ ಸಾಕಷ್ಟು ಪ್ರಮಾಣದಲ್ಲಿ ನಮಗೆ ಲಭಿಸಲಾರದೆ ನಮ್ಮ ದೇಶದ ಕೆಲವು ಭಾರಿ ಕೈಗಾರಿಕೆಗಳು ಕುಂಠಿತವಾಗಬಹುದು. ಈ ಕ್ಲಿಷ್ಟ ಪರಿಸ್ಥಿತಿಯಲ್ಲಿ ನಾವು ನಮ್ಮ ಕಾಲಮೇಲೆ ನಿಲ್ಲುವುದನ್ನು ಕಲಿತು, ಇದುವರೆಗೂ ಆಮದು ಮಾಡಿಕೊಳ್ಳುತ್ತಿದ್ದ ಕೆಲವು ಯಾಂತ್ರಿಕ ಬಿಡಿ ಭಾಗಗಳು, ರಾಸಾಯನಿಕ ವಸ್ತುಗಳು ಮುಂತಾದವುಗಳನ್ನು ಅತಿ ಕಡಿಮೆ ಮಾಡಿ ಅವುಗಳ ಸ್ಥಾನದಲ್ಲಿ ನಮ್ಮಲ್ಲಿಯೇ ಉತ್ಪನ್ನವಾಗುವ ಅಂತಹ ಇತರ ವಸ್ತುಗಳ ನೆರವಿನಿಂದಲೇ ಕೈಗಾರಿಕೆಗಳನ್ನು ಮುಂದೆ ಸಾಗಿಸಬೇಕು. ಇದರ ಜೊತೆಗೆ ನಮ್ಮ ರಫ್ತ ವ್ಯಾಪಾರವನ್ನು

ವೃದ್ಧಿಗೊಳಿಸಿಕೊಂಡು ಪ್ರಗತಿ ಹೊಂದುತ್ತಿರುವ ಮಿತ್ರ ದೇಶಗಳೊಡನೆ ನೂತನ ವಾಣಿಜ್ಯ ವ್ಯಾಪಾರ ಸಂಬಧವನ್ನು ಬೆಳೆಸುವುದು ಒಂದು ಮಹತ್ತರವಾದ ಹೊಣೆಯಾಗಿದೆ. ಇದರಿಂದ ನಮ್ಮ ದೇಶದ ರಾಷ್ಟ್ರೀಯ ಆದಾಯ ಮತ್ತು ಆರ್ಥಿಕ ಬೆಳವಣಿಗೆ ಹೆಚ್ಚಾಗುವುದಲ್ಲದೆ ಇತರ ಪ್ರಗತಿ ಹೊಂದುತ್ತಿರುವ, ನಮ್ಮೊಡನೆ ವಾಣಿಜ್ಯ ವ್ಯಾಪಾರವನ್ನು ನಡೆಸುವ ದೇಶಗಳೂ ಲಾಭವನ್ನು ಹೊಂದಬಹುದು. ಇದು ನಮ್ಮ ವಿದೇಶಿ ವ್ಯಾಪಾರ ರಂಗದಲ್ಲಿ ಮುಂದೆ ಅನುಸರಿಸಬೇಕಾದ ನೀತಿಯಾಗಿದೆ. ಭಾರತವು ಇಂದು ಅಂತಾರಾಷ್ಟ್ರೀಯ ಹಣಕಾಸಿನ ರಂಗದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿರುವುದರಿಂದಲೂ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುತ್ತಿರುವ ರಾಷ್ಟ್ರವಾಗಿರುವುದರಿಂದಲೂ ವಿದೇಶಿ ವ್ಯಾಪಾರ ಮತ್ತು ಸಹಾಯವನ್ನು ಕಡಿಮೆ ಮಾಡಿ ಸಂಪೂರ್ಣವಾಗಿ ನಮ್ಮ ದೇಶದ ಒಳಮಾರು ಕಟ್ಟೆ ವ್ಯಾಪಾರದ ಮೇಲೆ ಆಧಾರ ಪಡುವುದು ಕಷ್ಟ ಸಾಧ್ಯವಾಗಿದೆ. ಮತ್ತು ಹಾಗೆ ಮಾಡುವುದೂ ಈಗಿನ ಪರಿಸ್ಥಿತಿಯಲ್ಲಿ ಅನುಚಿತ.

ಔದ್ಯೋಗಿಕ ಅಭಿವೃದ್ಧಿ "ಉದ್ದಿಮೀಕರಣದ ಇಲ್ಲವೇ ಸರ್ವನಾಶ" ಎಂಬುದಾಗಿ ಭಾರತರತ್ನ ಎಂ. ವಿಶ್ವೇಶ್ವರಯ್ಯನವರು ಹೇಳಿದ್ದಾರೆ. ಕೈಗಾರಿಕಾಭಿವೃದ್ಧಿ ಮತ್ತು ಅದರ ಪ್ರಾಮುಖ್ಯತೆ ಕೈಗಾರಿಕೆಯೆಂದರೇನು? ಆರ್ಥಿಕ ಸರಕೊಂದರ (ವಸ್ತುವಿನ) ಯಾವ ಉತ್ಪಾದನಾ ಕ್ರಿಯೆಯೇ ಆಗಲಿ ಕೈಗಾರಿಕೆಯೆನಿಸಿಕೊಳ್ಳುತ್ತದೆ. ಭೂಮಿಯಿಂದ ಖನಿಜಗಳನ್ನು ತೆಗೆಯುತ್ತೇವೆ; ಹತ್ತಿಯಿಂದ ನೂಲನ್ನು ಮಾಡುತ್ತೇವೆ; ನೂಲಿನಿಂದ ಬಟ್ಟೆಯನ್ನು ಉತ್ಪಾದಿಸುತ್ತೇವೆ; ಗೋಧಿಯನ್ನು ಬೆಳೆಯುತ್ತೇವೆ; ಇತರ ಒಕ್ಕಲುತನ ಸರಕುಗಳನ್ನು ಉತ್ಪಾದಿಸುತ್ತೇವೆ; ಮೋಟಾರ್‌ಗಳನ್ನು ಮಾಡುತ್ತೇವೆ; ರೈಲ್ವೆ ಎಂಜಿನಗಳನ್ನು ತಯಾರಿಸುತ್ತೇವೆ; ಯುದ್ಧ ಮತ್ತು ಪ್ರಯಾಣಿಕ ವಿಮಾನಗಳನ್ನು ಸೃಷ್ಟಿಸುತ್ತೇವೆ, ಒಂದೇ, ಎರಡೇ ಲಕ್ಷಾಂತರ ಸರಕುಗಳನ್ನು ಉತ್ಪಾದಿಸುತ್ತೇವೆ. ಹಾಗೆಯೇ ಲಕ್ಷಾಂತರ ಕಾರ್ಮಿಕರು ಲಕ್ಷಾಂತರ ಕೈಗಾರಿಕೆಗಳಲ್ಲಿ ಭಾಗಿಗಳು. ಇವೆಲ್ಲಾ ಆರ್ಥಿಕ ಕ್ರಿಯೆಗಳೇ. ಇವೆಲ್ಲಾ ಕೈಗಾರಿಕೆಗಳೆನಿಸಿ ಕೊಳ್ಳುತ್ತವೆ. ಇದು ಬಹುವಿಶಾಲವಾದ ಅರ್ಥ. ಭಾರೀ ಯಂತ್ರಗಳು ಮತ್ತು ಶಕ್ತಿ ಇವೆರಡರ ಸಮ್ಮಿಳನದಿಂದ ತಯಾರಾಗುವ ಸರಕುಗಳಷ್ಟೇ ಕೈಗಾರಿಕಾ ವಸ್ತುಗಳೆಂಬ ಸೀಮಿತಾರ್ಥ ಜನಸಾಮಾನ್ಯರಲ್ಲಿ ಬಳಕೆಯಲ್ಲಿದೆ. ಅಂದರೆ, ವ್ಯವಸಾಯೋತ್ಪನ್ನಗಳನ್ನು ಕೈಗಾರಿಕೋತ್ಪನ್ನಗಳಿಂದ ಬೇರ್ಪಡಿಸುತ್ತೇವೆ. ವ್ಯವಸಾಯೋತ್ಪನ್ನವಾದ ಹತ್ತಿಯಿಂದ ಪರಿಷ್ಕೃತವಾದ ಜವಳಿ ಉತ್ಪಾದನೆ ಕೈಗಾರಿಕೆಯೆನಿಸಿಕೊಳ್ಳುತ್ತದೆ; ಆದರೆ ಹತ್ತಿಯ ಉತ್ಪಾದನೆ ವ್ಯವಸಾಯಕ್ಕೆ ಸಂಬಂಧಿಸಿದ ವಸ್ತುವಾಗುತ್ತದೆ. ಆಧುನಿಕ ಶಕ್ತಿಚಾಲಿತ ನೇಗಿಲು ಕೈಗಾರಿಕಾ ವಸ್ತುವೆನಿಸಿದರೆ, ಅದನ್ನು ಉಪಯೋಗಿಸಿ ಬೆಳೆದ ಯಾವ ಬೆಳೆಯೇ ಆಗಲಿ ವ್ಯವಸಾಯೋತ್ಪನ್ನವಾಗುತ್ತದೆ. ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ 'ಕೈಗಾರಿಕೆ' ಎಂಬ ಪದದ ಅರ್ಥವನ್ನು ಹೀಗೆ ವಿವರಿಸಬಹುದು. ವ್ಯವಸಾಯೋತ್ಪನ್ನಗಳನ್ನುಳಿದ ಯಾವ ಸರಕಿನ ಉತ್ಪನ್ನವೇ ಆಗಲಿ, ಚಿಕ್ಕದಾಗಲಿ ಅಥವಾ ದೊಡ್ಡದಾಗಲಿ, ಶಕ್ತಿಚಾಲಿತವಿರಲಿ ಅಥವಾ ಇಲ್ಲದಿರಲಿ, ಆ ಉತ್ಪಾದನಾ ಕಾರ್ಯವನ್ನು ಕೈಗಾರಿಕೆಯೆನ್ನುತ್ತೇವೆ. ಕ್ರಮಬದ್ಧ ಅಭ್ಯಾಸಕ್ಕೋಸ್ಕರ ಈ

ಅರ್ಥ ವಿಂಗಡನೆಯೇ ಹೊರತು, ಇನ್ನಾವ ದೃಷ್ಟಿಯಿಂದಲೂ ಅಲ್ಲ. ಸ್ಥೂಲಾರ್ಥದಲ್ಲಿ ಹೇಳಬೇಕಾದರೆ ವ್ಯವಸಾಯವೂ ಈಗ ಕೈಗಾರಿಕೆಯ ಇನ್ನೊಂದು ಮುಖ ಎಂದು ಪರಿಗಣಿಸಲಾಗಿದೆ. ಯಾಂತ್ರೀಕೃತ ಆಧುನಿಕ ಬೇಸಾಯವನ್ನು ವಿಸ್ತಾರವಾದ ಒಂದು ಕೈಗಾರಿಕೆಯೆಂದೇ ಪರಿಗಣಿಸಬಹುದು. ಕಚ್ಚಾವಸ್ತುವಿರಲಿ, ಸಿದ್ಧವಸ್ತುವಿರಲಿ, ಶಕ್ತಿಚಾಲಿತವಿರಲಿ, ಇಲ್ಲದಿರಲಿ, ಒಟ್ಟಿನಲ್ಲಿ ಸರಕುಗಳ ಉತ್ಪಾದನೆ ಕೈಗಾರಿಕೆ ಎನಿಸಿಕೊಳ್ಳುತ್ತದೆ. ಸೊರಬದ ಗಂಧದ ಕೆತ್ತನೆ ಕೆಲಸ ಮತ್ತು ಕಾಶ್ಮೀರದ ಉಣ್ಣೇ ಸರಕುಗಳ ಉತ್ಪಾದನೆ ಗೃಹ ಕೈಗಾರಿಕೆಗಳೆನಿಸಿದರೆ, ದುರ್ಗಾಪುರದ ಉಕ್ಕು, ಮುಂಬಯಿಯ ಜವಳಿ, ಬೆಂಗಳೂರಿನ ಮಹಾಯಂತ್ರಾಗಾರ (Heavy machine tools) ಬೃಹತ್ ಕೈಗಾರಿಕೆಗಳೆನಿಸುತ್ತವೆ. ಉತ್ಪಾದನೆಯ ಮೂಲಶಕ್ತಿಯಾದ ಚಲನಶಕ್ತಿ, ಉತ್ಪಾದನೆಯ ಪ್ರಮಾಣ, ಕಾರ್ಮಿಕರ ಸಂಖ್ಯೆ ಇವುಗಳ ಆಧಾರದ ಮೇಲೆ ಬೃಹತ್ ಮತ್ತು ಸಣ್ಣ ಉದ್ದಿಮೆಗಳ ವರ್ಗೀಕರಣವಾಗುತ್ತದೆ.

ಭಾರತದಲ್ಲಿ ಉದ್ದಿಮೀಕರಣದ ಪ್ರಾಮುಖ್ಯತೆ: ಭಾರತೀಯರಾದ ನಾವು ಇಂದು ೫೬ ಕೋಟಿಯಷ್ಟಿದ್ದೇವೆ. ಸಂಖ್ಯಾ ದೃಷ್ಟಿಯಿಂದ ಬಹು ದೊಡ್ಡ ದೇಶ ನಮ್ಮದು. ನಮ್ಮದು ಪ್ರಜಾಪ್ರಭುತ್ವ ಸುಖೀರಾಜ್ಯ. ಎಲ್ಲರಿಗೂ ಎಲ್ಲಾ ದೃಷ್ಟಿಯಿಂದ ಸಮಾನತೆಯ ಹಕ್ಕಿದೆ. ಸರ್ವರೂ ಸುಖವಾಗಿರಬೇಕು. ಆರ್ಥಿಕ ಜೀವನದ ಮಟ್ಟ ನಮ್ಮೆಲ್ಲರನ್ನು ಸುಖವಾಗಿಡುವಷ್ಟರ ಮಟ್ಟಿಗಾದರೂ ಇರಬೇಕು. ಇದು ಎಲ್ಲರ ಬಯಕೆ. ಪಾಶ್ಚಾತ್ಯದೇಶಗಳು ಇಂದು ಈ ಸಾಮಾಜಿಕ ಗುರಿಯನ್ನು ಮೀರಿ ಮುಂದೆ ಹೋಗಿವೆ. ಆದೇಶಗಳಲ್ಲಿ 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ವಾಕ್ಯ ಬಹಳಷ್ಟು ನಿಜ. ನಮ್ಮಲ್ಲಿನ್ನೂ ಆ ಮಾತು ನಿತ್ಯ-ಸತ್ಯವಾಗಿಲ್ಲ. ಆರ್ಥಿಕವಾಗಿ ನಾವು ಹಿಂದುಳಿದಿದ್ದೇವೆ. ಸ್ವಾತಂತ್ರ್ಯೋತ್ತರ ಭಾರತ ಆರ್ಥಿಕ ವಿಕಾಸದ ಹಾದಿಯಲ್ಲಿ ದೃಢವಾದ ಹೆಜ್ಜೆಯನ್ನಿಟ್ಟಿದ್ದರೂ, ಹಿಂದಿನ ನೂರು ವರ್ಷಗಳಲ್ಲಿ ಸಾಧಿಸದೇ ಹೋದುದನ್ನು ಈ ಕಾಲು ಶತಮಾನದಲ್ಲಿ ಸಾಧಿಸಿರುವುದು ನಿಜವಾದರೂ ಜನಬಾಹುಳ್ಯ ದೃಷ್ಟಿಯಿಂದ ಸಾಧಿಸಿರುವಷ್ಟು ಸಾಪೇಕ್ಷಿಕವಾಗಿ ಬಹು ಕಡಿಮೆ. ಆದುದರಿಂದ ಹೇಳತೀರದಷ್ಟು ದಾರಿದ್ರ್ಯವಿದೆ. ರಾಷ್ಟ್ರೀಯ ವರಮಾನ ಮಂದಗತಿಯಿಂದ ಏರುತ್ತಿದ್ದರೂ, ತಲಾ ಆದಾಯ ಬಹಳಷ್ಟು ಮಟ್ಟಿಗೆ ನಿಂತಲ್ಲೇ ನಿಂತಿದೆ. ಜನಸಂಖ್ಯೆ ಹೆಚ್ಚಾಗುತ್ತಿದೆ. ಪಾಶ್ಚಾತ್ಯ ದೇಶಗಳಲ್ಲಿ ಒಟ್ಟು ರಾಷ್ಟ್ರಾದಾಯದಲ್ಲಿ ಕೈಗಾರಿಕೆಗಳ ಕೊಡುಗೆ ೬೦% ರಷ್ಟು, ನಮ್ಮಲ್ಲಿ ಅದು ಕೇವಲ ೧೯%ರಷ್ಟು, ನಮ್ಮಲ್ಲಿ ಇನ್ನೂ ವ್ಯವಸಾಯಕ್ಕೇ ಪ್ರಾಧಾನ್ಯ. ಯಾಂತ್ರೀಕೃತ ವ್ಯವಸಾಯದಲ್ಲಿ ಬೇಕಾಗುವುದು ಕೇವಲ ಕೆಲವು ಶ್ರಮಗಾರರು. ಆಧುನಿಕ ಯಂತ್ರಗಳಿಂದ ಮತ್ತು ವಿದ್ಯಾವಂತ ಕಾರ್ಮಿಕರಿಂದ ವ್ಯವಸಾಯಕ್ಷೇತ್ರದಲ್ಲಿ ಒಂದು ಕ್ರಾಂತಿಯನ್ನೇ ಸಾಧಿಸಬಹುದು. ಆದರೆ ಭಾರತದಲ್ಲಿ ೮೫% ಮಂದಿ ಈಗಾಗಲೇ ಬಡವರಾಗಿರುವವರು ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಜೀವನ ಮಟ್ಟ ಬಹು ಕಡಿಮೆ. ಕಾರಣವೊಂದೇ, ಉದ್ದಿಮೆಗಳ ಕೊಡುಗೆ ಬಹಳ ಕಡಿಮೆ. ಕೈಗಾರಿಕೆಗಳ ಅಭಿವೃದ್ಧಿ ಸಾಕಷ್ಟಾಗಿಲ್ಲ. ಘನ ಕೈಗಾರಿಕೆಗಳು, ಮಧ್ಯಮ ಪ್ರಮಾಣ ಮತ್ತು ಸಣ್ಣ ಕೈಗಾರಿಕೆಗಳು ದೇಶಾದ್ಯಂತ ಬೆಳೆದಾಗ ಪ್ರತಿಯೋರ್ವ ಭಾರತೀಯನೂ ಉತ್ಪಾದನೆಯಲ್ಲಿ ಭಾಗಿಯಾಗುವ ಅವಕಾಶ ದೊರೆಯುತ್ತದೆ.

ರಾಷ್ಟ್ರಾದಾಯ ಮತ್ತು ತಲಾದಾಯ ಆಗ ಹೆಚ್ಚಾಗುತ್ತವೆ. ಜೀವನ ಮಟ್ಟವೂ ಏರುತ್ತದೆ. ಭಾಷಾಂತರಿತ ಈ ಭಾಗವನ್ನು ಎಂ.ಎಸ್.ಸುಂಕಾಪೂರ ಇವರು ಸಂಪಾದಿಸಿದ ಆರ್ಥಿಕ ವ್ಯವಸ್ಥೆಯಲ್ಲಿ ಇರುತ್ತದೆ.

**ಕೈಗಾರಿಕೆಯ ಅಭಿವೃದ್ಧಿ :** ಸ್ವಾತಂತ್ರ್ಯದ ನಂತರ ನಮ್ಮ ದೇಶವು ತೀವ್ರಗತಿಯಲ್ಲಿ ಬದಲಾವಣೆಯನ್ನು ಹೊಂದುತ್ತ ಮುನ್ನಡೆದಿದೆ. ಐತಿಹಾಸಿಕ ದೃಷ್ಟಿಯಿಂದ ನೋಡಿದಾಗ ಭಾರತದಂತಹ ಅಭಿವದ್ಧಿಪರ ರಾಷ್ಟ್ರದ ಬೆಳವಣಿಗೆಯು ಇಪ್ಪತ್ತನೆಯ ಶತಮಾನದ ಮಹತ್ವದ ಘಟನೆಗಳಲ್ಲಿ ಒಂದಾಗಿದೆ. ಭಾರತವು ಪ್ರಜಾಪ್ರಭುತ್ವವಾದಿ ಸರಕಾರದೊಂದಿಗೆ ಕ್ರಮಬದ್ಧ ಯೋಜನೆಗಳ ಮೂಲಕ ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಯತ್ನಿಸುತ್ತಿದೆ. ಈ ಕ್ರಾಂತಿಕಾರಿ ಬದಲಾವಣೆಗಳಲ್ಲಿ ಔದ್ಯೋಗಿಕ ರಚನೆಯು ಮೂಲಭೂತ ರೂಪಾಂತರಗಳಲ್ಲಿ ಒಂದಾಗಿದೆ. ಸರಕಾರವು ಕೈಗಾರಿಕಾ ನೀತಿಯ ಧೋರಣೆಗಳನ್ನು ಪ್ರಕಟಿಸಿ, ಧೋರಣೆಗಳಿಗನುಗುಣವಾಗಿ ಅರ್ಥವ್ಯವಸ್ಥೆಯನ್ನು ಕೈಗಾರಿಕೀಕರಣ ಅಥವಾ ಓದ್ಯೋಗೀಕರಣಗೊಳಿಸುತ್ತಿದೆ. ಔದ್ಯೋಗೀಕರಣವೆಂದರೆ ಉತ್ಪಾದನಾ ಪದ್ಧತಿಯಲ್ಲಿ ಮೂಲಭೂತ ಬದಲಾವಣೆಗಳುಂಟಾಗುವ ಕ್ರಮ ಅಥವಾ ವಿಧಾನ. ಮೂಲಭೂತ ಬದಲಾವಣೆಗಳೆಂದರೆ ಉದ್ದಿಮೆಯನ್ನು ಯಾಂತ್ರೀಕರಣಗೊಳಿಸುವುದು, ಹೊಸ ಹೊಸ ಉದ್ದಿಮೆಗಳ ನಿರ್ಮಾಣ ಕಾರ್ಯ, ಹೊಸ ಮಾರುಕಟ್ಟೆಗಳ ಶೋಧನೆ ಹಾಗೂ ಹೊಸ ಪ್ರಾದೇಶಿಕ ಸಂಪನ್ಮೂಲಗಳ ಬಳಕೆ ಇತ್ಯಾದಿ. ಔದ್ಯೋಗೀಕರಣದಿಂದ ಉತ್ಪಾದನೆ ಹೆಚ್ಚಾಗಿ ಬಂಡವಾಳ ಸಂಗ್ರಹಣೆ ಸಾಧ್ಯವಾಗುವುದು. ಹೀಗೆ ಔದ್ಯೋಗೀಕರಣದಿಂದ ರಾಷ್ಟ್ರದ ಎಲ್ಲ ನಿಸರ್ಗ ಸಂಪನ್ಮೂಲಗಳ ಪೂರ್ಣ ಬಳಕೆಯಾಗಿ ಹಾಗೂ ಪ್ರಾದೇಶಿಕ ಸಮತೋಲನಾಭಿವೃದ್ಧಿಯುಂಟಾಗಿ ಅಭಿವೃದ್ಧಿಯ ಕಾರ್ಯಕ್ರಮಗಳು ತೀವ್ರಗೊಳ್ಳುತ್ತವೆ. ಭಾರತದಂತಹ ಅಭಿವೃದ್ಧಿಪರ ರಾಷ್ಟ್ರಗಳಲ್ಲಿ ಔದ್ಯೋಗೀಕರಣವು ಮಹತ್ವದ ಪಾತ್ರವನ್ನು ವಹಿಸುತ್ತದೆ. ಕೈಗಾರಿಕೆಗಳ ಅಭಿವೃದ್ಧಿಯಿಂದ ಆಗುವ ಪ್ರಯೋಜನಗಳನ್ನು ಕೆಳಗಿನ ಅಂಶಗಳಿಂದ ಕಂಡುಕೊಳ್ಳಬಹುದು.

೧. ಔದ್ಯೋಗೀಕರಣವು ಒಂದು ರಾಷ್ಟ್ರದ ಪ್ರಗತಿಯನ್ನು ಅಳೆಯುವ ಮಾನದಂಡವಾಗಿರುತ್ತದೆ. ಸರ್ವೆಸಾಮಾನ್ಯವಾಗಿ ಹಿಂದುಳಿದ ರಾಷ್ಟ್ರಗಳು ಕೃಷಿ ಪ್ರಧಾನ ದೇಶಗಳಾಗಿರುತ್ತವೆ. ದೇಶದ ಬಹುಭಾಗದ ಜನಸಂಖ್ಯೆ ಕೃಷಿಯನ್ನೇ ಅವಲಂಬಿಸಿರುತ್ತದೆ. ಅವರ ವಾರ್ಷಿಕ ಆದಾಯ ತೀರ ಕಡಿಮೆಯಿರುತ್ತದೆ. ಕೃಷಿ ರಂಗದಲ್ಲಿ ತಲೆಮರೆಸಿದ ನಿರುದ್ಯೋಗ ಸರ್ವೆಸಾಮಾನ್ಯವಾಗಿದ್ದು, ವ್ಯಕ್ತಿಗತ ಉತ್ಪಾದನೆ ಶೂನ್ಯ ಅಥವಾ ನಿಷೇಧಾತ್ಮಕವಾಗಿರುತ್ತದೆ. ಕೃಷಿ ವಲಯದ ಮೇಲಿನ ಅಧಿಕ ಒತ್ತಡವನ್ನು ಕಡಿಮೆಗೊಳಿಸಿ ಕೃಷಿ ಉತ್ಪಾದನೆಯನ್ನು ಅಧಿಕಗೊಳಿಸಲು ಔದ್ಯೋಗೀಕರಣ ಅವಶ್ಯವಾಗಿರುತ್ತದೆ. ಹಿಂದುಳಿದ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಆದಾಯವನ್ನು ಹೆಚ್ಚಿಸಲು, ಮಿತಿ–ಮೀರಿ ಬೆಳೆದ ಜನಸಂಖ್ಯೆಯ ಸಮಸ್ಯೆಯನ್ನು ಪರಿಹರಿಸಲು ಕೈಗಾರೀಕರಣ ಅತ್ಯವಶ್ಯವಾಗಿದೆ.

೨. ಅಪೂರ್ಣ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳ ಪೂರ್ಣ ಬಳಕೆಯಾಗುತ್ತಿಲ್ಲವಾದ್ದರಿಂದ ರಾಷ್ಟ್ರೀಯ ವರಮಾನ ತೀರ ಕಡಿಮೆಯಿರುತ್ತದೆ. ಲಭ್ಯವಿರುವ

ಸಂಪನ್ಮೂಲಗಳನ್ನು ಪೂರ್ಣಬಳಸಿಕೊಂಡು ತೀವ್ರಗತಿಯಿಂದ ಆರ್ಥಿಕ ಪ್ರಗತಿಯನ್ನು ಸಾಧಿಸಬೇಕಾದರೆ ಕೈಗಾರಿಕೆಗಳ ಬೆಳವಣಿಗೆ ಅವಶ್ಯವಾಗಿರುವುದು.

೩. ಹಿಂದುಳಿದ ರಾಷ್ಟ್ರಗಳು ಕೃಷಿಪ್ರಧಾನ ರಾಷ್ಟ್ರಗಳಾಗಿದ್ದರಿಂದ ಅವು ಸಾಂಪ್ರದಾಯಿಕ ವಸ್ತುಗಳನ್ನು ಪರರಾಷ್ಟ್ರಗಳಿಗೆ ನಿರ್ಯಾತ ಮಾಡಿ ಅಂತಿಮ ವಸ್ತುಗಳನ್ನು ಆಯಾತ ಮಾಡಿಕೊಳ್ಳುವುದರಿಂದ ವಿದೇಶಿ ವಿನಿಮಯದ ಸಂಗ್ರಹ ಕಡಿಮೆಯಾಗುತ್ತದೆ. ಇದರಿಂದ ಬಂಡವಾಳ ಶೇಕರಣೆಯ ಪ್ರಮಾಣ ಕಡಿಮೆಯಾಗಿ ಆರ್ಥಿಕ ಅಭಿವೃದ್ಧಿಯು ಮಂದದಾಯಕವಾಗುವುದು. ವಿದೇಶಿ ವಿನಿಮಯದ ಸಂಗ್ರಹವನ್ನು ಹೆಚ್ಚಿಸಲು ಆಯಾತ ಪ್ರತಿನಿಧಾನ ವಸ್ತುಗಳನ್ನು ಉತ್ಪಾದಿಸಲು ಹಾಗೂ ಅಂತಿಮ ವಸ್ತುಗಳನ್ನು ಪರರಾಷ್ಟ್ರಗಳಿಗೆ ನಿರ್ಯಾ ಮಾಡಲು ಕೈಗಾರಿರೀಕರಣವು ತೀರ ಅಗತ್ಯವಾಗಿರುತ್ತದೆ.

೪. ಕೃಷಿ ರಂಗದ ಉತ್ಪಾದನಾ ಸಾಮರ್ಥ್ಯ ಉದ್ದಿಮೆ ರಂಗಕ್ಕಿಂತ ಕಡಿಮೆಯಿರುವುದು. ಇಳಿಮುಖ ಅಂಚಿನ ಪ್ರತಿಫಲ ಸಿದ್ಧಾಂತವು ಕೃಷಿ ವಲಯಕ್ಕೆ ಅನ್ವಯಿಸುತ್ತಿದ್ದರಿಂದ, ಹೆಚ್ಚು ಹೆಚ್ಚು ಬಂಡವಾಳ ವಿನಿಯೋಗವಾದಂತೆ ಉತ್ಪಾದನಾ ಪ್ರಮಾಣ ಕಡಿಮೆಯಾಗುವುದು. ಆದರೆ ಉದ್ದಿಮೆ ವಲಯಗಳಲ್ಲಿ ಅಧಿಕ ಬಂಡವಾಳ, ಶ್ರಮವಿಭಜನೆ ಯಾಂತ್ರೀಕರಣ ಮತ್ತು ನೈಪುಣ್ಯತೆ ಮೊದಲಾದವುಗಳನ್ನುಪಯೋಗಿಸಿ ಬೃಹತ್ ಪ್ರಮಾಣದಲ್ಲಿ ಉತ್ಪಾದನೆ ಮಾಡುವುದರಿಂದ ಕೈಗಾರಿಕೆಗಳ ಉತ್ಪಾದನಾ ಸಾಮರ್ಥ್ಯ ಹೆಚ್ಚಾಗಿರುತ್ತದೆ. ಔದ್ಯೋಗೀಕರಣ ತ್ವರಿತಗೊಂಡಂತೆ ಉತ್ಪಾಧನಾ ಸಾಮರ್ಥ್ಯ ಹೆಚ್ಚಾಗಿ ರಾಷ್ಟ್ರೀಯ ವರಮಾನ ಮತ್ತು ತಲಾ ಆದಾಯ ಹೆಚ್ಚಾಗುತ್ತದೆ.

೫. ಒಂದು ರಾಷ್ಟ್ರವು ಸ್ವಾವಲಂಬನೆ ಸಾಧಿಸಿ ಪರರಾಷ್ಟ್ರಗಳ ಮೇಲಿನ ಅವಲಂಬನೆಯನ್ನು ಕಡಿಮೆಗೊಳಿಸಬೇಕಾದರೆ ಕೈಗಾರಿಕೆಗಳ ಅಭಿವೃದ್ಧಿಯು ಅನಿವಾರ್ಯವಾಗಿರುತ್ತದೆ. ಗಂಡಾಂತರ ಪರಿಸ್ಥಿತಿಗಳಲ್ಲಿ ಸಂರಕ್ಷಣೆ–ಸಾಮಗ್ರಿಗಳನ್ನು ಪರರಾಷ್ಟ್ರಗಳಿಂದ ಆಯಾತ ಮಾಡಿಕೊಳ್ಳುತ್ತಿದ್ದರೆ ರಾಷ್ಟ್ರವು ಬಿಕ್ಕಟ್ಟಿನ ಪರಿಸ್ಥಿತಿಯನ್ನು ಅನುಭವಿಸಬೇಕಾಗುತ್ತದೆ. ಇದನ್ನು ತಪ್ಪಿಸಬೇಕಾದರೆ ರಾಷ್ಟ್ರದಲ್ಲಿಯೇ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಿ ಸ್ವಾವಲಂಬನೆ ಸಾಧಿಸಬೇಕಾಗುವುದು ಅವಶ್ಯಕ. ಹೀಗೆ ರಾಷ್ಟ್ರದ ಸಂರಕ್ಷಣೆ ದೃಷ್ಟಿಯಿಂದ ಔದ್ಯೋಗೀಕರಣದ ಕಾರ್ಯವು ಅತ್ಯವಶ್ಯಕವಾಗಿರುತ್ತದೆ.

ಭಾರತದಂತಹ ಹಿಂದುಳಿದ ರಾಷ್ಟ್ರಗಳಲ್ಲಿ ಔದ್ಯೋಗೀಕರಣವನ್ನು ತ್ವರಿತಗೊಳಿಸಲು ತುಂಬಾ ಅನುಕೂಲ ಪರಿಸರವಿದೆ. ದೇಶವು ಕೃಷಿಪ್ರಧಾನವಾಗಿದ್ದು, ಒಟ್ಟು ಜನಸಂಖ್ಯೆಯ ಬಹುಜನರು ಕೃಷಿಯನ್ನವಲಂಬಿಸಿರುವರು. ತತ್ಪರಿಣಾಮವಾಗಿ ತಲೆಮರೆಸಿದ ನಿರುದ್ಯೋಗವು ಕೃಷಿವಲಯದಲ್ಲಿ ಉದ್ಭವಿಸಿ ಉತ್ಪಾದನೆ ಕಡಿಮೆಯಾಗುತ್ತದೆ. ಕೃಷಿವಲಯದಲ್ಲಿ ಅಗತ್ಯಕ್ಕಿಂತ ಹೆಚ್ಚು ತೊಡಗಿದ ಜನರನ್ನು ಬೇರೆ ಉದ್ದಿಮೆಗಳಲ್ಲಿ ತೊಡಗಿಸಿ ಅವರ ಉತ್ಪಾದನೆ ಸಾಮರ್ಥ್ಯವನ್ನು ಹೆಚ್ಚಿಸಲು ಸಾಧ್ಯವಿದೆ. ರಾಷ್ಟ್ರದಲ್ಲಿರುವ ವಿಸ್ತೃತ ನೈಸರ್ಗಿಕ ಸಂಪನ್ಮೂಲಗಳ ಅಪೂರ್ಣ ಬಳಕೆಯಾಗಿ ಅನವಶ್ಯಕವಾಗಿ ಪೋಲಾಗುತ್ತಿರುವ ಸಂಪನ್ಮೂಲಗಳನ್ನು ಪೂರ್ಣ ಬಳಕೆ ಮಾಡಿ ರಾಷ್ಟ್ರೀಯ

ವರಮಾನವನ್ನು ಹೆಚ್ಚಿಸಲು ಉದ್ದಿಮೆಗಳ ಪ್ರಗತಿಯು ಸಹಾಯಕಾರಿಯಾಗುವದು. ವಿದೇಶಿ ವಿನಿಮಯ ಸಂಗ್ರಹ ಹೆಚ್ಚಿಸಬೇಕಾದರೆ ಆಯಾತ ಪ್ರತಿ ನಿಧಾನ ವಸ್ತುಗಳನ್ನು ಉತ್ಪಾದಿಸಲು ಹಾಗೂ ಅಂತಿಮ ವಸ್ತುಗಳ ನಿರ್ಯಾತ ಅವಶ್ಯವಾಗಿರುತ್ತದೆ. ವಿದೇಶಿ ವಿನಿಮಯ ಸಂಗ್ರಹದ ಅಭಾವದಿಂದ ಬಳಲುತ್ತಿರುವ ಭಾರತವು ಔದ್ಯೋಗೀಕರಣದಿಂದ ವಿದೇಶಿ ಋಣದ ಸಮಸ್ಯೆಯನ್ನು ಬಗೆಹರಿಸಿ ವರಮಾನವನ್ನು ಹೆಚ್ಚಿಸಲು ಸಾಧ್ಯವಿದೆ. ದೇಶದಲ್ಲಿ ಆರ್ಥಿಕ ಸ್ಥಿರತೆಯನ್ನು ಸಾಧಿಸಿ ತೀವ್ರಗತಿಯಿಂದ ಸ್ವಾವಲಂಬನೆಯತ್ತ ಮುನ್ನಡೆಯಬೇಕಾದರೆ ಕೃಷಿ ಪ್ರಗತಿಯು ಕೈಗಾರಿಕೆಗಳ ಅಭಿವೃದ್ಧಿಯ ಕೂಡ ಜೊತೆ ಜೊತೆಯಾಗಿ ಸಾಗಬೇಕಾಗುವುದು. ಔದ್ಯೋಗೀಕರಣವಾಗದೇ ಕೃಷಿಯಲ್ಲಿ ಕ್ರಾಂತಿಯಾಗಲು ಸಾಧ್ಯವಿಲ್ಲ. ಕೃಷಿಯಲ್ಲಿ ಯಾಂತ್ರೀಕೃತೆಯನ್ನು ತರದೆ ಔದ್ಯೋಗಿಕ ವಿಕಾಸವು ಸ್ಥಿರಗೊಳ್ಳಲಾರದು. ಹೀಗೆ ಕೃಷಿ ಮತ್ತು ಉದ್ದಿಮೆ ರಂಗಗಳ ಕ್ರಾಂತಿಗಳು ಒಂದಕ್ಕೊಂದು ಪೂರಕವಾಗಿರುವುದರಿಂದ ಎರಡು ವಲಯಗಳಲ್ಲಿ ಔದ್ಯೋಗೀಕರಣವು ಅವಶ್ಯವಾಗಿದೆ. ಈ ಭಾಷಾಂತರ ಭಾಗವು ಭಾರತೀಯ ಅರ್ಥಶಾಸ್ತ್ರ ಪು.೧೫೩–೧೫೫ರಲ್ಲಿ ಐ.ಟಿ.ಹಟ್ಟಿಯವರು ನಿರೂಪಿಸಲ್ಪಟ್ಟಿದೆ.

**ಕೈಗಾರಿಕೆಗಳು: ಕೈಗಾರಿಕಾಕರಣವೆಂದರೇನು?:** ಕೈಗಾರಿಕಾಕರಣವೆಂದರೆ ಕಾರ್ಖಾನೆಗಳನ್ನು ಸ್ಥಾಪಿಸುವುದು ಎಂದರ್ಥ. ಅಂದರೆ ದೊಡ್ಡ ಕೈಗಾರಿಕೆಗಳು, ಸಣ್ಣ ಕೈಗಾರಿಕೆಗಳು, ಗೃಹ ಕೈಗಾರಿಕೆಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಗಣಿಗಳು, ಸಾರಿಗೆ ಸಂಪರ್ಕ ಮೊದಲಾದವುಗಳನ್ನು ಸ್ಥಾಪಿಸುವುದು ಹಾಗೂ ಅಭಿವೃದ್ಧಿಗೊಳಿಸುವುದು. ಕೈಗಾರಿಕಾಕರಣವು ರಾಷ್ಟ್ರದ ಜೀವನವನ್ನು ಸಂಪೂರ್ಣವಾಗಿ ಬದಲಾಯಿಸುತ್ತದೆ. ಇದು ರಾಷ್ಟ್ರದ ಆರ್ಥಿಕ ಬೆಳವಣಿಗೆಯನ್ನು ಅಳೆಯುವ ಮಾಪನವಿದ್ದಂತೆ. ಆರ್ಥಿಕ ಬೆಳವಣಿಗೆ ಎಂದರೆ ಉತ್ಪಾದನೆಯ ನವೀಕರಣ. ಇತ್ತೀಚೆಗೆ ಕೈಗಾರಿಕೆಗಳ ಅಭಿವೃದ್ಧಿಯು ರಾಷ್ಟ್ರದ ಆರ್ಥಿಕಾಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಒಂದು ಮುಖ್ಯ ಅಂಗವಾಗಿದೆ. ಏಕೆಂದರೆ ಒಂದು ರಾಷ್ಟ್ರದ ಆರ್ಥಿಕಾಭಿವೃದ್ಧಿ ತ್ವರಿತಗತಿಯಲ್ಲಿ ಹೊಂದಲು, ರಾಷ್ಟ್ರದ ಆದಾಯವನ್ನು ಅಧಿಕಗೊಳಿಸಲು ಕೈಗಾರಿಕಾಕರಣ ಅಗತ್ಯ. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು 'ನಾವು ಕೈಗಾರಿಕಾಕರಣದ ಪಥವನ್ನು ಹಿಡಿಯದಿದ್ದರೆ ದೇಶಕ್ಕೆ ಹಾನಿ' ಎಂಬ ಸತ್ಯವನ್ನು ಕಂಡಿದ್ದರು. ಆದ್ದರಿಂದಲೇ ಅವರು 'ಕೈಗಾರಿಕಾಕರಣ ಇಲ್ಲವೆ ನಾಶ' ಎಂದು ಘೋಷಿಸಿದ್ದರು. ನಮ್ಮ ಕೈಗಾರಿಕಾ ಕ್ರಾಂತಿಯ ಮೂಲ ಪುರುಷ ದಿವಂಗತ ನೆಹರೂರವರು ಯಾವೊಂದು ರಾಷ್ಟ್ರಕ್ಕಾಗಲಿ ದೊಡ್ಡ ಮತ್ತು ಸಣ್ಣ ಕೈಗಾರಿಕೆಯ ಬೆಳವಣಿಗೆಯು ಅತ್ಯಗತ್ಯ. ನಿಜಕ್ಕೂ ಕೈಗಾರಿಕಾಭಿವೃದ್ಧಿಯಿಲ್ಲದೆ ನಮ್ಮ ಜನತೆಯ ಜೀವನಮಟ್ಟವನ್ನು ಹೆಚ್ಚಿಸಲು ಸಾಧ್ಯವಿಲ್ಲ ಮತ್ತು ರಾಷ್ಟ್ರ ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಬರುವ ಶಕ್ತಿಯನ್ನು ಪಡೆದಿರುವುದಿಲ್ಲ ಎಂಬುದಾಗಿ ಹೇಳಿದ್ದರು. ಆಧುನಿಕ ಯುಗದಲ್ಲಿ ಪ್ರಗತಿ ಹೊಂದಬೇಕಾದರೆ ಬೃಹತ್ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸಬೇಕಾಗುತ್ತದೆ. ಕೈಗಾರಿಕಾಕರಣದಿಂದ ಮಾತ್ರ ಇದು ಸಾಧ್ಯ. ಹಿಂದುಳಿದ ದೇಶದಲ್ಲಂತೂ ಕೈಗಾರಿಕಾಕರಣ ಬಹಳ ಮಹತ್ವದ ಪಾತ್ರ ಹೊಂದಿದೆ. ೧. ಕೈಗಾರಿಕಾಭಿವೃದ್ಧಿಯಿಂದಾಗುವ ಲಾಭಗಳು ೨. ನಿರುದ್ಯೋಗದ

ನಿವಾರಣೆ ೩. ಕೃಷಿ ಅಭಿವೃದ್ಧಿಗೆ ಪೂರಕ ೪. ಸರಕಾರದ ಆದಾಯದಲ್ಲಿ ಹೆಚ್ಚಳ ೫. ನಗರಗಳ ಅಭಿವೃದ್ಧಿಗೆ ಸಹಕಾರಿ ೬. ರಾಷ್ಟ್ರ ರಕ್ಷಣೆ ೭. ಆರ್ಥಿಕ ಮತ್ತು ರಾಜಕೀಯ ಚಟುವಟಿಕೆಗಳ ಮೇಲೆ ಪ್ರಭಾವ ೮. ಸಂಪನ್ಮೂಲಗಳ ಸದುಪಯೋಗ

ಕೈಗಾರಿಕೆ (Industry) : ಆರ್ಥಿಕತೆಯ ಎಲ್ಲ ವಲಯಗಳನ್ನು ಮೂರು ಭಾಗಗಳಾಗಿ ವರ್ಗೀಕರಿಸಿದಾಗ ಕೈಗಾರಿಕೆಗಳು 'ದ್ವಿತೀಯ' ವಲಯ (Secondary Sector) ಎನ್ನಿಸಿಕೊಳ್ಳುತ್ತವೆ ಕೈಗಾರಿಕೆಗಳು ಒಂದು ದೇಶದ ಮೂಳೆಗಳಿದ್ದಂತೆ. ಮಾನವ ದೇಹಕ್ಕೆ ಪೂರ್ಣ ಚೈತನ್ಯವನ್ನು ಒದಗಿಸಲು ಮೂಳೆಗಳು ಹೇಗೆ ಅವಶ್ಯಕವೋ ಹಾಗೆಯೇ ಆರ್ಥಿಕತೆಗೆ ಚೇತನ ನೀಡಿ ದೀರ್ಘಕಾಲೀನ ಅಭಿವೃದ್ಧಿ ಸಾಧನೆಗೆ ನೆರವಾಗಲು ಕೈಗಾರಿಕೆಗಳು ಅತ್ಯಂತ ಅವಶ್ಯಕ. ಕೈಗಾರಿಕಾಭಿವೃದ್ಧಿ ಸಾಧಿಸಿದ ರಾಷ್ಟ್ರಗಳನ್ನು ಅಭಿವೃದ್ಧಿ ರಾಷ್ಟ್ರಗಳೆಂದೂ ಕೈಗಾರಿಕೆಯಲ್ಲಿ ಹಿಂದುಳಿದ, ಕೃಷಿಯನ್ನೇ ಪ್ರಧಾನ ಕಸುಬಾಗಿ ಹೊಂದಿರುವ ರಾಷ್ಟ್ರಗಳನ್ನು ಅನಭಿವೃದ್ಧಿ ರಾಷ್ಟ್ರಗಳೆಂದೂ ಕರೆಯುವುದು ಆರ್ಥಿಕ ಸಾಹಿತ್ಯದಲ್ಲಿ ರೂಢಿಯಾಗಿ ಬೆಳೆದುಬಂದಿದೆ. ಈ ತರ್ಕಕ್ಕೆ ಸುಲಭವಾದ ನೆಲೆಯೂ ಇದೆ. ಕೃಷಿ ಪ್ರಧಾನ ದೇಶಗಳು ಪೂರ್ವಾಚಾರದ ಆರ್ಥಿಕತೆಯನ್ನೇ ಹೊಂದಿದ್ದು ಜನತೆಯ ಜೀವನ ಮಟ್ಟವನ್ನು ಹೆಚ್ಚಿಸಲು ಮತ್ತು ವಿದೇಶೀ ವ್ಯಾಪಾರದಲ್ಲಿ ಅಧಿಕ ಮೊತ್ತವನ್ನು ಗಳಿಸಲು ಅಸಮರ್ಥವಾಗಿರುತ್ತವೆ. ಭೂಮಿಯ ಫಲವತ್ತತೆ ಮತ್ತು ಕೃಷಿಯ ಉತ್ಪಾದಕತೆಗೆ ಮಿತಿ ಇರುವಿಕೆ ಮತ್ತು ಪ್ರಾಥಮಿಕ ಉತ್ಪನ್ನಗಳ ಬೆಲೆ ಕಡಿಮೆ ಇರುವಿಕೆಯೇ ಇದಕ್ಕೆ ಕಾರಣ. ಆದರೆ ಕೈಗಾರೀಕರಣ ಸಾಧಿಸಿದ ಆರ್ಥಿಕತೆಯನ್ನು ಆಧುನೀಕತೆಯನ್ನು ಸಾಧಿಸಿದ್ದು ಮುಂದುವರಿದ ಲಕ್ಷಣಗಳನ್ನು ಪಡೆದಿರುತ್ತದೆ. ಆರ್ಥಿಕಾಭಿವೃದ್ಧಿಗೆ ಕೈಗಾರಿಕೆ ಬೆಳವಣಿಗೆ ಅನಿವಾರ್ಯ.

ಕೈಗಾರೀಕರಣದ ಪ್ರಾಮುಖ್ಯತೆ : ಈ ಕೆಳಗಿನ ಅಂಶಗಳನ್ನು ಗಮನಿಸಿದಾಗ ಆರ್ಥಿಕಾಬಭಿವೃದ್ಧಿ ಯಲ್ಲಿ ಕೈಗಾರೀಕರಣದ ಮಹತ್ವ ತಿಳಿಯುತ್ತದೆ. ಕೃಷಿಯ ಪ್ರಗತಿಗೆ ಕೊಡುಗೆ ಆರ್ಥಿಕತೆಯ ಇತರ ವಲಯಗಳ ಪ್ರಗತಿಗೆ ಕೈಗಾರಿಕಾ ಬೆಳವಣಿಗೆ ಅತ್ಯಂತ ಅವಶ್ಯಕ. ಕೈಗಾರಿಕೆಗಳು ಕೃಷಿಗೆ ಅಗತ್ಯವಿರುವ ಹೂಡುವಳಿ(Inputs)ಗಳನ್ನು ಒದಗಿಸುತ್ತವೆ. ಆಧುನಿಕ ಬೇಸಾಯ ಪದ್ಧತಿಗೆ ಬೇಕಿರುವ ಯಂತ್ರಗಳು, ರಾಸಾಯನಿಕ ಗೊಬ್ಬರಗಳು, ಕೀಟನಾಶಕಗಳು ಮೊದಲಾದವು ಕೈಗಾರಿಕೋತ್ಪನ್ನಗಳೇ. ಅಂತೆಯೇ ಕೃಷಿಯ ಉತ್ಪನ್ನಗಳನ್ನು ಬಳಸಿಕೊಳ್ಳಲು ಕೈಗಾರಿಕೆಗಳು ಅನಿವಾರ್ಯ. ಹತ್ತಿ, ಸೆಣಬು, ಕಬ್ಬು ಇನ್ನೂ ಮುಂತಾದ ಕೃಷಿಯ ಉತ್ಪನ್ನಗಳು ಕೈಗಾರಿಕೆಗಳಿಗೆ ಕಚ್ಚಾ ಸರಕುಗಳಾಗಿರುತ್ತವೆ. ಹತ್ತಿ, ಸೆಣಬು ಮತ್ತು ಸಕ್ಕರೆ ಕೈಗಾರಿಕೆಗಳಿರದಿದ್ದಲ್ಲಿ ಕೃಷಿ ಸರಕುಗಳು ಉಪಯೋಗಕ್ಕೆ ಬರಲು ಸಾಧ್ಯವಿರದಿದ್ದು, ಆ ಕ್ಷೇತ್ರದ ಮುನ್ನಡೆ ಕುಂಠಿತಗೊಳ್ಳುತ್ತದೆ. ಆದ್ದರಿಂದ ಕೃಷಿ ವಲಯದ ಬೆಳವಣಿಗೆಗೆ ಕೈಗಾರಿಕೆಗಳ ಪಾತ್ರವನ್ನು ಎಷ್ಟು ಹೇಳಿದರೂ ತೀರದು. ಈ ಭಾಗವು ಎಚ್.ಆರ್.ಕೃಷ್ಣೇಗೌಡ ಆಧುನಿಕ ಭಾರತದ ಆರ್ಥಿಕಾಭಿವೃದ್ಧಿಯಲ್ಲಿ ಭಾಷಾಂತರವಾಗಿರುತ್ತದೆ.

ಭಾರತದಲ್ಲಿ ಕೈಗಾರಿಕೀಕರಣ (Industiralisation in India) : ಪ್ರಸ್ತಾವನೆ: ಕೈಗಾರಿಕಾಭಿವೃದ್ಧಿಯ ವಿವಿಧ ಅಂಶಗಳನ್ನು ಚರ್ಚೆಗೆ ತೆಗೆದುಕೊಳ್ಳುವ ಮುನ್ನ ನಾವು ಕೈಗಾರಿಕೀಕರಣ ಅಥವಾ ಕೈಗಾರಿಕಾಭಿವೃದ್ಧಿಯ ಅರ್ಥ ಮತ್ತು ಭಾರತದಲ್ಲಿ ಕೈಗಾರಿಕೀಕರಣದ ಪ್ರಾಮುಖ್ಯತೆಯ ಬಗ್ಗೆ ಸ್ವಲ್ಪ ತಿಳಿದುಕೊಳ್ಳೋಣ.

ಔದ್ಯೋಗೀಕರಣ ಎಂದರೇನು? : ಔದ್ಯೋಗೀಕರಣ ಅಥವಾ ಉದ್ಯಮೀಕರಣ ಎಂದರೆ ಕೈಗಾರಿಕೆ ಮತ್ತು ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳ (ಎಂದರೆ ಗನಿಗಾರಿಕೆ, ಶಕ್ತಿ ಸ್ಥಾವರಗಳು, ಸಾರಿಗೆ ಮತ್ತು ಸಂಪರ್ಕಗಳು, ಇತ್ಯಾದಿಗಳು) ಅಭಿವೃದ್ಧಿ. ಕೈಗಾರಿಕೆಗಳ ಅಭಿವೃದ್ಧಿ ಅಂದರೆ ಕಾರ್ಖಾನೆಗಳು, ಮಿಲ್ಲುಗಳು, ಗಣಿಗಳು, ಶಕ್ತಿ ಸ್ಥಾವರಗಳು, ರಸ್ತೆಗಳು, ರೈಲುಗಳು ಇತ್ಯಾದಿಗಳನ್ನು ಸ್ಥಾಪಿಸಿ ಅಭಿವೃದ್ಧಿಪಡಿಸುವುದು.

**ಭಾರತದಲ್ಲಿ ಔದ್ಯೋಗೀಕರಣದ ಅವಶ್ಯಕತೆ ಮತ್ತು ಪ್ರಾಶಸ್ತ್ಯ:** ಯಾವ ರಾಷ್ಟ್ರವೇ ಆಗಲಿ, ಅದರ ಆರ್ಥಿಕ ಬೆಳವಣಿಗೆಯಲ್ಲಿ ಔದ್ಯೋಗೀಕರಣವು ಪ್ರಧಾನ ಪಾತ್ರವನ್ನು ವಹಿಸುತ್ತದೆ. ಕ್ಷಿಪ್ರಗತಿಯಲ್ಲಿ ಉದ್ಯಮೀಕರಣವಾಗದೆ, ಆರ್ಥಿಕಾಭಿವೃದ್ಧಿ ಅಸಾಧ್ಯ. ಆದುದರಿಂದಲೇ, ಕೆಲ ಅರ್ಥಶಾಸ್ತ್ರಜ್ಞರು ಆರ್ಥಿಕಾಭಿವೃದ್ಧಿ ಎಂದರೆ ಕೈಗಾರಿಕೆಯ ಅಭಿವೃದ್ಧಿ ಎಂದೇ ಪರಿಗಣಿಸುತ್ತಾರೆ. ಭಾರತದಂತಹ ಹಿಂದುಳಿದ ಹಾಗೂ ಮುಂದುವರೆಯುತ್ತಿರುವ ಅರ್ಥವ್ಯವಸ್ಥೆಯಲ್ಲಿ ಕೈಗಾರಿಕೆಯ ಮುನ್ನಡೆ ಅನಿವಾರ್ಯವಾಗಿದೆ. ಹೀಗಾಗಿ, ಡಾ.ಎಮ್. ವಿಶ್ವೇಶ್ವರಯ್ಯನವರ ಮಾತು, "ಕೈಗಾರಿಕೆಯಲ್ಲಿ ಮುನ್ನಡೆಯು, ಇಲ್ಲವೇ ನಾಶಹೊಂದು" ಎಂಬುದು ಸಂಪೂರ್ಣ ಸತ್ಯ.

ಕೈಗಾರಿಕೀಕರಣದ ಅರ್ಥವಿವರಣೆ : ದೇಶವೊಂದರ ಆರ್ಥಿಕ ಕೈಗಾರಿಕೀಕರಣವು ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಕೈಗಾರಿಕೀಕರಣ ಇಲ್ಲದ ಆರ್ಥಿಕ ಅಭಿವೃದ್ಧಿ ಕುಂಠಿತಗೊಳ್ಳುವ ಅಪಾಯ ಹೆಚ್ಚು. ವಿವಿಧ ಉದ್ಯಮಗಳು, ಕಾರ್ಖಾನೆಗಳು ಮತ್ತು ಕೈಗಾರಿಕೆಗಳನ್ನು ಸ್ಥಾಪಿಸುವುದು ಮತ್ತು ಅವುಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸುವುದನ್ನು 'ಕೈಗಾರಿಕೀಕರಣ' ಅಥವಾ 'ಔದ್ಯೋಗೀಕರಣ' ಎನ್ನಲಾಗುವುದು. ಕೈಗಾರಿಕೀಕರಣ ಒಂದು ನಿರಂತರ ಪ್ರಕ್ರಿಯೆಯಾಗಿದ್ದು ಇದರಲ್ಲಿ ಹೊಸ ಹೊಸ ಉದ್ದಿಮೆಗಳು ಮತ್ತು ಕೈಗಾರಿಕೆಗಳನ್ನು ಸ್ಥಾಪಿಸಲಾಗುತ್ತದೆ. ಅಲ್ಲದೆ ಗಣಿಗಾರಿಕೆ, ವಿದ್ಯುತ್ ಸ್ಥಾವರಗಳ ಸ್ಥಾಪನೆ, ಸಾರಿಗೆ ಮತ್ತು ಸಂಪರ್ಕ ಸೌಲಭ್ಯಗಳ ಅಭಿವೃದ್ಧಿ ಮುಂತಾದ ಚಟುವಟಿಕೆಗಳನ್ನೂ ನಡೆಸಿಕೊಂಡು ಹೋಗಲಾಗುತ್ತದೆ. ಸಂಕ್ಷಿಪ್ತವಾಗಿ ಎಲ್ಲಾ ರೀತಿಯ ಕೈಗಾರಿಕೆಗಳ ಸ್ಥಾಪನೆ ಮತ್ತು ಅವುಗಳಿಗೆ ಸಂಬಂಧಿಸಿದ ಇತರೆ ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಹೋಗುವುದೇ ಕೈಗಾರಿಕೀಕರಣವಾಗಿದೆ.

ಭಾರತದ ಆರ್ಥಿಕತೆಯಲ್ಲಿ ಕೈಗಾರಿಕೆಗಳ ಮಹತ್ವ (Importance of Industries in Indian economy) : 'ಕೈಗಾರಿಕೀಕರಣ ಇಲ್ಲವೇ ವಿನಾಶ' ಎಂದು ಭಾರತ ರತ್ನ ಸರ್.ಎಂ. ವಿಶ್ವೇಶ್ವರಯ್ಯನವರು ಹೇಳಿರುವಂತೆ ಕೈಗಾರಿಕೆಗಳು ಯಾವುದೇ ದೇಶದ ಆರ್ಥಿಕಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಏಕೆಂದರೆ ಕೈಗಾರಿಕೆಗಳ ಅಭಿವೃದ್ಧಿಯಿಲ್ಲದೆ ಆರ್ಥಿಕಾಭಿವೃದ್ಧಿ ಸಾಧ್ಯವಿಲ್ಲದ ಮಾತು. ವಾಸ್ತವವಾಗಿ ಕೈಗಾರಿಕೀಕರಣ ಮತ್ತು ಆರ್ಥಿಕಾಭಿವೃದ್ಧಿ ಒಂದೇ ಎಂದು ಭಾವಿಸಲಾಗಿದೆ. ಕೈಗಾರಿಕೆಗಳು ಶರೀರದ ಮೂಳೆಗಳಿದ್ದಂತೆ. ಕೃಷಿ ಎಂಬ ಶರೀರದ ಶಕ್ತಿ ಚೈತನ್ಯವನ್ನು ಹೆಚ್ಚಿಸಲು ಕೈಗಾರಿಕೆಗಳು ಅತ್ಯಾವಶ್ಯಕ. ಅದರಲ್ಲೂ ಮುಖ್ಯವಾಗಿ ಭಾರತದಂತಹ ಕೃಷಿ ಪ್ರಧಾನ ರಾಷ್ಟ್ರದಲ್ಲಿ ಕೈಗಾರಿಕೆಗಳು ವಿಶೇಷ ಸ್ಥಾನ ಪಡೆದಿದೆ. ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದರಿಂದ ದೇಶಕ್ಕಾಗುವ ಅನುಕೂಲಗಳು ಈ ಕೆಳಗಿನಂತಿವೆ.

೧. ಉದ್ಯೋಗ ಸೃಷ್ಟಿ (Employment generation) : ಉದ್ಯೋಗ ಸೃಷ್ಟಿ ಕೈಗಾರಿಕೆಗಳು ಪ್ರಮುಖ ಕೊಡುಗೆಯಾಗಿದೆ. ಕೈಗಾರಿಕೆಗಳ ಪ್ರಮುಖ ಕೊಡುಗೆಯಾಗಿದೆ. ಕೈಗಾರಿಕೆಗಳ ಸ್ಥಾಪನೆ ಮತ್ತು ಬೆಳವಣಿಗೆಯಿಂದ ಸಾವಿರಾರು ಜನರಿಗೆ ಉದ್ಯೋಗ ಲಭ್ಯವಾಗುತ್ತದೆ. ಅದರಲ್ಲೂ ವ್ಯಾಪಕ ನಿರುದ್ಯೋಗ ಮತ್ತು ಅರೆ ನಿರುದ್ಯೋಗ ಸಮಸ್ಯೆ ಎದುರಿಸುತ್ತಿರುವ ಭಾರತದಂತಹ ದೇಶದಲ್ಲಿ ಕೈಗಾರಿಕೆಗಳು ಮಹತ್ವದ ಪಾತ್ರ ವಹಿಸುತ್ತವೆ.

೨. ಅಧಿಕ ಉತ್ಪಾದನೆ (Large production) : ಕೈಗಾರಿಕೆಗಳ ಸ್ಥಾಪನೆಯಿಂದ ಅಧಿಕ ಉತ್ಪಾದನೆ ಸಾಧ್ಯವಾಗುತ್ತದೆ. ವ್ಯಾಪಕ ಪ್ರಮಾಣದಲ್ಲಿ ಯಂತ್ರೋಪಕರಣಗಳನ್ನು ಬಳಸಿಕೊಂಡು ಶ್ರಮವಿಭಜನೆ ಮತ್ತು ಆರ್ಥಿಕತೆಯ ಲಾಭಗಳನ್ನು ಪಡೆದು ಸರಕುಗಳನ್ನು ಬೃಹತ್ ಪ್ರಮಾಣದಲ್ಲಿ ಉತ್ಪಾದಿಸಲು ಪ್ರಯತ್ನಿಸಲಾಗುವುದರಿಂದ ಉತ್ಪಾದನೆ ಹೆಚ್ಚಿ ಸರಕುಗಳ ಕೊರತೆಯ ಸಮಸ್ಯೆ ನೀಗುತ್ತದೆ.

೩. ರಾಷ್ಟ್ರೀಯ ಮತ್ತು ತಲಾದಾಯದ ಹೆಚ್ಚಳ (Increase in N.1. and P.1.) : ಕೈಗಾರಿಕೆಗಳ ಬೆಳವಣಿಗೆ ತ್ವರಿತ ಆರ್ಥಿಕಾಭಿವೃದ್ಧಿಯನ್ನು ಸಾಧ್ಯಗೊಳಿಸುತ್ತದೆ. ದೇಶದ ರಾಷ್ಟ್ರೀಯ ಆದಾಯ ಮತ್ತು ತಲಾದಾಯಗಳು ಹೆಚ್ಚುತ್ತವೆ. ಇದರಿಂದಾಗಿ ಜನರ ಜೀವನಮಟ್ಟ ಉತ್ತಮಗೊಳ್ಳುತ್ತದೆ

೪. ಕೃಷಿ ಅಭಿವೃದ್ಧಿ(Promotion of agriculture) : ಭಾರತ ಕೃಷಿ ಪ್ರಧಾನ ರಾಷ್ಟ್ರ. ಶೇಕಡ ೬೫ಕ್ಕಿಂತ ಅಧಿಕ ಸಂಖ್ಯೆಯ ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಕೃಷಿ ತೀರಾ ಹಿಂದುಳಿದ ವಲಯವಾಗಿದೆ. ಅದರ ಸರ್ವಾಂಗೀಣ ಅಭಿವೃದ್ಧಿ ಕೈಗಾರಿಕಾ ಬೆಳವಣಿಗೆಯಿಂದ ಸಾಧ್ಯ. ಕೃಷಿ ಯಂತ್ರಗಳು, ಉಪಕರಣಗಳು, ರಸಗೊಬ್ಬರಗಳು, ಕ್ರಿಮಿನಾಶಕಗಳು ಮುಂತಾದವುಗಳನ್ನು ಕೈಗಾರಿಕೆಗಳು ಪೂರೈಸುತ್ತವೆ. ಕೃಷಿ ವಲಯದಲ್ಲಿರುವ ಹೆಚ್ಚುವರಿ ಕಾರ್ಮಿಕರನ್ನು ಸಮರ್ಥವಾಗಿ ಬಳಸಿಕೊಳ್ಳಲು ಮತ್ತು ಕೃಷಿಕರ ಆದಾಯವನ್ನು ಹೆಚ್ಚಿಸಲು ಕೈಗಾರಿಕೆಗಳು ಸಹಕರಿಸುತ್ತವೆ.

೫. ಸಾರಿಗೆ ಸಂಪರ್ಕಾಭಿವೃದ್ಧಿ (Development of transport and communication) ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆ ಆರ್ಥಿಕತೆಯ ನರನಾಡಿಗಳಿದ್ದಂತೆ. ಇವುಗಳ ಅಭಿವೃದ್ಧಿಯಾಗದೆ ದೇಶದ ಅಭಿವೃದ್ಧಿ ಸಾಧ್ಯವಾಗುವುದಿಲ್ಲ. ಕೈಗಾರಿಕೆಗಳು ಸಾರಿಗೆ ಮತ್ತು ಸಂಪರ್ಕ ಪರಿಕರಗಳನ್ನು ಪೂರೈಸುವುದರ ಮೂಲಕ ಅವುಗಳ ಅಭಿವೃದ್ಧಿಗೆ ಕಾರಣವಾಗುತ್ತವೆ.

೭. ಉತ್ಪಾದನಾ ಸಾಮರ್ಥ್ಯದ ವೃದ್ಧಿ (Increase in productive capacity) : ಕೈಗಾರಿಕೆಗಳು ಉತ್ಪಾದನಾ ಸಾಮರ್ಥ್ಯವನ್ನು ವೃದ್ಧಿಗೊಳಿಸುತ್ತವೆ. ಅತ್ಯಾಧುನಿಕ ಯಂತ್ರೋಪಕರಣಗಳ ಪೂರೈಕೆ, ಶ್ರಮ ವಿಭಜನೆಯ ಅಳವಡಿಕೆ, ಹಿತದಾಯಕ ಮತ್ತು ಐಷಾರಾಮದ ಸರಕುಗಳ ಲಭ್ಯತೆ, ಆಧುನಿಕ ತಂತ್ರಜ್ಞಾನದ ಬೆಳವಣಿಗೆ ಮುಂತಾದವು ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ.

೭. ಸಂಪನ್ಮೂಲಗಳ ಸದ್ಬಳಕೆ (Use of potential resources) : ಭಾರತದಲ್ಲಿ ವಿವಿಧ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳು ಹೇರಳವಾಗಿ ಲಭ್ಯವಿವೆ. ಈ ಸಂಪನ್ಮೂಲಗಳನ್ನೆಲ್ಲ ದಕ್ಷವಾಗಿ ಮತ್ತು ಸಮರ್ಥವಾಗಿ ಬಳಸಿಕೊಳ್ಳಬೇಕೆಂದರೆ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಬೇಕಾಗುತ್ತದೆ.

೮. ವಿದೇಶಿ ವಿನಿಮಯ ಗಳಿಕೆ (Foreign exchange earning) : ಕೈಗಾರಿಕೆಗಳನ್ನು ತ್ವರಿತವಾಗಿ ಅಭಿವೃದ್ಧಿಪಡಿಸುವುದರ ಮೂಲಕ ಭಾರತ ಹೆಚ್ಚು ಹೆಚ್ಚು ಸಿದ್ಧಪಡಿಸಿದ ಸರಕುಗಳನ್ನು ರಫ್ತು ಮಾಡಿ ಅಧಿಕ ಪ್ರಮಾಣದ ವಿದೇಶಿ ವಿನಿಮಯವನ್ನು ಗಳಿಸಬಹುದಾಗಿದೆ. ಇದರಿಂದ ಪಾವತಿ ಶಿಲ್ಕಿನ ಸಮಸ್ಯೆ ಬಗೆಹರಿದಂತಾಗುತ್ತದೆ ಹಾಗೂ ಗಳಿಕೆಯಾದ ಅಮೂಲ್ಯ ವಿದೇಶಿ ವಿನಿಮಯವನ್ನು ಅಭಿವೃದ್ಧಿ ಚಟುವಟಿಕೆಗಳಿಗೆ ಬಳಸಿಕೊಳ್ಳಬಹುದಾಗಿದೆ.

೯. ರಾಷ್ಟ್ರ ರಕ್ಷಣೆ (National defence) : ಕೈಗಾರಿಕೆಗಳ ಬೆಳವಣಿಗೆ ರಾಷ್ಟ್ರ ರಕ್ಷಣೆಗೆ ಅತ್ಯಾವಶ್ಯಕ. ಮೆಷಿನ್ ಗನ್ನುಗಳು, ಟ್ಯಾಂಕರುಗಳು, ಆಧುನಿಕ ಬಂದೂಕುಗಳು, ಅಣುಬಾಂಬುಗಳು, ಯುದ್ಧ ವಿಮಾನಗಳು, ಅತ್ಯಾಧುನಿಕ ಸಾರಿಗೆ ಪರಿಕರಗಳು ಮುಂತಾದ ಆಧುನಿಕ ಯುದ್ಧೋಪಕರಣಗಳನ್ನು ಪೂರೈಸುವುದರ ಮೂಲಕ ಕೈಗಾರಿಕೆಗಳು ರಾಷ್ಟ್ರ ರಕ್ಷಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ.

೧೦. ಸಮತೋಲನ ಅಭಿವೃದ್ಧಿ (Balanced development) : ವಿವಿಧ ಪ್ರದೇಶಗಳು ಮತ್ತು ವಿವಿಧ ವಲಯಗಳ ನಡುವೆ ಸಮತೋಲನ ಅಭಿವೃದ್ಧಿ ಸಾಧಿಸಬೇಕೆಂದರೆ ಕೈಗಾರಿಕೆಗಳನ್ನು ಸ್ಥಾಪಿಸಿ ಅಭಿವೃದ್ಧಿಪಡಿಸಬೇಕಾಗುತ್ತದೆ. ದೇಶದಲ್ಲಿ ಗಂಭೀರ ಸ್ವರೂಪ ತಾಳಿರುವ ಪ್ರಾದೇಶಿಕ ಅಸಮತೋಲನ ಸಮಸ್ಯೆಗೆ ಕೈಗಾರಿಕೆಗಳ ಬೆಳವಣಿಗೆ ಸೂಕ್ತ ಪರಿಹಾರವಾಗುತ್ತದೆ.

೧೧. ಸರ್ಕಾರಕ್ಕೆ ಅಧಿಕ ವರಮಾನ(More revenue to government) : ಕೈಗಾರಿಕಾ ಬೆಳವಣಿಗೆಯು ದೇಶದಲ್ಲಿ ರಾಷ್ಟ್ರಾದಾಯ ಮತ್ತು ತಲಾದಾಯವನ್ನು ಹೆಚ್ಚಿಸುವುದರ ಮೂಲಕ ಜನರ ತೆರಿಗೆ ಕಟ್ಟುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಅಧಿಕ ಪ್ರಮಾಣದಲ್ಲಿ ಕೈಗಾರಿಕಾ ಸರಕುಗಳ ಉತ್ಪಾದನೆ ಹಾಗೂ ಜನರ ಅಧಿಕ ತೆರಿಗೆ ಸಾಮರ್ಥ್ಯ ಇವೆರಡೂ ಸರ್ಕಾರಕ್ಕೆ ಅಧಿಕ ಪ್ರಮಾಣದ ಆದಾಯವನ್ನು ತಂದೀಯುತ್ತವೆ.

೧೨. ಮನೋಭಾವನೆಯಲ್ಲಿ ಬದಲಾವಣೆಗಳು(Change in the outlook of people) ಕೈಗಾರಿಕೆಗಳು ನಗರ ಮತ್ತು ಪಟ್ಟಣಗಳ ಬೆಳವಣಿಗೆಗೆ ಕಾರಣವಾಗುವುದರ ಜೊತೆಗೆ ಜನರ ಮನೋಭಾವನೆಯಲ್ಲಿ ಬದಲಾವಣೆಯನ್ನು ತರುತ್ತವೆ. ಜನರು ಕಂದಾಚಾರಗಳನ್ನು ಕೈಬಿಟ್ಟು ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ.

೧೩. ಮಾರುಕಟ್ಟೆ ವಿಸ್ತರಣೆ(Expansion of markets) : ಕೈಗಾರೀಕರಣವು ಕೃಷಿ, ಅನುಭೋಗಿ ಮತ್ತು ಬಂಡವಾಳ ಸರಕುಗಳಿಗಿರುವ ಮಾರುಕಟ್ಟೆಯನ್ನು ವಿಸ್ತೃತಗೊಳಿಸುತ್ತದೆ. ಇದರಿಂದಾಗಿ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳು ಅಧಿಕಗೊಂಡು ಜನರ ಆದಾಯ ಮತ್ತು ಜೀವನಮಟ್ಟ ಹೆಚ್ಚುತ್ತದೆ.

೧೪. ಆರ್ಥಿಕ ಸ್ಥಿರತೆ ಮತ್ತು ಸ್ವಾವಲಂಬನೆ (Economic stability and self-sufficiency) ಕೈಗಾರಿಕೆಗಳು ದೇಶದಲ್ಲಿ ಆರ್ಥಿಕ ಸ್ಥಿರತೆ ಕಾಪಾಡಲು ಮತ್ತು ವಿವಿಧ ಕೈಗಾರಿಕಾ ಸರಕುಗಳ ಉತ್ಪಾದನೆಯಲ್ಲಿ ಸ್ವಾವಲನಂಬನೆ ಸಾಧಿಸಲು ಸಹಕರಿಸುತ್ತವೆ. ಇದರಿಂದಾಗಿ ಅನಾವಶ್ಯಕ ವಿದೇಶಿ ಅವಲಂಬನೆ ತಪ್ಪುತ್ತದೆ.

೧೫. ಕೈಗಾರಿಕೆ, ಕೃಷಿ ಮತ್ತು ತೃತೀಯ ರಂಗಗಳ ನಡುವೆ ಸಮತೋಲನ (Proper balance between industry, agriculture and tertiary sector) : ಕೈಗಾರೀಕರಣವು ಕೃಷಿ, ಕೈಗಾರಿಕೆ ಮತ್ತು ತೃತೀಯ ರಂಗಗಳ ನಡುವೆ ಸಮತೋಲನ ಕಾಪಾಡಿ ಸರ್ವಾಂಗೀಣ ಅಭಿವೃದ್ಧಿ ಸಾಧಿಸುವುದನ್ನು ಸಾಧ್ಯಗೊಳಿಸುತ್ತದೆ.

ಹೀಗೆ ಔದ್ಯೋಗೀಕರಣವು ದೇಶ ಇಂದು ಎದುರಿಸುತ್ತಿರುವ ಅನೇಕ ಗಂಭೀರ ಸಮಸ್ಯೆಗಳ ಶೀಘ್ರ ಪರಿಹಾರಕ್ಕೆ ಸಹಾಯಕಾರಿಯಾಗಬಲ್ಲದು.

ಕೈಗಾರಿಕಾ ಅಭಿವೃದ್ಧಿ, ಕೈಗಾರಿಕೆಗಳ ವರ್ಗೀಕರಣ ಸಣ್ಣ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳ ಅರ್ಥ, ತಯಾರಿಕಾ ಕೈಗಾರಿಕೆಗಳು, ಸೇವಾ ಕೈಗಾರಿಕೆಗಳ ನಡುವಿನ ವ್ಯತ್ಯಾಸ, ಭಾರತದ ಕೆಲವು ಪ್ರಮುಖ ದೊಡ್ಡ ಕೈಗಾರಿಕೆಗಳು, ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ, ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ ನೀತಿಯ ಉದ್ದೇಶಗಳು.

ಅರ್ಥವ್ಯವಸ್ಥೆಯಲ್ಲಿ ಕೈಗಾರಿಕಾಭಿವೃದ್ಧಿಗೆ ಅಗ್ರಸ್ಥಾನವಿದೆ. ಒಂದು ರಾಷ್ಟ್ರದ ಆರ್ಥಿಕ ಪ್ರಗತಿಯ ಮಟ್ಟವು ಆ ರಾಷ್ಟ್ರದ ಕೈಗಾರಿಕಾಭಿವೃದ್ಧಿಯನ್ನು ಆಧರಿಸಿರುತ್ತದೆ. ಆರ್ಥಿಕವಾಗಿ ಮುಂದುವರೆದ ರಾಷ್ಟ್ರಗಳೆಲ್ಲವೂ ಕೈಗಾರಿಕಾ ಅಭಿವೃದ್ಧಿಯನ್ನು ಸಾಧಿಸಿದ ರಾಷ್ಟ್ರಗಳಾಗಿವೆ. ಅಂತಹ ರಾಷ್ಟ್ರಗಳು ಜಾಗತಿಕ ಮಾರುಕಟ್ಟೆಗಳಾಗಿವೆ. ಅಂತಹ ರಾಷ್ಟ್ರಗಳು ಜಾಗತಿ ಮಾರುಕಟ್ಟೆಯಲ್ಲಿ ಯಶಸ್ವಿಯಾಗಿ ಪೈಪೋಟಿ ನಡೆಸಲು ಸಮರ್ಥವಾಗಿರುತ್ತವೆ. ಕೈಗಾರಿಕಾ ಅಭಿವೃದ್ಧಿಯಿಂದ ಯಾವುದೇ ರಾಷ್ಟ್ರದ ಆರ್ಥಿಕತೆಯಲ್ಲಿ ವೈವಿಧ್ಯತೆಯನ್ನು ಸಾಧಿಸಬಹುದಾಗಿದೆ. ಕೈಗಾರಿಕಾ ಅಭಿವೃದ್ಧಿ ಸಾದಿಸಿದರುವ

ರಾಷ್ಟ್ರಗಳನ್ನು ಅಭಿವೃದ್ಧಿ ರಾಷ್ಟ್ರಗಳೆಂದು ಪರಿಗಣಿಸುವುದು ರೂಢಿಯಾಗಿದೆ. ಕೈಗಾರಿಕೆಗಳು ಮತ್ತು ಅವುಗಳ ಅಭಿವೃದ್ಧಿಗೆ ಸಂಬಂಧಿಸಿದ ಗಣಿ, ಸಾರಿಗೆ ಸಂಪರ್ಕ, ಶಕ್ತಿ ಸ್ಥಾವರಗಳನ್ನು ಅಭಿವೃದ್ಧಿ ಪಡಿಸುವುದೇ 'ಕೈಗಾರಿಕಾ ಅಭಿವೃದ್ಧಿ' ಅಥವಾ 'ಕೈಗಾರಿಕರಣ' ಭಾರತದಂತಹ ರಾಷ್ಟ್ರಗಳಲ್ಲಿ ಕೈಗಾರಿಕಾಭಿವೃದ್ಧಿಯ ಅವಶ್ಯಕತೆಯನ್ನು ಎಷ್ಟು ವರ್ಣಿಸಿದರೂ ಸಾಲದು. ಈ ಭಾಗ ಎಚ್.ಆರ್.ಕೃಷ್ಣೇಗೌಡ ಭಾರತದ ಆರ್ಥಿಕ ಅಭಿವೃದ್ಧಿ, ೨೦೦೫ರಲ್ಲಿ ಭಾಷಾಂತರಗೊಂಡಿದೆ.

## ೩.೮. ಭಾರತದ ಬ್ಯಾಂಕು ವ್ಯವಸ್ಥೆ

ಭಾರತ ದೇಶದಲ್ಲಿ ಬ್ಯಾಂಕುಗಳ ವ್ಯವಸ್ಥೆ ಮತ್ತು ಸ್ವರೂಪವು ಪಾಶ್ಚಾತ್ಯ ದೇಶಗಳಂತೆ ಸಂಯುಕ್ತ ವ್ಯವಸ್ಥೆ ಮತ್ತು ನಿಯಂತ್ರಣದಿಂದ ಕೂಡಿರುವುದಿಲ್ಲ. ನಮ್ಮ ದೇಶದ ಬ್ಯಾಂಕುಗಳ ವ್ಯವಸ್ಥೆಯು ಒಂದು ಬಹುಪ್ರತ್ಯೇಕತೆಯನ್ನು ಹೊಂದಿದ್ದುದಾಗಿದೆ. ಭಾರತ ದೇಶದ ಬ್ಯಾಂಕುಗಳ ವ್ಯವಸ್ಥೆಯನ್ನು ("ದ್ವಿದಳ ವ್ಯವಸ್ಥೆ")ಯಿಂದ ಕೂಡಿದ ಒಂದು ವಿಚಿತ್ರವಾದ ವ್ಯವಸ್ಥೆ ಎಂದು ವರ್ಣಿಸಿದರೆ ತಪ್ಪಾಗಲಾರದು. ಏಕೆಂದರೆ ಗ್ರಾಮೀಣ ಪ್ರಾಂತಗಳಿಂದ ಕೂಡಿದ ನಮ್ಮ ಭಾರತ ದೇಶದಲ್ಲಿ ಪ್ರತಿಶತ ೭೦%ರಷ್ಟು ಪ್ರಜೆಗಳು ಗ್ರಾಮವಾಸಿಗಳಾಗಿದ್ದಾರೆ. ಮತ್ತು ಅವರ ಮುಖ್ಯ ಜೀವನೋಪಾಯ ಉದ್ಯೋಗವೆಂದರೆ ವ್ಯವಸಾಯ. ನಮ್ಮ ಈ ಬಹುಸಂಖ್ಯೆಯ ಗ್ರಾಮವಾಸಿಗಳಿಗೆ 'ಸಾಲದ ಪೂರೈಕೆ" ಮಾಡುವ ಅತಿ ಮುಖ್ಯ ಕಾರ್ಯವು ಹಳ್ಳಿಯ ಸಾಹುಕಾರರಿಗೆ ಸೇರಿದ್ದಾಗಿದೆ. ಇಂತಹ ಕಾರ್ಯವನ್ನು ಮಾಡುವ ಬ್ಯಾಕರುಗಳನ್ನೇ ನಾವು "ದೇಶಿಯ" ಬ್ಯಾಕರುಗಳೆಂದು ಕರೆಯುತ್ತೇವೆ. ಈ ವ್ಯವಸ್ಥೆಯು ಭಾರತ ದೇಶದಲ್ಲಿ ಬಹಳ ಹಿಂದಿನಿಂದಲೂ ನಡೆದುಬಂದಿದೆ.

ಸುಮಾರು ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಪಾಶ್ಚಾತ್ಯ ಬ್ಯಾಂಕ್ ವ್ಯವಸ್ಥೆಯು ನಮ್ಮ ದೇಶದಲ್ಲಿ ಆರಂಭವಾಯಿತೆನ್ನಬಹುದು. ೧೮೦೬ರಲ್ಲಿ ಕಲ್ಕತ್ತಾ ಪ್ರಾತೀಯ ಬ್ಯಾಂಕು, ೧೮೪೦ರಲ್ಲಿ ಬೊಂಬಾಯಿ ಪ್ರಾತೀಯ ಬ್ಯಾಂಕು ಮತ್ತು ೧೮೪೩ರಲ್ಲಿ ಮದ್ರಾಸು ಪ್ರಾತೀಯ ಬ್ಯಾಂಕುಗಳು ಪ್ರಾರಂಭವಾದವು. ಇದರ ಹಿಂದೆ ಕ್ರಮೇಣ ಖಾಸಗಿ ವಲಯದಲ್ಲಿ ಅನೇಕ ಕೂಡು ಬಂಡವಾಳದ ವಾಣಿಜ್ಯ ಬ್ಯಾಂಕುಗಳು ಪ್ರಾರಂಭವಾದವು. ಇವುಗಳಲ್ಲಿ ವಿನಿಮಯ ಬ್ಯಾಂಕುಗಳು, ಸಹಕಾರಿ ಮತ್ತು ಅಡಮಾನ ಬ್ಯಾಂಕುಗಳೂ ಸೇರಿವೆ. ೧೯೩೫ರಲ್ಲಿ ನಮ್ಮ ದೇಶವು ಪ್ರಧಾನ ಕೇಂದ್ರ ಬ್ಯಾಂಕೆನಿಸಿದ "ರಿಸರ್ವ್ ಬ್ಯಾಂಕ್". ಆರಂಭವಾಯಿತು.

ವಿಶ್ವದ ಪ್ರತಿಯೊಂದು ರಾಷ್ಟ್ರಗಳಲ್ಲಿ ಬ್ಯಾಂಕುಗಳು ಹಾಗೂ ಮತ್ತಿತರ ಹಣಕಾಸಿನ ಸಂಸ್ಥೆಗಳು ಅತೀ ಮಹತ್ವದ ಸ್ಥಾನವನ್ನು ಪಡೆದಿರುತ್ತವೆ. ನಮ್ಮ ರಾಷ್ಟ್ರ ವಿಕಾಸಶೀಲ ಆರ್ಥಿಕ ವ್ಯವಸ್ಥೆಯುಳ್ಳದ್ದು. ಯೋಜನಾವಧಿಗಳಲ್ಲಿ ಸ್ವಯಂ ಪ್ರೇರಿತ ಅಭಿವೃದ್ಧಿಯನ್ನು ಸಾಧಿಸುವುದು ನಮ್ಮ ಆರ್ಥಿಕ ವ್ಯವಸ್ಥೆಯ ಗುರಿಯಾಗಿದೆ. ಇಂಥ ವಿಕಾಸಶೀಲ ಭಾರತದಲ್ಲಿ ಬ್ಯಾಂಕುಗಳ ಪಾತ್ರವು ಶ್ರೀಮಂತ ಆರ್ಥಿಕ ವ್ಯವಸ್ಥೆಯುಳ್ಳ ದೇಶಗಳಿಗಿಂತಲೂ ಮತ್ತಷ್ಟು ಮಹತ್ವದ್ದಾಗಿರುತ್ತದೆ. ತೀವ್ರಗತಿಯಿಂದ ಆರ್ಥಿಕ ಪ್ರಗತಿಯನ್ನು

ಸಾಧಿಸಬೇಕಾದರೆ ಅಧಿಕ ಬಂಡವಾಳ ಸಂಗ್ರಹಣೆ ಅತ್ಯಗತ್ಯ. ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ ಬಂಡವಾಳದ ಕೊರತೆಯಿದ್ದುದರಿಂದ ಅರ್ಥವ್ಯವಸ್ಥೆಯ ಎಲ್ಲ ರಂಗಗಳು ಸಮನಾಗಿ ಬೆಳೆಯುತ್ತಿಲ್ಲ. ಪ್ರತಿಯೊಂದು ಅರ್ಥವಲಯ ಸಂಪೂರ್ಣವಾಗಿ ಅಭಿವೃದ್ಧಿ ಹೊಂದಲು ಸಾಕಷ್ಟು ಬಂಡವಾಳದ ಪೂರೈಕೆ ಅವಶ್ಯವಾಗಿರುತ್ತದೆ. ಈ ದಿಶೆಯಲ್ಲಿ ಬ್ಯಾಂಕುಗಳು ತಮ್ಮ ಪಾತ್ರವನ್ನು ನಿರ್ವಹಿಸಿ ಯಶಸ್ವಿಯಾಗುತ್ತಿವೆ. ಬ್ಯಾಂಕುಗಳು ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಎಲ್ಲ ವರ್ಗಗಳ ಜನರಲ್ಲಿಯೂ ಉಳಿತಾಯದ ಹವ್ಯಾಸಕ್ಕೆ ಉತ್ತೇಜನ ನೀಡಿ ಲಜ್ಜಾನ್ವಿತ ಬಂಡವಾಳವನ್ನು ಕಾರ್ಯಶೀಲರನ್ನಾಗಿ ಪರಿವರ್ತಿಸುತ್ತವೆ. ಸ್ವೀಕೃತ ಠೇವಣಾತಿಗಳನ್ನು ಯೋಜನೆಯಲ್ಲಿ ಅಗ್ರ ಪ್ರಾಧಾನ್ಯಗಳು ಮತ್ತು ಉದ್ದೇಶಗಳಿಗೆ ತಕ್ಕಂತೆ ಬಳಸಿಕೊಳ್ಳಲು ಸಾಹಸ ಉದ್ದಿಮೆಗಳಿಗೆ ಸಾಲವನ್ನು ನೀಡುತ್ತವೆ. ಹೀಗೆ ಆರ್ಥಿಕಾಭಿವೃದ್ಧಿಗೆ ಅವಶ್ಯವಿರುವ ಬಂಡವಾಳ ರಚನೆಯನ್ನು ಬ್ಯಾಂಕುಗಳು ಹಾಗೂ ಮತ್ತಿತರ ಹಣಕಾಸಿನ ಸಂಸ್ಥೆಗಳು ನಿರ್ಮಿಸಿ ರಾಷ್ಟ್ರದ ಸಂಪನ್ಮೂಲಗಳನ್ನು ಬಳಸಿಕೊಳ್ಳುವಂತೆ ವಿಸ್ತೃತ ಪರಿಸರವನ್ನು ನಿರ್ಮಿಸುವುದರಲ್ಲಿ ಅವುಗಳ ಕೊಡುಗೆ ಅಪಾರವಾಗಿದೆ.

ಹಣಕಾಸಿನ ಮಾರುಕಟ್ಟೆ : ರಾಷ್ಟ್ರದ ಯೋಜನೆಗಳ ಉದ್ದೇಶಗಳಿಗನುಗುಣವಾಗಿ ತನ್ನ ಆರ್ಥಿಕ ಧೋರಣೆಯನ್ನು ಯಶಸ್ವಿಗೊಳಿಸುವುದರಲ್ಲಿ ಸುಸಂಗಟಿತ ಹಣಕಾಸಿನ ಮಾರುಕಟ್ಟೆಯ ಅಸ್ತಿತ್ವ ಅವಶ್ಯವಾಗಿದೆ. ಹಣಕಾಸಿನ ಮಾರುಕಟ್ಟೆಗಳಲ್ಲಿ ಹಣದ ಕೊಡಕೊಳ್ಳುವ ವ್ಯವಹಾರ ನಡೆಯುತ್ತದೆ. ಅಲ್ಪಾವಧಿಯ ಸಾಲದ ವ್ಯವಹಾರಗಳು ನಡೆಯುವಂತಹ ಪೇಟೆಗಳಿಗೆ "ಹಣಕಾಸಿನ ಮಾರುಕಟ್ಟೆ" (Money Market) ಎಂದೂ ಹಾಗೂ ದೀರ್ಘಾವಧಿಯ ಸಾಲದ ವ್ಯವಹಾರಗಳು ನಡೆಯುವಂತಹ ಪೇಟೆಗಳಿಗೆ "ಬಂಡವಾಳ ಮಾರುಕಟ್ಟೆ" (Capital Market)ಎಂದು ಕರೆಯುವರು. ಇಂತಹ ಮಾರುಕಟ್ಟೆಗಳಲ್ಲಿ ವಾಣಿಜ್ಯ ಬ್ಯಾಂಕುಗಳು, ವಿಮಾ ಕಂಪನಿಗಳು, ವಿದೇಶಿ ವಿನಿಮಯ ಬ್ಯಾಂಕುಗಳು, ಹಣಕಾಸಿನ ಕಾರ್ಪೋರೇಷನ್ನುಗಳು ಮತ್ತು ದೇಶದ ಮಧ್ಯವರ್ತಿ ಬ್ಯಾಂಕು ಸಾಲವನ್ನು ಪೂರೈಸುತ್ತಿದ್ದು, ವ್ಯಾಪಾರಗಳು, ಸಟ್ಟಾ ವ್ಯವಹಾರಸ್ಥರು, ದಲಾಲರು, ಉತ್ಪಾದಕರು, ಕೇಂದ್ರ ಮತ್ತು ರಾಜ್ಯ ಸರಕಾರಗಳು ಹಾಗೂ ಇತರ ಸಂಥೆಗಳು ಸಾಲವನ್ನು ತೆಗೆದುಕೊಳ್ಳುವವರಾಗಿದ್ದಾರೆ. ಹಣಕಾಸಿನ ಮತ್ತು ಬಂಡವಾಳ ಮಾರುಕಟ್ಟೆಗಳು ಒಂದಕ್ಕೊಂದು ಪೂರಕವಾಗಿದ್ದು ಬಂಡವಾಳ ರಚನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ.

ನಮ್ಮ ದೇಶದ ಹಣಕಾಸಿನ ಮಾರುಕಟ್ಟೆಯಲ್ಲಿ ಸಂಘಟಿತ ಹಾಣಕಾಸಿನ ಪೇಟೆ ಹಾಗೂ ಅಸಂಘಟಿತ ಹಣಕಾಸಿನ ಪೇಟೆಯೆಂದು ವಿಂಗಡಿಸಬಹುದಾಗಿದೆ. ಸಂಘಟಿತ ವಲಯದಲ್ಲಿ ವಾಣಿಜ್ಯ ಬ್ಯಾಂಕುಗಳು, ಸ್ಟೇಟ್‌ಬ್ಯಾಂಕು, ವಿಮಾ ಸಂಸ್ಥೆಗಳು, ಹಣಕಾಸಿನ ಕಾರ್ಪೋರೇಷನ್ನುಗಳು, ಅಂಚೆ ಕಛೇರಿ ಹಾಗೂ ಉಳಿತಾಯದ ಬ್ಯಾಂಕುಗಳು ಸಮಾವೇಶಗೊಳ್ಳುತ್ತವೆ. ಇವು ಆಧುನಿಕ ಬ್ಯಾಂಕಿಂಗ್ ಪದ್ಧತಿಯನ್ನು ಅನುಸರಿಸುತ್ತವೆ. ಅಸಂಘಟಿತ ವಲಯದಲ್ಲಿ ದೇಶೀಯ ಬ್ಯಾಂಕರರು, ಲೇವಾದೇವಿ ವ್ಯವಹಾರಸ್ಥರು ಹಾಗೂ ಹಳ್ಳಿಯಲ್ಲಿಯ ಸಾಲ ಕೊಡುವ ಸಾಹುಕಾರರು ಸಮಾವೇಶಗೊಂಡಿದ್ದು,

ಅವರು ಆಧುನಿಕ ಬ್ಯಾಂಕಿಂಗ್ ಪದ್ಧತಿಯನ್ನು ಅನುಸರಿಸದೆ ಸಂಪ್ರದಾಯಿಕವಾದ ರೀತಿಯಲ್ಲಿ ವ್ಯವಹಾರ ನಡೆಸುವವರಾಗಿದ್ದಾರೆ.

ಹೀಗೆ ಭಾರತದಲ್ಲಿ ಸಂಘಟಿತ ವಲಯ ಮತ್ತು ಅಸಂಘಟಿತ ವಲಯಗಳು ಜೊತೆ ಜೊತೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದರಿಂದ ಹಣಕಾಸಿನ ಮಾರುಕಟ್ಟೆಯಲ್ಲಿ ಶಿಥಿಲತೆಯುಂಟಾಗಿದೆ. ಮಾರುಕಟ್ಟೆಯು ಸುಸಂಘಟಿತವಾಗಿ ಬೆಳೆಯುತ್ತಿಲ್ಲವಾದ್ದರಿಂದ ರಿಜರ್ವ ಬ್ಯಾಂಕಿನ ಆರ್ಥಿಕ ಧೋರಣೆಗಳು ಪರಿಣಾಮಕಾರಿಯಾದ ರೀತಿಯಲ್ಲಿ ಯಶಸ್ವಿಯಾಗುತ್ತಿಲ್ಲ.

ಭಾರತದ ಹಣದ ಮಾರುಕಟ್ಟೆ : ಅಲ್ಪ ಕಾಲೀನ ಉದ್ದೇಶಗಳಿಗೆ ಅವಶ್ಯವಾಗಿರುವ ಹಣವನ್ನು ಸಾಲ ನೀಡುವ ಮತ್ತು ಸಾಲ ಪಡೆಯುವ ಸ್ಥಳವನ್ನು ಹಣದ ಮಾರುಕಟ್ಟೆ (Money Market) ಎಂದು ಕರೆಯಲಾಗುತ್ತದೆ. ಹಣದ ಮಾರುಕಟ್ಟೆಯು ಸಾಲಿಗರು(Lenders) ಮತ್ತು ಸಾಲಿಗಾರರು (Borrowers)ಇಬ್ಬರನ್ನು ಒಳಗೊಂಡಿರುತ್ತದೆ. ಹಣಕಾಸಿನ ಸಂಸ್ಥೆಗಳು ಮತ್ತು ಜನತೆ ತಮ್ಮಲ್ಲಿರುವ ಹೆಚ್ಚುವರಿ ಹಣಕಾಸಿನ ಸಂಪನ್ಮೂಲಗಳನ್ನು ಇತರ ಸಂಸ್ಥೆಗಳಿಗೆ, ಸರ್ಕಾರಕ್ಕೆ ಮತ್ತು ಜನರಿಗೆ ಸಾಲ ಒದಗಿಸುವ ವ್ಯವಸ್ಥೆ ಇದರಲ್ಲಿ ಕಂಡುಬರುತ್ತದೆ. ಸ್ಥೂಲವಾಗಿ ಹೇಳುವುದಾದರೆ ಒಂದು ದೇಶದ ಬ್ಯಾಂಕು ವ್ಯವಸ್ಥೆಯೇ ಹಣದ ಮಾರುಕಟ್ಟೆಯಾಗುತ್ತದೆ. ಭಾರತದ ಹಣದ ಮಾರುಕಟ್ಟೆಯು ರಿಜರ್ವ ಬ್ಯಾಂಕ್, ಭಾತರದ ಸ್ಟೇಟ್ ಬ್ಯಾಂಕು ಮತ್ತು ಅದರ ಸಹಾಯಕ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು, ವಿದೇಶೀ ವಿನಿಮಯ ಬ್ಯಾಂಕುಗಳು, ದೇಶೀಯ ಬ್ಯಾಂಕಿಗರು, ಹಣದ ಲೇವಾದೇವಿಗಾರರು, ಖಾಸಗಿ ಸಾಂಸ್ಥಿಕ ಹೂಡಿಕೆಗಾರರು ಮತ್ತು ಸಹಕಾರಿ ಬ್ಯಾಂಕುಗಳನ್ನು ಒಳಗೊಂಡಿದೆ.

ಸರಿಯಾಗಿ ಅಭಿವೃದ್ಧಿ ಹೊಂದಿದ ಹಣದ ಮಾರುಕಟ್ಟೆಯು ಹಣಕಾಸಿನ ನೀತಿಯ ಪರಿಣಾಮಕಾರಿ ಪ್ರಯೋಗಕ್ಕೆ ಮೂಲಾಧಾರವಾದುದಾಗಿದೆ. ದೇಶದ ಅತ್ಯುನ್ನತ ಬ್ಯಾಂಕು ಸಂಸ್ಥೆಯಾದ ಕೇಂದ್ರ ಬ್ಯಾಂಕು ಹಣಕಾಸಿನ ವಹಿವಾಟಿನ ಸಂಸ್ಥೆಗಳೊಡನೆ ಯೋಗ್ಯ ಸಂಬಂಧವಿಟ್ಟುಕೊಳ್ಳಲು ಮತ್ತು ಅವನ್ನು ನಿಯಂತ್ರಿಸಲು ಅಭಿವೃದ್ಧಿ ಹಣದ ಮಾರುಕಟ್ಟೆಯ ಅವಶ್ಯಕತೆಯಿದೆ. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಹಣ ನಿಯಂತ್ರಿತ ವಿಸ್ತರಣೆಯ ಮೂಲಕ ಮಾತ್ರ ಆರ್ಥಿಕ ಮುನ್ನಡೆಯನ್ನು ನಿರೀಕ್ಷಿಸಬಹುದು. ದುರದೃಷ್ಟವಶಾತ್ ಭಾರತದ ಹಣದ ಮಾರುಕಟ್ಟೆಯು ಹಿಂದುಳಿದ ಲಕ್ಷಣಗಳನ್ನು ಹೊಂದಿದ್ದು ಹಲವಾರು ದುರ್ಬಲತೆಗಳಿಂದ ಕೂಡಿದೆ.

ಪ್ರಸ್ತಾವನೆ : ಪುರಾತನ ಕಾಲದಲ್ಲೂ ನಮ್ಮ ದೇಶದಲ್ಲಿ ದೇಶೀಯ ಬ್ಯಾಂಕಿಂಗ್ ಪದ್ಧತಿಯು ಜಾರಿಯಲ್ಲಿತ್ತು. ಆದರೆ ಆಧುನಿಕ ರೀತಿಯ ಬ್ಯಾಂಕಿನ ವ್ಯವಸ್ಥೆ ನಮ್ಮ ದೇಶದಲ್ಲಿ ಬ್ರಿಟಿಷರ್ ಆಳ್ವಿಕೆಯಲ್ಲಿ ಜಾರಿಗೆ ಬಂದಿತು. ವೇದ ಕಾಲದಲ್ಲಿಯೂ ಬ್ಯಾಂಕಿನ ಪದ್ಧತಿಯು ಜಾರಿಯಲ್ಲಿತ್ತೆಂಬ ಉಲ್ಲೇಖವು ಇದೆ. ಐದನೆಯ ಹಾಗೂ ಆರನೆಯ ಶತಮಾನಗಳಲ್ಲಿ ಸಾಲದ ಮಾಧ್ಯಮಗಳನ್ನು ನಾವು ಬಳಸುತ್ತಿದ್ದೆವು ಎಂಬುದರ ಬಗ್ಗೆ ಆಧಾರಗಳಿವೆ. ಅತ್ಯಾಧುನಿಕ ಮಾದರಿಯ ಬ್ಯಾಂಕಿನ

ವ್ಯವಸ್ಥೆಯು ಎರಡು ಶತಮಾನಗಳ ಹಿಂದೆಯೇ ಪ್ರಾರಂಭವಾದರೂ ಅದು ಸುವ್ಯವಸ್ಥಿತ ಮಾರ್ಗದಲ್ಲಿ ಬೆಳೆದುಬಂದಿಲ್ಲ. ನಮ್ಮ ದೇಶದ ಬ್ಯಾಂಕಿನ ಅಭಿವೃದ್ಧಿಯನ್ನು ನಾವು ಪ್ರಮುಖವಾಗಿ ಆರು ಹಂತಗಳಲ್ಲಿ ಅಭ್ಯಸಿಸಬಹುದಾಗಿದೆ.

ಮೊದಲನೆಯ ಹಂತ (First Period) ೧೮೦೬ರವರೆಗೆ : ಬ್ರಿಟಿಷರ ಆಳ್ವಿಕೆಗಿಂತ ಮೊದಲು ಬ್ಯಾಂಕಿನ ವ್ಯವಸ್ಥೆಯು ಪರಿಪೂರ್ಣವಾಗಿರಲಿಲ್ಲ. ದೇಶೀಯ ಬ್ಯಾಂಕರುಗಳ ಅಸಂಘಟಿತ ವ್ಯವಸ್ಥೆಯು ಮಾರುಕಟ್ಟೆಯಲ್ಲಿ ಪ್ರಚಲಿತವಾಗಿತ್ತು. ಈ ದೇಶಿಯ ಬ್ಯಾಂಕರುಗಳನ್ನು ಬಂಗಾಳದಲ್ಲಿ ಮಹಾಜನ್ ಎಂತಲೂ, ಉತ್ತರ ಪ್ರದೇಶದಲ್ಲಿ 'ಸಾಹುಕಾರ' ಎಂತಲೂ, ಪಂಜಾಬಿನಲ್ಲಿ 'ಖತ್ರಿ' ಎಂತಲೂ, ಮಹಾರಾಷ್ಟ್ರದಲ್ಲಿ 'ಸರಾಫ' ಎಂತಲೂ, ಮಾರವಾಡದಲ್ಲಿ 'ಶೇಟ್' ಎಂತಲೂ, ತಮಿಳು ನಾಡಿನಲ್ಲಿ 'ಚೆಟ್ಟಿ' ಎಂತಲೂ ಕರೆಯಲ್ಪಡುತ್ತಿದ್ದರು. ಕ್ರಮೇಣವಾಗಿ ಈ ಸ್ಥಾನವನ್ನು ಪಾರುಪತ್ಯ ಮನೆಗಳನ್ನು (Agency Houses) ಸ್ಥಾಪಿಸುವುದರ ಮೂಲಕ ದೇಶೀಯ ಬ್ಯಾಂಕುಗಳು ಆಧುನಿಕ ರೀತಿಯಲ್ಲಿ ಮುಂಬಯಿ ಹಾಗೂ ಕಲ್ಕತ್ತಾ ನಗರಗಳಲ್ಲಿ ೧೮ನೇ ಶತಮಾನದ ಕೊನೆಯಲ್ಲಿ 'ಈಸ್ಟ್ ಇಂಡಿಯಾ' ಕಂಪನಿಯಲ್ಲಿ ರೂಪಿತಗೊಂಡವು.

ಎರಡನೆಯ ಹಂತ(Second Period) ೧೮೦೬–೧೮೬೦ : ೧೮೧೩ರಲ್ಲಿ ಬ್ರಿಟಿಷ್ ಪ್ರಭುತ್ವ ಈಸ್ಟ್ ಇಂಡಿಯಾ ಕಂಪನಿಗೆ ನೀಡಿದ ವಾಣಿಜ್ಯ ಹಕ್ಕುಗಳನ್ನು ಹಿಂತೆಗೆದುಕೊಂಡಾಗ ಈ ಪಾರುಪತ್ಯ ಮನೆಗಳ ಮಹತ್ವ ಕುಸಿಯಿತು. ಈ ಅವಧಿಯಲ್ಲಿ ಬಂಗಾಳ, ಮುಂಬಯಿ ಹಾಗೂ ಮದ್ರಾಸ್ ಶಹರಗಳಲ್ಲಿ ಖಾಸಗಿ ಶೇರುದಾರತನವನ್ನು ಹೊಂದಿದ ಪ್ರೆಸಿಡೆನ್ಸಿ ಬ್ಯಾಂಕುಗಳು ಸ್ಥಾಪನೆಗೊಂಡವು.

ಮೂರನೆಯ ಹಂತ(Third Period) ೧೮೬೦–೧೯೧೩ : ಈ ಅವಧಿಯಲ್ಲಿ ಹಲವಾರು ಕೂಡು ಬಂಡವಾಳ ಬ್ಯಾಂಕುಗಳು ದೇಶದಾದ್ಯಂತ ಸ್ಥಾಪಿತಗೊಂಡವು. ಅವುಗಳಲ್ಲಿ ಅಲಹಾಬಾದ ಬ್ಯಾಂಕು, ಅಲೆಯಿನ್ಸ ಬ್ಯಾಂಕು, ಪಂಜಾಬ ನ್ಯಾಷನಲ್ ಬ್ಯಾಂಕು ಹಾಗೂ ಪೀಪಲ್ಸ್ ಬ್ಯಾಂಕ ಆಫ್ ಇಂಡಿಯಾ ಪ್ರಮುಖವಾಗಿದ್ದವು. ಆರಂಭಿಕ ಹಂತದಲ್ಲಿ ಈ ಬ್ಯಾಂಕುಗಳು ಗಣನೀಯ ಸಾಧನೆಯನ್ನು ಮಾಡದಿದ್ದರೂ ನಂತರ ಕ್ರಮೇಣವಾಗಿ ಅವುಗಳು ಪ್ರಗತಿಪರ ಪಥದತ್ತ ದಾಪುಗಾಲು ಹಾಕತೊಡಗಿದವು. ಮಹಾತ್ಮಾ ಗಾಂಧೀಜಿಯವರು ಪ್ರಾರಂಭಿಸಿದ ಸ್ವದೇಶಿ ಆಂದೋಲನವು ಇದಕ್ಕೆ ಪ್ರಮುಖ ಕಾರಣವಾಗಿತ್ತು. ಇದಲ್ಲದೆ ಇನ್ನೂ ಕೆಲವು ಬ್ಯಾಂಕುಗಳಾದ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ, ಬ್ಯಾಂಕ್ ಆಫ್ ಬರೋಡ, ಬ್ಯಾಂಕ್ ಆಫ್ ಮೈಸೂರು ಹಾಗೂ ಬ್ಯಾಂಕ್ ಆಫ್ ಇಂಡಿಯಾಗಳು ಈ ಅವಧಿಯಲ್ಲಿ ಆರಂಭಗೊಂಡವು.

ನಾಲ್ಕನೆಯ ಹಂತ(Fourth Period)೧೯೧೩–೧೯೩೯ : ಭಾರತದ ಬ್ಯಾಂಕಿನ ವ್ಯವಸ್ಥೆಯ ಇತಿಹಾಸದಲ್ಲೇ ಈ ಅವಧಿಯನ್ನು 'ಸಮಸ್ಯೆಗಳ ಅವಧಿ' ಎಂದು ಕರೆಯಲಾಗಿದೆ. ಹಲವಾರು ಬ್ಯಾಂಕುಗಳ ವಿಫಲತೆಯಿಂದ, ಸಮಯದಿಂದ ಸಮಯಕ್ಕೆ ಸಮಸ್ಯೆಗಳ ಸುರಿಮಳೆ ಪ್ರಾರಂಭವಾಯಿತು.

೧೯೨೨ರಿಂದ ೧೯೩೩ರವರೆಗೆ ೩೭೩ ಬ್ಯಾಂಕುಗಳು ನೆಲಕಚ್ಚಿದರೆ, ೧೯೩೬ ರಿಂದ ೧೯೪೦ರವರೆಗೆ ೩೭೨ ಬ್ಯಾಂಕುಗಳನ್ನು ಮುಚ್ಚಲಾಯಿತು.

ಐದನೆಯ ಹಂತ(Fifth Perlod)೧೯೩೯-೧೯೪೬ : ಜಾಗತಿಕ ದ್ವಿತೀಯ ಮಹಾಯುದ್ಧವು ಭಾರತದಲ್ಲಿನ ಬ್ಯಾಂಕುಗಳ ಬೆಳವಣಿಗೆಗೆ ಉತ್ತಮ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಈ ಅವಧಿಯಲ್ಲಿ ಬ್ಯಾಂಕಿನ ಸಮಸ್ಯೆಗಳೆಲ್ಲವೂ ಕೊನೆಗೊಂಡು ದೇಶದಾದ್ಯಂತ ಹೊಸ ಬ್ಯಾಂಕುಗಳ ಶಾಖೆಗಳು ಆರಂಭಗೊಂಡವು. ಹಾಗೂ ಅವುಗಳಲ್ಲಿ ಪ್ರಮುಖವಾದವುಗಳು ಹಿಂದುಸ್ಥಾನ್ ಕಮರ್ಷಿಯಲ್ ಬ್ಯಾಂಕ್, ಹಿಂದುಸ್ತಾನ್ ಮರ್ಕೆಂಟೈಲ್ ಬ್ಯಾಂಕ್, ಬ್ಯಾಂಕ್ ಆಫ್ ಮಹಾರಾಷ್ಟ್ರ, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಬ್ಯಾಂಕ್ ಆಫ್ ರಾಜಸ್ತಾನ್ ಹಾಗೂ ದೇನಾ ಬ್ಯಾಂಕ್. ಬ್ಯಾಂಕುಗಳ ಠೇವಣಿಯಲ್ಲಿಯೂ ಸಹ ಗಣನೀಯ ಹೆಚ್ಚಳವುಂಟಾಯಿತು. ಹಳೆಯ ಬ್ಯಾಂಕುಗಳು ಹೊಸ ಶಾಖೆಗಳನ್ನು ಪ್ರಾರಂಭಿಸಿದವು. ಬ್ಯಾಕಿನ ಹೂಟೆ ನೀತಿಯಲ್ಲಿಯೂ ಸಹ ಬದಲಾವಣೆರಯನ್ನು ತರಲಾಯಿತು. ಬ್ಯಾಂಕಿನ ತ್ವರಿತ ರೀತಿಯ ಬೆಳವಣಿಗೆ ದೋಷಗಳಿಂದ ಮುಕ್ತವಾಗಿರಲಿಲ್ಲ. ಹಲವಾರು ಪ್ರಮುಖ ಬ್ಯಾಂಕುಗಳನ್ನು ಗಣ್ಯ ವ್ಯಕ್ತಿಗಳು ಪ್ರಾರಂಭಿಸಿದ್ದರಿಂದ ಅದರಲ್ಲಿನ ಠೇವಣಿಯನ್ನು ಅವರು ತಮ್ಮ ವೈಯಕ್ತಿಕ ಲಾಭಕ್ಕಾಗಿ ಉಪಯೋಗಿಸಿಕೊಂಡರು. ಸ್ವಚ್ಛ ಹಾಗೂ ದಕ್ಷ ಆಡಳಿತದ ಅಭಾವವಿತ್ತಲ್ಲದೆ ಬ್ಯಾಂಕುಗಳ ಲಾಭವನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಲಿಲ್ಲ.

ಆರನೆಯ ಹಂತ (Sixth Period) ೧೯೪೫ರಿಂದೀಚೆಗೆ : ೧೯೪೭ರ ದೇಶ ಇಬ್ಭಾಗದಿಂದ ಬ್ಯಾಂಕುಗಳ ಮೇಲೆ ವಿಪರೀತ ಒತ್ತಡ ಉಂಟಾಯಿತು. ಭಾರತೀಯ ರಿಝರ್ವ್ ಬ್ಯಾಂಕು ಹಾಗೂ ಸರಕಾರ ಸಮಸ್ಯೆಯ ಸುಳಿಯಲ್ಲಿ ಸಿಕ್ಕ ಬ್ಯಾಂಕುಗಳನ್ನು ಮೇಲೆತ್ತಲು ಪ್ರಯತ್ನಿಸಿದವು. ಹಲವಾರು ಬ್ಯಾಂಕುಗಳು ಇದರಿಂದ ಲಾಭ ಪಡೆದು ನಷ್ಟದಿಂದ ಪಾರಾದವು. ಹಲವಾರು ಬ್ಯಾಂಕುಗಳು ಇದರಿಂದ ನಷ್ಟ ಅನುಭವಿಸಿ ದಿವಾಳಿಯಾದುದರಿಂದ ಠೇವಣಿದಾರರಿಗೆ ವಿಪರೀತ ಹಣಕಾಸಿನ ನಷ್ಟ ಉಂಟಾಯಿತು. ದೇಶ ವಿಭಜನೆಗೊಂಡ ನಂತರ ಹಲವಾರು ಬ್ಯಾಂಕುಗಳಲ್ಲಿದ್ದ ಠೇವಣಿಗಳು ಕುಗ್ಗಿದವು. ಹಲವಾರು ಉದ್ದಿಮೆಯ ಮಳಿಗೆಗಳು ತಮ್ಮದೇ ಆದ ಬ್ಯಾಂಕುಗಳನ್ನು ಪ್ರಾರಮಭಿಸಿ ಅವುಗಳ ಮೇಲೆ ತಮ್ಮ ನಿಯಂತ್ರಣವನ್ನು ಹೊಂದಿದವು. ನಂತರ ನಿಧಾನವಾಗಿ ವ್ಯಾಪಾರ ಹಾಗೂ ವಾಣಿಜ್ಯೋದ್ಯಮದ ಬೆಳವಣಿಗೆಯಿಂದ ಬ್ಯಾಂಕಿನ ಠೇವಣಿಯಲ್ಲಿ ಹೆಚ್ಚಳ ಪ್ರಾರಂಭವಾಯಿತು.

### ೩.೯. ವಿದೇಶಿ ವ್ಯಾಪಾರ

ವಿದೇಶಿ ವ್ಯಾಪಾರವನ್ನು ಕುರಿತು ಭಾಷಾಂತರವಾದ ಪಠ್ಯಸಾಮಗ್ರಿಗಳು ಎಪ್ಪತ್ತರ ದಶಕದಲ್ಲಿ ವಿರಳವಾಗಿದ್ದವು. ಕಾಲಕ್ರಮೇಣ ಕನ್ನಡ ಪಠ್ಯಸಾಮಗ್ರಿಗಳಿಗೆ ಬೇಡಿಕೆ ಹೆಚ್ಚಿತು. ಭಾಷಾಂತರಕಾರರ ಸಂಖ್ಯೆಯೂ ವೃದ್ಧಿಯಾಗಿದೆ. ಈಗ ಪಠ್ಯಗಳು ಅಧಿಕ ಸಂಖ್ಯೆಯಲ್ಲಿ ಲಭ್ಯವಾಗುತ್ತಿವೆ. ಅಧ್ಯಯನಕ್ಕೆ ಲಭ್ಯವಾದ ಸಾಮಗ್ರಿಗಳಲ್ಲಿ 'ರ್‍ಯಾಂಡಂ' ಆಗಿ ಕೆಲವನ್ನು ಬಳಸಿಕೊಂಡು ತೌಲನಿಕವಾಗಿ ಅಧ್ಯಯನ

ಮಾಡಲಾಗಿದೆ. ಪಿಯುಸಿ ತರಗತಿಗಳ ಮತ್ತು ಪದವಿ ತರಗತಿಗಳ ಪಠ್ಯಕ್ರಮ ಯಾವ ಪ್ರಮಾಣದಲ್ಲಿ ಬಳಕೆಯಾಗಿದೆ, ಅದರಲ್ಲಿನ ಭಾಷೆ, ದೃಷ್ಟಾಂತ, ನಿರೂಪಣೆ ಮತ್ತು ವಿಶ್ಲೇಷಣೆಗಳಂಥ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈಗ ಅವುಗಳನ್ನು ಒಂದೊಂದಾಗಿ ಮನಿಸುವಾ.

**ಅಂತಾರಾಷ್ಟ್ರೀಯ ವ್ಯಾಪಾರ** : ದೇಶದೊಳಗಿನ ವ್ಯಾಪಾರವಾಗಲಿ ಇಲ್ಲವೆ ದೇಶದೇಶಗಳ ನಡುವಿನ ವ್ಯಾಪಾರವಾಗಲಿ ಇವೆರಡೂ 'ಶ್ರಮ ವಿಭಜನೆ' (Division of Labour) ಹಾಗೂ 'ಪರಿಣಿತಿ ಸಾಧನೆ' (Specialisation) ಇವುಗಳ ಮೇಲೆ ಅವಲಂಬಿಸಿವೆ.

ದೇಶದೊಳಗೆ ಒಂದೇ ಪ್ರದೇಶದಲ್ಲಿ ಎಲ್ಲವನ್ನೂ ಉತ್ಪಾದಿಸಲು ಸಾಧ್ಯವಿಲ್ಲ. ಪ್ರತ್ಯೇಕ ಪ್ರದೇಶಗಳಲ್ಲಿ, ಪ್ರತ್ಯೇಕ ವಸ್ತುಗಳನ್ನು ಮಾತ್ರ ಉತ್ಪಾದಿಸಲು ಸಾಧ್ಯವಿದೆ. ನೈಸರ್ಗಿಕ ಸೌಲಭ್ಯಗಳು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿರುವುದೇ ಇದಕ್ಕೆ ಕಾರಣವಾಗಿದೆ. ಇದರಿಂದಾಗಿ ಒಂದು ಪ್ರದೇಶದ ಜನತೆಯು ತಮ್ಮ ಇತರ ಅವಶ್ಯಕತೆಗಳಿಗಾಗಿ ಇತರ ಪ್ರದೇಶಗಳ ಮೇಲೆ ಅವಲಂಬಿಸಲೇಬೇಕಾಗುತ್ತದೆ. ಹೀಗೆ ದೇಶದೊಳಗೆ ವಿವಿಧ ಪ್ರದೇಶಗಳ ಜನತೆಯ ನಡುವೆ ವಸ್ತುಗಳ ವಿನಿಮಯವು ಆರಂಭವಾಗುತ್ತದೆ. ಇದಕ್ಕೆ 'ಆಂತರಿಕ' ಇಲ್ಲವೆ 'ಸ್ವದೇಶಿ' ವ್ಯಾಪರ ಎಂದು ಕರೆಯುದುಂಟು. ಜಗತ್ತಿನಲ್ಲಿಯೂ ಕೂಡ ನೈಸರ್ಗಿಕ ಕಾರಣಗಳಿಂದಾಗಿ ಕೆಲವೊಂದು ರಾಷ್ಟ್ರಗಳು ಕೆಲವೊಂದು ವಸ್ತುಗಳ ಉತ್ಪಾದನೆಯಲ್ಲಿ ಮಾತ್ರ ಪರಿಣಿತಿ ಸಾಧಿಸಲು ಸಾಧ್ಯವಿದೆ. ಅದರಿಂದಾಗಿ ತಾನು ಉತ್ಪಾದಿಸಲು ಸಾಧ್ಯವಿರದ ವಸ್ತುಗಳಿಗಾಗಿ ಪ್ರತಿಯೊಂದು ದೇಶವು ಮತ್ತೊಂದು ದೇಶದ ಮೇಲೆ ಅವಲಂಬಿಸಲೇಬೇಕಾಗುತ್ತದೆ. ಹೀಗೆ ದೇಶದೇಗಳ ಜನತೆಯ ನಡುವೆ ವಸ್ತುಗಳ ವಿನಿಮಯವು ಆರಂಭವಾಗುತ್ತದೆ. ಇದಕ್ಕೆ 'ಅಂತಾರಾಷ್ಟ್ರೀಯ ವ್ಯಾಪಾರ ಅಥವಾ ವಿದೇಶಿ ವ್ಯಾಪಾರ' ಎಂದು ಕರೆಯುವುದುಂಟು. ಉದಾ: ಭಾರತವು ಚಹ, ಜೂಟು, ಮ್ಯಾಂಗನೀಜ್ ಹಾಗೂ ಅರಳೆ ಉತ್ಪಾದನೆಯಲ್ಲಿ ಪರಿಣಿತಿಯನ್ನು ಪಡೆದಿದೆ. ಅಮೆರಿಕಯು ಕಲ್ಲಿದ್ದಲು, ಕಬ್ಬಿಣ ಹಾಗೂ ಎಣ್ಣೆ ಉತ್ಪಾದನೆಯಲ್ಲಿಯೂ, ಆಸ್ಟ್ರೇಲಿಯವು ಕೃಷಿ ಹಾಗೂ ಹೈನುಗಾರಿಕೆ ವಸ್ತುಗಳ ಉತ್ಪಾದನೆಯಲ್ಲಿಯೂ ಪರಿಣಿತಿ ಸಾಧಿಸಿವೆ. ಈ ಮೂರು ದೇಶಗಳು ತಮ್ಮ ತಮ್ಮ ವಸ್ತುಗಳನ್ನು ಪರಸ್ಪರ ವಿನಿಮಯ ಮಾಡಿಕೊಂಡಲ್ಲಿ ವ್ಯಾಪಾರವು ಹೆಚ್ಚು ಲಾಭದಾಯಕವಾಗುವುದು. ಇತ್ತೀಚೆಗೆ ಯಾಂತ್ರೀಕರಣ, ಸಾರಿಗೆ ಹಾಗೂ ಸಂಪರ್ಕ ಸಾಧನಗಳ (Means of Transport and Communication) ತೀವ್ರ ಅಭಿವೃದ್ಧಿಯಿಂದಾಗಿ ದೇಶಗಳ ನಡುವಿನ ವ್ಯಾಪಾರವು ಹೆಚ್ಚಾಗುತ್ತ ಸಾಗಿದೆ.

ಆಂತರಿಕ ಹಾಗೂ ಅಂತಾರಾಷ್ಟ್ರೀಯ ವ್ಯಾಪಾರ : "ವ್ಯಕ್ತಿ–ವ್ಯಕ್ತಿಗಳ ನಡುವಿನ ವಸ್ತು ವಿನಿಮಯವೇ ವ್ಯಾಪಾರ" ಎಂದ ಮೇಲೆ 'ಆಂತರಿಕ' ಹಾಗೂ 'ಅಂತಾರಾಷ್ಟ್ರೀಯ ವ್ಯಾಪಾರ'ಗಳನ್ನು ವಿವರಿಸಲು ಪ್ರತ್ಯೇಕ ಸಿದ್ಧಾಂತಗಳು ಏಕೆ ಬೇಕು? ಈ ಪ್ರಶ್ನೆಗೆ ಪ್ರಸಿದ್ಧ 'ಕ್ಲಾಸಿಕಲ್' (ಪ್ರಾಚೀನ) ಅರ್ಥಶಾಸ್ತ್ರಜ್ಞರಾದ 'ಅಡಂಸ್ಮಿತ್' ಹಾಗೂ 'ಡೇವಿಡ್ ರಿಕಾರ್ಡೋ' ಇವರು ಉತ್ತರಿಸಿದ್ದಾರೆ. ಅದೇನೆಂದರೆ ಆಂತರಿಕ ಹಾಗೂ ಅಂತಾರಾಷ್ಟ್ರೀಯ ವ್ಯಾಪಾರಗಳಲ್ಲಿ ಕೆಲವೊಂದು ಮೂಲ ವ್ಯತ್ಯಾಸಗಳಿವೆ

ಆ ಕಾರಣವಾಗಿ ಈ ಎರಡೂ ವ್ಯಾಪಾರಗಳನ್ನು ಒಂದೇ ಸಿದ್ಧಾಂತದಿಂದ ವಿವರಿಸಲು ಬಾರದು. (ಸಂ) ಅರ್ಥಶಾಸ್ತ್ರ : ತತ್ವ ನಿರೂಪಣೆ, ೧೯೭೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪು ೨೯೦-೨೯೧)

ವಿದೇಶಿ ವ್ಯಾಪಾರ(Foreign Trade) : ಸರಕುಗಳು ಮತ್ತು ಸೇವೆಗಳನ್ನು ಮಾರಾಟ ಮಾಡುವ ಮತ್ತು ಕೊಂಡುಕೊಳ್ಳುವ ಕ್ರಿಯೆಯನ್ನು ವ್ಯಾಪಾರ ಎನ್ನಲಾಗುತ್ತದೆ. ಇದು ಉತ್ಪಾದನೆ ಮತ್ತು ಅನುಭೋಗದ ನಡುವೆ ಸಂಪರ್ಕ ಕಲ್ಪಿಸುತ್ತದೆ. ವ್ಯಾಪಾರ ಒಂದು ಬಹುಮುಖ್ಯ ಆರ್ಥಿಕ ಚಟುವಟಿಕೆಯಾಗಿದ್ದು ಇದು ಮಿಲಿಯಾಂತರ ಜನರಿಗೆ ಉದ್ಯೋಗ ಕಲ್ಪಿಸಿದೆ. ವ್ಯಾಪಾರದಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ ೧. ಆಂತರಿಕ ವ್ಯಾಪಾರ ಮತ್ತು ೨. ಅಂತಾರಾಷ್ಟ್ರೀಯ ವ್ಯಾಪಾರ.

ಒಂದು ದೇಶದ ಒಳಗಡೆ ನಡೆಯುವ ವ್ಯಾಪಾರವನ್ನು ಆಂತರಿಕ ವ್ಯಾಪ್ರಾರ ಎಂದು ಕರೆಯಲಾಗುತ್ತದೆ. ಅಂದರೆ ಒಂದು ದೇಶದ ಗಡಿರೇಖೆಯ ಒಳಗಡೆ ವಿವಿಧ ಪ್ರದೇಶಗಳು ಮತ್ತು ಜನರ ನಡುವೆ ನಡೆಯುವ ಸರಕು ಮತ್ತು ಸೇವೆಗಳ ವಿನಿಮಯ ವ್ಯವಹಾರವೇ ಆಂತರಿಕ ವ್ಯಾಪಾರ. ಈ ವ್ಯಾಪಾರ ಹೆಚ್ಚೂ ಕಡಿಮೆ ಒಂದೇ ರೀತಿಯ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನೊಳಗೊಂಡು ನಡೆಯುತ್ತಿರುತ್ತದೆ. ಜಗತ್ತಿನ ವಿವಿಧ ಸಾರ್ವಭೌಮ ದೇಶಗಳ ನಡುವೆ ನಡೆಯುವ ವವ್ಯಾಪಾರವನ್ನು ಅಂತಾರಾಷ್ಟ್ರೀಯ ವ್ಯಾಪಾರ ಎಂದು ಕರೆಯಲಾಗುತ್ತದೆ. ಅಂದರೆ ವಿವಿಧ ದೇಶಗಳು ಪರಸ್ಪರ ಸರಕು ಮತ್ತು ಸೇವೆಗಳ ವಿನಿಮಯ ವ್ಯವಹಾರದಲ್ಲಿ ತೊಡಗುವ ಅಂತಾರಾಷ್ಟ್ರೀಯ ವ್ಯಾಪಾರವಾಗುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವನ್ನು ಇಂದು ಪ್ರಗತಿಯ ಯಂತ್ರ(Engine of growth) ಎಂದು ಪರಿಗಣಿಸಲ್ಪಟ್ಟಿದ್ದು ಅದರಿಂದಾಗುವ ಒಟ್ಟಾರೆ ಪ್ರಯೋಜನಗಳು ಈ ಕೆಳಗಿನಂತಿವೆ.

೧. ಅಗತ್ಯ ಸರಕುಗಳ ಆಮದು ೨. ಸರಕುಗಳ ಬೆಲೆಯಲ್ಲಿ ಸಮಾನತೆ ಕಾಪಾಡುವುದು ೩. ಕೈಗಾರಿಕಾಭಿವೃದ್ಧಿ ೪. ತುರ್ತು ಸ್ಥಿತಿಗಳನ್ನೆದುರಿಸುವುದು ೫. ಬಂಡವಾಳ ಚಲನೆಯ ಅನುಕೂಲಗಳು ೬. ಮಾರುಕಟ್ಟೆ ವಿಸ್ತರಣೆ ೭. ಅಂತಾರಾಷ್ಟ್ರೀಯ ಸಹಕಾರ ೮. ಉತ್ಪಾದನೆಯಲ್ಲಿ ವೈಶಿಷ್ಟ್ಯದ ಸಾಧನೆ ೯. ಸಂಪನ್ಮೂಲಗಳ ದಕ್ಷ ಬಳಕೆ ೧೦. ತಂತ್ರಜ್ಞಾನ ವರ್ಗಾವಣೆ ೧೧. ಏಕಸ್ವಾಮ್ಯ ಹತೋಟಿ ನಿಯಂತ್ರಣ ೧೨. ಗರಿಷ್ಠ ಉತ್ಪಾದನೆ

ಭಾರತದ ವಿದೇಶಿ ವ್ಯಾಪಾರ (Foreign Trade of India): ಭಾರತದ ವಿದೇಶಿ ವ್ಯಾಪಾರವೆಂದರೆ ಭಾರತವು ಇತರೆ ಸಾರ್ವಭೌಮ ದೇಶಗಳೊಡನೆ ನಡೆಸುತ್ತಿರುವ ವ್ಯಾಪಾರ ವ್ಯವಹಾರಗಳಾಗಿವೆ. ಸಂಕ್ಷಿಪ್ತವಾಗಿ ಭಾರತದ ವಿದೇಶಿ ವ್ಯಾಪಾರವೆಂದರೆ ಅದರ ರಫ್ತು ಮತ್ತು ಆಮದು ವ್ಯವಹಾರಗಳಾಗಿವೆ. ಭಾರತದ ಆರ್ಥಿಕಾಭಿವೃದ್ಧಿಯಲ್ಲಿ ವಿದೇಶಿ ವ್ಯಾಪಾರ ಮೊದಲಿನಿಂದಲೂ ಪ್ರಮುಖ ಪಾತ್ರ ವಹಿಸುತ್ತಾ

ಬಂದಿದೆ. ಭಾರತ ಒಂದು ಅಭಿವೃದ್ಧಿಶೀಲ ರಾಷ್ಟ್ರವಾಗಿರುವುದರಿಂದ ಅದು ವಿದೇಶಿ ವ್ಯಾಪಾರದ ಮೇಲೆ ಹೆಚ್ಚು ಅವಲಂಬಿತವಾಗಿ ವಿದೇಶಿ ವ್ಯಾಪಾರ ಒದಗಿಸುವ ಎಲ್ಲ ಪ್ರಯೋಜನಗಳನ್ನು ಪಡೆಯುತ್ತಿದೆ. ಭಾರತ ತನ್ನ ಅಭಿವೃದ್ಧಿ ಚಟುವಟಿಕೆಗಳಿಗೆ ಬೇಕಾದ ಮತ್ತು ಇತರೆ ಎಲ್ಲ ಅವಶ್ಯ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿದೆ ಹಾಗೂ ವಿವಿಧ ಬಗೆಯ ಸರಕುಗಳನ್ನು ರಫ್ತು ಮಾಡುತ್ತಿದೆ.

ವಿದೇಶಿ ವ್ಯಾಪಾರ ರಫ್ತು ಮತ್ತು ಆದಾಯ : ಪ್ರತಿ ರಾಷ್ಟ್ರವು ತನ್ನಲ್ಲಿ ದೊರಕುವ ಉತ್ಪಾದನಾಂಗ ಗಳನ್ನು ಕಡಿಮೆ ವೆಚ್ಚದಲ್ಲಿ ಬಳಸಿಕೊಂಡು ಕೆಲವು ರೀತಿಯ ಸರಕುಗಳನ್ನು ಉತ್ಪಾದನೆ ಮಾಡುವುದರಲ್ಲಿ ಪ್ರಾವೀಣ್ಯತೆಯನ್ನು ಪಡೆಯುತ್ತದೆ. ಇಂತಹ ಸರಕುಗಳನ್ನು ಪ್ರಾವೀಣ್ಯತೆ ಹೊಂದಿರುವ ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತದೆ. ಪ್ರಾವೀಣ್ಯತೆಯ ಆಧಾರದ ಮೇಲೆ ಜರಗುವ ಅಂತಾರಾಷ್ಟ್ರೀಯ ವ್ಯಾಪಾರದಿಂದಾಗಿ ಈ ರಈತಿಯ ಶ್ರಮವಿಭಜನೆ ಹಾಗೂ ಅದರಲ್ಲಿ ಭಾಗವಹಿಸುವ ರಾಷ್ಟ್ರಗಳಲ್ಲಿ ಉತ್ಪಾದನೆ, ಉದ್ಯೋಗ, ಆದಾಯ, ಜೀವನಮಟ್ಟ ಮತ್ತು ಕ್ಷೇಮಾಭ್ಯುದಯ ಜಾಸ್ತಿಯಾಗುತ್ತದೆ. ನಮ್ಮ ರಾಷ್ಟ್ರ ಸಆವಿರಾರು ವರ್ಷಗಳ ಕಾಲದಿಂದಲೂ ವಿದೇಶಿ ವ್ಯಾಪಾರವನ್ನು ಮಾಡಿಕೊಂಡು ಬಂದಿದೆ. ವೇದದ ಕಾಲ, ಅಂದರೆ ಸುಮಾರು ಕ್ರಿಪೂ. ೩೦೦೦ದಲ್ಲೂ ನಮ್ಮ ವ್ಯಾಪಾರಗಳು ವಿದೇಶಗಳಲ್ಲಿ ಕೆಲವು ಬಗೆಯ ರಸಕುಗಳನ್ನು ಮಾರಾಟ ಮಾಡುತ್ತಿರೆಂಬುದನ್ನು ಚರಿತ್ರೆ ತಿಳಿಸುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕ್ರಪೂ. ೨೦೦ ವ್ಯಾಪಾರದ ಉಲ್ಲೇಖನವಿದೆ.

ಪೋರ್ಚುಗೀಸರು, ಫ್ರೆಂಚರು ಮತ್ತು ಬ್ರಿಟಿಷರು ನಮ್ಮ ದೇಶಕ್ಕೆ ವ್ಯಾಪಾರ ಮಾಡುವ ಸಲುವಾಗಿ ಬಂದರು. ವ್ಯಾಪಾರಕ್ಕಾಗಿ ಬಂದವರಲ್ಲಿ ಬ್ರಿಟಿಷರ ಪ್ರಾಬಲ್ಯ ಜಾಸ್ತಿಯಾಗಿ ಅವರು ನಮ್ಮನ್ನು ಆಳುವುದಕ್ಕೂ ಪ್ರಾರಂಭಿಸಿದ್ದಿದು ಇತಿಹಾಸದ ಭಾಗವಾಗಿದೆ. ೧೮೬೯ರಲ್ಲಿ ಸೂಯಜ್ ಕಾಲುವೆ ನಿರ್ಮಾಣವಾದ ಮೇಲೆ ಯುರೋಪಿಗೂ ನಮ್ಮ ದೇಶಕ್ಕೂ ಇದ್ದ ದೂರ ಕಡಿಮೆಯಾಗಿ ವ್ಯಾಪಾರದ ಪ್ರಮಾಣ ಬೆಳೆಯತೊಡಗಿತು. ೧೮೬೩ರಲ್ಲಿ ವಿದೇಶಿ ವ್ಯಾಪಾರದ (ರಫ್ತು+ಆಮದು) ಒಟ್ಟು ರೂ. ೬೦ ಕೋಟಿಗಳಾಗಿದ್ದಿತು. ೧೯೦೪-೦೫ರಲ್ಲಿ ಇದರ ಮೌಲ್ಯ ರೂ. ೨೬೨ ಕೋಟಿಗಳಾಗಿದ್ದಿತು. ಮೊದಲನೆಯ ಮಹಾಯುದ್ಧದ ವೇಳೆ ವಿದೇಶಿ ವ್ಯಾಪಾರದ ಪ್ರಮಾಣ ಕಡಿಮೆಯಾಯಿತು. ೧೯೩೦ರ ವಿಶ್ವದ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲಿ ವಿದೇಶಿ ವ್ಯಾಪಾರ ಕಡಿಮೆಯಾಯಿತು. ಆದರೆ ಎರಡನೇ ಮಹಾಯುದ್ಧಕ್ಕೂ ಮುಂಚೆ ಆಮದುಗಿಂತ ಹೆಚ್ಚು ಪ್ರಮಾಣದಲ್ಲಿ ರಫ್ತು ಮಾಡಿದೆವು. ಏಕೆಂದರೆ ಪ್ರತಿ ವರ್ಷವೂ ನಾವು ಬ್ರಿಟಿಷರಿಗೆ ಗೃಹ ವೆಚ್ಚ ಲೆಕ್ಕದಲ್ಲಿ ಹೆಚ್ಚಿನ ಹಣವನ್ನು ಪಾವತಿ ಮಾಡಬೇಕಾಗಿದ್ದಿತು. ಬ್ರಿಟಿಷ್ ಅಧಿಕಾರಿಗಳ ಸೇವೆಗೆ ವೇತನ, ಅವರ ನಿವೃತ್ತಿ ವೇತನ, ಸ್ಟರ್ಲಿಂಗ್ ಸಾಲಕ್ಕೆ ಬಡ್ಡಿ ಮತ್ತು ಅಸಲು ಮರುಪಾವತಿ ಇತ್ಯಾದಿ ವೆಚ್ಚಗಳನ್ನು ಗೃಹ ವೆಚ್ಚ (ಹೋಮ್ ಚಾರ್ಜ್)ಯೆಂದು ಕರೆದು ಪ್ರತಿವರ್ಷ ಈ ಲೆಕ್ಕದಲ್ಲಿ ೩೦ರಿಂದ ರೂ. ೫೦ ಕೋಟಿಗಳನ್ನು ಕೊಡಬೇಕಾಗಿದ್ದಿತು. ಎರಡನೇ ಮಹಾಯುದ್ಧದಲ್ಲಿ ಬ್ರಿಟನ್ ಭಾಗಿಯಾಗಿದ್ದುದರಿಂದ ಭಾರತದಿಂದ ಆಮದು ಪ್ರಮಾಣ

ಜಾಸ್ತಿಯಾಯಿತು. ಭಾರತ ೧೯೪೬ರವರೆಗೆ ರಫ್ತು ಜಾಸ್ತಿ ಮಾಡಿ ರೂ. ೧೭೩೩ ಕೋಟಿ ಮೌಲ್ಯದ ಸ್ಟರ್ಲಿಂಗ್ ಹಣವನ್ನು ಗಳಿಸಿ ಅದು ಬ್ರಿಟನಿನಲ್ಲಿ ಕಾಯ್ದಿರಿಸಿದ ಹಣವಾಗಿ ಇಡಲ್ಪಟ್ಟಿತ್ತು. ನಾವು ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಗತ ಮಾಡುವಾಗ ಆಮದು ಮಾಡಿಕೊಂಡ ಬಂಡವಾಳ ಸರಕುಗಳಿಗೆ ಪಾವತಿ ಮಾಡಲು ಈ ರೀತಿ ಕಾಯ್ದಿರಿಸಲಾದ ಸ್ಟರ್ಲಿಂಗ್ ಹಣವನ್ನು ಉಪಯೋಗಿಸಿಕೊಂಡೆವು.

ಸ್ವಾತಂತ್ರ್ಯ ಪೂರ್ವದ ನಮ್ಮ ವಿದೇಶಿ ವ್ಯಾಪಾರವು ಪ್ರಮುಖ ಲಕ್ಷಣವೆಂದರೆ ನಾವು ಪ್ರತಿವರ್ಷವೂ ರಫ್ತನ್ನು ಜಾಸ್ತಿ ಮಾಡಿ ಆಮದನ್ನು ಕಡಿಮೆ ಮಾಡಿಕೊಳ್ಳುತ್ತಿದ್ದರಿಂದ ವಿದೇಶಿ ವ್ಯಾಪಾರದಲ್ಲಿ ಹೆಚ್ಚಳ ಇದ್ದುದೇ ಆಗಿದೆ. ಆದರೆ ಸ್ವಾತಂತ್ರ್ಯ ಬಂದ ನಂತರ ನಮ್ಮ ವಿದೇಶಿ ವ್ಯಾಪಾರ ಶಿಲ್ಕಿನಲ್ಲಿ ಪ್ರತಿವರ್ಷವೂ ಕೊರತೆ ಉಂಟಾಗಿದೆ.

ಆಂತರಿಕ ಮತ್ತು ಅಂತಾರಾಷ್ಟ್ರೀಯ ವ್ಯಾಪಾರ (Internal and International trade): ವ್ಯಾಪಾರವು ಆಂತರಿಕವೂ ಆಗಿರಬಹುದು ಅಥವಾ ಬಾಹ್ಯವೂ ಆಗಿರಬಹುದು. ಆಂತರಿಕ ಅಥವಾ ಸ್ವದೇಶಿ ವ್ಯಾಪರ ಎಂದರೆ ಒಂದು ದೇಶ ಅಥವಾ ಪ್ರದೇಶದ ಭೌಗೋಳಿಕ ಸರಹದ್ದಿನ ಒಳಗಡೆ ನಡೆಯುವ ವಿನಿಮಯ ವ್ಯವಹಾರವಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಒಂದು ದೇಶದ ಒಳಗಡೆ ವಿವಿಧ ವ್ಯಕ್ತಿಗಳು ಅಥವಾ ಪ್ರದೇಶಗಳು ಅಥವಾ ಸ್ಥಳಗಳ ನಡುವೆ ನಡೆಯುವ ಸರಕು ಮತ್ತು ಸೇವೆಗಳ ವಿನಿಮಯವನ್ನು ಆಂತರಿಕ ವ್ಯಾಪಾರ ಎನ್ನಲಾಗುತ್ತದೆ. ಆಂತರಿಕ ವ್ಯಾಪಾರವನ್ನು ಅಂತರ್ ಪ್ರಾದೇಶಿಕ ವ್ಯಾಪಾರ(Inter regional trade) ಅಥವಾ ಸ್ವದೇಶಿ ವ್ಯಾಪಾರ (Home trade) ಎಂತಲೂ ಕರೆಯಲಾಗುತ್ತದೆ. ಆದ್ದರಿಂದ ಆಂತರಿಕ ಅಥವಾ ಸ್ವದೇಶಿ ವ್ಯಾಪಾರವು ದೇಶದ ಒಳಗಡೆ ವಿವಿಧ ವ್ಯಕ್ತಿಗಳು ಮತ್ತು ಪ್ರದೇಶಗಳ ನಡುವೆ ನಡೆಯುವ ಸರಕು ಮತ್ತು ಸೇವೆಗಳ ವಿನಿಮಯ ವ್ಯವಹಾರವಾಗಿದ್ದು ಇದು ಹೆಚ್ಚೂ ಕಡಿಮೆ ಒಂದೇ ರೀತಿಯ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಒಳಗೊಂಡ ವ್ಯಾಪಾರವಾಗಿರುತ್ತದೆ.

ಬಾಹ್ಯ ಅಥವಾ ಅಂತಾರಾಷ್ಟ್ರೀಯ ವ್ಯಾಪಾರವು ಜಗತ್ತಿನ ವಿವಿಧ ಸಾರ್ವಭೌಮ ರಾಷ್ಟ್ರಗಳ ನಡುವೆ ನಡೆಯವ ವ್ಯಾಪಾರವಾಗಿರುತ್ತದೆ. ಅಂದರೆ ವಿವಿಧ ದೇಶಗಳು ಪರಸ್ಪರ ಸರಕು ಮತ್ತು ಸೇವೆಗಳ ವಿನಿಮಯ ವ್ಯವಹಾರದಲ್ಲಿ ತೊಡಗುವುದು ಅಂತಾರಾಷ್ಟ್ರೀಯ ವ್ಯಾಪಾರವಾಗುತ್ತದೆ. ಇದು ರಾಜಕೀಯ ಸರಹದ್ದಿನ ಹೊರಗಡೆ ನಡೆಯುವ ವಿನಿಮಯ ವ್ಯವಹಾರವಾಗಿದೆ. ಆದ್ದರಿಂದ ಅಂತಾರಾಷ್ಟ್ರೀಯ ವ್ಯಾಪಾರ ಎಂದರೆ ಎರಡು ಅಥವಾ ಅದಕ್ಕಿಂತ ಹೆಚ್ಚಿನ ದೇಶಗಳ ನಡುವಿನ ಸರಕು ಮತ್ತು ಸೇವೆಗಳ ವಿನಿಮಯ ವ್ಯವಹಾರವಾಗಿದೆ. ಅಂತಾರಾಷ್ಟ್ರೀಯ ವ್ಯಾಪಾರವನ್ನು ವಿದೇಶಿ ವ್ಯಾಪಾರ ಎಂದೂ ಸಹ ಕರೆಯಲಾಗುತ್ತಿದ್ದು ಇದು ವಿಭಿನ್ನ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಭೌಗೋಳಿ ಸ್ಥಿತಿಗತಿಗಳಲ್ಲಿ ನೆರವೇರುತ್ತಿರುತ್ತದೆ.

ವ್ಯಾಪಾರ ಮೂಲ ಪರಿಕಲ್ಪನೆಗಳು (Basic Concepts of Trade): ಎರಡು ವ್ಯಕ್ತಿಗಳ ನಡುವೆ ಅಥವಾ ಎರಡು ದೇಶಗಳ ನಡುವೆ ಸರಕುಗಳು ಮತ್ತು ಸೇವೆಗಳನ್ನು ಮಾರಾಟ ಮಾಡುವ ಮತ್ತು ಕೊಂಡುಕೊಳ್ಳುವ ಕ್ರಿಯೆಯನ್ನು ವ್ಯಾಪಾರ ಎನ್ನುತ್ತೇವೆ.

ಅಂದರೆ ವ್ಯಾಪಾರವು ಸರಕು ಸೇವೆಗಳ ಮಾರಾಟ ಮತ್ತು ಕೊಳ್ಳುವಿಕೆಯನ್ನು ಒಳಗೊಂಡಿರುತ್ತದೆ. ಇದು ಉತ್ಪಾದನೆ ಮತ್ತು ಅನುಭೋಗದ ನಡುವೆ ಸಂಪರ್ಕ ಕಲ್ಪಿಸುತ್ತದೆ. ವ್ಯಾಪಾರ ಒಂದು ಬಹುಮುಖ್ಯ ಆರ್ಥಿಕ ಚಟುವಟಿಕೆಯಾಗಿದ್ದು ಇದು ಮಿಲಿಯಾಂತರ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿದೆ.

ವ್ಯಾಪಾರದ ವಿಧಗಳು(Types of Trade): ವ್ಯಾಪಾರವನ್ನು ಪ್ರಮುಖವಾಗಿ ೨ ವಿಧಗಳಾಗಿ ವಿಂಗಡಿಸಬಹುದು. ಅವುಗಳೆಂದರೆ ೧. ದೇಶೀಯ ವ್ಯಾಪಾರ ೨. ವಿದೇಶಿ ವ್ಯಾಪಾರ

೧. ದೇಶೀಯ ವ್ಯಾಪಾರ(Domestic Trade): ಒಂದು ದೇಶದ ಭೌಗೋಳಿಕ ಎಲ್ಲೆಯೊಳಗಡೆ ನಡೆಯುವ ವ್ಯಾಪಾರವನ್ನು ದೇಶೀಯ ವ್ಯಾಪಾರ ಅಥವಾ ಆಂತರಿಕ ವ್ಯಾಪಾರ ಎನ್ನುತ್ತೇವೆ. ಅಂದರೆ ಒಂದು ದೇಶದ ಗಡಿರೇಖೆಯ ಒಳಗಡೆ ವಿವಿಧ ಪ್ರದೇಶಗಳು ಮತ್ತು ಜನರ ನಡುವೆ ನಡೆಯುವ ಸರಕು ಸೇವೆಗಳ ವಿನಿಮಯ ವ್ಯವಹಾರವೇ ಆಂತರಿಕ ವ್ಯಾಪಾರ, ಸರಕು ಸೇವೆಗಳು ದೇಶದೊಳಗಡೆ ಇರುವ ಪ್ರಾಂತ್ಯಗಳ ನಡುವೆಯೂ ನಡೆಯುತ್ತದೆ. ಪ್ರಾಂತ್ಯಗಳ ನಡುವೆ ನಡೆಯುವ ವ್ಯಾಪಾರವನ್ನು ಅಂತರ್ ಪ್ರಾಂತೀಯ ವ್ಯಾಪಾರ ಎಂಬುದಾಗಿಯೂ ಕರೆಯಬಹುದು.

೨. ವಿದೇಶಿ ವ್ಯಾಪಾರ (Foreign Trade): ಜಗತ್ತಿನ ವಿವಿಧ ಸಾರ್ವಭೌಮ ದೇಶಗಳ ನಡುವೆ ನಡೆಯುವ ವ್ಯಾಪಾರವನ್ನು ಅಂತಾರಾಷ್ಟ್ರೀಯ ವ್ಯಾಪಾರ ಎನ್ನುತ್ತೇವೆ. ಅಂತಾರಾಷ್ಟ್ರೀಯ ಅಥವಾ ವಿದೇಶಿ ವ್ಯಾಪಾರವು ಆಮದು ವ್ಯಾಪಾರ ಮತ್ತು ರಫ್ತು ವ್ಯಾಪಾರವನ್ನು ಒಳಗೊಂಡಿದೆ. ಒಂದು ದೇಶವು ಇತರ ದೇಶಗಳಿಂದ ಸರಕು ಸೇವೆಗಳನ್ನು ಕೊಳ್ಳುವ ವ್ಯಾಪಾರವನ್ನು ಆಮದು ವ್ಯಾಪಾರ ಎನ್ನಬಹುದು. ಒಂದು ದೇಶವು ಇತರ ದೇಶಗಳಿಗೆ ದೇಶೀಯ ಸರಕು ಸೇವೆಗಳನ್ನು ಮಾರಾಟ ಮಾಡಿದರೆ ಅದನ್ನು ವ್ಯಾಪಾರ ಎನ್ನಬಹುದು.

ನಮ್ಮ ದೇಶದ ಆರ್ಥಿಕ ಪ್ರಗತಿಯಲ್ಲಿ ವಿದೇಶಿ ವ್ಯಾಪಾರದ ಪ್ರಾಮುಖ್ಯತೆ : ನಮ್ಮ ದೇಶವು ಸ್ವಾತಂತ್ರ್ಯವನ್ನು ಪಡೆದ ನಂತರ ಆರ್ಥಿಕ ರಂಗದಲ್ಲಿ ಬಹಳ ಶ್ಲಾಘನೀಯವಾದ ಪ್ರಗತಿಯನ್ನು ಸಾಧಿಸಿದೆ ಎಂಬುದರಲ್ಲಿ ಏನೂ ಸಂಶಯವಿಲ್ಲ. ನಮ್ಮ ಪಂಚವಾರ್ಷಿಕ ಯೋಜನೆಗಳೆಲ್ಲವೂ ದೇಶದ ಸರ್ವತೋಮುಖವಾದ ಬೆಳವಣಿಗೆಯನ್ನೇ ಮುಖ್ಯ ಗುರಿಯಾಗಿ ಇಟ್ಟುಕೊಂಡು ಬಂದಿವೆ. ಅದರಲ್ಲೂ ಕೃಷಿ ಕೈಗಾರಿಕೆ ಮತ್ತು ಸಮಾಜ ಕಲ್ಯಾಣ ಸೇವೆಗಳನ್ನು ಸಾಕಷ್ಟು ಪ್ರಮಾಣದಲ್ಲಿ ಮತ್ತು ವೇಗವಾಗಿ ಬೆಳೆಸಿಕೊಂಡು ಬರುವುದೇ ಅತಿ ಮುಖ್ಯಗುರಿಯೆಂದು ಹೇಳಿದರೆ ತಪ್ಪಾಗಲಾರದು.

ನಮ್ಮ ದೇಶವು ೧೯೫೧ರವರೆಗೂ ಆರ್ಥಿಕ ರಂಗದಲ್ಲಿ ಹಿಂದುಳಿದ ದೇಶವೆಂದು ಗಣಿಸಲ್ಪಟ್ಟಿದ್ದಿತು. ಆದರೆ ಈಗ ಪ್ರಗತಿ ಹೊಂದುತ್ತಿರುವ ದೇಶವಾಗಿದೆ. ಕೃಷಿ ರಂಗದಲ್ಲಿ "ಹಸಿರು ಕ್ರಾಂತಿ" ಕೈಗಾರಿಕಾ ರಂಗದಲ್ಲಿ ಅನೇಕ ಕ್ರಾಂತಿಯುತವಾದ ಬದಲಾವಣೆಗಳು ವಿದ್ಯುತ್ ಯಂತ್ರಗಳಿಂದ ಕೂಡಿದ ಭಾರಿ ಪ್ರಮಾಣದ ಕಾರ್ಖಾನೆಗಳು, ಸುಲಭವಾಗಿ, ಸುರಕ್ಷಿತವಾಗಿ ಸಂಚಾರ ಮಾಡಲು ಮತ್ತು ಈ ರಂಗಗಳಲ್ಲಿ ತಯಾರಾದ ವಸ್ತುಗಳನ್ನು ವಿನಿಮಯ ವ್ಯಾಪಾರ ಮಾಡಲು ರಹದಾರಿ, ಸಾರಿಗೆ ಸೌಕರ್ಯಗಳು, ರೇವು ಬಂದರಗಳು, ಹಣಕಾಸಿನ ಸೌಲಭ್ಯವನ್ನೊದಗಿಸುವ ಸಂಸ್ಥೆಗಳು, ಸರಿಯಾದ ತೂಕ ಮತ್ತು ಅಳತೆಯ ವ್ಯವಸ್ಥೆ, ವ್ಯಾಪಾರ ಸಂಬಂಧಿಸಿದ ಶಾಸನಗಳು ಮತ್ತು ವಿಮೆಯ ರಕ್ಷಣೆ ಹೀಗೆ ನಾನಾ ರೀತಿಯ ಮತ್ತು ಸರ್ವತೋಮುಖವಾದ ಬೆಳವಣಿಗೆ ಮತ್ತು ಅಧಿಕೋತ್ಪತ್ತಿ ಕ್ರಮಗಳಿಂದ ದೇಶದ ಒಳ ವ್ಯಾಪಾರವೆ ಅಲ್ಲದೆ ನಾಡಿನ ಎಲ್ಲ ಕಟ್ಟನ್ನು ದಾಟಿ ಇತರ ದೇಶಗಳಿಗೂ ಈ ವಾಣಿಜ್ಯ ವ್ಯಾಪಾರವು ಹಬ್ಬುತ್ತಿದೆ. ಈ ರೀತಿಯ ಪ್ರಗತಿಯು ಎಲ್ಲಾ ದೇಶಗಳಲ್ಲೂ ನಡೆದಿರುವುದರಿಂದ ಇಡೀ ಪ್ರಪಂಚವೇ ಒಂದು ದೊಡ್ಡ ಮಾರುಕಟ್ಟೆಯಾಗಿ ಪರಿಣಮಿಸಿದೆ. ( (ಸಂ) ಭಾರತದ ಆರ್ಥಿಕ ವ್ಯವಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫, ಪು ೧೪೩)

ವಿದೇಶಿ ವ್ಯಾಪಾರವೆಂದರೇನು? : ವ್ಯಾಪಾರ ಅಥವಾ ವಾಣಿಜ್ಯವೆಂದರೆ ವಸ್ತುಗಳನ್ನು ಕೊಳ್ಳುವ ಮತ್ತು ಮಾರಾಟ ಮಾಡುವ ವ್ಯವಹಾರ. ಇಂತಹ ವ್ಯವಹಾರವನ್ನು ಅರ್ಥಶಾಸ್ತ್ರದ ಭಾಷೆಯಲ್ಲಿ "ವಾಣಿಜ್ಯ" ಎನ್ನುವರು. ನಮಗೆ ಬೇಕಾದ ಪದಾರ್ಥಗಳು ಬೇಕೆನಿಸಿದ ಸಮಯಕ್ಕೆ ಒದಗಿ ನಮಗೆ ತೃಪ್ತಿಕೊಡುವುದಕ್ಕೆ ಮೊದಲು ಅವು ಅನೇಕರ ನೆರವು-ಸೇವೆಗಳನ್ನು ಪಡೆದಿರುತ್ತವೆ ಎಂಬುದು ಗಮನದಲ್ಲಿಡಬೇಕಾದ ಅಂಶ. ಅಂದರೆ ವ್ಯಾಪಾರಕ್ಕೆ ಅನೇಕ ಸಂಸ್ಥೆಗಳು ಉದಾ: ಸಾರಿಗೆ ವ್ಯವಸ್ಥೆ, ವಿಮೆ, ಬ್ಯಾಂಕು ಮುಂತಾದವು ಹಾಗೂ ಸರಕುಗಳನ್ನು ವ್ಯಾಪಾರಿಗೆ ದೊರಕಿಸಿಕೊಡುವ ಪ್ರತಿನಿಧಿಗಳು ಇವರೆಲ್ಲರ ಸಹಕಾರ ತೀರ ಅವಶ್ಯವಾಗಿರುತ್ತದೆ. ಈ ರೀತಿ ವ್ಯಾಪಾರ ಮತ್ತು ವ್ಯಾಪಾರ ಸಹಕಾರಿಗಳು ಸೇರಿದ ಇಡೀ ಒಂದು ವ್ಯವಸ್ಥೆಯನ್ನು "ವಾಣಿಜ್ಯ"ವೆನ್ನಬಹುದು.

ರಾಷ್ಟ್ರದ ಅರ್ಥವ್ಯವಸ್ಥೆಯಲ್ಲಿ ಕೃಷಿ, ಕೈಗಾರಿಕೆ, ಸಾರಿಗೆಗಳಿಗೆ ಅತಿ ಹೆಚ್ಚಿನ ಪ್ರಾಧಾನ್ಯತೆ ಇರುವಂತೆ ವ್ಯಾಪಾರ ಅಥವಾ ವಾಣಿಜ್ಯಕ್ಕೂ ಅಧಿಕ ಪ್ರಾಮುಖ್ಯತೆ ಇದೆ. ಅಷ್ಟೇ ಅಲ್ಲ, ಇವೆಲ್ಲವೂ ಒಂದಕ್ಕೊಂದು ಸಂಬಂಧಿಸಿವೆ. ಹೇಗೆಂದರೆ ಕೃಷಿ ವಸ್ತುಗಳು ಕೈಗಾರಿಕೆಗಳಿಗೆ ಬೇಕಾಗಿರುತ್ತವೆ. ಅದೇ ರೀತಿ ಕೈಗಾರಿಕೆಗಳಲ್ಲಿ ತಯಾರಾದ ವಸ್ತುಗಳು ಕೃಷಿ ಕಾರ್ಯಗಳಿಗೆ ಬೇಕಾಗಿರುತ್ತವೆ. ತಯಾರಾದ ಸ್ಥಳದಿಂದ ಇವುಗಳ ಉಪಯೋಗವಿರುವ ಸ್ಥಳಗಳಿಗೆ ಸಾಗಿಸುವ ಕಾರ್ಯವನ್ನು ಸಾರಿಗೆ ವ್ಯವಸ್ಥೆ ಮಾಡುತ್ತದೆ. ಮುಂದೆ ಇದರ ವಿನಿಮಯ ಕಾರ್ಯವನ್ನು ವ್ಯಾಪಾರ ಮಾಡುತ್ತದೆ. ಇದು ಬಹಳ ಮುಖ್ಯವಾದ ಕಾರ್ಯ. ಏಕೆಂದರೆ ಪರಸ್ಪರ ವಿನಿಮಯ ಕಾರ್ಯದ ಮೇಲೆಯೇ ರಾಷ್ಟ್ರದ ಇಡೀ ಆರ್ಥಿಕ ವ್ಯವಸ್ಥೆ ನಿಂತಿದೆಯೆಂದು ಹೇಳಬಹುದು. ವ್ಯಾಪಾರವನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸ

ಬಹುದು ೧. ದೇಶೀಯ ವ್ಯಾಪಾರ ಅಥವಾ ಒಳನಾಡಿನ (ಆಂತರಿಕ) ವ್ಯಾಪಾರ, ೨. ವಿದೇಶಿ ವ್ಯಾಪಾರ ಅಥವಾ ಅಂತಾರಾಷ್ಟ್ರೀಯ ವ್ಯಾಪಾರ

ದೇಶೀಯ(ಆಂತರಿಕ) ವ್ಯಾಪಾರ Internal Trade): ಸ್ವದೇಶಿ ಅಥವಾ ಒಳನಾಡಿನ (ಆಂತರಿಕ) ವ್ಯಾಪಾರವನ್ನು ದೇಶೀಯ ವ್ಯಾಪಾರವೆಂದು ಕರೆಯುತ್ತಾರೆ. ಸ್ವದೇಶಿ ಎಂದರೆ ನಮ್ಮ ದೇಶದ್ದು. ದೇಶೀಯ ವ್ಯಾಪಾರವು ಒಂದು ರಾಷ್ಟ್ರದೊಳಗೆ ನಡೆಯುವ ವಾಣಿಜ್ಯ ವ್ಯವಹಾರಗಳಿಗೆ ಸಂಬಂಧಿಸಿರುತ್ತದೆ. ನಮಗೆ ಅಗತ್ಯವಾದ ವಸ್ತುಗಳನ್ನು ಇತರ ರಾಷ್ಟ್ರಗಳಿಂದ ಆಮದು ಮಾಡಿಕೊಂಡರೆ ಅಥವಾ ನಮ್ಮಲ್ಲಿರುವ ವಸ್ತುಗಳನ್ನು ಮತ್ತೊಂದು ರಾಷ್ಟ್ರಕ್ಕೆ ರಫ್ತು ಮಾಡಿದರೆ ಅದು ಅಂತಾರಾಷ್ಟ್ರೀಯ ವ್ಯಾಪಾರವಾಗುತ್ತದೆ. ಅಂದರೆ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರದೊಂದಿಗೆ ವಸ್ತುಗಳನ್ನು ಕೊಳ್ಳುವ ಹಾಗೂ ಮಾರುವ ಒಂದು ವ್ಯವಹಾರವೇ ಅಂತಾರಾಷ್ಟ್ರೀಯ ವ್ಯವಹಾರ. ಉದಾ: ಇಂಗ್ಲೆಂಡ್–ಭಾರತ. ಭಾರತ ಪರರಾಷ್ಟ್ರಗಳೊಡನೆ ಮಾಡುವ ವ್ಯಾಪಾರಕ್ಕೆ ವಿದೇಶಿ ವ್ಯಾಪಾರವೆಂದು ಕರೆಯುತ್ತಾರೆ. ಭಾರತವು ಇತರ ದೇಶಗಳಿಂದ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತದೆ. ಮತ್ತು ತಾನು ಸಿದ್ಧಪಡಿಸಿದ ವಸ್ತುಗಳನ್ನು ರಫ್ತುಮಾಡುತ್ತದೆ. ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ವಿದೇಶಿ ವ್ಯಾಪಾರ ಹೆಚ್ಚು ಮಹತ್ವವನ್ನು ಪಡೆದಿರುತ್ತದೆ. ಉದಾ: ಇಂಗ್ಲೆಂಡ್. ಇನ್ನು ಕೆಲವು ರಾಷ್ಟ್ರಗಳಲ್ಲಿ ದೇಶೀಯ ವ್ಯಾಪಾರ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಉದಾ: ಭಾರತ. ಇದಕ್ಕೆ ಮುಖ್ಯ ಕಾರಣ ಆಯಾ ರಾಷ್ಟ್ರಗಳ ನೈಸರ್ಗಿಕ ಹಾಗೂ ಆರ್ಥಿಕ ಸ್ಥಿತಿಗಳು. ಭಾರತವು ವಿಸ್ತೀರ್ಣದ ದೃಷ್ಟಿಯಿಂದಲೂ ಜನಸಂಖ್ಯೆಯ ದೃಷ್ಟಿಯಿಂದಲೂ ಬಹಳ ವಿಶಾಲ ರಾಷ್ಟ್ರ. ಅಲ್ಲದೆ ನಮ್ಮ ನಾಡು ಸಂಪದ್ಭರಿತವಾಗಿದ್ದು ಅತುಲ ಸಂಪನ್ಮೂಲಗಳ ಬೀಡಾಗಿದೆ. ಇದರಿಂದಾಗಿ ಕೃಷಿ ಕೈಗಾರಿಕೆ, ಸಾರಿಗೆ ಮುಂತಾದ ಎಲ್ಲಾ ಆರ್ಥಿಕ ರಂಗಗಳೂ ತ್ವರೆಯಿಂದ ಮುನ್ನಡೆಯುತ್ತಿವೆ. ಇಂತಹ ಜನಭರಿತ ನಾಡಿನಲ್ಲಿ ಎಲ್ಲಾ ರೀತಿಯ ವಸ್ತುಗಳಿಗೂ ಅಧಿಕ ಬೇಡಿಕೆ ಇದ್ದೇ ಇರುತ್ತದೆ. ಆದ್ದರಿಂದ ನಮ್ಮ ದೇಶದಲ್ಲಿ ದೇಶೀಯ ವ್ಯಾಪಾರ ವಿದೇಶೀ ವ್ಯಾಪಾರಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ದೇಶೀಯ ಎನ್ನುವ ಪದ ಹುಟ್ಟಿಕೊಂಡಿದ್ದು ಸ್ವಾತಂತ್ರ್ಯ ಪೂರ್ವ ದಿಲ್ಲಿಯೇ. ಇದು ಹುಟ್ಟಲು ಕಾರಣ ವಿದೇಶೀಯರ ದಬ್ಬಾಳಿಕೆಯಲ್ಲಿ ೧೫೦ ವರ್ಷಗಳ ಕಾಲ ತೊಳಲಾಡಿದ ಭಾರತೀಯರ ಗುಲಾಮಗಿರಿ. ಆಗನಮ್ಮ ದೇಶದಲ್ಲಿ ಈಗಿನಂತೆ ಎಷ್ಟೋ ವಸ್ತುಗಳು ತಯಾರಾಗುತ್ತಿರಲಿಲ್ಲ. ಇದಕ್ಕೆ ಕಾರಣ ಆಗ ಭಾರತ ಬ್ರಿಟಿಷರ ಅಧೀನದಲ್ಲಿದ್ದು ಬ್ರಿಟಿಷ್ ಸರಕಾರ ಈ ವಸ್ತುಗಳ ತಯಾರಿಕೆಗೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಭಾರತದ ದೇಶೀಯ ವ್ಯಾಪಾರ ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ ಅಡಚಣೆಗಳನ್ನು ಎದುರಿಸಬೇಕಾಗಿತ್ತು. ಬ್ರಿಟಿಷ್ ಸರ್ಕಾರ ನಮ್ಮ ದೇಶದ ವಿದೇಶಿ ವಾಣಿಜ್ಯಕ್ಕೆ ಮಾತ್ರ ಬೆಂಬಲ ನೀಡಿತು. ಏಕೆಂದರೆ ಇಂತಹ ವ್ಯಾಪಾರದಿಂದ ಇಂಗ್ಲೆಡಿನಲ್ಲಿ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತಿದ್ದವು. ಆಗಿನ ಕಾಲದಲ್ಲಿ ಸಾರಿಗೆ ಸಂಪರ್ಕಗಳು ಮಿತವಾಗಿದ್ದವು. ಅಲ್ಲದೆ ರೈಲುಗಳು ದೇಶೀಯ ವ್ಯಾಪಾರವನ್ನು ಅಲಕ್ಷಿಸಿದ್ದವು. ಇದರಿಂದಾಗಿ

ಕಚ್ಚಾಹತ್ತಿ ನಮ್ಮಲ್ಲಿದ್ದರೂ ಅದು ಬಟ್ಟೆಯಾಗಲು ಇಂಗ್ಲೆಂಡಿಗೆ ಹೋಗಿ ಬರಬೇಕಾಗಿತ್ತು. ಇದಕ್ಕೆ ಅಪಾರ ಹಣ ವೆಚ್ಚವಾಗಿ ನಮ್ಮ ದೇಶದ ಸಂಪತ್ತೆಲ್ಲವೂ ವಿದೇಶಗಳ ಬೊಕ್ಕಸವನ್ನು ತುಂಬುತ್ತಿತ್ತು. ಇದೆಲ್ಲವನ್ನೂ ಮನಗಂಡ ನಮ್ಮ ಸ್ವಾತಂತ್ರ್ಯ ಪಿತಾಮಹರಾದ ಮಹಾತ್ಮ ಗಾಂಧಿಯವರು ನಮ್ಮ ದೇಶದಲ್ಲಿದ್ದ ವಿದೇಶಿ ಪದಾರ್ಥಗಳನ್ನು ಬಹಿಷ್ಕರಿಸಿ ಸ್ವದೇಶಿ ಪದಾರ್ಥಗಳನ್ನೇ ಬಳಸಲು ಜನತೆಗೆ ಕಳಕಳಿಯಿಂದ ಕರೆ ನೀಡಿದರು. ಸ್ವಾವಲಂಬನೆಯನ್ನು ಬೋಧಿಸಿದರು. ಗಾಂಧೀಜಿಯವರು ವಿದೇಶದ ವಸ್ತುಗಳನ್ನು ಮುಟ್ಟುತ್ತಿರಲಿಲ್ಲ. ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ವಿದೇಶಿ ವಸ್ತುಗಳನ್ನು ಬಹಿರಂಗವಾಗಿ ಸುಡುವ ಕಾರ್ಯಕ್ರಮಗಳೂ ನಡೆದವು. ಈ ಸ್ವದೇಶಿ ಚಳವಳಿಯಿಂದ ಜನತೆಯಲ್ಲಿ ದೇಶಾಭಿಮಾನ ಉಕ್ಕಿ ಹರಿಯಿತು. ಇದರ ಫಲವೇ ಭಾರತ ಸ್ವಾತಂತ್ರ್ಯ ಪಡೆದುದು.

ಸ್ವಾತಂತ್ರ್ಯವನ್ನು ಗಳಿಸಿದ ನಂತರ ಭಾರತದಲ್ಲಿ ಸ್ವದೇಶಿ ವ್ಯಾಪಾರ ಸಾಕಷ್ಟು ಪ್ರಮಾಣದಲ್ಲಿ ಬೆಳೆದಿದೆ. ನಮಗೆ ಬೇಕಾದ ವಸ್ತುಗಳೆಲ್ಲವೂ ನಮ್ಮ ದೇಶದಲ್ಲೇ ತಯಾರಾಗುತ್ತವೆ. ಇದರ ಜೊತೆಗೆ ಯೋಜನೆಗಳಲ್ಲಿ ಅಭಿವೃದ್ಧಿ ಕಾರ್ಯಗಳು ವೇಗದಿಂದ ಮುನ್ನಡೆಯುತ್ತಿವೆ. ಉದಾ: ಕೃಷಿ, ಕೈಗಾರಿಕೆ, ಬ್ಯಾಂಕಿಂಗ್, ಸಾರಿಗೆ ಸಂಪರ್ಕಗಳು ಅಭಿವೃದ್ಧಿಯಾಗಿರುವುದರಿಂದ ಸ್ವದೇಶಿ ವ್ಯಾಪಾರ ದಿನೇ ದಿನೇ ಹೆಚ್ಚಿನ ಆದ್ಯತೆ ಪಡೆಯುತ್ತಿವೆ. ನಮ್ಮ ದೇಶವು ಕೃಷಿ ರಂಗಕ್ಕೆ ಹೆಚ್ಚಿನ ಆದ್ಯತೆ ನೀಡುವುದರಿಂದ ಆಹಾರ ಧಾನ್ಯ ರಾಷ್ಟ್ರದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸಾಗಿಸಲು ಒಳ್ಳೆಯ ಸಾರಿಗೆ ವ್ಯವಸ್ಥೆಗಳು ರೂಪಗೊಳ್ಳುತ್ತಿವೆ. ಇದಲ್ಲದೆ ಕೈಗಾರಿಕೆಗಳೂ ಸಹ ದಿನೇ ದಿನೇ ಬೆಳೆಯುತ್ತಿವೆ. ಕೈಗಾರಿಕೆ ಮತ್ತು ಕೃಷಿ ರಾಷ್ಟ್ರದ ಬೆಳವಣಿಗೆಯ ಎರಡು ಕಣ್ಣುಗಳಿದ್ದಂತೆ. ಇವು ದೇಶೀಯ ವ್ಯಾಪಾರಕ್ಕೆ ಪೋಷಕವಾಗಿವೆ. ಭಾರತದಲ್ಲಿ ತಯಾರಾಗುವ ಅನೇಕ ವಸ್ತುಗಳಿಗೆ ವಿದೇಶಿ ಮಾರುಕಟ್ಟೆಗಳಲ್ಲಿ ಹೆಚ್ಚು ಬೇಡಿಕೆ ಇದೆ. ಆದ್ದರಿಂದ ಇನ್ನು ಮುಂದೆಯೂ ಸ್ವದೇಶಿ ವ್ಯಾಪಾರಕ್ಕೆ ಒಳ್ಳೆಯ ಭವಿಷ್ಯವಿದೆ ಎಂದು ಹೇಳಬಹುದು.

**ಅಂತಾರಾಷ್ಟ್ರೀಯ ವ್ಯಾಪಾರ (International Trade) :** ವಿದೇಶಿ ವ್ಯಾಪಾರವು ನಮ್ಮ ರಾಷ್ಟ್ರದ ಅರ್ಥವ್ಯವಸ್ಥೆಯಲ್ಲಿ ಹಿಂದಿನಿಂದಲೂ ಗಣನೀಯವಾದ ಪಾತ್ರವನ್ನು ವಹಿಸುತ್ತಾ ಬಂದಿದೆ. ಈಜಿಪ್ಟ್, ಅರೇಬಿಯ, ಪರ್ಷಿಯಾ, ರೋಮ್ ದೇಶಗಳೊಂದಿಗೆ ವ್ಯಾಪಾರದ ಸಂಬಂಧವನ್ನು ನಮ್ಮ ದೇಶ ಹೊಂದಿತ್ತು. ಆಗ ಭಾರತ ಬೇರೆ ದೇಶಗಳಿಗೆ ರಫ್ತು ಮಾಡುತ್ತಿದ್ದ ಪದಾರ್ಥಗಳೆಂದರೆ ಹತ್ತಿಬಟ್ಟೆ, ಸುಗಂಧದ್ರವ್ಯಗಳು ಮತ್ತು ಲೋಹದ ಸಾಮಾನುಗಳು. ಪರ್ಷಿಯಾದಿಂದ ದ್ರಾಕ್ಷಾರಸ ಮತ್ತು ಚಿನ್ನವನ್ನು, ಚೀನಾದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಿತ್ತು. ಆಗ ನಮ್ಮ ದೇಶದ ಒಟ್ಟು ರಫ್ತು ಆಮದಿಗಿಂತ ಹೆಚ್ಚಾಗಿದ್ದು ಚಿನ್ನ ಮತ್ತು ಬೆಳ್ಳಿ ನಮಗೆ ಬರುತ್ತಿತ್ತು. ಭಾರತ ಬ್ರಿಟಿಷರ ಆಳ್ವಿಕೆಯಲ್ಲಿದ್ದಾಗ ಬ್ರಿಟಿಷ್ ಸರಕಾರ ಭಾರತದ ವ್ಯಾಪಾರವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡಿತ್ತು. ಭಾರತೀಯ ಕೈಗಾರಿಕೆಗಳಿಗೆ ಬ್ರಿಟಿಷ್ ಸರಕಾರ ಮೊದಲಿಗೆ ತಕ್ಕಮಟ್ಟಿಗೆ ಪ್ರೋತ್ಸಾಹ

ನೀಡಿತು. ಆಗ ಮಸ್ಲಿನ್ ಮತ್ತು ಹತ್ತಿ ಬಟ್ಟೆಗಳನ್ನು ಭಾರತ ರಫ್ತು ಮಾಡುತ್ತಿದ್ದಿತು. (ಡಿ.ವೇ ಭಾರತದ ಆರ್ಥಿಕ ಅಭಿವೃದ್ಧಿ, ೧೯೮೮, ಪು ೪೧೩-೪೧೫)

ಭಾರತದ ವಿದೇಶ ವ್ಯಾಪಾರ : ಯಾವ ದೇಶವೇ ಆಗಲಿ ಇಂದು ಸಂಪೂರ್ಣ ಸ್ವಾವಲಂಬನೆಯಾಗಿರಲು ಸಾಧ್ಯವಿಲ್ಲ. ನಾಗರಿಕತೆ ಬೆಳೆದಂತೆ ಜನರ ಬೇಡಿಕೆಗಳೂ, ಅವುಗಳ ವೈವಿಧ್ಯಗಳೂ ಬಹುಗುಣಿತಗೊಳ್ಳುತ್ತಿವೆ. ತೀರದ ಬಯಕೆಗಳನ್ನು ತೃಪ್ತಿಪಡಿಸುವ ಪ್ರಯತ್ನದಲ್ಲಿ ಮಾನವ ಎಲ್ಲ ದೇಶಗಳತ್ತ ಕೈ ಚಾಚಲೆಬೇಕಾಗಿದೆ. ಕೆಲವು ದೇಶಗಳಿಗೆ ಕಚ್ಚಾ ವಸ್ತುಗಳು, ಖನಿಜ ಸಂಪನ್ಮೂಲಗಳು, ಇಂಧನ ಮೂಲಗಳು ಸಾಕಷ್ಟು ಪ್ರಮಾಣದಲ್ಲಿ ತಮ್ಮ ದೇಶದಲ್ಲಿ ದೊರೆಯುತ್ತಿಲ್ಲ. ಅವು ತಮ್ಮಲ್ಲಿ ಇಲ್ಲದ ಸಾಮಗ್ರಿಗಳನ್ನು ಇತರ ದೇಶಗಳಿಂದ ಆಮದು ಮಾಡಿಕೊಳ್ಳಬೇಕಾಗಿದೆ. ಮತ್ತೆ ಕೆಲವು ದೇಶಗಳಿಗೆ ಯಥೇಚ್ಚವಾಗಿ(ಸದ್ಯದ ಪರಿಸ್ಥಿತಿಯಲ್ಲಿ) ಕೆಲವು ಸಂಪನ್ಮೂಲಗಳು ದೊರೆಯುತ್ತಿವೆ. ಈ ಸಮೃದ್ಧಿಯನ್ನೇ ಆ ದೇಶಗಳು ಬಾಚಿ ಬಾಚಿ ಹೊರದೇಶಗಳಿಗೆ ರಫ್ತು ಮಾಡಿ ಆದಾಯಗಳಿಸುತ್ತವೆ.

ವಿದೇಶಿ ವ್ಯಾಪಾರಕ್ಕೆ ಮುಂದುವರೆದ ದೇಶ, ಹಿಂದುಳಿದ ದೇಶ, ಅಭಿವೃದ್ಧಿಶೀಲ ದೇಶ ಎಂಬ ತಾರತಮ್ಯವಿಲ್ಲ. ಮುಂದುವರಿದ ದೇಶಗಳು ತಮ್ಮ ಉತ್ಪನ್ನಗಳನ್ನು ಮಾರಲಾದರೂ ವಿದೇಶಿ ವ್ಯಾಪಾರದ ಮೊರೆ ಹೋಗಬೇಕು. ಹಿಂದುಳಿದ ದೇಶಗಳು ತಮ್ಮ ಕೊರತೆಗಳನ್ನು ತುಂಬಿಕೊಳ್ಳಲು ವಿದೇಶಿ ವ್ಯಾಪಾರ ಕೈಗೊಳ್ಳಬೇಕು. ಇವೆರಡರ ನಡುವೆಯಿರುವ ಅಭಿವೃದ್ಧಿಶೀಲ ದೇಶವೂ ಅಭಿವೃದ್ಧಿ ಸಾಧಿಸಲು ತ್ವರಿತವಾಗಿ ಬೇಕಾಗಿರುವ ಸರಕು ಸಾಮಗ್ರಿ ಸರಂಜಾಮಗಳನ್ನು ತರಿಸಿಕೊಳ್ಳಲು ವಿದೇಶಿ ವ್ಯಾಪಾರವನ್ನು ಅವಲಂಬಿಸಬೇಕು.

ಭಾರತವು ಪಾಶ್ಚಿಮಾತ್ಯ ದೇಶಗಳತ್ತ ದೃಷ್ಟಿಯಿಟ್ಟು ಆರ್ಥಿಕ ಪ್ರಗತಿ ಸಾಧಿಸಲಾರಂಭಿಸಿತು. ರಷ್ಯದತ್ತ ಮನಸ್ಸಿಟ್ಟು ಸಾಮಾಜಿಕ ಬದಲಾವಣೆ ತರುವ ಕನಸು ಕಂಡಿತು. ಎರಡೂ ವಿಭಿನ್ನ ಮೂಲ ತತ್ವಗಳ ನಡುವೆ ಒಂದು ಸುವರ್ಣ ಮಾಧ್ಯಮ ರೂಪಿಸಿಕೊಳ್ಳಲು ಹೆಣಗಾಡಿತು. ಈ ಗದ್ದಲದಲ್ಲಿ ನಮ್ಮ ವಿಶಾಲ ದೇಶಕ್ಕೆ ಲಕ್ಷಾಂತರ ಹಳ್ಳಿಗಳಲ್ಲಿ ಜೀವಿಸಿರುವ ಕೋಟ್ಯಾಂತರ ಜನರಿಗೆ ಬೇಕಾಗುವ ಆರ್ಥಿಕತೆ, ತಂತ್ರಜ್ಞಾನಗಳತ್ತ ಮನಸ್ಸೂ, ಗಮನವೂ ಹರಿಯದೇ ಹೋಯಿತು. ಹೀಗಾಗಿ ವಿದೇಶಗಳ ಮೇಲೆ ಒಂದಲ್ಲ ಹತ್ತು ಕಾರಣಗಳಿಗಾಗಿ ಭಾರತ ವ್ಯಾಪಾರ ಸಂಪರ್ಕವನ್ನು ಅನಿವಾರ್ಯವಾಗಿ ಸತತವಾಗಿ ಹೊಂದಿರಲೇಬೇಕಾದ ಪರಿಸ್ಥಿತಿ ಬಂದಿದೆ.

ಹೆಬರ್ಲರ್‌ನ ಪ್ರಕಾರ ವಿದೇಶಿ ವ್ಯಾಪಾರವು ಮೂರು ಅಂಶಗಳನ್ನು ಒದಗಿಸುವ ಮೂಲಕ ಆರ್ಥಿಕ ಅಭಿವೃದ್ಧಿಗೆ ನೆರವಾಗುತ್ತದೆ. ೧. ಅಂತಾರಾಷ್ಟ್ರೀಯ ಹೂಡಿಕೆ ಸಾಧ್ಯವಾಗುತ್ತದೆ. ಬಂಡವಾಳ ಸುಲಭವಾಗಿ ಒದಗಿಬರುತ್ತದೆ. ೨. ತಂತ್ರಜ್ಞಾನದ ಲಾಭ ಒದಗಿಬರುತ್ತದೆ. ತಾಂತ್ರಿಕಜ್ಞರ ಸೇವೆಯನ್ನು ಯಂತ್ರಗಳನ್ನು ಆಮದು ಮಾಡಿಕೊಳ್ಳಬಹುದು. ಆರ್ಥಿಕಾಭಿವೃದ್ಧಿಯ ಸಾಧನಗಳಾದ ಕಚ್ಚಾ ಸಾಮಗ್ರಿ ಸಿದ್ಧಸರಕು ಮತ್ತು ಯಂತ್ರೋಪಕರಣಗಳು ದೊರೆಯುತ್ತವೆ.

ಭಾರತದಂತಹ ದೇಶವು ತನ್ನಲ್ಲಿರುವ ವಿಶಿಷ್ಟ ವಿಶೇಷಜ್ಞತೆಯ ಲಾಭ ಪಡೆದು ರಫ್ತು ಹೆಚ್ಚಳ ಸಾಧಿಸಬೇಕು. ವಿದೇಶಿ ವಿನಿಮಯವನ್ನು ಗಳಿಸಬೇಕು. ಇದರಿಂದ ವಿದೇಶೀ ಅಗತ್ಯ ವಸ್ತುಗಳನ್ನು ಆಮದು ಮಾಡಿಕೊಳ್ಳಬಹುದು. ಜೊತೆಗೆ ರಫ್ತು ಕೈಗಾರಿಕೆಯ ಅಭಿವೃದ್ಧಿಯಿಂದ ದೇಶೀಯ ಕೈಗಾರಿಕೆಗಳು ಅಭಿವೃದ್ಧಿ ಪಡೆಯುತ್ತವೆ. ಇದರಿಂದ ಬಂಡವಾಳ ಸಂರಚನೆ ವೇಗಗೊಳ್ಳುತ್ತದೆ. ಆಮದುಗಳಿಗೆ ರಫ್ತುಗಳಿಂದ ಪಾವತಿ ಮಾಡುವುದರಿಂದ ಬಂಡವಾಳ ಸಂರಚನೆ ನೇರವೂ ಅತಿಶೀಘ್ರವೂ ಆಗುತ್ತದೆ. ರಫ್ತು ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿಯು ಆರ್ಥಿಕಾಭಿವೃದ್ಧಿಗೆ ನೆರವಾಗುತ್ತದೆ. ರಫ್ತು ಹೆಚ್ಚಳವಿರುವ ದೇಶದಲ್ಲಿ ಆಮದು ಮಾಡಿಕೊಳ್ಳುವ ದೇಶದ ಅನುಭೋಗಿಗೆ ಅತ್ಯುತ್ತಮ ಸರಕನ್ನು ಆಯ್ದುಕೊಳ್ಳುವ ಸಾಧ್ಯತೆಯಿದೆ. ಮಾರಾಟಗಾರರ ನಡುವೆ ಸ್ಪರ್ಧೆಯಿರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಆಮದುಗಳಿಗೆ ವಿದೇಶೀ ನೆರವನ್ನು ಪಡೆಯುವ ದೇಶದಲ್ಲಿ ಖರೀದಿದಾರನಿಗೆ ಆಯ್ಕೆಯ ಸಾಧ್ಯತೆಯಿಲ್ಲ, ಬೆಲೆಗಳೂ ಅಧಿಕವಾಗಿರುತ್ತವೆ(ಡಿ.ಎಸ್.ಎನ್.ಮೂರ್ತಿ ಇವರು ಆಧುನಿಕ ಭಾರತ, ೧೯೮೮, ಪು ೨೬೯-೨೭೦).

**ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅರ್ಥ ಮತ್ತು ಮಹತ್ವ Meaning and Importance International Economics) :** ಸಾರ್ವಭೌಮ ದೇಶಗಳ ನಡುವಿನ ಆರ್ಥಿಕ ಸಂಬಧಗಳ ಅಧ್ಯಯನಕ್ಕೆ ಸಂಬಂಧಿಸಿದ ವಿಷಯವೇ ಅಂತಾರಾಷ್ಟ್ರೀಯ ಅರ್ಥಶಾಸ್ತ್ರ. ಆರ್ಥಿಕ ಚಟುವಟಿಕೆಗಳ ಅಂತಾರಾಷ್ಟ್ರೀಯ ವಿಷಯಗಳಿಗೆ ಈ ಅಧ್ಯಯನವು ವ್ಯಾಪಿಸಿದೆ. ವಿವಿಧ ದೇಶಗಳ ಜನರ ನಡುವೆ ಸರಕುಗಳ ಮತ್ತು ಸೇವೆಗಳ ವಿನಿಮಯವೇ ಅಂತಾರಾಷ್ಟ್ರೀಯ ಆರ್ಥಿಕ ಸಂಬಂಧವಾಗಿರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಅಂತಾರಾಷ್ಟ್ರೀಯ ಅರ್ಥಶಾಸ್ತ್ರ ಮತ್ತು ಅಂತಾರಾಷ್ಟ್ರೀಯ ವ್ಯಾಪಾರ ಬಹುವಾಗಿ ಒಂದೇ ವ್ಯಾಪ್ತಿಯನ್ನು ಹೊಂದಿದೆ. ಅಂದರೆ ಅಂತಾರಾಷ್ಟ್ರೀಯ ವ್ಯಾಪಾರದ ಫಲವಾಗಿ ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅಧ್ಯಯನದ ಅಗತ್ಯ ಉದ್ಭವಿಸುತ್ತದೆ.

ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಸಾಮಾನ್ಯ ಅರ್ಥಶಾಸ್ತ್ರದ ಒಂದು ಭಾಗವಾಗಿದೆ. ಸಾಮಾನ್ಯ ಅರ್ಥಶಾಸ್ತ್ರದಲ್ಲಿ ಮಾನವನ ಆರ್ಥಿಕ ನಡವಳಿಕೆಗಳನ್ನು ಅಭ್ಯಾಸ ಮಾಡುವಂತೆ ಅಂತಾರಾಷ್ಟ್ರೀಯ ಅರ್ಥಶಾಸ್ತ್ರದಲ್ಲಿ ಅಂತಾರಾಷ್ಟ್ರೀಯ ಆರ್ಥಿಕ ಸಂಬಂಧಗಳಲ್ಲಿ ತೊಡಗಿರುವ ಮಾನವನ ಚಟುವಟಿಕೆಗಳನ್ನು ಕುರಿತು ಅಭ್ಯಾಸ ಮಾಡಲಾಗುತ್ತದೆ. ವಿವಿಧ ರಾಷ್ಟ್ರಗಳಿಗೆ ಸೇರಿದ ಜನರ ನಡುವೆ ನಡೆಯುವ ಸರಕುಗಳ ಮತ್ತು ಸೇವೆಗಳ ವಿನಿಮಯವೇ ಅಂತಾರಾಷ್ಟ್ರೀಯ ಸಂಬಂಧಗಳ ಕೇಂದ್ರಬಿಂದುವಾಗಿದೆ. ಅಂತಾರಾಷ್ಟ್ರೀಯ ಸಂಬಂಧಗಳು ಗಣನೀಯವಾಗಿ ಬೆಳೆಯುತ್ತಿರುವ ಆಧುನಿಕ ಯುಗದಲ್ಲಿ ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಗಮನಾರ್ಹವಾದ ಪ್ರಾಮುಖ್ಯವನ್ನು ಪಡೆದಿದೆ. ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಈ ಕೆಳಗಿನ ಮುಖ್ಯ ಕ್ಷೇತ್ರಗಳಿಗೆ ತನ್ನ ವ್ಯಾಪ್ತಿಯನ್ನು ಚಾಚಿದೆ.

೧. ಅಂತಾರಾಷ್ಟ್ರೀಯ ಆರ್ಥಿಕ ಸಂಬಂಧಗಳ ಅಧ್ಯಯನವು ಅದರ ಪ್ರಮುಖ ವಿಷಯವಸ್ತು. ಅಂದರೆ ಸರಕು ಮತ್ತು ಸೇವೆಗಳ ಅಂತಾರಾಷ್ಟ್ರೀಯ ವಿನಿಮಯವು ಅದರ ವ್ಯಾಪ್ತಿಗೆ ಒಳಪಡುತ್ತದೆ.

೨. ಜಗತ್ತಿನ ವಿವಿಧ ದೇಶಗಳ ನಡುವೆ ಉತ್ಪಾದನಾಂಗಗಳ ಅಂದರೆ ಶ್ರಮ ಮತ್ತು ಬಂಡವಾಳದ ಚಲನೆಯನ್ನು ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಅಭ್ಯಾಸ ಮಾಡುತ್ತದೆ. ಆರ್ಥಿಕಾಭಿವೃದ್ಧಿಯಲ್ಲಿ ಈ ಉತ್ಪಾದನಾಂಗಗಳ ಅಂತಾರಾಷ್ಟ್ರೀಯ ಚಲನೆಯ ಪಾತ್ರವನ್ನು ಈ ವಿಷಯವು ವಿಮರ್ಶಿಸುತ್ತದೆ.

ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅಧ್ಯಯನವು ಬಹಳ ಪ್ರಾಯೋಗಿಕ ಮಹತ್ವವನ್ನು ಪಡೆದಿದೆ. ಅದನ್ನು ಈ ಅಂಶಗಳು ಸ್ಪಷ್ಟಪಡಿಸುತ್ತವೆ.

೧. ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅಧ್ಯಯನವು ಜನರಿಗೆ ಅಂತಾರಾಷ್ಟ್ರೀಯ ಆರ್ಥಿಕ ವಿಚಾರಗಳನ್ನು ಮನದಟ್ಟು ಮಾಡಿಕೊಡುತ್ತದೆ. ಅವರು ರಾಷ್ಟ್ರೀಯತೆಯ ಸಂಕುಚಿತ ಭಾವನೆಗಳನ್ನು ತೊರೆದು ಅಂತಾರಾಷ್ಟ್ರೀಯವಾಗಿ ಚಿಂತಿಸಲು ಇದು ಸಹಾಯ ಮಾಡುತ್ತದೆ. ವಿಭಿನ್ನ ದೇಶಗಳು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡಿದಾಗ ಮಾತ್ರ ಪ್ರತಿಯೊಂದು ದೇಶದ ಅಭಿವೃದ್ಧಿ ಸಾಧನೆ ಸಾಧ್ಯ ಎಂಬ ವಾಸ್ತವಾಂಶ ಇದರಿಂದ ತಿಳಿಯುತ್ತದೆ.

೨. ಅಂತಾರಾಷ್ಟ್ರೀಯ ಆರ್ಥಿಕ ಸಮಸ್ಯೆಗಳ ನಿವಾರಣೆಗೆ ಇದು ಅರ್ಥಶಾಸ್ತ್ರಜ್ಞರಿಗೆ ಮತ್ತು ರಾಜನೀತಿಜ್ಞರಿಗೆ ಅಗತ್ಯ ಮಾಹಿತಿಗಳನ್ನು ಒದಗಿಸುತ್ತದೆ. ಹಾಗೂ ಅವರಲ್ಲಿ ಅಂತಾರಾಷ್ಟ್ರೀಯ ಭಾವನೆಗಳನ್ನು ಬೆಳೆಸುತ್ತದೆ.

೩. ಅಂತಾರಾಷ್ಟ್ರೀಯ ಆರ್ಥಿಕ ಸಹಕಾರದ ಅವಶ್ಯಕತೆಯನ್ನು ಇದು ಸ್ಪಷ್ಟವಾಗಿಸುತ್ತದೆ. ಇಂತಹ ಸಹಕಾರದಿಂದ ಮಾತ್ರ ಪ್ರತಿಯೊಂದು ದೇಶವೂ ಪ್ರಗತಿ ಸಾಧಿಸಲು ಸಾಧ್ಯ ಎಂಬುದು ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅಧ್ಯಯನದಿಂದ ವೇದ್ಯವಾಗುತ್ತದೆ.

೪. ವಿವಿಧ ದೇಶಗಳ ಹಣಕಾಸಿನ ಪದ್ಧತಿಗಳು ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಅಧ್ಯಯನದಿಂದ ತಿಳಿಯುತ್ತದೆ.

ಅಂತಾರಾಷ್ಟ್ರೀಯ ಆರ್ಥಿಕ ಸಂಬಂಧಗಳ ವಿದೇಶೀ ನೆರವಿನ ಮತ್ತು ಉತ್ಪಾದನಾಂಗಗಳ ಅಂತಾರಾಷ್ಟ್ರೀಯ ಚಲನೆಯ ಅವಶ್ಯಕತೆಯನ್ನು ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಮನದಟ್ಟಾಗಿಸುತ್ತದೆ. (ಎಚ್.ಆರ್. ಕೃಷ್ಣೇಗೌಡ, ಅಂತಾರಾಷ್ಟ್ರೀಯ ಅರ್ಥಶಾಸ್ತ್ರ, ೧೯೯೨, ೧೯೯೪)

**ಆಧುನಿಕ ಅರ್ಥವ್ಯವಸ್ಥೆಯಲ್ಲಿ ಅಂತಾರಾಷ್ಟ್ರೀಯ ವ್ಯಾಪಾರ :** ಅಂತಾರಾಷ್ಟ್ರೀಯ ಅರ್ಥಶಾಸ್ತ್ರವು ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಅದಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ವಿಶ್ಲೇಷಿಸುತ್ತದೆ. ರಾಷ್ಟ್ರಗಳ ನಡುವಣ ವ್ಯಾಪಾರಕ್ಕೆ ಅಂತಾರಾಷ್ಟ್ರೀಯ ವ್ಯಾಪಾರವೆಂದು ಹೆಸರು. ಈ ವಿಶ್ವದ ಯಾವುದೇ ರಾಷ್ಟ್ರವು ಸಂಪೂರ್ಣ ಸ್ವಾವಲಂಬಿಯಲ್ಲ. ಆದುದರಿಂದ ರಾಷ್ಟ್ರಗಳ ನಡುವೆ ಪರಸ್ಪರಾವಲಂಬನೆ ಅನಿವಾರ್ಯವಾಗಿದೆ. ರಾಷ್ಟ್ರಗಳು ತಮ್ಮಲ್ಲಿ ಸಾಕಷ್ಟು ಉತ್ಪಾದನೆಯಾಗುವ ಸರಕುಗಳನ್ನು ನಿರ್ಯಾತ

ಮಾಡುತ್ತವೆ. ತಮಗೆ ಬೇಕಾದ ಸರಕುಗಳನ್ನು ಆಯಾತ ಮಾಡಿಕೊಳ್ಳುತ್ತವೆ. ಆಯಾತ(Import) ಮತ್ತು ನಿರ್ಯಾತವನ್ನು(Export) ಒಟ್ಟಾಗಿ ಅಂತಾರಾಷ್ಟ್ರೀಯ ವ್ಯಾಪಾರ (International trade) ಎಂದು ಕರೆಯಲಾಗುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರ ಸಂಬಂಧವು ಸೌಹಾರ್ದತೆ ಮತ್ತು ವಿಶ್ವಭ್ರಾತೃತ್ವದ ದ್ಯೋತಕವಾಗಿದೆ. ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಶ್ರಮ ವಿಭಜನೆ ಮತ್ತು ಅದರ ಪರಿಣಾಮವಾದ ವೈಶಿಷ್ಟ್ಯ(Specialization) ಪ್ರೇರಕ ಶಕ್ತಿಯಾಗಿದೆ. ಅಂತಾರಾಷ್ಟ್ರೀಯ ವ್ಯಾಪಾರದಿಂದ ಶ್ರಮದ ಚಲನೆಯೊಂದಿಗೆ ರಾಷ್ಟ್ರಗಳ ಪ್ರಗತಿಗೆ ಅಗತ್ಯವಿರುವ ವಿದೇಶಿ ವಿನಿಮಯದ ಸಂಪಾದನೆಯಾಗುತ್ತದೆ. ರಾಷ್ಟ್ರವೊಂದರ ಪ್ರಗತಿಯ ನೈಜ ಮಾಪಕವಾಗಿ ಅದರ ವಿದೇಶಿ ವ್ಯಾಪಾರ ಸ್ಥಿತಿಯನ್ನು ಬಳಸಲಾಗುತ್ತದೆ.

ಮುಕ್ತ ಅರ್ಥವ್ಯವಸ್ಥೆಯೊಂದರಲ್ಲಿ ಅಂತಾರಾಷ್ಟ್ರೀಯ ವ್ಯಾಪಾರವು ಹೇಗೆ ಬೆಲೆಗಳ ಸಮಾನತೆಗೆ ಕಾರಣವಾಗುತ್ತದೆ ಮತ್ತು ಹೇಗೆ ಅಂತಾರಾಷ್ಟ್ರೀಯ ವ್ಯಾಪಾರವು ಶ್ರಮ ವಿಭಜನೆಯ ಅಂತಾರಾಷ್ಟ್ರೀಯ ವಿಸ್ತರಣೆಯಾಗಿದೆ ಎಂದು ಮೊದಲ ಬಾರಿಗೆ ತೋರಿಸಿಕೊಟ್ಟ ಕೀರ್ತಿ ಅರ್ಥಶಾಸ್ತ್ರದ ಪಿತನೆಂಬ ಖ್ಯಾತಿಗೆ ಪಾತ್ರರಾದ ಆಡಂಸ್ಮಿತ್‌ರಿಗೆ ಸಲ್ಲುತ್ತದೆ. ಆಡಂಸ್ಮಿತ್ ಪ್ರತಿಪಾದಿಸಿದ ಮುಕ್ತ ಆರ್ಥಿಕ ನೀತಿ (Laissez Faire Policy) ಎರಡು ಶತಮಾನಗಳ ಹಿಂದೆ ಒಂದು ಕ್ರಾಂತಿಯನಿಸಿತ್ತು. ಇಂದಿನ ಉದಾರೀಕರಣ (Liberalisation) ಮತ್ತು ಜಾಗತೀಕರಣ (Globalization) ಪರಿಕಲ್ಪನೆಗೆ ಸ್ಮಿತ್‌ರ ಚಿಂತನೆಗಳೇ ಕಾರಣ. ಡೇವಿಡ್ ರಿಕಾರ್ಡೋ, ಜಾನ್ ಸ್ಟೂವರ್ಟ್ ಮಿಲ್, ಹ್ಯಾಬರ್ಲರ್, ಹೆಕ್‌ಶ್ಚರ್, ಓಲಿನ್ ಮೊದಲಾದ ಅರ್ಥಶಾಸ್ತ್ರಜ್ಞರ ತತ್ವಗಳು, ಮಿರಡಾಲ್, ಪ್ರೆಬಿಶ್, ಮೀಡೆ, ನರ್ಕ್ಸ್, ಹಿಕ್ಸ್, ವೈನರ್, ಕುರಿಹರ, ಕಿಂಡಲ್‌ಬರ್ಗ, ಜಾನ್‌ಸನ್ ಮುಂತಾದವರ ಚಿಂತನೆಗಳು ಅಂತಾರಾಷ್ಟ್ರೀಯ ವ್ಯಾಪಾರವನ್ನು ಅರ್ಥಶಾಸ್ತ್ರದ ಒಂದು ಮಹತ್ವಪೂರ್ಣ ಶಾಖೆಯಾಗಿ ಬೆಳೆಸಿವೆ. ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಅದಕ್ಕೆ ಸಂಬಂಧಿಸಿದ ಸಮಸ್ಯೆಗಳ ವಿಶ್ಲೇಷಣೆಗಾಗಿಯೇ ಅಂತಾರಾಷ್ಟ್ರೀಯ ಅರ್ಥಶಾಸ್ತ್ರದ ಉಗಮವಾಗಿದೆ.

**ಆಂತರಿಕ ಮತ್ತು ಅಂತಾರಾಷ್ಟ್ರೀಯ ವ್ಯಾಪಾರ :** ರಾಷ್ಟ್ರದ ಒಳಗಿನ ವ್ಯಾಪಾರವನ್ನು ರಾಷ್ಟ್ರೀಯ ವ್ಯಾಪಾರ ಅಥವಾ ಆಂತರಿಕ ವ್ಯಾಪಾರವೆಂದೂ, ರಾಷ್ಟ್ರ ರಾಷ್ಟ್ರಗಳ ನಡುವಿನ ವ್ಯಾಪಾರವನ್ನು ಅಂತಾರಾಷ್ಟ್ರೀಯ ವ್ಯಾಪಾರವೆಂದೂ ಕರೆಯಲಾಗುತ್ತದೆ. ಅವರಡರ ನಡುವಿನ ವ್ಯತ್ಯಾಸಗಳನ್ನು ಈ ಕೆಳಗಿನಂತೆ ವಿವರಿಸಬಹುದು. ಈ ವ್ಯತ್ಯಾಸಗಳೇ ಅಂತಾರಾಷ್ಟ್ರೀಯ ವ್ಯಾಪಾರದ ವಿಶಿಷ್ಟ ಲಕ್ಷಣಗಳು ಕೂಡ ಆಗಿವೆ.

೧. ಘಟಕಗಳ ಚಲನೆ : ಪ್ರಮುಖ ಉತ್ಪಾದನಾ ಘಟಕಗಳಾದ ಶ್ರಮ ಮತ್ತು ಬಂಡವಾಳ ದೇಶದ ಒಳಗೆ ಸುಲಭವಾಗಿ ಚಲಿಸುತ್ತವೆ. ಬಾಹ್ಯವಾಗಿ ಅವು ಅಷ್ಟು ಸುಲಭವಾಗಿ ಚಲಿಸಲಾರವು. ಅದರಲ್ಲೂ ಶ್ರಮಕ್ಕೆ ಬಾಹ್ಯ ಚಾಲನಾ ಶಕ್ತಿ ತೀರಾ ಕಡಿಮೆ. ಅದಕ್ಕಾಗಿ ಅರ್ಥಶಾಸ್ತ್ರದ ಪಿತ ಆಡಂಸ್ಮಿತ್ ಹೀಗೆನ್ನುತ್ತಾರೆ, "ಎಲ್ಲಾ ಸರಕುಗಳ ಪೈಕಿ ಶ್ರಮದ ಚಲನೆ ಅತ್ಯಂತ ಕ್ಲಿಷ್ಟವಾದುದು"

ಭಾಷೆ, ಸಂಸ್ಕೃತಿ, ಸಂಪ್ರದಾಯ, ಮತಧರ್ಮ ಇವುಗಳೊಡನೆ ಇತರ ಸಾಮಾಜಿಕ, ರಾಜಕೀಯ ಮತ್ತು ಹವಾಮಾನದ ಸ್ಥಿತಿಗಳು ಶ್ರಮದ ಅಂತಾರಾಷ್ಟ್ರೀಯ ಚಲನೆಗೆ ಅಡ್ಡಿಯುಂಟು ಮಾಡಿವೆ. ಇವುಗಳು ದೇಶದ ಒಳಗೆ ಅಡ್ಡಿ ಉಂಟುಮಾಡಲಾರವು. ಏಕೆಂದರೆ ಒಂದು ದೇಶ ಸಾಂಸ್ಕೃತಿಕವಾಗಿ ಒಂದು ಘಟಕವಾಗಿರುತ್ತದೆ.

ಬಂಡವಾಳಕ್ಕೂ ಅಂತಾರಾಷ್ಟ್ರೀಯ ನೆಲೆಯಲ್ಲಿ ಚಲನೆ ಕಡಿಮೆ. ಸಿರಿವಂತ ದೇಶವೊಂದು ಬಡ ದೇಶವೊಂದರಲ್ಲಿ ಬಂಡವಾಳ ಹೂಡಲು ಬಹುಬೇಗ ಮುಂದಕ್ಕೆ ಬರಲಾರದು. ಹೂಟೆಗೆ ಅನೇಕ ತೊಡಕುಗಳು ಎದುರಾಗಬಹುದು. ದೇಶದ ಆರ್ಥಿಕ ನೀತಿ, ನಿಯಮದ ಸಮಸ್ಯೆ ಮುಂತಾದವುಗಳನ್ನು ಗಮನಿಸಬೇಕಾಗಿಬರುತ್ತದೆ. ಅಲ್ಲದೆ ಪರದೇಶದಲ್ಲಿ ಸ್ಥಾಪಿತವಾದ ಕೈಗಾರಿಕೆಗಳನ್ನು ಅಲ್ಲಿನ ಸರಕಾರ ರಾಷ್ಟ್ರೀಕರಣಗೊಳಿಸಬಹುದು. ಆಂತರಿಕ ವ್ಯಾಪಾರದಲ್ಲಿ ಈ ಎಲ್ಲಾ ಸಮಸ್ಯೆಗಳು ಇರುವುದಿಲ್ಲ. ಶ್ರಮ ಮತ್ತು ಬಂಡವಾಳಗಳು ಆಂತರಿಕವಾಗಿ ಎಲ್ಲಿ ಬೇಕೆಂದರಲ್ಲಿ ಚಲಿಸಬಹುದು. ಅಂತಾರಾಷ್ಟ್ರೀಯವಾಗಿ ಇದು ಅಸಾಧ್ಯ.

೨. ಪ್ರಕೃತಿಯ ಕರುಣೆ: ಪ್ರಾಕೃತಿಕ ಕಾರಣಗಳಿಂದಾಗಿ ಭೌಗೋಳಿಕ ಶ್ರಮ ವಿಭಜನೆ ಮತ್ತು ಉದ್ದಿಮೆಗಳ ಸ್ಥಳೀಕರಣ ಉಂಟಾಗುತ್ತದೆ. ಕೊಲ್ಲಿ ರಾಷ್ಟ್ರಗಳಲ್ಲಿ ತೈಲ, ದಕ್ಷಿಣ ಆಫ್ರಿಕಾದಲ್ಲಿ ಚಿನ್ನ ಮತ್ತು ವಜ್ರ, ಆಸ್ಟ್ರೇಲಿಯಾದಲ್ಲಿ ಉಣ್ಣೆ, ನಾರ್ವೆ, ಡೆನ್ಮಾರ್ಕ್‌ಗಳಲ್ಲಿ ಹೈನೋತ್ಪನ್ನ ಈ ಕಾರಣಗಳಿಂದ ಸ್ಥಳೀಕರಣಗೊಂಡಿವೆ. (ಪ್ರಭಾಕರ ಬಿ. ಶಿಶಿಲ ಮತ್ತು ಎಸ್.ಎಚ್. ಕಲ್ಲೂರ, ಅಂತಾರಾಷ್ಟ್ರೀಯ ಅರ್ಥಶಾಸ್ತ್ರ, ೧೯೯೬, ಪು ೮–೧೧)

ವಿದೇಶೀ ವ್ಯಾಪಾರ : ಯಾವುದೇ ಆರ್ಥಿಕತೆಯಲ್ಲಿ ವಿದೇಶೀ ವ್ಯಾಪಾರಕ್ಕೆ ಪ್ರಧಾನವಾದ ಸ್ಥಾನವಿದೆ. ದೇಶದ ಆರ್ಥಿಕಾಭಿವೃದ್ಧಿ ಮತ್ತು ಜನತೆಯ ಏಳಿಗೆಗೆ ವಿದೇಶೀ ವ್ಯಾಪಾರವು ಮಹತ್ತರವಾದ ಕೊಡುಗೆ ನೀಡುತ್ತದೆ. ಪ್ರಾರಂಭಾವಸ್ಥೆಯ ಆರ್ಥಿಕತೆಗಳಲ್ಲಿ ವಿದೇಶೀ ವ್ಯಾಪಾರಕ್ಕೆ ಪ್ರಾಮುಖ್ಯತೆ ಇರುವುದಿಲ್ಲ. ಅಷ್ಟೇ ಏಕೆ ಅವಕಾಶವೂ ಇರುವುದಿಲ್ಲ. ಆದರೆ ಆರ್ಥಿಕತೆಯು ಬೆಳೆದಂತೆ ಇದರ ಪ್ರಾಮುಖ್ಯತೆ ಹೆಚ್ಚುತ್ತಾ ಹೋಗುತ್ತದೆ. ಅಭಿವೃದ್ಧಿ ಮತ್ತು ಅಲ್ಪಾವಭಿವೃದ್ಧಿ ದೇಶಗಳೆರಡರಲ್ಲಿಯೂ ವಿದೇಶೀ ವ್ಯಾಪಾರವು ಅನೇಕ ಅನುಕೂಲತೆಗಳನ್ನು ಒದಗಿಸುತ್ತದೆ. ಒಂದು ದೇಶವು ತನಗೆ ಅವಶ್ಯಕವಿರುವ ಎಲ್ಲಾ ಸರಕುಗಳನ್ನು ಉತ್ಪಾದಿಸಲು ಸಾಧ್ಯವಾಗದಿರುವುದು ಸ್ವಾಭಾವಿಕ. ಏಕೆಂದರೆ ನೈಸರ್ಗಿಕ ಮತ್ತು ಹಣಕಾಸಿನ ಸಂಪನ್ಮೂಲಗಳ ಕೊರತೆ ಸಾಮಾನ್ಯವಾದುದು. ಆದ್ದರಿಂದ ಬಹುತೇಕವಾಗಿ ಯಾವ ದೇಶವೂ ಆರ್ಥಿಕವಾಗಿ ಪ್ರತ್ಯೇಕವಾಗಿ ಉಳಿಯಲು ಸಾಧ್ಯವಾಗುವುದಿಲ್ಲ. ತನಗೆ ಉತ್ಪಾದಿಸಲು ಸಾಧ್ಯವಾಗದಿದ್ದ ಮತ್ತು ಕೊರತೆಯಿರುವ ಸರಕುಗಳನ್ನು ಪಡೆಯಲು ಯಾವುದೇ ದೇಶಕ್ಕೆ ವಿದೇಶೀ ವ್ಯಾಪಾರವೊಂದೇ ಸಾಧನ. ವಿದೇಶೀ ವ್ಯಾಪಾರವು ಸಂಪನ್ಮೂಲಗಳ ಸಮರ್ಪಕ ಬಳಕೆಗೆ ಸದವಕಾಶ ನೀಡುವುದರಿಂದ ಉತ್ಪನ್ನ ಮತ್ತು ರಾಷ್ಟ್ರೀಯ ಆದಾಯದ ಹೆಚ್ಚಳ ಮತ್ತು

ಜನತೆಯ ಆರ್ಥಿಕ ಕ್ಷೇಮಾಭಿವೃದ್ಧಿಗೆ ಬಹಳ ಸಹಾಯ ಮಾಡುತ್ತದೆ. ಆದ್ದರಿಂದ ಅಭಿವೃದ್ಧಿ ಸಾಧನೆಗೆ ಅಗತ್ಯವಾಗಿರುವ ಕಚ್ಚಾ ವಸ್ತುಗಳ ಮತ್ತು ಯಂತ್ರಗಳಲ್ಲದೆ ಸಿದ್ಧಪಡಿಸಿದ ವಸ್ತುಗಳೂ ದೊರೆಯುತ್ತವೆ.

ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ರಫ್ತುಗಳಿಗಿಂತಲೂ ಆಮದುಗಳು ಹೆಚ್ಚಾಗಿರುವುದು ಸಹಜ. ಇವು ಪ್ರಾಥಮಿಕ ಸರಕುಗಳನ್ನು ಹೆಚ್ಚಾಗಿ ಉತ್ಪಾದಿಸುವ ದೇಶಗಳಾಗಿರುವುದರಿಂದ ಅನೇಕ ರೀತಿಯ ಸಿದ್ಧಪಡಿಸಿದ ಸರಕುಗಳು ಮತ್ತು ಯಂತ್ರಗಳನ್ನು ಆಮದು ಮಾಡಿಕೊಳ್ಳಬೇಕಾಗಿರುವುದು ಅನಿವಾರ್ಯ. ಆರ್ಥಿಕಾಭಿವೃದ್ಧಿಯ ಪ್ರಾರಂಭಾವಸ್ಥೆಯಲ್ಲಿ ಅಭಿವೃದ್ಧಿ ಆಮದುಗಳು (Developmental Imports) ಮತ್ತು ಜೀವನೋಪಾಯ ಆಮದುಗಳೆರಡೂ (Maintenance Imports) ಅವಶ್ಯಕವಾಗಿವೆ. ಏಕೆಂದರೆ ಕೈಗಾರಿಕೆಗಳ ಸ್ಥಾಪನೆಯೂ ಸೇರಿದಂತೆ ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ಯಂತ್ರಗಳನ್ನೊಳಗೊಂಡಂತೆ ಅನೇಕ ಅಭಿವೃದ್ಧಿ ಸರಕುಗಳು ಬೇಕಾಗುತ್ತವೆ. ಅಂತೆಯೇ ಬಡದೇಶದಲ್ಲಿ ಜೀವನೋಪಾಯದ ಸರಕುಗಳ ಕೊರತೆಯಿರುವುದರಿಂದ ಆಹಾರ ಪದಾರ್ಥಗಳೂ ಸೇರಿದಂತೆ ಅನೇಕ ವಸ್ತುಗಳನ್ನು ತರಿಸಿಕೊಳ್ಳಬೇಕಾಗುತ್ತದೆ. ಶ್ರೀಮಂತ ದೇಶಗಳು ಈ ಸರಕುಗಳ ಮೂಲವಾಗುತ್ತವೆ. ವಿದೇಶೀ ವ್ಯಾಪಾರವು ಸಾಧನವಾಗುತ್ತದೆ. ಆದರೆ ಆರ್ಥಿಕತೆಯಲ್ಲಿ ಉತ್ಪಾದನೆ ಹೆಚ್ಚಿ ಅದು ಅಭಿವೃದ್ಧಿಯ ಸ್ಥಿತಿಯನ್ನು ತಲುಪಿದಾಗ ರಫ್ತುಗಳಿಗೆ ಅವಕಾಶ ದೊರೆಯುತ್ತದೆ. ತಾನು ಉತ್ಪಾದಿಸಿದ ಸರಕುಗಳಿಗೆ ವಿದೇಶೀ ಮಾರುಕಟ್ಟೆ ದೊರೆಯದಿದ್ದರೆ ಸರಕುಗಳು ವ್ಯರ್ಥವಾಗಿ ಉತ್ಪಾದನ ಕ್ರಿಯೆ ನಿಂತು ಹೋಗಬೇಕಾಗುತ್ತದೆ. ಆಗ ಆರ್ಥಿಕ ಜಡತ್ವ ಆವರಿಸುತ್ತದೆ.

ಮೇಲಿನ ಸಂಗತಿಗಳನ್ನು ಗಮನಿಸಿದಾಗ ಭಾರತದಲ್ಲಿ ವಿದೇಶೀ ವ್ಯಾಪಾರದ ಪ್ರಾಮುಖ್ಯತೆಯ ಅರಿವಾಗುತ್ತದೆ. ಅನೇಕ ಸರಕುಗಳ ಉತ್ಪಾದನೆಯಲ್ಲಿ ಅದರಲ್ಲೂ ಬಂಡವಾಳ ಸರಕುಗಳಲ್ಲಿ ನಾವಿನ್ನೂ ಸ್ವಾವಲಂಬನ ಮತ್ತು ಸ್ವಯಂ ಸಾಮರ್ಥ್ಯ ಸಾಧಿಸಿಲ್ಲ. ಪ್ರಾರಂಭದಲ್ಲಿ ಭಾರತವು ಹಲವಾರು ಸರಕುಗಳನ್ನು ವಿದೇಶಗಳಿಂದ ಪಡೆಯುತ್ತಿತ್ತು. ಈಗ ಅಂತಹ ಆಮದಿನ ಪ್ರಮಾಣ ತಗ್ಗಿದೆಯಾದರೂ ಕೆಲವು ಯಂತ್ರಗಳು ಮತ್ತಿತರ ಬಂಡವಾಳ ಸಾಂದ್ರ ಸರಕುಗಳಿಗೆ ಬಹುಮಟ್ಟಿಗೆ ವಿದೇಶಗಳನ್ನು ಅವಲಂಬಿಸಲಾಗಿದೆ. ಭಾರತದ ಕೈಗಾರೀಕರಣದಲ್ಲಿ ಮೊದಲಿನಿಂದಲೂ ವಿದೇಶೀ ವ್ಯಾಪಾರವು ಗಣನೀಯವಾಗಿ ಸಹಾಯ ಮಾಡುತ್ತಾ ಬಂದಿದೆ.

ಇತರ ಅಲ್ಪಾಭಿವೃದ್ಧ ದೇಶಗಳಂತೆ ಭಾರತವು ಹೆಚ್ಚು ಪ್ರಾಥಮಿಕ ಸರಕುಗಳ ಉತ್ಪನ್ನದ ದೇಶವಾಗಿದ್ದಾಗ್ಯೂ ಜೀವನೋಪಾಯ ಸರಕುಗಳ ಕೊರತೆ ಉದ್ಭವಿಸಿದೆ. ಮಿತಿ ಮೀರಿದ ಜನಸಂಖ್ಯೆ ಅಸ್ತಿತ್ವವೇ ಇದಕ್ಕೆ ಮುಖ್ಯ ಕಾರಣ. ಪ್ರಾರಂಭದಲ್ಲಿ ಆಹಾರ ಧಾನ್ಯಗಳೂ ಸೇರಿದಂತೆ ಅನೇಕ ವಿಧದ ಜೀವನೋಪಾಯ ಸರಕುಗಳ ಆಮದಿಗೆ ವಿದೇಶೀ ವ್ಯಾಪಾರವು ಸಹಾಯ ಮಾಡಿದೆ. ಇಂದು ನಾವು ಆಹಾರ ವಲಯದಲ್ಲಿ ಸ್ವಯಂಪೂರ್ಣತೆಯ ಹೊಸ್ತಿಲಲ್ಲಿದ್ದರೂ ಕೂಡ ಕೆಲವು

ವರ್ಷಗಳಲ್ಲಿ ಆಹಾರ ಸಾಮಗ್ರಿಗಳ ತೀವ್ರ ಕೊರತೆ ಸಂಭವಿಸುತ್ತಿದೆ. ಅಂತಹ ಸಮಯಗಳಲ್ಲಿ ಅನಿವಾರ್ಯವಾಗಿ ಆಮದುಗಳನ್ನು ಆಶ್ರಯಿಸಬೇಕಾಗಿದೆ. ಸೌಕರ್ಯಗಳ ಕೊರತೆಯು ಭಾರತದ ಕೃಷಿಯನ್ನು ಹೆಚ್ಚು ಅನಿಶ್ಚಿತವಾಗಿರಿಸಿರುವುದರ ಪರಿಣಾಮವಾಗಿ ಇಂದಿಗೂ ಕೆಲವು ಕೃಷಿ ಸರಕುಗಳ ಆಮದು ಅನಿವಾರ್ಯವಾಗಿದೆ. ಅಭಿವೃದ್ಧಿ ಪಥದಲ್ಲಿರುವ ಭಾರತವು ಇತ್ತೀಚೆಗೆ ರಫ್ತು ಗಳಿಕೆಯನ್ನು ಹೆಚ್ಚಿಸಿಕೊಳ್ಳುತ್ತಿದೆ. ಪ್ರಾಥಮಿಕ ಪದಾರ್ಥಗಳೇ ಅಲ್ಲದೆ ಕಬ್ಬಿಣ ಮತ್ತು ಉಕ್ಕಿನ ಸರಕುಗಳ ಮತ್ತು ಯಂತ್ರ ಶಿಲ್ಪಿ ಸರಕುಗಳ ರಫ್ತು ಅಧಿಕಗೊಂಡಿದೆ. ಇದರಿಂದ ವಿದೇಶೀ ವಿನಿಮಯ ಗಳಿಕೆ ಹೆಚ್ಚಿ ಸ್ವಾವಲಂಬನಕ್ಕೆ ದಾರಿಯಾಗುತ್ತಿದೆ. ಆರ್ಥಿಕಾಭಿವೃದ್ಧಿಗೆ ಅವಶ್ಯವಾಗಿರುವ ವಿದೇಶೀ ವಿನಿಮಯವನ್ನು ಗಳಿಸಿಕೊಡುವಲ್ಲಿ ವಿದೇಶೀ ವ್ಯಾಪಾರವು ನೆರವಾಗಿದೆ. ಕೈಗಾರಿಕೆಗಳ ಸ್ಥಾಪನೆಗೆ ಹಣಕಾಸಿನ ಅಡಚಣೆಯಿಂದ ಭಾರತವು ಇಂದಿಗೂ ಕಬ್ಬಿಣದ ಅದಿರು ಸೇರಿದಂತೆ ಕೆಲವು ಕಚ್ಚಾ ವಸ್ತುಗಳನ್ನು ಅಧಿಕ ರಫ್ತು ಮಾಡುತ್ತಿದೆ. ಈ ಸರಕುಗಳಿಂದ ದೊರೆತ ಹಣವನ್ನು ಕೈಗಾರಿಕೀಕರಣ ಮತ್ತು ರಾಷ್ಟ್ರಾಭಿವೃದ್ಧಿಯ ಕಾರ್ಯಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಕುದುರೆಮುಖದ ಕಬ್ಬಿಣದ ಅದಿರಿನ ರಫ್ತಿನ ಬಗ್ಗೆ ಇರಾನ ದೇಶದೊಡನೆ ಮಾಡಿಕೊಂಡಿರುವ ಒಪ್ಪಂದವನ್ನು ಇಲ್ಲಿ ಸ್ಮರಿಸಬಹುದು. ಬೇರೆ ರೀತಿಯಲ್ಲಿ ಹೇಳುವುದಾದರೆ ಭಾರತದಲ್ಲಿ ವಿದೇಶೀ ವ್ಯಾಪಾರವು ಕಚ್ಚಾ ಸರಕುಗಳ ರಫ್ತಿಗೆ ಮತ್ತು ಬಂಡವಾಳ ಸಾಂದ್ರ ಸರಕುಗಳು ಹಾಗೂ ವಿದೇಶೀ ಹಣದ ಪಡೆಯುವಿಕೆಗೆ ಒಂದು ಸಾಧನವಾಗಿ ಕಾರ್ಯನಿರ್ವಹಿಸುತ್ತಿದೆ. ಎಚ್.ಆರ್. ಕೃಷ್ಣೇಗೌಡ, ಆಧುನಿಕ ಭಾರತದ ಆರ್ಥಿಕಾಭಿವೃದ್ಧಿ, ೧೯೮೨,೧೯೯೮, ಪು. ೨೫೨-೨೫೩)

**ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು :** "ಇಬ್ಬರು ವ್ಯಕ್ತಿಗಳ ನಡುವೆ ಹಣದ ಮಾಧ್ಯಮದ ಮೂಲಕ ನಡೆಯುವ ಸರಕುಗಳ ವಿನಿಮಯವನ್ನು ವ್ಯಾಪಾರ ಎನ್ನುತ್ತೇವೆ". ಸರಕುಗಳು ಉತ್ಪಾದಕರಿಂದ ಬಳಕೆದಾರರಿಗೆ ತಲುಪಬೇಕಾದರೆ ವ್ಯಾಪಾರ ಅಗತ್ಯ. ವ್ಯಾಪಾರದಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ ಅವುಗಳೆಂದರೆ. ೧. ಆಂತರಿಕ ವ್ಯಾಪಾರ ೨. ಅಂತಾರಾಷ್ಟ್ರೀಯ ವ್ಯಾಪಾರ

೧. ಆಂತರಿಕ ವ್ಯಾಪಾರ (ದೇಶೀಯ ವ್ಯಾಪಾರ) ಒಂದು ದೇಶದ ಒಳಗಡೆ ಇರುವ ವ್ಯಕ್ತಿಗಳ ನಡುವೆ ನಡೆಯುವ ವ್ಯಾಪಾರವನ್ನು 'ಆಂತರಿಕ ವ್ಯಾಪಾರ' ಎನ್ನುತ್ತೇವೆ. ಇದು ದೇಶದ ಗಡಿಯೊಳಗೆ ನಡೆಯುವ ವ್ಯಾಪಾರವಾಗಿದೆ.

೨. ಅಂತಾರಾಷ್ಟ್ರೀಯ ವ್ಯಾಪಾರ (ವಿದೇಶಿ ವ್ಯಾಪಾರ) : "ರಾಷ್ಟ್ರ ರಾಷ್ಟ್ರಗಳ ನಡುವೆ ನಡೆಯುವ ವ್ಯಾಪಾರವನ್ನು ಅಂತಾರಾಷ್ಟ್ರೀಯ ವ್ಯಾಪಾರ ಎನ್ನುತ್ತೇವೆ" ಅಂತಾರಾಷ್ಟ್ರೀಯ ವ್ಯಾಪಾರದಲ್ಲಿ ಎರಡು ವಿಧಗಳಿವೆ. ಒಂದು ದೇಶವು ತನ್ನಲ್ಲಿರುವ ಸರಕುಗಳನ್ನು ವಿದೇಶಗಳಿಗೆ ಸಾಗಿಸಿ ಮಾರಾಟ ಮಾಡುವುದಕ್ಕೆ 'ರಫ್ತು ವ್ಯವಹಾರ' ಎನ್ನುತ್ತೇವೆ. ವಿದೇಶಗಳಿಂದ ವಸ್ತುಗಳನ್ನು ಕೊಂಡು ದೇಶದ ಒಳಗಡೆ ತರುವುದಕ್ಕೆ 'ಆಮದು ವ್ಯಾಪಾರ' ಎನ್ನುತ್ತೇವೆ. ಇಂದು ಅಂತಾರಾಷ್ಟ್ರೀಯ ವ್ಯಾಪಾರ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಅಂತಾರಾಷ್ಟ್ರೀಯ

ವ್ಯಾಪಾರವನ್ನು ಇಂದು 'ಪ್ರಗತಿಯ ಯಂತ್ರ' (Engine of Growth) ಎಂದು ಪರಿಗಣಿಸಲಾಗಿದೆ. ಯಾವುದೇ ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಅಂತಾರಾಷ್ಟ್ರೀಯ ವ್ಯಾಪಾರವು ಪ್ರಧಾನ ಪಾತ್ರ ವಹಿಸುತ್ತದೆ. (ಜಿ.ಎಸ್. ಕೆಂಪಯ್ಯ, ಮೂಲ ಆರ್ಥಿಕ ಸಿದ್ಧಾಂತ, ೨೦೦೪, ಪು ೧೭೧)

ವ್ಯಾಪಾರ ಮತ್ತು ಹಣಕಾಸು: ವ್ಯಕ್ತಿಗಳ ಅಥವಾ ಗುಂಪುಗಳ ನಡುವೆ ಸರಕುಗಳು ಮತ್ತು ಸೇವೆಗಳು ವಿನಿಮಯವಾಗುವುದಕ್ಕೆ ವ್ಯಾಪಾರ ಎಂದು ಹೆಸರು. ವ್ಯಾಪಾರವು ಸಾಟಿ ವಿನಿಮಯವಾದರೆ ನೇರವಾಗಿರುತ್ತದೆ. ಹಣವನ್ನು ವಿನಿಮಯ ಮಾಧ್ಯಮವಾಗಿ ಬಳಸಿ ನಡೆಸುವ ವ್ಯಾಪಾರವು ಪರೋಕ್ಷ ವಿನಿಮಯವಾಗಿರುತ್ತದೆ. ಈಗ ಸಾಟಿ ವಿನಿಮಯ ತೀರಾ ಅಪರೂಪವಾಗಿ ನಡೆಯಬಹುದು. ಹಣದ ಮೂಲಕವೇ ಹೆಚ್ಚಾಗಿ ವ್ಯಾಪಾರ ನಡೆಯುತ್ತದೆ. ವ್ಯಾಪಾರದಲ್ಲಿ ೧. ಆಂತರಿಕ ವ್ಯಾಪಾರ ೨. ಅಂತಾರಾಷ್ಟ್ರೀಯ ವ್ಯಾಪಾರವೆಂಬ ಎರಡು ವಿಧಗಳಿವೆ. ಒಂದು ದೇಶದ ಅಥವಾ ಪ್ರಾಂತದ ಭೌಗೋಳಿಕ ಗಡಿಗಳೊಳಗೆ ನಡೆಯುವ ವ್ಯಾಪಾರವನ್ನು ಆಂತರಿಕ ವ್ಯಾಪಾರ ಅಥವಾ ದೇಶೀಯ ವ್ಯಾಪಾರ ಎಂದು ಕರೆಯಲಾಗುತ್ತದೆ. ದೇಶಗಳ ನಡುವೆ ಅಥವಾ ದೇಶವೊಂದರ ಭೌಗೋಳಿಕ ಗಡಿದಾಟಿ ನಡೆಯುವ ವ್ಯಾಪಾರವು ಅಂತಾರಾಷ್ಟ್ರೀಯ ವ್ಯಾಪಾರವಾಗುತ್ತದೆ. ಅಂತಾರಾಷ್ಟ್ರೀಯ ವ್ಯಾಪಾರವನ್ನು ವಿದೇಶೀ ವ್ಯಾಪಾರ ಎಂದು ಕೂಡ ಕರೆಯಲಾಗುತ್ತದೆ. ವಿಭಿನ್ನಜ ಪ್ರಾಂತಗಳ ನಡುವಣ ವ್ಯಾಪಾರವು ಅಂತರ್‌ಪ್ರಾಂತೀಯ ವ್ಯಾಪಾರ ಎಂದು ಕರೆಯಲ್ಪಡುತ್ತದೆ. (ಸಿ.ಕೆ. ರೇಣುಕಾರ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಥಮ ಪಿಯುಸಿ, ಅರ್ಥಶಾಸ್ತ್ರ, ೨೦೦೪, ಪು. ೨೬೮)

ಭಾರತದ ವಿದೇಶ ವ್ಯಾಪಾರ : ಭಾರತ ದೇಶದ ವ್ಯಾಪಾರ ಎಂದರೇನು? : ಭಾರತವು ಇತರ ದೇಶಗಳೊಡನೆ ನಡೆಸುವ ವ್ಯಾಪಾರವನ್ನು ಭಾರತದ ವಿದೇಶ ವ್ಯಾಪಾರ ಎನ್ನಬಹುದು. ಇದು ೧. ರಫ್ತು ವ್ಯಾಪಾರವನ್ನು (ನಿರ್ಯಾತವನ್ನೂ) ೨. ಆಮದು ವ್ಯಾಪಾರವನ್ನೂ (ಆಯಾತವನ್ನೂ) ಒಳಗೊಂಡಿದೆ.

ಭಾರತವು ಇತರ ದೇಶಗಳಿಗೆ ಸರಕುಗಳನ್ನೂ, ಸೇವೆಗಳನ್ನೂ ಮಾರಿದಾಗ ಅದು ಭಾರತದ ರಫ್ತು ವ್ಯಾಪಾರವೆನಿಸುತ್ತದೆ. ಇದರಲ್ಲಿ ನಿರ್ಯಾತದ ಗೋಚರ ಬಾಬುಗಳು (ಎಂದರೆ ಹತ್ತಿಬಟ್ಟೆ, ಕಚ್ಚಾಹತ್ತಿ, ಸೆಣಬಿನ ಉತ್ಪನ್ನಗಳನ್ನು, ಕಬ್ಬಿಣ ಅದಿರು, ಅಭ್ರಕ, ಲೋಹ, ಮಂಡೂರ ಇತ್ಯಾದಿ ವಸ್ತುಗಳ ರಫ್ತು) ಮತ್ತು ನಿರ್ಯಾತದ ಅಗೋಚರ ಬಾಬುಗಳು (ಎಂದರೆ ಭಾರತವು ವಿದೇಶಗಳಿಗೆ ನೀಡಿದ ಸೇವೆಗಳು ಮುಖ್ಯವಾಗಿ ನೌಕಾಯಾನ ಸೇವೆ, ವಾಯುಯಾನ ಸೇವೆ, ವಿಮಾಸೇವೆ, ಬ್ಯಾಂಕು ವ್ಯವಹಾರದ ಸೇವೆ, ವಿದೇಶ ಪ್ರವಾಸಿಗರ ಸಂಚಾರ, ವಿದೇಶಗಳಲ್ಲಿ ಭಾರತದ ಹೂಡಿಕೆಗೆ ದೊರೆಯುವ ಡಿವಿಡೆಂಡ್, ವಿದೇಶಗಳಲ್ಲಿ ದುಡಿಯುವ ಭಾರತೀಯರು ಸ್ವದೇಶಕ್ಕೆ ಕಳುಹಿಸುವ ಹಣ ಇತ್ಯಾದಿ) ಆಂತರಿಕ ವ್ಯಾಪಾರ ಮತ್ತು ವಿದೇಶ ವ್ಯಾಪಾರಗಳಿಗಿಂತ ವ್ಯಾತ್ಯಾಸ : ಅನೇಕ

ರೀತಿಗಳಲ್ಲಿ ಭಾರತದ ಆಂತರಿಕ ವ್ಯಾಪಾರವು ವಿದೇಶಿ ವ್ಯಾಪಾರದಿಂದ ಭಿನ್ನವಾಗಿದೆ. ಅವುಗಳಿರುವ ಮುಖ್ಯ ವ್ಯತ್ಯಾಸಗಳು ಇವು, ೧. ಒಂದು ರಾಷ್ಟ್ರದ ಜತೆಗೆ ತಮ್ಮೊಳಗೆ ನಡೆಸುವ ವ್ಯಾಪಾರವನ್ನು ಆಂತರಿಕ ವ್ಯಾಪಾರವೆನ್ನುತ್ತಾರೆ. ಬೇರೆ ಬೇರೆ ರಾಷ್ಟ್ರಗಳ ಜನರೊಳಗೆ ನಡೆಯುವ ವ್ಯಾಪಾರವನ್ನು ವಿದೇಶ ವ್ಯಾಪಾರವೆನ್ನುತ್ತಾರೆ. ೨. ಯಾವುದೇ ರಾಷ್ಟ್ರದ ವ್ಯಾಪಾರವನ್ನು ತೆಗೆದುಕೊಂಡರೂ ಆಂತರಿಕ ವ್ಯಾಪಾರದ ಪ್ರಮಾಣವು ವಿದೇಶ ವ್ಯಾಪಾರದ ಪ್ರಮಾಣಕ್ಕಿಂತ ಹೆಚ್ಚಿರುತ್ತದೆ. ಒಂದು ದೇಶದ ಒಟ್ಟು ವ್ಯಾಪಾರದ ಪ್ರಮಾಣದಲ್ಲಿ ಸುಮಾರು ೯೫% ಭಾಗ ಆಂತರಿಕ ವ್ಯಾಪಾರದ್ದಾಗಿರುತ್ತದೆ. ಉಳಿದ ೫% ಭಾಗ ವಿದೇಶಿ ವ್ಯಾಪಾರದ್ದಾಗಿರುತ್ತದೆ. ಭಾರತದ ಆಯಾತ ವ್ಯಾಪಾರ ಎಂದರೆ ಭಾರತವು ಇತರ ದೇಶಗಳಿಂದ ಸರಕು ಮತ್ತು ಸೇವೆಗಳನ್ನು ಖರೀದಿಸುವುದಾಗಿದೆ. ಅದು ಆಯಾತದ ಗೋಚರ ವಸ್ತುಗಳಾದ ಕಚ್ಚಾಹತ್ತಿ, ಕಚ್ಚಾ ಸೆಣಬು, ಆಹಾರ ಧಾನ್ಯಗಳು, ಯಂತ್ರಗಳು, ಕಬ್ಬಿಣ ಮತ್ತು ಉಕ್ಕಿನ ಸರಕುಗಳು ಮತ್ತು ಅಗೋಚರ ಆಯಾತ ಬಾಬುಗಳಾದ ಹಡಗು ಸೇವೆಗಳು, ವಾಯುಯಾನ ಸೇವೆಗಳು, ವಿಮಾ ಸೇವೆಗಳು, ಬ್ಯಾಂಕಿಂಗ್ ಸೇವೆಗಳು, ವಿದೇಶಿಯರು ಭಾರತದಲ್ಲಿ ಗಳಿಸಿದ ತಮ್ಮ ಹಣವನ್ನು ತಮ್ಮ ದೇಶಗಳಿಗೆ ರವಾನಿಸುವುದು, ಭಾರತದಲ್ಲಿ ವಿದೇಶಿಯರ ಹೂಡಿಕೆಯ ಮೇಲಣ ಲಾಭಗಳು, ವಿದೇಶಗಳಲ್ಲಿ ಭಾರತೀಯ ಪ್ರವಾಸಿಗಳಿಗೆ ಸಲ್ಲಿಸಲಾದ ಸೇವೆಗಳು ಮುಂತಾದವುಗಳನ್ನೊಳಗೊಂಡಿರುತ್ತದೆ. (ಬಿ.ಎಸ್. ರಾಮನ್, ಭಾರತದ ಆರ್ಥಿಕತೆ, ೨೦೦೫, ಪು ೪೬೮)

ಸಮಾರೋಪ: "ವಿದೇಶಿ ವಾಣಿಜ್ಯ...ದೊಡ್ಡ ಮಾರುಕಟ್ಟೆಯಾಗಿ ಪರಿಣಮಿಸಿದೆ" ಎಂದು ಟಿ.ಕೆ. ಮೇಟಿ, ಸಿ.ಬಿ. ಚಂದ್ರಶೇಖರಪ್ಪ, ಎಸ್.ಜಿ. ಕರಭಂಟನಾಳ, ಎಂ.ಎಸ್.ಎನ್. ರಾವ್ ಇವರು ಭಾಷಾಂತರಿಸಿದ ಪಠ್ಯದ ಭಾಗವಾಗಿದೆ. ಇವರು 'ಪೀಠಿಕೆ' ಎಂದು ಹೇಳದಿದ್ದರೂ, ವಿವರವಾದ ಪೀಠಿಕೆಯಲ್ಲಿ ಹೇಳಬೇಕಾದ ಮಾಹಿತಿಯನ್ನು ಪೂರೈಸುತ್ತಾರೆ. ಇಲ್ಲಿ ವ್ಯಾಪಾರ, ಸ್ವದೇಶಿ ಮತ್ತು ವಿದೇಶಿ ವ್ಯಾಪಾರದ ಅರ್ಥ ತಿಳಿಸುವ ಭಾಗ ಭಾಷಾಂತರವಾಗಿರುವುದಿಲ್ಲ. ಆದರೆ ಭಾರತ ದೇಶದ ವಿದೇಶಿ ವ್ಯಾಪಾರವನ್ನು ಕುರಿತು ವಿವರವುಳ್ಳ ಭಾಷಾಂತರ ಪೂರೈಕೆಯಾಗಿದೆ. ಇದರಲ್ಲಿ ವ್ಯಾಪಾರದ 'ದಿಶೆ', 'ಪ್ರತಿಕೂಲ ಹಣದ ಬಟವಾಡೆ', 'ರಫ್ತಿನ ಹೆಚ್ಚುವರಿ', 'ಯಂತ್ರಶಿಲ್ಪ ವಸ್ತುಗಳು', 'ಒಳ ಮಾರುಕಟ್ಟೆ'ಗಳಂಥ ವಿಶಿಷ್ಟ ಪದ ಬಳಕೆಯಾಗಿರುವುದನು ಗುರುತಿಸಲಾಗಿದೆ.

"ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು :...ಪ್ರಧಾನ ಪಾತ್ರ ವಹಿಸುತ್ತದೆ" ಎಂಬುದಾಗಿ ೨೦೦೪ರಲ್ಲಿ ಜಿ.ಎನ್. ಕೆಂಪಯ್ಯ ಇವರು ಭಾಷಾಂತರ ಮಾಡಿರುತ್ತಾರೆ. ಇವರು ಭಾಷಾಂತರಿಸಿದ ಪಠ್ಯದಲ್ಲಿ ವ್ಯಾಪಾರ, ಆಂತರಿಕ ಮತ್ತು ಅಂತಾರಾಷ್ಟ್ರೀಯ ಪರಿಕಲ್ಪನೆಗಳನ್ನು ನೀಡುತ್ತಾರೆ. ಅಂತಾರಾಷ್ಟ್ರೀಯ ವ್ಯಾಪಾರದ ನೀತಿ ಹಾಗೂ ಅನುಸರಿಸುವ ತತ್ವಗಳ ಪರಿಚಯ ಮಾಡಿಸಿದ್ದಾರೆ. ಕೋಷ್ಟಕ ಮತ್ತು ಸೂತ್ರಗಳನ್ನು ಸಂದರ್ಭನುಸಾರ ಬಳಸಿರುತ್ತಾರೆ. ವಿದೇಶಿ ವಿನಿಮಯ ಮತ್ತು

ವಿವಿಧ ವಿನಿಮಯ ದರಗಳನು ಅನುವಾದಿಸಿ ಸಂಕ್ಷಿಪ್ತವಾದರೂ ಪಠ್ಯಕ್ರಮದ ಅಂಶಗಳನ್ನೆಲ್ಲಾ ಭಾಷಾಂತರಿಸಿದ್ದನ್ನು ಗಮನಿಸಬಹುದಾಗಿದೆ.

"ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು :... ಆಯಾತ ಎಂದು ಕರೆಯಲ್ಪಡುತ್ತದೆ" ಎಂಬುದಾಗಿ ಸಿ.ಕೆ. ರೇಣುಕಾರ್ಯ ಸಂಪಾದಿಸಿದ 'ಅರ್ಥಶಾಸ್ತ್ರ' ಪಠ್ಯಪುಸ್ತಕದ ೨೦೦೪, ಪು. ೨೬೮-೩೦೯ರಲ್ಲಿ ಪ್ರಭಾಕರ ಶಿಶಿಲರು ಭಾಷಾಂತರಿಸಿದ ಪಠ್ಯ ಭಾಗವಿದೆ. ಇವರು ಪಠ್ಯಕ್ರಮಕ್ಕೆ ಅನುಗುಣವಾದ ವಿವರವುಳ್ಳ ಪಠ್ಯ ಇರುತ್ತದೆ. ಇವರು ಕೋಷ್ಟಕ, ಸೂತ್ರ, ರೇಖಾಚಿತ್ರ, ಸಾರಾಂಶಗಳಂಥ ಅಪರೂಪದ ಅಂಶಗಳಿವೆ. ಸ್ಥಾನಿಕ ಪರಿಸರ (ಹಾಸನ ಜಿಲ್ಲೆ) ದೃಷ್ಟಾಂತದಲ್ಲಿ ಬಳಸಿರುತ್ತಾರೆ. 'ಅಂತಾರಾಷ್ಟ್ರೀಯ' ಪದವನ್ನು ಅಂತಾರಾಷ್ಟ್ರೀಯ' ಎಂದು International ಪದ ಭಾಷಾಂತರವಾಗಿದೆ. ಈ ರೀತಿಯ ಪದ ಬಳಕೆ ಕುರಿತು ಭಿನ್ನಾಭಿಪ್ರಾಯಗಳಿವೆ. ಈಗ ಚರ್ಚೆ ಬೇಡ

"ಭಾರತದ ವಿದೇಶಿ ವ್ಯಾಪಾರ :...ಸೇವೆಗಳು ಮುಂತಾದವುಗಳನ್ನು ಒಳಗೊಂಡಿರುತ್ತದೆ" ಎಂಬುದಾಗಿ ಪಾರ್ಶ್ವನಾಥ ಅಜ್ರಿಯವರು ಬಿ.ಎಸ್. ರಾಮನ್ ಬರೆದ ಕೃತಿಯನು ಭಾರತದ ಆರ್ಥಿಕಾಭಿವೃದ್ಧಿ ಪಠ್ಯಪುಸ್ತಕವನ್ನು ಅನುವಾದಿಸಿರುತ್ತಾರೆ. ಅವರು ಈ ಪಠ್ಯದಲ್ಲಿ ಪಠ್ಯಕ್ರಮದನುಸಾರ ಎಲ್ಲ ಅಂಶಗಳನ್ನು ಅಳವಡಿಸಿರುತ್ತಾರೆ. ಇವರು 'ಸಿದ್ಧ ಪೋಷಾಕುಗಳು', 'ಪೈಂಟ್' (?), 'ವ್ಯಾಪಾರ ದಿಕ್ಕು', 'ಪ್ರತಿಕೂಲ ವ್ಯಾಪಾರದ ಶಿಲ್ಕು' 'ಕಬ್ಬಿಣಯುಕ್ತ ಮತ್ತು ಕಬ್ಬಿಣ ರಹಿತ ಲೋಹಗಳು', 'ಆಯಾತ', 'ತೊಗಲು', 'ಚರ್ಮ', 'ಹದ ಮಾಡಿದ ಚರ್ಮ ಮತ್ತು ಚರ್ಮದ ವಸ್ತುಗಳು' ಇಂಥ ವಿಶಿಷ್ಟ ಪದಗಳನು ಕೋಷ್ಟಕಗಳನ್ನು ಬಳಸುವ ಮೂಲಕ ಭಾಷಾಂತರಿಸಿದ್ದಾರೆ.

"ಅಂತಾರಾಷ್ಟ್ರೀಯ ವ್ಯಾಪಾರ :... ವಿವರಿಸಲು ಬಾರದು" ಎಂಬುದನ್ನು ಟಿ.ಕೆ. ಮೋಟಿ, ಸಿ.ಬಿ. ಚಂದ್ರಶೇಖರಪ್ಪ, ಸಿ.ಎಸ್. ಕಡ್ಡಿಪುಡಿ, ಎನ್.ಎಸ್. ಹಿರೇಮಠ, ಕೆ.ಆರ್. ಮಡಿ ಇವರು ಭಾಷಾಂತರಿಸುತ್ತಾರೆ. ಇದು ಪದವಿ ಹಂತದ ಪಠ್ಯವಾದ ಕಾರಣ ಗೊತ್ತುಪಡಿಸಿದ ಪಠ್ಯದ ಭಾಷಾಂತರ ಭಾಗವಾಗಿದೆ. ಇದರಲ್ಲಿ 'Balance of Payments' ಪದಕ್ಕೆ (ಆಯಾತ-ನಿರ್ಯಾತ ಲೆಕ್ಕ) 'ಗೋಚರ ವಸ್ತುಗಳು ಹಾಗೂ ಅಗೋಚರ ವಸ್ತುಗಳು', 'ದೇಶವು ಪರದೇಶಗಳಿಗೆ ತೆಬೇಕಾದ ಒಟ್ಟು ಹಣ', 'ಮೌಲ್ಯ ವಿಚ್ಛೇದನ' ಈ ಮೊದಲಾದ ಪಾರಿಭಾಷಿಕ ಪದಗಳು ಗಮನಸೆಳೆಯುತ್ತವೆ. ಭಾಷಾ ಶೈಲಿಯೂ ಪ್ರದೇಶಿಕತೆಯಿಂದ ಕೂಡಿರುತ್ತದೆ.

"ವಿದೇಶಿ ವ್ಯಾಪಾರ :...ಭಾರತ ರಫ್ತು ಮಾಡುತ್ತಿದ್ದಿತು" ಎಂಬುದಾಗಿ ಡಿ. ವೆಂಕಟರಾವ್ ಅವರು ಭಾಷಾಂತರಿಸಿದ್ದಾರೆ. ಪದವಿ ಹಂತಕ್ಕಿರಬೇಕಾದ ಮಾಹಿತಿಯು ವಿಸ್ತೃತವಾಗಿದೆ. ಪಂಚವಾರ್ಷಿಕ ಯೋಜನೆಗಳನ್ನು RBIದ ಅಂಕಿ-ಅಂಶಗಳ ಕೋಷ್ಟಕ ರಚಿಸಿ ವಿಶ್ಲೇಷಣೆ ಮಾಡಿದ ಭಾಷಾಂತರವು ಅಧ್ಯಯನಕಾರರಿಗೆ ಜ್ಞಾನದಾಯಕವಾಗಿದೆ. Direction of Tradeನ್ನು 'ಸಂಚಾಲನ' ಎಂದು ಭಾಷಾಂತರಿಸಿರುತ್ತಾರೆ. ಇಂಥ ಪಾರಿಭಾಷಿಕ ಪದ ಬೇರೆ ಅನುವಾದಗಳಲ್ಲಿ ಇರುವುದಿಲ್ಲ. 'ರೂಪಾಯಿ

ಅಪಮೌಲ್ಯ' ಪದವೂ ವಿಶೇಷ ಎನಿಸುತ್ತದೆ. ಈ ಪಠ್ಯ ಮೈಸೂರು, ಬೆಂಗಳೂರು, ಧಾರವಾಡ ಮತ್ತು ಗುಲ್ಬರ್ಗಾ ವಿಶ್ವವಿದ್ಯಾಲಯಗಳ ಪದವಿ ತರಗತಿಗೆ ಪಠ್ಯಪುಸ್ತಕವಾಗಿದೆ.

"ಭಾರತದ ವಿದೇಶಿ ವ್ಯಾಪಾರ :...ನಿರಂತರ ಸಮಸ್ಯೆಯಾಯಿತು" ಎಂದು ಡಿ.ಎನ್.ಎಸ್. ಮೂರ್ತಿ ಇವರು ಅಂಕಿ-ಅಂಶಗಳನು ಮತ್ತು ಕೋಷ್ಠಕಗಳೊಂದಿಗೆ ಪಂಚವಾರ್ಷಿಕ ಯೋಜನೆಗಳನು ಭಾಷಾಂತರಿಸಿದ್ದಾರೆ. ಪೀಠಿಕೆಯ ಭಾಗದಲ್ಲಿ ವಿದೇಶಿ ವ್ಯಾಪಾರದ ಸಂದರ್ಭವನ್ನು ವಿಶ್ಲೇಷಣೆ ಮಾಡಿದ್ದಾರೆ. ವಿದೇಶಿ ವ್ಯಾಪಾರದ ವಿನ್ಯಾಸ (Pattern of Foreign Trade) ತುಂಬಾ ಸಂಕ್ಷಿಪ್ತವಾಗಿದೆ. ಪದವಿ ಪಠ್ಯವಾದರೂ ಮಾಹಿತಿಗಳ ಕೊರತೆ ಎದ್ದುಕಾಣುವಂತಿದೆ. ಆಮದು ಮತ್ತು ರಫ್ತಿಗೆ ಸಂಬಂಧಿಸಿದ ವಿಷಯ ಮುಖ್ಯಾಂಶಗಳಂತೆ ಪಟ್ಟಿಯಲ್ಲಿ ಭಾಷಾಂತರಗೊಂಡಿವೆ. Balance of Payments ಪಾವತಿ ಶಿಲ್ಕು, Visibleನ್ನು ಗೋಚರ, Invisibleನ್ನು ಅಗೋಚರ ಹೀಗೆ ಅಲ್ಲಲ್ಲಿ ಇಂಥ ಪದಗಳು ಇಂಗ್ಲಿಷ್ ಪದದೊಂದಿಗೆ ಇರುವುದು ಉಪಯುಕ್ತವಾಗಿವೆ.

"ಅಂತಾರಾಷ್ಟ್ರೀಯ ಅರ್ತಶಾಸ್ತ್ರದ ಅರ್ಥ ಮತ್ತು ಮಹತ್ವ :...ಮನದಟ್ಟಾಗಿಸುತ್ತದೆ" ಎಂಬುದಾಗಿ ಎಚ್.ಆರ್. ಕೃಷ್ಣಯ್ಯಗೌಡ ಅವರು 'ಅಂತಾರಾಷ್ಟ್ರೀಯ ಅರ್ಥಶಾಸ್ತ್ರ' ಪಠ್ಯದಲ್ಲಿ ಭಾಷಾಂತರಿಸಿರುತ್ತಾರೆ. ಇದು ಮೈಸೂರು ವಿಶ್ವವಿದ್ಯಾಲಯದ ಅಂತಿಮ ಬಿ.ಎ. ತರಗತಿಗೆ ಪಠ್ಯಪುಸ್ತಕವಾಗಿರುತ್ತದೆ. ಇದು ಪ್ರತ್ಯೇಕ ಪತ್ರಿಕೆಯ ಪಠ್ಯವಾಗಿದ್ದು, ೧೭೪ ಪುಟಗಳಲ್ಲಿ ಭಾಷಾಂತರಿಸಲ್ಪಟ್ಟಿದೆ. ವಿವಿಧ ಸಿದ್ಧಾಂತಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ನೇರ ಅನುವಾದವನ್ನು ಚುಕ್ಕೆ ಗುರುತಿನಿಂದ ಗುರುತಿಸಲಾಗಿದೆ. ವಿವರವಾದ ಮಾಹಿತಿ ನೀಡುವ ಈ ಭಾಷಾಂತರದ ಪಠ್ಯವು ಅಂಕಿ-ಅಂಶಗಳ ಕೋಷ್ಠಕದ ಕೊರತೆಯನ್ನು ಹೊಂದಿದೆ.

"ಆಧುನಿಕ ಅರ್ಥ ವ್ಯವಸ್ಥೆಯಲ್ಲಿ ಅಂತಾರಾಷ್ಟ್ರೀಯ ವ್ಯಾಪಾರ :...ಸ್ಥಳೀಕರಣಗೊಂಡಿವೆ" ಎಂಬುದನ್ನು ಬೆಂಗಳೂರು ವಿಶ್ವವಿದ್ಯಾಲಯ ಎರಡನೇ ವರ್ಷದ ಬಿ.ಎ. ತರಗತಿಗೆ ನಿದಿಪಡಿಸಿದ ಪಠ್ಯವನ್ನು ಎಂ.ಎಸ್. ಕಲ್ಲೂರ ಅಮತ್ತು ಪ್ರಭಾಕರ ಶಿಶಿಲ ಇವರು ಭಾಷಾಂತರಿಸಿರುತ್ತಾರೆ. ಇದು ೩೬೫ ಪುಟಗಳಿಂದ ಕೂಡಿದ ಪಠ್ಯವು ಇತರ ವಿಶ್ವವಿದ್ಯಾಲಯಗಳ ಬಿ.ಎ. ತರಗತಿಗೂ ಪಠ್ಯಪುಸ್ತಕವಾಗಿ ಬಳಕೆಯಾಗುವ ವಿಚಾರವನ್ನು ಪ್ರಕಟಿಸಿದ್ದಾರೆ. ಈ ಪಠ್ಯ ಸಂದರ್ಭಾನುಸಾರ ಕೋಷ್ಠಕಗಳನ್ನು, ರೇಖಾಚಿತ್ರಗಳನ್ನು ಒಳಗೊಂಡು ವಿವರವಾದ ಮಾಹಿತಿ ಒದಗಿಸುವ ಭಾಷಾಂತರವಾಗಿದೆ. ಇವರು ಸಿದ್ಧಾಂತಗಳನು ಸೂತ್ರಗಳೊಂದಿಗೆ ನಿರೂಪಿಸಿದ್ದಾರೆ. ವಿವರವುಳ್ಳ ವಿಶ್ಲೇಷಣೆ ಮಾಡಿರುತ್ತಾರೆ. ಅಲ್ಲಲ್ಲಿ ಪ್ರದೇಶಿಕ ಪದಗಳ ಪ್ರಭಾವವಿದೆ. ಕನ್ನಡ ಪದಗಳ ಮುಂದೆ ಅಗತ್ಯವಿದ್ದಲ್ಲಿ ಇಂಗ್ಲಿಷ ಪದ ನೀಡಿರುವುದು ಅಧ್ಯಯನಕ್ಕೆ ಉಪಯುಕ್ತವಾಗಿದೆ.

"ವಿದೇಶಿ ವ್ಯಾಪಾರ :...ಕಾರ್ಯನಿರ್ವಹಿಸುತ್ತದೆ" ಎಂಬುದಾಗಿ ಎಚ್.ಆರ್. ಕೃಷ್ಣಯ್ಯಗೌಡ ಇವರು 'ಆಧುನಿಕ ಭಾರತದ ಆರ್ಥಿಕಾಭಿವೃದ್ಧಿ' ಎಂಬ ಪದವಿ ತರಗತಿಯ ಪಠ್ಯಪುಸ್ತಕದ ಪು.

೨೫೨-೨೭೪ರಲ್ಲಿ ಭಾಷಾಂತರ ಮಾಡಿರುತ್ತಾರೆ. ಇವರು ವಿವರವಾದ ಭಾಷಾಂತರ ಪೂರೈಸಿರುತ್ತಾರೆ. ಭಾರತಕ್ಕೆ ಸಂಬಂಧಿಸಿದ ವಿವಿಧ ಪಂಚವಾರ್ಷಿಕ ಯೋಜನೆಯಲ್ಲಿನ ಆಮದು-ರಫ್ತಿಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಕೋಷ್ಟಕದ ಮೂಲಕ ಭಾಷಾಂತರಿಸಿದ್ದಾರೆ. ಭಾಷೆ ಪ್ರಾದೇಶಿಕ ಪ್ರಭಾವಕ್ಕೆ ಒಳಗಾಗಿದ್ದರೂ, ಸಾಮಾನ್ಯ ಎನ್ನುವಷ್ಟು ಸರಳವಾಗಿದೆ. ಆದರೂ Current ರಾಜಸ್ವ ಲೆಕ್ಕ, Non-Ferrous metals ಕಬ್ಬಿಣೇತರ ಲೋಹಗಳು, Import substitutes ಆಮದು ಪ್ರತಿನಿದಾನಕಗಳು ಇಂಥ ಹಲವಾರು ವಿಶೇಷ ಪಾರಿಭಾಷಿಕ ಪದ ಬಳಕೆ ಮಾಡಿದ್ದಾರೆ.

ಈ ಪಠ್ಯ ಸಾಮಗ್ರಿಗಳು ಪದವಿಪೂರ್ವ ಶಿಕ್ಷಣ ಇಲಾಖೆ(ಮಂಡಳಿ) ಹಾಗೂ ವಿಶ್ವವಿದ್ಯಾಲಯಗಳು ರೂಪಿಸಿದ ಪಠ್ಯಕ್ರಮಗಳ ಆಧಾರಿತ ಭಾಷಾಂತರಗಳಾಗಿರುತ್ತವೆ. ವಿದ್ಯಾರ್ಥಿಗಳ ಅಧ್ಯಯನಕ್ಕೆ ಪೂರಕವಾದ ಈ ಸಾಮಗ್ರಿಗಳು ಪಠ್ಯಕ್ರಮಗಳ ಆಚೆ-ಇಚೆ ಚಾಚಿಕೊಂಡಿರುವುವು ಇವೆ. ಆದರೂ ಅಧ್ಯಯನಕ್ಕೆ ಒಂದು ಚೌಕಟ್ಟು ಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಲು ಅನುಬಂಧ ಎರಡರಲ್ಲಿ ಪಿಯುಸಿ ತರಗತಿಗಳ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪಠ್ಯಕ್ರಮವನ್ನು ನೀಡಲಾಗಿದೆ. ಅರ್ಥಶಾಸ್ತ್ರದ ಪಠ್ಯಕ್ರಮಗಳು ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ, ಉಳಿದ ವಿಶ್ವವಿದ್ಯಾಲಯಗಳ ಪಠ್ಯಕ್ರಮಗಳು ಒಂದೇ ಎಂಬುದಾಗಿ ಭಾವಿಸಿ ಒಂದೇ ವಿಶ್ವವಿದ್ಯಾಲಯದ ಪದವಿ ತರಗತಿ ಪಠ್ಯವನ್ನು ನೀಡಲಾಗಿದೆ. ಅನುಬಂಧದಲ್ಲಿನ ಪಠ್ಯಕ್ರಮ ವಿವರವಾಗಿದೆ. ಪಿಯುಸಿ ಪಠ್ಯಕ್ರಮವು ತುಂಬಾ ಹಿಂದಿನದನ್ನು ಸೇರಿಸಲಾಗಿದೆ. ಇದರಲ್ಲಿ ಸೇರಿಸಬಹುದಾದ ಪಠ್ಯಕ್ರಮ ಲಭ್ಯವಾದರೆ ಅದನ್ನು ಸ್ವೀಕರಿಸಲಾಗುವುದು.

# ಅಧ್ಯಾಯ ನಾಲ್ಕು

## ಪಠ್ಯ ಸಾಮಗ್ರಿಗಳು: ಭಾಷೆ

೪.೧. ವಿಶಿಷ್ಟ ಪದಗಳು
೪.೨. ಆಡು ಭಾಷೆಯ ಪದಗಳು
೪.೩. ವಾಕ್ಯಗಳ ರಚನೆ
೪.೪. ನಿರೂಪಣೆ ಮತ್ತು ವಿಶ್ಲೇಷಣೆ
೪.೫. ಪ್ರಚ್ಛನ್ನ ಭಾಷಾಂತರ

## ಅಧ್ಯಾಯ ನಾಲ್ಕು

# ಪಠ್ಯ ಸಾಮಗ್ರಿಗಳು: ಭಾಷೆ

ಪಠ್ಯಸಾಮಗ್ರಿಗಳ ಅಧ್ಯಯನದಿಂದ ಕಂಡುಕೊಂಡ ಅಪರೂಪದ ಅಂಶಗಳನ್ನು ದಾಖಲಿಸಲಾಗಿದೆ. ಅವುಗಳ ಬಳಕೆಯ ಹಿನ್ನೆಲೆ ತಿಳಿಯುವ ಪ್ರಯತ್ನ ಮಾಡಲಾಗಿದೆ. ಅರ್ಥಶಾಸ್ತ್ರ ಪಠ್ಯಗಳಲ್ಲಿ ಬಳಸಿರುವ ಅಪರೂಪದ ಅಂಕಿ-ಸಂಖ್ಯೆಗಳನ್ನು, ರೇಖಾಚಿತ್ರಗಳು, ದೃಷ್ಟಾಂತಗಳು, ಉದಾಹರಣೆಗಳು, ಭಾಷಾ ಸ್ವರೂಪ-ಬದಲಾವಣೆ, ಪರಿಕಲ್ಪನೆಯಲ್ಲಿನ ಪಲ್ಲಟಗಳು, ವಿಷಯ ನಿರೂಪಣೆ, ವಿಶ್ಲೇಷಣೆ ಈ ಮೊದಲಾದ ಅಂಶಗಳನ್ನು ಗಮನಿಸುವ ಪ್ರಯತ್ನ ಮಾಡಲಾಗಿದೆ. ಪಠ್ಯಗಳಲ್ಲಿನ ಭಾಷೆಯನ್ನು ಗಮನಿಸುವ ಸಂದರ್ಭದಲ್ಲಿ ಗ್ರಾಂಥಿಕ ಭಾಷೆ, ಆಡುಭಾಷೆ, ಪ್ರಾದೇಶಿಕತೆಯ ಭಾಷೆ, ಸಂಶೋಧನಾ ಭಾಷೆ, ಈ ಮೊದಲಾದವುಗಳ ಕುರಿತು ಸೂಕ್ಷ್ಮವಾಗಿ ಗುರುತಿಸಿ ಕಾರಣ/ಹಿನ್ನೆಲೆ ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಬಳಸಿದ ಭಾಷೆಯು ವಿದ್ಯಾರ್ಥಿಗಳ ಆಲೋಚನಾ ಗ್ರಹಿಕೆಗೆ ನಿಲುಕುವಂತಿದೆಯೇ ಎಂಬುದನ್ನು ಗುರುತಿಸುವ ನೆಲೆಯಿಂದ ಅಧ್ಯಯನ ಮಾಡಲಾಗಿದೆ. ಪಠ್ಯದ ಭಾಷೆಯು ಪಾಂಡಿತ್ಯ ಭಾಷೆ, ಕ್ಲಿಷ್ಟ ಭಾಷೆ, ಸಂಕೀರ್ಣ ಭಾಷೆಗಳಂತಹ ಭಾಷೆಗಳನ್ನು ಒಳಗೊಂಡಿದೆಯೇ ಎಂಬುದನ್ನು ತಿಳಿಯುವ ಪ್ರಯತ್ನ ಇದಾಗಿದೆ. ಪಠ್ಯ ವಿಷಯವನ್ನು ಯಾವ-ಯಾವ ಭಾಷಾಂತರಕಾರರು ಹೇಗೆ ನಿರೂಪಿಸಿರುತ್ತಾರೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವಿಷಯ ವಿಶ್ಲೇಷಣೆಗಾಗಿ ಬಳಸಿರುವ ದೃಷ್ಟಾಂತಗಳ, ಉದಾಹರಣೆಗಳ, ರೇಖಾಚಿತ್ರಗಳ, ಕೋಷ್ಟಕಗಳ, ಅಂಕಿ-ಅಂಶಗಳ...... ಬಳಕೆ ಸಮರ್ಪಕವಾಗಿ ಮತ್ತು ಸಮಂಜಸ ಪ್ರಮಾಣದಲ್ಲಿ ಇರುವ ಕುರಿತಂತೆ ತಿಳಿಯುವ ಯತ್ನವಿದು. ಗಾದೆಮಾತು, ನಾಣ್ನುಡಿ, ಒಗಟು, ಪ್ರಾದೇಶಿಕ ಮತ್ತು ಗ್ರಾಮ್ಯತೆಯನ್ನೊಳಗೊಂಡ ಅಂಶಗಳ ಹಿನ್ನೆಲೆಯನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಪಠ್ಯಗಳಲ್ಲಿರುವ ಅಚ್ಚಗನ್ನಡ (ಕನ್ನಡ), ಸಂಸ್ಕೃತ, ಅನ್ಯದೇಶಿಯ ಪದಗಳನ್ನು ಹೇಗೆ ಬಳಸಿದ್ದಾರೆ? ಏಕೆ ಬಳಸಿರಬಹುದು? ಅವು ವಿಷಯ ನಿರೂಪಣೆ ಮತ್ತು ವಿಶ್ಲೇಷಣೆಯಲ್ಲಿ ಹೇಗೆ ಹೊಂದಿಕೊಂಡಿವೆ? ಅವು ಯಾವುದೇ ಒಂದು ಪ್ರದೇಶಕ್ಕೆ ಸೀಮಿತವೆಂದು ಭಾಸವಾಗುವಂತಿವೆಯೇ..... ಈ ಮೊದಲಾದ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗಿದೆ.

ಈ ಅಧ್ಯಾಯದಲ್ಲಿ ನಾಲ್ಕು ಅಂಶಗಳಿವೆ ಮೊದಲನೆಯ ಅಂಶ ವಿಶಿಷ್ಟ ಪದ ಬಳಕೆ ಎಂದಿದ್ದು, ಇದರಲ್ಲಿ ವಿಶಿಷ್ಟ ರೀತಿಯಲ್ಲಿ ಬಳಸಿರುವ ಅಂಕಿ–ಅಂಶಗಳು, ಪ್ರಾದೇಶಿಕತೆಯ ಸೊಗಡಿನ ವಿಚಾರಗಳನ್ನು ಚರ್ಚಿಸಲಾಗಿದೆ. ಎರಡನೇಯ ಅಂಶ, ಆಡುಭಾಷೆಯ ಪದಗಳೆಂದಿರುತ್ತದೆ. ಇದರಲ್ಲಿ ಗಾದೆ ಮಾತು, ನಾಣ್ನುಡಿ, ವ್ಯಂಗೋಕ್ತಿಗಳ ವಿಚಾರಗಳಿಂದ ರಚಿತವಾದ ಪಠ್ಯಗಳ ಕುರಿತು ಅಧ್ಯಯನ ಮಾಡಲಾಗಿದೆ. ಪದ ಪ್ರಯೋಗವು ಮೂರನೇಯ ಅಂಶವಾಗಿರುತ್ತದೆ. ಇದರಲ್ಲಿ ಇಂಗ್ಲಿಷಿನಲ್ಲಿ ಇರುವ ಪರಿಕಲ್ಪನೆಗಳು ಕನ್ನಡದಲ್ಲಿ ಬೇರೆ–ಬೇರೆ ಭಾಷಾಂತಕಾರರು ಹೇಗೆ ಪರಿಭಾವಿಸಿ ಕಟ್ಟಿಕೊಟ್ಟಿದ್ದಾರೆ ಎಂಬುದನ್ನು ಪರಿಶೀಲಿಸಲಾಗಿದೆ. ನಾಲ್ಕನೇಯ ಅಂಶ ನಿರೂಪಣೆ ಮತ್ತು ವಿಶ್ಲೇಷಣೆ ಎಂದಿರುತ್ತದೆ. ಇದರಲ್ಲಿ ಅರ್ಥಶಾಸ್ತ್ರ ಪಠ್ಯವನ್ನು ಯಾವ–ಯಾವ ಭಾಷಾಂತಕಾರರು ವಿಷಯವನ್ನು ಹೇಗೆ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ, ವಿದ್ಯಾರ್ಥಿಗಳಿಗೆ ಯಾವ ನಿರೂಪಣೆ ಮತ್ತು ವಿಶ್ಲೇಷಣೆ ಹೆಚ್ಚು ಪ್ರಯೋಜನಕಾರಿಯಾಗಿವೆ ಎಂಬುದನ್ನು ಚರ್ಚಿಸಲಾಗಿದೆ.

## ೪.೧. ವಿಶಿಷ್ಟ ಪದಗಳು

ಅರ್ಥಶಾಸ್ತ್ರ ಪಠ್ಯಗಳಲ್ಲಿ ಬಳಕೆಯಾಗಿರುವ ಅನೇಕ ಪದಗಳಲ್ಲಿ ಕೆಲವು ವಿಶಿಷ್ಟವಾಗಿರುವುದನ್ನು ಗುರುತಿಸಲಾಗಿದೆ. ಅವುಗಳಲ್ಲಿ ಅಳತೆಯ ಪ್ರಮಾಣಗಳನ್ನು ವ್ಯಕ್ತಪಡಿಸಲು ಉಪಯೋಗಿಸಿರುವ ಸಂಖ್ಯೆಗಳು ಒಳಗೊಂಡಿವೆ. ಚಹಪುಡಿಯನ್ನು ಕೊಳ್ಳಬೇಕಾದಾಗ ಐದು ರೂಪಾಯಿಗೆ ಒಂದು ಸೇರಿನಂತೆ ಸಿದ್ದನಿರುವಾಗ ಪೇಟೆಯಲ್ಲಿ ಅದರ ಪ್ರತ್ಯಕ್ಷ ಬೆಲೆ ಮೂರು ರೂಪಾಯಿಗೆ ಒಂದು ಸೇರಿನಂತಿದ್ದರೆ ಅವನಿಗೆ ಎರಡು ರೂಪಾಯಿ ಉಳಿತಾಯವಾದಂತೆ ಆಗುತ್ತದೆ. ಎಂಬುದನ್ನು ಎಸ್. ಎನ್. ವೃಷಭೇಂದ್ರಸ್ವಾಮಿ ಪಠ್ಯಪುಸ್ತಕ ನಿರ್ದೇಶಕರು ಇವರು 'ಅರ್ಥಶಾಸ್ತ್ರ ತತ್ವ ನಿರೂಪಣೆ' ೧೯೭೧:೫೮ರಲ್ಲಿ ಹೇಳಿದ್ದಾರೆ. ಚಹಪುಡಿಯ ಮಾರಾಟವು ಸಾಮಾನ್ಯವಾಗಿ ತೂಕದ ಮೂಲಕವೇ ನಡೆಯುತ್ತದೆ. ಎಪ್ಪತ್ತರ ದಶಕದಲ್ಲಿ ಅದನ್ನು ಅಳತೆಯ ಮೂಲಕ ಮಾರಾಟ ಮಾಡಲಾಗುತ್ತಿತ್ತೆಂದು ನಾವು ಗ್ರಹಿಸಬಹುದಾಗಿದೆ. 'ಸೇರು' ಧವಸ–ಧಾನ್ಯಗಳನ್ನು ಮಾರಾಟ ಮಾಡಲು ಬಳಸುವ ಒಂದು ಮಾನ. 'ಸೇರು' ಎಂಬ ಮಾಪನವು ನಾಲ್ಕು ಪಾವುಗಳನ್ನು ಒಳಗೊಂಡಿರುವ ಪೂರ್ಣತೆಯ ಒಂದು ಮಾಪನವಾಗಿದೆ. ಮಾರುಕಟ್ಟೆಯಲ್ಲಿ ಬೆಲೆಯನ್ನು ಸೂಚಿಸುವಾಗ ಸೇರಿನ ಅಳತೆಯ ಲೆಕ್ಕದಲ್ಲಿ ವ್ಯಕ್ತಪಡಿಸಲಾಗುತ್ತದೆ. ಈ ಪದವನ್ನು ಅನುಭೋಗಿಯ ಅಧಿಕ ತೃಪ್ತಿಗೆ ಬಳಸಲಾಗಿದೆ. ಬೇರೆ ಬೇರೆ ಲೇಖಕರು ಈ ವಿಧದ ಪದವನ್ನು ಈ ಉದಾಹರಣೆಗಾಗಿ ಬಳಸಿರುವುದಿಲ್ಲ. ಆದ್ದರಿಂದ ಈ ಪದವು ವಿಶೇಷ ಎಂದು ಭಾವಿಸಲು ಅಡ್ಡಿಯಿಲ್ಲ. ಉತ್ಪಾದನಾ ಸಂಸ್ಥೆಯ ಆದಾಯ ಮತ್ತು ವೆಚ್ಚದ ಲೆಕ್ಕಚಾರ ಮಾಡುವಾಗ ಬಳಸಿರುವ ಅಂಕಿ–ಸಂಖ್ಯೆಗಳನ್ನು ಗಮನಿಸಿದಾಗಲೂ ಕೆಲವು ಭಿನ್ನತೆಗಳು ಅರ್ಥಶಾಸ್ತ್ರ ಪಠ್ಯಗಳಲ್ಲಿ ಕಂಡುಬರುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಸರಾಸರಿ ಲೆಕ್ಕಚಾರ ಮಾಡುವಾಗಿನ ಸಂದರ್ಭವನ್ನು ಗುರುತಿಸಬಹುದಾಗಿದೆ. 'ಸರಾಸರಿ ಆದಾಯವು ಸಹ ೧೦ರಿಂದ ೧೨ ೧/೨, ೧೨ ೧/೨ ರಿಂದ ೧೫ಕ್ಕೆ ಏರುತ್ತಾ ಹೋಗಿದೆ.' ಈ ವಿಚಾರವನ್ನು ಎಮ್. ಎಸ್.

ಸುಂಕಾಪೂರ (ಸಂ) ಇವರು 'ಅರ್ಥಶಾಸ್ತ್ರತತ್ವ ವಿವೇಚನೆ' ೧೯೭೭:೧೧೪ರಲ್ಲಿ ವ್ಯಕ್ತಪಡಿಸಿದ್ದಾರೆ. ಈ ವೇಳೆಗೆ ದಶಮಾನ ಪದ್ಧತಿ ಜಾರಿಯಲ್ಲಿ ಬಂದಿತ್ತು. ಆದರೆ ಈ ಅವಧಿಯಲ್ಲಿ ಪ್ರಕಟವಾದ ಪಠ್ಯದಲ್ಲಿ ದಶಮಾನ ಪದ್ಧತಿಯನ್ನು ಅನುಸರಿಸದೇ ಭೀನ್ನರಾಶಿ ಪದ್ದತಿಯನ್ನು ಉಪಯೋಗಿಸಿದ್ದನ್ನು ಗುರುತಿಸಬಹುದಾಗಿದೆ. ದಶಮಾನ ಪದ್ಧತಿಗೂ ಭಿನ್ನರಾಶಿಯ ಪದ್ಧತಿಗೂ ವ್ಯತ್ಯಾಸವಿದೆ. ಸುಲಭವಾಗಿ ಗ್ರಹಿಸಲು ಭೀನ್ನರಾಶಿ ವಿಧಾನಕ್ಕಿಂತಲೂ ದಶಮಾನ ಪದ್ಧತಿ ಪರಿಣಾಮಕಾರಿ ಎಂದು ಸಾಮಾನ್ಯವಾಗಿ ಎಲ್ಲರೂ ಭಾವಿಸಿದ್ದಾರೆ. ಉತ್ತರ ಕರ್ನಾಟಕ ಪ್ರದೇಶದಲ್ಲಿ ಭಿನ್ನರಾಶಿ ವಿಧಾನವನ್ನು ಅಧಿಕ ಪ್ರಮಾಣದಲ್ಲಿ ಬಳಸುತ್ತಿರಬೇಕೆಂಬ ಅನುಮಾನಕ್ಕೆ ಇದು ಆಸ್ಪದ ಕಲ್ಪಿಸುತ್ತದೆ ಎಂದು ಭಾವಿಸಬಹುದಾಗಿದೆ. ಕಾರಣ ಮೈಸೂರು ಮತ್ತು ಬೆಂಗಳೂರು ಪ್ರದೇಶದ ಬರಹಗಾರರು ಈ ವಿಧಾನವನ್ನು ಬಳಸದೇ ಇರುವುದರಿಂದ ಅನುಮಾನಕ್ಕೆ ಪುಷ್ಟಿಕೊಟ್ಟಂತಾಗಿದೆ. ಗಣಿತದ ಜ್ಞಾನವು ಅರ್ಥಶಾಸ್ತ್ರದ ವಿದ್ಯಾರ್ಥಿಗೆ ಅವಶ್ಯ ಎಂಬ ಹಿನ್ನೆಲೆಯಲ್ಲಿ ಬಳಸಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಅನುಭೋಗಿಯ ಸಮತೋಲನ: ಇನ್ನೂ ಒಂದು ಹೆಜ್ಜೆ ಮುಂದೆ ಹೋಗೋಣ. ಒಂದು ವಕ್ರ ರೇಖೆಯಲ್ಲಿ ಅನೇಕ ಸಮಭಾವ ಬಿಂದುಗಳಿವೆ. ಯಾವ ಬಿಂದು ಅವನಿಗೆ ಪರಮಾವಧಿ ಸಂತೃಪ್ತಿಯನ್ನೀಯುತ್ತದೆ ಎಂಬ ಪ್ರಶ್ನೆ ಮುಖ್ಯ. ಪರಮಾವಧಿ ಸಂತೃಪ್ತಿ (ಅನುಭೋಗಿಯ ಸಮತೋಲ) ಅನುಭೋಗಿಯ ಆದಾಯ ಮತ್ತು ವಸ್ತುಗಳ ಬೆಲೆಗಳ ಮೇಲೆ ಬಾಗಿದೆ. ಒಂದು ಕೆ.ಜಿ ಜೋಳದ ಬೆಲೆ ೧ ರೂಪಾಯಿ ಮತ್ತು ೧ ಕೆ.ಜಿ ಗೋಧಿಯ ಬೆಲೆ ೧ ॥ ರೂಪಾಯಿ ಎಂದಿಟ್ಟುಕೊಳ್ಳುವ. ಅನುಭೋಗಿಯ ಆದಾಯ ೬ ರೂ. ಗಳೆನ್ನುವ. ಆಗ ಅವನು ಜೋಳ ಮತ್ತು ಗೋಧಿಯನ್ನು ಇಷ್ಟೀಷ್ಟು ಕೊಳ್ಳಬಹುದು. ಜೋಳ/ಗೋಧಿ(ಕೆ.ಜಿ. ಲೆಕ್ಕದಲ್ಲಿ) ೦/೪, ೧॥/೩, ೩/೨ ೬/೦ ಇರುವ ೬ ರೂ ಆದಾಯದಲ್ಲಿ ಮತ್ತು ಪ್ರಚಲಿತವಿರುವ ಬೆಲೆಯ ಮಿತಿಯೊಳಗೆ ಅನುಭೋಗಿ ಎಷ್ಟೇಷ್ಟನ್ನು ಕೊಳ್ಳಬಹುದೆಂದು ತೋರಿಸುವ ಪಟ್ಟಿ.....ಅವನು ೬ ಕೆ.ಜಿ ಜೋಳವನ್ನು ಕೊಂಡಾಗ ಗೋಧಿಯನ್ನು ಕೊಳ್ಳಲು ಸಾಧ್ಯವೇ ಇಲ್ಲ. ೪ ಕೆ.ಜಿ ಗೋಧಿಯನ್ನು ಕೊಂಡಾಗ ಜೋಳವನ್ನು ಕೊಳ್ಳಲು ಸಾಧ್ಯವಿಲ್ಲ. ೩ ಕೆ.ಜಿ ಜೋಳ ಮತ್ತು ೨ ಕೆ.ಜಿ ಗೋಧಿ ಅಥವಾ ೧॥ ಕೆ.ಜಿ ಜೋಳ ಮತ್ತು ೩ ಕೆ.ಜಿ ಗೋಧಿಯನ್ನು ಕೊಳ್ಳಬಹುದು. ಈ ವಿಷಯವನ್ನು ಎಮ್. ಎಸ್. ಸುಂಕಾಪುರಅವರು 'ಅರ್ಥಶಾಸ್ತ್ರ ತತ್ವ ವಿವೇಚನೆಯಲ್ಲಿ' ೧೯೭೭:೬೬-೬೭ರಲ್ಲಿ ಹೇಳಿರುತ್ತಾರೆ. ಈ ಮೇಲಿನ ವಿಶ್ಲೇಷಣೆಯನ್ನು ಗಮನಿಸಿದಾಗ ಅಂಕಿ ಅಂಶಗಳು ಗೋಚರಿಸುತ್ತವೆ. ಈ ಅಂಕಿಗಳು ಕನ್ನಡದ ಅಂಕಿಗಳಾಗಿವೆ. ಇಂಗ್ಲೀಷ್ ಭಾಷೆಯಿಂದ ಪಠ್ಯ ವಿಷಯವಸ್ತು ಕನ್ನಡಕ್ಕೆ ಅನುವಾದವಾದಂತೆ ಪರಿಭಾವಿಸಬಹುದಾಗಿದೆ. ಹಾಗೆಯೇ ಅಲ್ಲಿ ಬಳಸಲಾಗಿರುವ ಅಂಕಿಗಳನ್ನು ಕನ್ನಡಕ್ಕೆ ಬರಮಾಡಿಕೊಂಡಂತಾಗಿದೆ. ಆದರೆ ಅಲ್ಲಿ ಬಳಸಿರುವ ಆಕೃತಿಗಳ ಒಳಗೆ ಬರುವ ಸಂಖ್ಯೆಗಳು ಇಂಗ್ಲೀಷಿನ ಅಂಕಿಗಳಾಗಿವೆ. ಆಕೃತಿಯಲ್ಲಿ ಬಳಸಿರುವ ಸಂಕೇತಾಕ್ಷರಳು ಇಂಗ್ಲೀಷ್ ಭಾಷೆಯ ಬೀಜಾಕ್ಷರಗಳಾಗಿವೆ. ಪಠ್ಯದಲ್ಲಿ ಬಳಸಿರುವ ಆಕೃತಿಗಳ ಅನುಕ್ರಮ ಸಂಖ್ಯೆಗಳನ್ನು ಕನ್ನಡದಲ್ಲಿ ನೀಡಲಾಗಿದೆ. ಅಲ್ಲದೇ ಭಾಷೆಯನ್ನು ಗಮನಿಸಿದಾಗ

ಅದು ಇನ್ನೂ ವಿಕಸನ ಹಂತದಲ್ಲಿರುವುದನ್ನು ಗ್ರಹಿಸಬಹುದಾಗಿದೆ. ಅದು ಆಡು ಭಾಷೆಯ ಶೈಲಿಯಲ್ಲಿರುವುದು ಎದ್ದುಕಾಣುತ್ತದೆ. ಇವೆಲ್ಲವೂಗಳಿಗಿಂತ ವಿಶೇಷವಾದ ಅಂಶವೆಂದರೆ ಒಂದರ ಬಲ ಭಾಗದಲ್ಲಿ ಎರಡು ಗೆರೆಗಳನ್ನು ಎಳೆದಿರುವುದು. ಈ ಗೆರೆಗಳು ಸಂಖ್ಯೆಗಳ ಸ್ಥಾನವನ್ನು ಪಡೆದಿರುವುತ್ತವೆ. ೧ ॥ ಈ ಒಂದರ ಪಕ್ಕದಲ್ಲಿರುವ ಎರಡು ಲಂಬವಾಗಿ ಎಳೆದಿರುವ ಗೆರೆಗಳು ಒಂದರ ಮೌಲ್ಯದ ಅರ್ಧಭಾಗವನ್ನು ಸೂಚಿಸುತ್ತೆವೆ. ಒಂದು ಗೆರೆಯ ಒಂದರ ಶೇಕಡಾ ಇಪ್ಪತ್ತೈದು ಭಾಗದ ಮೌಲ್ಯವನ್ನು ಸಂಕೇತಿಸುತ್ತದೆ. ಇದನ್ನು ಕಾಲುಭಾಗವೆಂದು ಕರೆಯಲಾಗುತ್ತದೆ. ಒಂದು ಗೆರೆಗೆ ಕಾಲುಭಾಗ, ಎರಡಕ್ಕೆ ಅರ್ಧ, ಮೂರಕ್ಕೆ ಮುಕ್ಕಾಲು ಮತ್ತು ನಾಲ್ಕಕ್ಕೆ ಒಂದು ಎಂದು ಲೆಕ್ಕಾಚಾರ ಮಾಡಲಾಗುತ್ತದೆ. ಉತ್ತರ ಕರ್ನಾಟಕ ಆಡುಭಾಷೆಯಲ್ಲಿ ಮೌಖಿಕವಾಗಿ ಇಂದಿಗೂ ಈ ಪದಗಳನ್ನು ಬಳಸುತ್ತಾರೆ. ಗ್ರಾಮೀಣಾ ಭಾಗದ ಹಿರಿಯರು ಈ ಗೆರೆ ಸಂಕೇತದ ಅಂಕಿ-ಸಂಖ್ಯೆಗಳನ್ನು ಖಾಸಗಿ ವ್ಯವಹಾರದಲ್ಲಿ ಇಂದಿಗೂ ಉಪಯೋಗಿಸುತ್ತಿರುವುದು ಕಂಡುಬರುತ್ತದೆ. ಒಂದು ಗೆರೆಗೆ ಪಾವು ಎರಡಕ್ಕೆ ಅರ್ಧ, ಮೂರಕ್ಕೆ ಮೂರು ಪಾವು ಮತ್ತು ನಾಲ್ಕಕ್ಕೆ ಒಂದು ಇಲ್ಲವೆ ಒಂದು ಸೇರು ಎಂದು ಧವಸ ಧಾನ್ಯಗಳ ಅಳತೆಯ ಮಾನದಲ್ಲಿ ಉಪಯೋಗಿಸುತ್ತಾರೆ. ಆದರೆ ಬರವಣಿಗೆಯಲ್ಲಿ ಬಳಸುವುದು ತುಂಬಾ ಅಪರೂಪ. ಎಂಭರ ದಶಕದ ಪಠ್ಯದ ದೃಷ್ಟಾಂತದಲ್ಲಿ ಈ ಮಾದರಿಯ ಅಂಕಿಗಳನ್ನು ಬಳಸಿರುವುದು ವಿಶೇಷ ಇಲ್ಲವೆ ಅಪರೂಪವೆಂದು ಪರಿಭಾವಿಸಬಹುದಾಗಿದೆ. "ಹೆಚ್ಚು ಹೆಚ್ಚು ಶ್ರಮ ಹಾಗೂ ಬಂಡವಾಳಗಳ ಡೋಜುಗಳನ್ನು ಒದಗಿಸಿ ಉತ್ಪಾದನೆಯನ್ನು ಹೆಚ್ಚಿಸುವಾಗ ಅಣಿಗೊಳಿಸಿದ ಪ್ರತಿ ಹೆಚ್ಚಿನ ಡೋಜಿಗೆ ದೊರೆಯುವ ಪ್ರತಿಫಲವು ಇಳಿಮುಖವಾಗುತ್ತಿರುವುದನ್ನು ಸಿ ಆಕೃತಿಯಿಂದಲೂ ಮನಗಾಣಬಹುದು,....ಹೊಸ ಭೂಮಿಯನ್ನು ಬೇಸಾಯಕ್ಕೆ ಒಳಪಡಿಸಿದಾಗ ಹೊಸಮಣ್ಣು ಬಹಳ ಫಲವತ್ತಾಗಿ ಇರುವುದರಿಂದ ಶ್ರಮ ಹಾಗೂ ಬಂಡವಾಳಗಳ ಹೆಚ್ಚು ಹೆಚ್ಚು ಡೋಜುಗಳನ್ನು ವಿನಿಯೋಗ ಗೊಳಿಸುವುದರಿಂದ ಆರಂಭದ ಕೆಲವರ್ಷಗಳವರೆಗೆ ಪ್ರತಿಫಲವು ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ದೊರೆಯಬಹುದು. ಆದರೆ ನಂತರ ಬರುವ ವರ್ಷಗಳಲ್ಲಿ ಇಳಿಕೆಯ ಪ್ರವೃತ್ತಿಯು ತಲೆದೋರುವುದು." ಈ ವಿಚಾರವನ್ನು ಸುಂಕಾಪುರವರು 'ಅರ್ಥಶಾಸ್ತ್ರ ಪರಿಚಯ' (೯೭೭:೧೧೧-೧೧೨)ರಲ್ಲಿ ಹೇಳಿರುತ್ತಾರೆ. ಇಳಿಮುಖ ಪ್ರತಿಫಲ ನಿಯಮದ ವಿಶ್ಲೇಷಣೆಗೆ ಸಂಬಂಧಿಸಿದಂತೆ ಬರಹಗಾರ ಇಂಗ್ಲೀಷ್ ಪದವನ್ನು ಕನ್ನಡ ರೂಪದಲ್ಲಿ ಪ್ರಯೋಗಿಸಿದ್ದಾರೆ. ಅರ್ಥಶಾಸ್ತ್ರ ಅಧ್ಯಯನ ಮಾಡುವವರಿಗೆ ಈ ಪದದ ಅರ್ಥ ಗ್ರಹಿಕೆಗೆ ಹೆಚ್ಚು ಸುಲಭವಾಗುತ್ತದೆ. ಕನ್ನಡದ ಹೆಚ್ಚು ಇಂಗ್ಲೀಷಿನ 'ಮೊರ'(More) ಪದದ ಪ್ರತಿಯಾಗಿ ಬಳಸಿದ್ದಾಗಿದೆ. 'ಹೆಚ್ಚು ಡೋಜು' ಪದಗಳಲ್ಲಿ ಕನ್ನಡ ಮತ್ತು ಇಂಗ್ಲೀಷ್‌ಗಳ ಮಿಶ್ರಣವಿದೆ. ಈ ಪದವು ಮಿಶ್ರ ಸ್ವೀಕರಣದ ಪದವಾಗಿದೆ. ಆದರೂ ವಿಷಯ ಗ್ರಹಿಕೆಗೆ ಯಾವ ಭಂಗವು ಬರುವುದಿಲ್ಲ. ಎಲ್ಲ ಇಂಗ್ಲಿಷ್ ಪದಗಳನ್ನು ಕನ್ನಡೀಕರಣ ಮಾಡುವ ಬದಲಿ ಅರ್ಥ ಕೆಡದಂತೆ ಆ ವಿಷಯದ ಪರಿಕಲ್ಪನೆ ಸರಿಯಾಗಿ ಗ್ರಹಿಕೆಯಾಗುವಂತಿದ್ದರೆ ಸಾಕೆನಿಸುತ್ತದೆ. ಪಠ್ಯವು ಅಧ್ಯಯನ ಮಾಡುವವರ ಗ್ರಹಿಕೆಗೆ ನಿಲುಕುವಂತೆ ಇರಬೇಕು. ಅದು

ಕನ್ನಡದ ಜೊತೆಯಲ್ಲಿ ಅನ್ಯ ದೇಶಿಯ ಭಾಷೆಯ ಪದ ಪ್ರಯೋಗಗಳನ್ನು ಒಳಗೊಂಡಿದ್ದರೂ ಅದಕ್ಕೆ ಅಧ್ಯಯನ ಮಾಡುವವರು ಆಕ್ಷೇಪಣೆ ಎತ್ತುವ ಸಾಧ್ಯತೆಗಳು ತೀರಾ ಕಡಿಮೆ ಎಂದು ನನ್ನ ಭಾವನೆ. 'ಡೋಜ' ಪದವು 'ಪ್ರಮಾಣ'ವನ್ನು ಸಂಕೇತಿಸುತ್ತದೆ. ಇತ್ತೀಚೆಗೆ 'ಡೋಜ' ಪದವನ್ನು 'ಪ್ರಮಾಣ' ಮತ್ತು 'ಘಟಕ' ಗಳ ಅರ್ಥಬರುವಂತೆ ಬಳಸುತ್ತಿದ್ದಾರೆ. ಈ ಪರಿಭಾವನೆಯು ಕಾಲ ಘಟ್ಟಗಳಲ್ಲಿ ಪಲ್ಲಟವಾಗುತ್ತಿರುತ್ತವೆ.

ಅರ್ಥಶಾಸ್ತ್ರ ಪಠ್ಯಗಳು ಇಂಗ್ಲೀಷ್ ಭಾಷೆಯಲ್ಲಿ ಹೇರಳವಾಗಿ ಲಭ್ಯವಾಗುತ್ತವೆ. ಇತ್ತೀಚಿಗೆ ಕನ್ನಡದಲ್ಲಿಯೂ ತಕ್ಕಮಟ್ಟಿಗೆ ಪೂರೈಸಲ್ಪಡುತ್ತಿವೆ. ಕನ್ನಡ ಭಾಷೆಗೆ ಭಾಷಂತರಿಸುವವರ ಸಂಖ್ಯೆ ಅಧಿಕವಾಗುತ್ತಿದೆ. ಈ ಭಾಷಾಂತರಕಾರರು ವಿಭಿನ್ನ ಪ್ರಾದೇಶಿಕ ನೆಲೆಯಲ್ಲಿ ನೆಲೆಸಿದವರು. ಅವರು ಗರಿಷ್ಠ ಪ್ರಮಾಣದಲ್ಲಿ ಸಾವರ್ತಿಕರಣದ ಭಾಷೆಯನ್ನು ಬಳಸಿದ ಪಠ್ಯ ರಚಿಸಲು ಪ್ರಯತ್ತಿಸುತ್ತಾರೆಂದು ಭಾವಿಸಲಾಗುತ್ತದೆ. ಆದರೂ ಅವರ ವಿವೇಚನೆಯ ಆಚೆಗೆ ಕೆಲವೊಮ್ಮೆ ತಮ್ಮ ಪ್ರಾದೇಶಿಕತೆ ಕಾರ್ಯ ಮಾಡುತ್ತವೆಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಜಡತೆ ಮತ್ತು ಪ್ರವಹಿಸುವಿಕೆ (Stocks and Flows): ಜಡತೆ ಮತ್ತು ಪ್ರವಹಿಸುವಿಕೆ ಇವುಗಳ ವ್ಯತ್ಯಾಸ ಮತ್ತು ಸಂಬಂಧವನ್ನು ಸರಿಯಾಗಿ ಗುರುತಿಸಲಾಗದ ಕಾರಣ ಅರ್ಥಶಾಸ್ತ್ರದಲ್ಲಿ ಕೆಲವು ಗೊಂದಲಗಳಿವೆ. ಇವುಗಳ ನಡುವಿನ ವ್ಯತ್ಯಾಸ ಗುರುತಿಸುವುದು ಎಷ್ಟು ಕಷ್ಟ ಎನ್ನುವುದನ್ನು ಉದಾಹರಣೆಯೊಂದರ ಮೂಲಕ ಗಮನಿಸೋಣ. ಕಾಂತಮಂಗಲ ಜಲಾಶಯದಲ್ಲಿ ಐದು ಲಕ್ಷ ಕ್ಯೂಸೆಕ್ಸ್ ನೀರಿದೆ ಎಂದು ಭಾವಿಸೋಣ. ಈ ಭಾವನೆ ಜಡತೆಗೆ ಒಂದು ಉದಾಹರಣೆ. ಈ ಜಲಾಶಯದಿಂದ ದಿನವೊಂದಕ್ಕೆ ಒಂದು ಸಾವಿರ ಕ್ಯೂಸೆಕ್ಸ್ ಪ್ರಮಾಣದ ನೀರನ್ನು ಕುಡಿಯುವ ನೀರಿಗಾಗಿ ಹರಿದು ಹೋಗುತ್ತಿದೆ ಎಂದು ಭಾವಿಸೋಣ. ಈ ಭಾವನೆ ಪ್ರವಹಿಸುವಿಕೆಗೂ ಉದಾಹರಣೆ. ಅಂದರೆ ನೀರು ಜಡತೆಗೂ ಉದಾಹರಣೆಯಾಗುತ್ತದೆ. ಪ್ರವಹಿಸುವಿಕೆಗೂ ಉದಾಹರಣೆಯಾಗುತ್ತದೆ' ಎಂಬುದನ್ನು ಪ್ರಭಾಕರ ಶಿಶಿಲರವರು ದಾಖಲಿಸಿರುತ್ತಾರೆ. ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿದವರು. ಇವರು ಆ ಪ್ರದೇಶದ ಕೆಲವು ಘಟನೆಗಳನ್ನು ಇಲ್ಲವೆ ಸ್ಥಳಗಳನ್ನು ತಮ್ಮ ಬರಹದಲ್ಲಿ ಕಾಣಿಸಲು ಶಕ್ಯವಿದೆ. ಅದು ಉದ್ದೇಶಪೂರ್ವಕವಾಗಿರಬಹುದು ಅಥವಾ ಉದ್ದೇಶ ರಹಿತವಾಗಿಯಾದರೂ ಅವು ಕಾಣಿಸಿಕೊಳ್ಳುವ ಸಾಧ್ಯತೆಗಳಿರುತ್ತವೆ. ಅಂತಹ ಒಂದು ಅಂಶವೇ 'ಕಾಂತಮಂಗಲ' ಜಲಾಶಯಲವಾಗಿದೆ. ಈ ಜಲಾಶಯವು ಆ ಭಾಗವನ್ನು ಪ್ರತಿನಿಧಿಸುತ್ತದೆ. ಇದು ಇಡೀ ಕರ್ನಾಟಕವನ್ನು ಸಾಂಕೇತಿಕವಾಗಿಯಾದರೂ ಪ್ರಾತಿನಿಧಿತ್ವವನ್ನು ಹೊಂದಿರುವುದಿಲ್ಲ ಎಂಬುದು ಬಹು ಮುಖ್ಯವಾದ ಪರಿಭಾವನೆಯಾಗಿದೆ. "ಒಂದು ವಸ್ತು ನಮಗೆ ಉಪಯೋಗಕ್ಕೆ ಬಾರದಿರಬಹುದು ಆದರೆ ಅದು ಬಯಕೆಗಳನ್ನು ತೃಪ್ತಿಪಡಿಸುವಂತಿದ್ದರೆ ಅದು ಉಪಯೋಗಕ್ಕೆ ಬಾರದಿದ್ದರೂ ಅದು ತುಷ್ಟಗುಣ ಪಡೆದಿರುತ್ತದೆ. ಉದಾಹರಣೆ : ಸೀಮೆಸುಣ್ಣ ಒಬ್ಬ ಶಿಕ್ಷಕನಿಗೆ ತುಷ್ಟಗುಣ ಕೊಡುತ್ತದೆ ಉಪಯೋಗಕ್ಕೆ ಬರುತ್ತದೆ. ಆದರೆ ಒಬ್ಬ ಕೂಲಿಗೆ ಉಪಯೋಗಕ್ಕೆ ಬರುವುದಿಲ್ಲ." ಎಂಬುದಾಗಿ ಎಂ. ಸಿದ್ಧಾನಂದರವರು ಅರ್ಥಶಾಸ್ತ್ರ ೨೦೦೪:೭ರಲ್ಲಿ ಭಾಷಾಂತರಿಸು

ತ್ತಾರೆ. ಉಪಯೋಗಿಸಿರುವ ಪದಗಳಾದ 'ಸೀಮೆಸುಣ್ಣ ಮತ್ತು ಕೂಲಿ'ಗಳನ್ನು ಗಮನಿಸಿದಾಗ ಬಹುತೇಕ ಭಾಷಾಂತರಕಾರರು ಪಠ್ಯದಲ್ಲಿ ಬಳಸಿರದ ಪದಗಳನ್ನು ಇವರು ಬಳಸಿರುವುದನ್ನು ಕಾಣುತ್ತೇವೆ. ಇಂಗ್ಲಿಷನ 'ಚ್ಯಾಕಪೀಸ್' ಕನ್ನಡದ 'ಸೀಮೆಸುಣ್ಣ'. ಆದರೆ 'ಕೂಲಿ' ಪದವು ಒಂದು ಪ್ರದೇಶದಲ್ಲಿ ಗ್ರಾಮ್ಯ ಭಾಷೆ ಅಥವಾ ಆಡು ಭಾಷೆಯಲ್ಲಿ ಬಳಸುವ ಪದವಾಗಿದೆ. ಈ 'ಕೂಲಿ' ಪದವು ಬೆಂಗಳೂರು ಮತ್ತು ಮೈಸೂರು ಪ್ರದೇಶದಲ್ಲಿ ಬಳಸುತ್ತಾರೆ. ಗ್ರಂಥಸ್ಥ ಭಾಷೆಯ 'ಕೂಲಿ'ಯು ವೇತನ, ಪಗಾರ, ಸಂಬಳ ಈ ಮೊದಲಾದ ಅರ್ಥದಲ್ಲಿ ಉಪಯೋಗಿಸಲಾಗುತ್ತದೆ. ಆದರೆ ಈ ಸಂದರ್ಭದಲ್ಲಿ ಬಳಸಿದ 'ಕೂಲಿ' ಒಬ್ಬ 'ಕಾರ್ಮಿಕ, ಕೆಲಸಗಾರ, ದುಡಿಯುವ ವ್ಯಕ್ತಿ' ಎಂಬ ಅರ್ಥದಲ್ಲಿ ಬಳಸಿರುವುದನ್ನು ಗುರುತಿಸಬಹುದಾಗಿದೆ. ಅದೂ ಬೋಧಕ ಇಲ್ಲವೆ ಶಿಕ್ಷಕ ಸಮುದಾಯವನ್ನು ಹೊರತುಪಡಿಸಿದ ಕೆಲಸಗಾರ ಎಂಬುದನ್ನು ಸೂಚಿಸುತ್ತದೆ. ಕೂಲಿಯು ಶ್ರಮಿಕನ ಪ್ರತಿಮೆಯಲ್ಲಿ ಬಳಸಿದ್ದಾರೆಂದು ಭಾವಿಸಬಹುದು. ಈ ಪರಿಕಲ್ಪನೆಯು ಇತರ ಯಾವ ಭಾಷಾಂತರ ಕಾರರು ಅರ್ಥಶಾಸ್ತ್ರ ಪಠ್ಯದಲ್ಲಿ ಬಳಸಿದಂತೆ ಕಂಡುಬರುವದಿಲ್ಲ. ಲೇಖಕರು ಪ್ರಾದೇಶಿಕ ಒತ್ತಾಶಯದ ಹಿನ್ನೆಯಲ್ಲಿಯಲ್ಲಿ ಕೆಲವೊಮ್ಮೆ ಆಕಸ್ಮಿಕವಾಗಿ ಪ್ರಕಟಗೊಂಡಿರಬೇಕೆಂದು ತಿಳಿಯಬಹುದಾಗಿದೆ. ಕೆಲವೊಮ್ಮೆ ಉದ್ದೇಶ ಪೂರ್ವಕವಾಗಿಯೇ ಆ ಪ್ರದೇಶದ ಪದ ಬಳಕೆ ಮಾಡುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದರೆ ಈ ಸಂದರ್ಭದಲ್ಲಿ ಹಾಗಾದಂತೆ ತೋರುತ್ತಿಲ್ಲ ಎಂಬುದನ್ನೂ ಗಮನಿಸಬೇಕಾದ ಅಂಶ. 'ಛೇದಕ ಬೇಡಿಕೆಯು ಸರಕೊಂದರ ಬೇಡಿಕೆಗೂ ಅದರ ಸಂಬಂಧಿ ಸರಕಿನ ಬೆಲೆಗೂ ಇರುವ ಅವಲಂಬಿ ಕಾರ್ಯಾಕಾರಣ ಸಂಬಂಧವನ್ನು ತೋರಿಸುತ್ತದೆ....... ಸಂಬಂಧಿ ಸರಕುಗಳನ್ನು ೧. ಪೂರಕ ಸರಕುಗಳು(Complementary Goods) ಮತ್ತು ೨. ಪರ್ಯಾಯ ಅಥವಾ ಬದಲಿ ಸರಕುಗಳು(Substicutes) ಎಂದು ಎರಡು ವಿಧ. ಚಾಹುಡಿ ಮತ್ತು ಸಕ್ಕರೆ, ಬ್ರೆಡ್ಡು ಮತ್ತು ಜಾಮು, ಸಿಮೆಂಟು ಮತ್ತು ಇಟ್ಟಿಗೆ ಇತ್ಯಾದಿಗಳು ಪೂರಕ ಸರಕುಗಳಾಗಿವೆ. ಪೂರಕ ಸರಕುಗಳು ಛೇದಕ ಬೇಡಿಕೆಯು ಋಣಾತ್ಮಕವಾಗಿರುತ್ತದೆ. ಉದಾಹರಣೆಯೊಂದನ್ನು ತೆಗೆದುಕೊಳ್ಳೋಣ. ಚಾಹುಡಿಯ ಬೆಲೆ ಏರಿದಾಗ ಚಾಹುಡಿಯ ಬೇಡಿಕೆ ಕಡಿಮೆಯಾಗುವುದು ಮಾತ್ರವಲ್ಲದೇ, ಅದರ ಪೂರಕ ಸರಕಾದ ಸಕ್ಕರೆಯ ಬೇಡಿಕೆ ಕೂಡ ಕಡಿಮೆಯಾಗುತ್ತದೆ. ಚಾಹುಡಿಯ ಬೆಲೆ ಕಡಿಮೆಯಾದಾಗ ಚಾಪುಡಿಯ ಬೇಡಿಕೆ ಹೆಚ್ಚಾಗುವುದರೊಂದಿಗೆ ಅದರ ಪೂರಕ ಸರಕಾದ ಸಕ್ಕರೆಯ ಬೇಡಿಕೆ ಕೂಡ ಹೆಚ್ಚಾಗುತ್ತದೆ. ಈ ವಿಚಾರವನ್ನು ಪ್ರಭಾಕರ ಶಿಶಿಲರವರು 'ಸೂಕ್ಷ್ಮ ಅರ್ಥಶಾಸ್ತ್ರ' ೨೦೦೮:೧೫೪ರಲ್ಲಿ ಭಾಷಾಂತರ ಮಾಡಿ ದಾಖಲಿಸಿದ್ದಾರೆ. ಛೇದಕ ಬೇಡಿಕೆಯ ವಿಶ್ಲೇಷಣೆಯಲ್ಲಿ ಪ್ರಭಾಕರ ಶಿಶಿಲರು ಬಳಸಿರುವ ವಿಶಿಷ್ಟ ಪದವೆಂದರೆ, 'ಚಾಹುಡಿ'ಯ ಈ ಮಾದರಿಯ ಪದವನ್ನು ಉಳಿದ ಯಾವ ಅರ್ಥಶಾಸ್ತ್ರದ ಪಠ್ಯಗಳಲ್ಲಿ ಗಮನಿಸಲು ಸಾಧ್ಯವಿಲ್ಲವೆಂದು ಹೇಳಬಹುದು. ಇವರು 'ಚಹಪುಡಿ' ಎಂಬ ಪರಿಭಾವನೆಯನ್ನು 'ಚಾಹುಡಿ'ಯ ಮೂಲಕ ಅದರ ಪರಿಕಲ್ಪನೆ ಪ್ರಸ್ತುತ ಪಡಿಸುವ ಒಂದು ವಿಶಿಷ್ಟತೆ ಎನ್ನಬಹುದು. 'ಚಾ' ಎಂದರೆ 'ಚಹ' ಎಂದೂ, 'ಹುಡಿ'ಯನ್ನು

'ಮಡಿ' ಎಂಬ ಪರಿಕಲ್ಪನೆಯಲ್ಲಿ ಹೇಳಿರುತ್ತಾರೆ. ಆದರೆ ಅರ್ಥಶಾಸ್ತ್ರ ಅಧ್ಯಯನ ಮಾಡುವವರಿಗೆ ಸರಳವಾಗಿ ಅರ್ಥಗ್ರಹಿಕೆ ಅಷ್ಟು ಸುಲಭವಾಗದೆಂಬ ವಾದಗಳೂ ಅಲ್ಲಲ್ಲಿ ಕೇಳಿ ಬರುತ್ತವೆ. ಪ್ರಭಾಕರ ಶಿಶಿಲರು ಚಹ ಮತ್ತು ಕಾಫಿ ಬೆಳೆಯುವ ಪ್ರದೇಶದಲ್ಲಿ ನೆಲೆಸಿರುತ್ತಾರೆ. ಅಂದರೆ ಮಂಗಳೂರು ಪ್ರದೇಶದಲ್ಲಿ ವಾಸವಾಗಿದ್ದಾರೆ. ಆ ಪ್ರದೇಶದಲ್ಲಿ ಜನಸಾಮಾನ್ಯರು 'ಚಾಹುಡಿ' ಎಂಬುದಾಗಿ 'ಚಹಮಡಿ'ಗೆ ಬದಲಾಗಿ ಬಳಸುತ್ತಿರುವಂತೆ ತೋರುತ್ತದೆ. ಹೀಗಾಗಿ 'ಚಾಹುಡಿ'ಯು ಪ್ರಾದೇಶಿಕ ಪದವೂ ಆಗಿರಬೇಕೆಂಬ ತೀರ್ಮಾನಕ್ಕೆ ಸದ್ಯಕ್ಕೆ ಬರಬಹುದಾಗಿದೆ. ಇದು ಒಂದು ವಿಶೇಷ ಪದ ಬಳಕೆ ಎಂಬುದಾಗಿ ಗುರುತಿಸಹುಬುದಾಗಿದೆ.

ಅದೇ ಬರಹಗಾರರಾದ ಪ್ರಭಾಕರ ಶಿಶಿಲರು ಅದೇ ಪಠ್ಯದಲ್ಲಿ ಋಣಾತ್ಮಕ ಛೇದಕ ಬೇಡಿಕೆಯ ಸ್ಥಿತಿಸ್ಥಾಪಕತೆ ಕುರಿತು ದೃಷ್ಟಾಂತದ ಮೂಲಕ ವಿಶ್ಲೇಷಣೆ ಮಾಡಿರುತ್ತಾರೆ. ಅದರಲ್ಲಿ ...... 'ಸಕ್ಕರೆ ಬೆಲೆ ಇಳಿದಾಗ ಸಕ್ಕರೆಯೊಂದಿಗೆ ಚಹಾಪುಡಿಯ ಬೇಡಿಕೆ ಹೆಚ್ಚಾಗುತ್ತದೆ. (ಪು.೨೨೭) ಹಾಗಾಗಿ ಸ್ಥಿತಿಸ್ಥಾಪಕತೆ ಋಣಾತ್ಮಕವಾಗಿರುತ್ತದೆ.' ಎಂಬುದನ್ನು ಪ್ರಭಾಕರ ಶಿಶಿಲರವರು ಭಾಷಾಂತರ ಮಾಡಿರುತ್ತಾರೆ. ಈ ಸಂದರ್ಭದಲ್ಲಿ ರಾಜ್ಯವ್ಯಾಪಿಯಾಗಿ ಬಳಸುವ ಪದ 'ಚಹಮಡಿ'ಯನ್ನು ಬಳಸಿರುವುದು ಸೂಕ್ತವಾಗಿದೆ. ಎಲ್ಲಾ ಪ್ರದೇಶದ ಜನರು ಸುಲಭವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಅರ್ಥ ಗ್ರಹಿಕೆಯೊಂದಿಗೆ ವಿಷಯ ಗ್ರಹಿಕೆಯ ಮಹತ್ವ ಪಡೆಯುತ್ತದೆ. ಕಲಿಕಾರ್ಥಿಗಳಿಗೆ ಸಾಮಾನ್ಯ ಪದಗಳ ಬಳಕೆಯ ಪಠ್ಯಗಳಾಗಿದ್ದರೆ ಅವುಗಳನ್ನು ಸಾಮಾನ್ಯವಾಗಿ ಬಳಸಲು ಶಕ್ಯವಾಗುತ್ತದೆ. ಆ ವಿಚಾರವಾಗಿ ಪ್ರಭಾಕರ ಅವರು ಮಾಡಿರುವುದು ಸೂಕ್ತವೆನಿಸುತ್ತದೆ. ಅವರೇ ಧನಾತ್ಮಕ ಛೇದಕ ಬೇಡಿಕೆಯ ಸ್ಥಿತಿಸ್ಥಾಪಕತೆ ಕುರಿತು ವಿವರಿಸುತ್ತಾ, ಹೀಗೆ ಹೇಳುತ್ತಾರೆ, 'ಬದಲಿ ಸರಕುಗಳ ಅಥವಾ ಸೇವೆಗಳ ಛೇದಕ ಬೇಡಿಕೆಯ ಸ್ಥಿತಸ್ಥಾಪಕತೆಯು ಧನಾತ್ಮಕವಾಗಿರುತ್ತದೆ. ಉದಾಹರಣೆ ಕೊಬ್ಬರಿ ಎಣ್ಣೆ ಮತ್ತು ಕಡಲೆಕಾಯಿ ಎಣ್ಣೆ, ಕಾಫಿ ಮತ್ತು ಚಹ, ಅಕ್ಕಿ, ರಾಗಿ ಇತ್ಯಾದಿ ಕೊಬ್ಬರಿ ಎಣ್ಣೆಯ ಬೆಲೆ ಇಳಿದಾಗ ಕಡಲೇಕಾಯಿ ಎಣ್ಣೆ ಬೇಡಿಕೆ ಕಡಿಮೆಯಾಗುವುದು. ಧನಾತ್ಮಕ ಛೇದಕ ಬೇಡಿಕೆಗೊಂದು ಉದಾಹರಣೆಯಾಗಿದೆ. ಆಗ ಬೇಡಿಕೆ ರೇಖೆಯು ಮೇಲ್ಮುಖ ಪ್ರಮಾಣ ಮಾಡುತ್ತದೆ. ಎಂಬುದನ್ನು ಪ್ರಭಾಕರ ಶಿಶಿಲರು ಪ್ರಾದೇಶಿಕ ಅಂಶವನ್ನು ತಮ್ಮ ದೃಷ್ಟಾಂತದಲ್ಲಿ ಬಳಸಿ ವಿಷಯ ವಿಶ್ಲೇಷಣೆ ಮಾಡಿರುವುದು ಗಮನಾರ್ಹವಾಗಿದೆ. 'ಕಡಲೇಕಾಯಿ' ಉತ್ತರ ಕರ್ನಾಟಕ ಪ್ರದೇಶದ 'ಶೇಂಗಾ' ಎಂಬ ಪದಕ್ಕೆ ಸಮನಾಂತರವಾಗಿ ಬಳಸಿದ್ದಾರೆ. ಇದು ಪ್ರಾದೇಶಿಕ ಭಿನ್ನತೆ ಹೊಂದಿದ್ದರೂ ಸಹ ಗ್ರಹಿಕೆಗೆ ನಿಲುಕುತ್ತದೆ. 'ಕೊಬ್ಬರಿ' ಸಾಮಾನ್ಯ ಪದವಾಗಿದೆ. ಕರ್ನಾಟಕ ರಾಜ್ಯದ ನಾಲ್ಕು ಕಂದಾಯ ಪ್ರದೇಶಗಳಲ್ಲಿ ಭಾಷಾ ಭಿನ್ನತೆಯನ್ನು ಸೂಕ್ಷ್ಮವಾಗಿ ಗುರುತಿಸುವ ಅವಶ್ಯಕತೆ ಕಂಡುಬರುತ್ತದೆ. ಅದರ ಜೋತೆಗೆ ಆಹಾರ ಪದ್ಧತಿಯನ್ನು ನಾವು ಅವಲೋಕಿಸಬೇಕಾಗಿದೆ. 'ಕಡಲೇಕಾಯಿ' ಎಣ್ಣೆಯನ್ನು ರಾಜ್ಯದಾದ್ಯಂತ ಅಡುಗೆಗೆ ಬಳಸಲಾಗುತ್ತಿದೆ. ಆದರೆ 'ಕೊಬ್ಬರಿ' ಎಣ್ಣೆಯನ್ನು ನಮ್ಮ ರಾಜ್ಯದ ಕೆಲವೇ ಪ್ರದೇಶದವರು ಅಡುಗೆಗೆ ಬಳಸುವುದು ಕಂಡುಬರುತ್ತದೆ. ಈ 'ಕೊಬ್ಬರಿ' ಎಣ್ಣೆಯನ್ನು

ರಾಜ್ಯಾದ್ಯಂತ ಏಕರೀತಿಯಲ್ಲಿ ಬಳಸುವುದು 'ತಲೆ'ಗೆ ಹಚ್ಚಿಕೊಳ್ಳಲು. ಹೀಗಾಗಿ ಈ ಎರಡೂ ಸರಕುಗಳು ಪರಸ್ಪರ ಬದಲಿ ಸರಕುಗಳಾಗಲು ಸಾಧ್ಯವಿಲ್ಲ. ಕಡಲೆಕಾಯಿ ಎಣ್ಣೆಯನ್ನು ಯಾವ ಕಾರಣಕ್ಕೂ ತಲೆಗೆ ಹಚ್ಚಿಕೊಳ್ಳಲಾರರು. ಅನಾನುಕೂಲಕ್ಕೆ ಇಲ್ಲವೇ ಪರೀಕ್ಷಾರ್ಥವಾಗಿ ಉತ್ತರ ಕರ್ನಾಟಕ ಪ್ರದೇಶದಲ್ಲಿ ಕೊಬ್ಬರಿ ಎಣ್ಣೆ ಅಡುಗೆಗಾಗಿ ಅಂದರೆ ತಿನ್ನಲು ಬಳಸಬಹುದು. ಏನೆಯಾದರೂ ಪ್ರಾದೇಶಿಕತೆ ಕನ್ನಡ ಭಾಷಾಂತರಕಾರ ತಮ್ಮತನವನ್ನು ಆಕಸ್ಮಿಕವಾಗಿಯಾದರೂ ಬಿಟ್ಟುಕೊಡುವ ಸಾಧ್ಯತೆಗಳು ಕಂಡುಬರುತ್ತವೆ.

ಪೈಪೋಟಿ ಮಾರುಕಟ್ಟೆಯಲ್ಲಿ ಸರಕುಗಳ ಪೂರೈಕೆಯು ಬೇಡಿಕೆಗೆ ಸಮಾನವಾಗಿರುವವರೆಗೆ ಬೆಲೆಯಲ್ಲಿ ಹೊಂದಾಣಿಕೆ ಇರುತ್ತದೆ. ಹರಾಜುದಾರರು ಇಲ್ಲಿ ಸಮತೋಲನ ಸ್ಥಿತಿಯನ್ನು ನಿರ್ಧರಿಸುವಲ್ಲಿ ಸಹಕರಿಸುವರು ಹರಾಜುದಾರರು ಸಂಬಂಧಿತ ಬೆಲೆಯನ್ನು ನಿಗದಿಪಡಿಸುವುದರ ಮೂಲಕ ಆ ಬೆಲೆಗೆ ಎಷ್ಟು ಸರಕುಗಳು ಮಾರಾಟಕ್ಕೆ ಲಭ್ಯವಾಗುತ್ತವೆ ಹಾಗೂ ಸರಕುಗಳಿಗೆ ಬಂದ ಬೇಡಿಕೆಯ ಪ್ರಮಾಣವನ್ನು ನಿಗದಿಪಡಿಸುವನು. ಬೇಡಿಕೆಯು ಪೂರೈಕೆಗೆ ಸಮನಾವಾಗಿಲ್ಲದಿದ್ದಲ್ಲಿ ಹರಾಜುದಾರನು ಇನ್ನೊಂದು ಬೆಲೆಯನ್ನು ನಿಗದಿಪಡಿಸುವನು. ಬೇಡಿಕೆಯು ಪೂರೈಕೆಗೆ ಸಮವಾದಾಗ ವ್ಯವಹಾರ ನಡೆದು ಹರಾಜು ನಿಲ್ಲುವುದು. ಈ ವಿಷಯವನ್ನು ಭಾಷಾಂತರಿಸಿ ದಾಖಲಿಸಿದವರು ಒಡೆಯರ್. ಅವರು ಯೋಗಕ್ಷೇಮ ಅರ್ಥಶಾಸ್ತ್ರದ ಮೂಲಭೂತ ತತ್ವಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸ್ಪರ್ಧಾತ್ಮಕ ಸಮತೋಲನ ಸ್ಥಿತಿಯನ್ನು ಕುರಿತು ಒಡೆಯರ್ ಡಿ. ಹೆಗ್ಗಡೆಯವರು ಒಂದು ದೃಷ್ಟಾಂತ ಬಳಸಿದ್ದಾರೆ (ಪು.೩೨೩). ಅದರಲ್ಲಿ 'ಹರಾಜು' ಎಂಬ ಪದ ಬಳಕೆ ಮಾಡಿರುತ್ತಾರೆ. ಈ ವಿಧದ ಪದ ಬಳಕೆಯು ಇತರ ಬರಹಗಾರರ ಪಠ್ಯಗಳಲ್ಲಿ ಕಂಡುಬಂದಂತೆ ತೋರುತ್ತಿಲ್ಲ. ಇವರು ಈ ಪದ ಬಳಕೆಯ ಮೂಲಕ ವಿಷಯ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಿರುತ್ತಾರೆ. ಸರಕುಗಳ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮನ್ವಯ ಮಾಡುವ ವ್ಯಕ್ತಿಯೇ ಹರಾಜು ಮಾಡುವವ. ಅವನು ಬೆಲೆಯನ್ನು ನಿಗದಿಪಡಿಸುವವನೂ ಆಗಿರುತ್ತಾನೆಂಬುದನ್ನು ವಿಶೇಷವಾಗಿ ವಿಶ್ಲೇಷಿಸುವ ದಿಸೆಯಲ್ಲಿ ಸಾಗಿದಂತಿದೆ. ಉತ್ಪಾದಕ ಮತ್ತು ಗ್ರಾಹಕರ ನಡುವೆ ಹರಾಜು ಮಾಡುವವ ಒಂದರ್ಥದಲ್ಲಿ ಮಧ್ಯವರ್ತಿಯಾಗಿರುವ ಪರಿಕಲ್ಪನೆಯನ್ನು ಒಡೆಯರ ನಿರೂಪಿಸಿದ್ದಾರೆನ್ನಬಹುದಾಗಿದೆ. ಸರಕಿನ ಬೆಲೆ ಪುನರ್ ನಿರ್ಮಾಪಕನು ಆಗಬಹುದೆಂದು ತಿಳಿಯಬಹುದಾಗಿದೆ.

### ೪.೨. ಆಡು ಭಾಷೆಯ ಪದಗಳು

ಸಾಮಾನ್ಯವಾಗಿ ಪಠ್ಯಗಳಲ್ಲಿನ ಭಾಷೆಯು ಗ್ರಂಥಸ್ತ ಭಾಷೆಯಾಗಿರುತ್ತದೆ. ಸಾಹಿತ್ಯ ಭಾಷೆಯೇ ಪ್ರಾಧಾನ್ಯತೆ ಪಡೆದಿರುವುದು ಸರ್ವೇಸಾಮಾನ್ಯ. ಆದರೆ ಕಾಲ ಪಲ್ಲಟಗೊಂಡಂತೆ ಭಾಷೆಯನ್ನು ಮುರಿದು ಕಟ್ಟುವ ಪ್ರಕ್ರಿಯೆ ಆರಂಭವಾಯಿತು. ವಿಷಯಕ್ಕೆ ಅನುಗುಣವಾದ ತಾಂತ್ರಿಕ ಪದಗಳನ್ನು ಬಳಸುವುದು ಅವಶ್ಯವೆನಿಸಿತು. ಕನ್ನಡ ಅರ್ಥಶಾಸ್ತ್ರವು ಅರಂಭದ ಹೆಚ್ಚು ಭಾಷೆಯಲ್ಲಿ ಆಡುಭಾಷೆಯನ್ನು

ಒಳಗೊಂಡಿತ್ತು. 'ಒಮ್ಮೆ ತಯಾರಾದ ಮಾಲು, ಸರಬರಾಜಿಗೆ ಅನುವಾಗುತ್ತದೆ. ಎಂಬುದಾಗಿ ವೃಷಭೇಂದ್ರಸ್ವಾಮಿ ಇವರು ಅರ್ಥಶಾಸ್ತ್ರ ತತ್ವ ನಿರೂಪಣೆ ೧೯೭೧:೬೩ರಲ್ಲಿ ಹೇಳಿರುತ್ತಾರೆ. 'ಸಿದ್ಧವಸ್ತು' ಎಂಬ ಪದದ ಬದಲು 'ತಯಾರಾದ ಮಾಲು' ಎಂದು ಬಳಸಿದ್ದಾರೆ. 'ಮಾಲು' ಎಂಬುದು ಅರ್ಥಶಾಸ್ತ್ರದಲ್ಲಿ ವಸ್ತುವನ್ನು ಸೂಚಿಸುತ್ತದೆ. ಪೂರೈಸಲು ಎನ್ನುವ ಪದಕ್ಕೆ 'ಸರಬರಾಜು' ಎಂಬುದಾಗಿ ಉಪಯೋಗಿಸಲಾಗಿದೆ. 'ಅನುವು' ಎಂಬುದು ಅಥವಾ 'ಅನುಕೂಲ' ಆಸ್ಪದ ಎಂಬ ಅರ್ಥ ಬರುವಂತೆ ಬಳಸಿದ್ದಾಗಿ ಗ್ರಹಿಸಬಹುದಾಗಿದೆ._ಅರ್ಥಶಾಸ್ತ್ರವು ಒಂದು ಸಮಾಜವಿಜ್ಞಾನ ಆದರೂ ಸಹಿತ ಉಳಿ ಸಮಾಜ ವಿಜ್ಞಾನಗಳಿಗಿಂತ ಭಿನ್ನ ಎಂದು ಹೇಳಲಾಗುತ್ತದೆ. ಕಾರಣ ಅರ್ಥಶಾಸ್ತ್ರದ ವಿಷಯ ವಸ್ತುವನ್ನು ಗ್ರಂಥಸ್ತ ರೂಪದಲ್ಲಿ ತಿಳಿಯಬೇಕು. ಏಕೆಂದರೆ ಇದು ತನ್ನದೇ ಆದ ಪರಿಭಾಷೆಯ ತಾಂತ್ರಿಕ ಪದಗಳನ್ನು ಒಳಗೊಂಡಿದೆ. ಆ ಪದ ಸಮುಚ್ಛಾಯಗಳು ಪರಿಣಾಮಕಾರಿಯಾದ ಅರ್ಥವನ್ನು ನೀಡುತ್ತವೆ. ಸಾಹಿತ್ಯ ಪದಗಳಿಗಿಂತ ತಾಂತ್ರಿಕ ಪದಗಳೇ ಮುಖ್ಯ ಎಂದು ತಿಳಿಯಲಾಗುತ್ತದೆ. ಆದರೆ ಪದವಿ ಪೂರ್ವ ತರಗತಿಗಳ ಮತ್ತು ಪದವಿ ತರಗತಿಗಳಲ್ಲಿ ಅನೇಕ ಬರಹಗಾರರು ಆಡು ಭಾಷೆಯಲ್ಲಿ ವಿಷಯವನ್ನು ನಿರೂಪಿಸಿದ್ದಾರೆ. ಅವುಗಳ ಸಮೀಕ್ಷೆ ಮಾಡಲಾಗಿದೆ. ಎಪ್ಪತ್ತರ ದಶಕದಲ್ಲಿ 'ಬಯಕೆ' ಬೇಡಿಯಾಗುವುದಿಲ್ಲ. ಎಂಬುದನ್ನು ತಿಳಿಸಲು ಬಳಸಿದ ಆಡು ಭಾಷೆಯಲ್ಲಿ ದೃಷ್ಟಾಂತ ಹೀಗಿದೆ, " ಬಯಕೆಗಳು ಕುದುರೆಗಳಾದರೆ ಭಿಕ್ಷುಕನೂ ಸವಾರಿ ಮಾಡಬಲ್ಲ" ಎಂಬ ಗಾದೆಯ ಮಾತನ್ನು ಇಲ್ಲಿ ಗಮನಿಸಬಹುದು. ಚಿಕ್ಕಮಕ್ಕಳಿಗೂ ಭಿಕ್ಷುಕರಿಗೂ ಅನೇಕ ವಸ್ತುಗಳ ಬಗೆಗೆ ಬಯಕೆ ಇರುತ್ತದೆ. ಇವರ ಆಲೋಚನೆಯ ಪ್ರಕಾರ ಮಕ್ಕಳು ಮತ್ತು ಭಿಕ್ಷುಕರು ಒಂದೆ. ಇವರಿಬ್ಬರಲ್ಲಿ ಆಸೆ ಇಲ್ಲವೆ ಬಯಕೆಗಳು ಮೂಡುವುದು ಸಹಜ. ಅವರು ಅಂದು ಅಂದುಕೊಂಡಂತೆ ಸಾಧಿಸಲು ಸಾಧ್ಯವಿದ್ದರೆ ಅವರು ತಕ್ಷಣಕ್ಕೆ ಬಯಕೆಗಳನ್ನು ಇಡೇರಿಸಿಕೊಳ್ಳುತ್ತಿದ್ದರೆಂಬುದನ್ನು ವ್ಯಕ್ತ ಪಡಿಸಿದ್ದಾರೆ. ಎಂಭತ್ತರ ದಶಕದಲ್ಲಿ ಇದೆ ವಿಚಾರವನ್ನು ಭಿನ್ನ ರೀತಿಯಲ್ಲಿದೆ. ವ್ಯಕ್ತಿಯೊಬ್ಬ ಅಂಗಡಿಯೊಂದಕ್ಕೆ ಹೋಗಿ ಇಂತಹ ಸಾಮಾನ ಇದೆಯೇ ಎಂದು ಕೇಳುವುದೇ ಬೇಡಿಕೆಯ ಅರ್ಥ ಎಂದು ನಾವೆಲ್ಲರೂ ಸಾಧಾರಣವಾಗಿ ತಿಳಿದುಕೊಂಡಿರುವುದುಂಟು. ಎಷ್ಟು ತಪ್ಪು ನಮ್ಮ ಈ ತಿಳುವಕೆ! ಭೀಕಾರಿಯೊಬ್ಬ ಪೈಸಾವೊಂದನ್ನು ಹಿಡಿದುಕೊಂಡು ೧ ಕೆ.ಜಿ. ಬಂಗಾರ ಕೊಡಿ ಎಂದ ಮಾತ್ರಕ್ಕೆ ಬೇಡಿಕೆಯಾಯಿತೇ? ತಲೆ ಕೆಟ್ಟ ಮಾರಾಟಗಾರ ಹಾಗೆ ೧ ಕೆ.ಜಿ. ಬಂಗಾರವನ್ನು ಕೊಟ್ಟರೆ ಅದು ಪೂರೈಕೆಯಾಯಿತೇ? ಬಯಕೆಯೇ ಬೇಡಿಕೆಯಲ್ಲ ಬೇಡಿಕೆಯ ಹಿಂದಿರುವ ಎಷ್ಟೋ ಶಕ್ತಿಗಳಲ್ಲಿ ಬಯಕೆಯೂ ಒಂದು ಮಾನಸಿಕ ಶಕ್ತಿ. ಬಯಸಿದ್ದಲ್ಲಿ ಸಿಗುವುದಾದರೆ ಭಿಕಾರಿಯೂ ಸುವರ್ಣ ಗೃಹದಲ್ಲಿರುತ್ತಿದ್ದನೇನೋ!. ಎಂಬ ಅನುವಾದವನ್ನು ಎಂ. ಎಸ್. ಸುಂಕಾಪುರವರು ೧೯೭೭:೮೭ರಲ್ಲಿ ಹೇಳಿರುತ್ತಾರೆ. ಈ ಪದಗಳಲ್ಲಿ ಅಡಗಿರುವ ವಿಚಾರವೂ ಸಹ ಬೇಡಿಕೆಯ ಪರಿಭಾಷೆ ಬೇರೆಯೆದೇ ಆಗಿದೆ ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಕೊಂಡುಕೊಳ್ಳುವ ಸಾಮರ್ಥ್ಯ ಇಲ್ಲದಿರುವ ವ್ಯಕ್ತಿಯ ಬಗ್ಗೆ ನೀಡಿರುವ ಉದಾಹರಣೆಯು ಸಾಮಾನ್ಯ ವಿದ್ಯಾರ್ಥಿಗೂ ತಿಳಿಯುತ್ತದೆ.

ಬೇಡಿಕೆ ಎಂದರೆ ಕೇವಲ ಮನುಷ್ಯನ ಇಚ್ಛೆ(Desire) ಯಲ್ಲ ದಾರಿಯಲ್ಲಿ ಹೋಗುವ ದಾಸಯ್ಯನು ಬ್ರೆಡ್ಡಿನ ಅಂಗಡಿಯ ಮುಂದೆ ನಿಂತು ಬ್ರೆಡ್ಡುಗಳ ಕಡೆಗೆ ತನ್ನ ಕಣ್ಣುಗಳನ್ನು ಹೊರಳಿಸಿ, ಅವುಗಳನ್ನು ಪಡೆಯುವ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಇಂತಹ ಅವರ ಇಚ್ಛೆಯು ಬ್ರೆಡ್ಡಿಗಾಗಿ ಇರುವ ಅವನ ಬೇಡಿಕೆ(Demand)ಯಲ್ಲ. ಈ ಅನುವಾದವನ್ನು ಎನ್. ಆರ್. ಅಪರಂಜಿ ಇವರು 'ಆಧುನಿಕ ಅರ್ಥಶಾಸ್ತ್ರ' ೧೯೮೫:೩೭ರಲ್ಲಿ ಭಾಷಾಂತರಿಸಿರುತ್ತಾರೆ. ಈ ಹೇಳಿಕೆಯಲ್ಲಿಯೂ ಸಾಮರ್ಥ್ಯ ಮತ್ತು ಕೊಂಡುಕೊಳ್ಳುವ ಮನಸ್ಸು ಎರಡೂ ಇಲ್ಲದಿರುವುದನ್ನು ಎಂಭತ್ತರ ಉತ್ತಾರಾರ್ಧದಲ್ಲಿ ಕಾಣುತ್ತವೆ. ತೊಂಭತ್ತರ ದಶಕದಲ್ಲಿ ಇದು ಸ್ವಲ್ಪ ಭಿನ್ನ ದೃಷ್ಟಾಂತಗಳಲ್ಲಿ ಕಂಡುಬರುತ್ತದೆ. 'ಒಬ್ಬ ವಿದ್ಯಾರ್ಥಿಗೆ ಒಂದು ಸ್ಕೂಟರ್ ಪಡೆಯುವ ಆಸೆ ಇರುತ್ತದೆ. ಆದರೆ ಆತನಲ್ಲಿ ಅದನ್ನು ಕೊಂಡುಕೊಳ್ಳುವ ಶಕ್ತಿ ಇರುವುದಿಲ್ಲ. ಆಗ ಅದು ಕೇವಲ ಆಸೆಯಾಗುತ್ತದೆ. ಆದುದರಿಂದ ಬೇಡಿಕೆಯು ಆಸೆಗಿಂತ ಭಿನ್ನವಾಗಿದೆ.' ಈ ಅನುವಾದವನ್ನು ಎಸ್. ಶರಣಪ್ಪ ಇವರು 'ಆಧುನಿಕ ಆರ್ಥಿಕ ಸಿದ್ಧಾಂತ' ೧೯೮೮:೫೮ರಲ್ಲಿ ಭಾಷಾಂತರ ಮಾಡಿದ್ದಾರೆ. ಇದು ಸಹ ಬೇಡಿಕೆಯ ಹಿನ್ನೆಲೆಯಲ್ಲಿ ವಿದ್ಯಾರ್ಥಿಯ ಹಣಕಾಸಿನ ಸಾಮರ್ಥ್ಯವನ್ನು ಗುರುತಿಸುತ್ತದೆ. ಅವನ ಕೊಂಡುಕೊಳ್ಳುವ ಅಶಕ್ತಿ ವ್ಯಕ್ತವಾಗುತ್ತದೆ. 'ತಿರುಕನಿಗೆ ಮೋಟಾರು ಕಾರಿನಲ್ಲಿ ತಿರುಗಾಡಬೇಕೆಂಬ ಬಯಕೆಯಾಗುತ್ತದೆ. ಆದರೆ ಅದು ಮೋಟಾರು ಕಾರಿನ ಬೇಡಿಕೆಯಾಗಲಾರದು. ಏಕೆಂದರೆ ಅವನ ಬಳಿ ಮೋಟಾರ ಕಾರನ್ನು ಕೊಳ್ಳುವ ಹಣವಿಲ್ಲ. ಅಂದರೆ, ಅವನಿಗೆ ಕೊಳ್ಳುವ ಶಕ್ತಿಯಿಲ್ಲ. ಆದರೆ ಕೇವಲ ಕೊಳ್ಳುವ ಶಕ್ತಿಯೊಂದೇ ಇದ್ದರೆ ಸಾಲದು, ಕೇವಲ ಕೊಳ್ಳುವ ಶಕ್ತಿಯಿದ್ದಾಕ್ಷಣ ಅದು ಬೇಡಿಕೆಯಾಗಲಾರದು. ಏಕೆಂದರೆ ಒಬ್ಬ ಶ್ರೀಮಂತನ ಬಳಿ ಸಾಕಷ್ಟು ಹಣವಿದೆ. ಆದರೆ ಅವನಿಗೆ ಅದನ್ನು ಬೆಲೆ ಕೊಟ್ಟು ಕೊಳ್ಳುವ ಮನಸ್ಸಿಲ್ಲ.' ಈ ಭಾಷಾಂತರವನ್ನು ಕೆ. ಡಿ. ಬಸವಾರವರು ಆಧುನಿಕ ಅರ್ಥಶಾಸ್ತ್ರ ೧೯೯೪:೧೩೮ರಲ್ಲಿ ದಾಖಲು ಮಾಡಿರುತ್ತಾರೆ. ಈ ಭಾಷಾಂತರದಲ್ಲಿ ಮುಖ್ಯವಾಗಿ ಬೇಡಿಕೆಯಾಗಲು ಇರಲೇಬೇಕಾದ ಮೂರು ಅರ್ಹತಾ ಅಂಶಗಳನ್ನು ಸ್ಪಷ್ಟಪಡಿಸುತ್ತದೆ. ಅವುಗಳೆಂದರೆ ಇಚ್ಛೆ, ಕೊಂಡುಕೊಳ್ಳುವ ಸಾಮಾರ್ಥ್ಯ ಮತ್ತು ಮನಸ್ಸು. ಇವುಗಳಲ್ಲಿ ಯಾವುದೇ ಒಂದು ಇರದೇ ಹೋದರೆ ಅದು ಬೇಡಿಕೆಯಾಗಲಾರದು. 'ವಿದ್ಯಾರ್ಥಿಯೊಬ್ಬ ತಾನು ಮೋಟಾರ್ ಸೈಕಲ್ಲನ್ನು ಹೊಂದಬೇಕೆಂದು ಆಸೆಪಟ್ಟಿದ್ದ ಅಂಶ ಬೇಡಿಕೆಯಾಗಬೇಕಾದರೆ ಅವನು ಮೋಟಾರ್‌ಸೈಕಲ್ಲನ್ನು ಕೊಳ್ಳುವ ಮನಸ್ಸು ಮತ್ತು ಶಕ್ತಿಯನ್ನು ಹೊಂದಿರಬೇಕಾಗುತ್ತದೆ.' ಎಂಬುದನ್ನು ಕೃಷ್ಣಮೂರ್ತಿ ಎಚ್. ಆರ್. ಇವರು 'ಮೂಲ ಆರ್ಥಿಕ ಸಿದ್ಧಾಂತ' ೨೦೦೯:೯ರಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಉದಾಹರಣೆಯಲ್ಲಿ ವಿದ್ಯಾರ್ಥಿಯನ್ನು ಪ್ರತಿಮೆಯಾಗಿ ಬಳಸಿದ್ದಾರೆ. ಜೊತೆಗೆ ಬೇಡಿಕೆಯ ಪ್ರಮುಖ ಮೂರು ಲಕ್ಷಣಗಳನ್ನೂ ಇದು ಒಳಗೊಂಡಿದೆ. ಈ ಸಂದರ್ಭದಲ್ಲಿ ಬೇಡಿಕೆಯ ಅರ್ಥವನ್ನು ನೇರವಾಗಿ ನಿರೂಪಿಸಿದ್ದಾರೆ. ವ್ಯಕ್ತಿಗಳ ಆಶಯಗಳು ಬೇಡಿಕೆಯಾಗುವುದಿಲ್ಲ. 'ವ್ಯಕ್ತಿಯ ಆಶಯಗಳು, ಇಚ್ಛಾಶಕ್ತಿ ಮತ್ತು ಖರೀದಿ ಶಕ್ತಿ ಎಲ್ಲವನ್ನು ಹೊಂದಿರುವಾಗ ಮಾತ್ರವೇ ಸರಕು ಸೇವೆಗಳಿಗೆ ಬೇಡಿಕೆ ಏರ್ಪಡುತ್ತದೆ. ಬೇಡಿಕೆಯು

ನಾಲ್ಕು ಅಂಶಗಳನ್ನು ಸರಕಿನ ಪ್ರಮಾಣ, ಸರಕಿನ ಬೆಲೆ, ಮಾರುಕಟ್ಟೆ, ಕಾಲಾವಧಿ ಒಳಗೊಳ್ಳುವುದು. ಬೇಡಿಕೆಗೆ ಸಮಯದ ಆಯಾಮವಿರುವುದರಿಂದ ಅದೊಂದು ಹರಿವು ಪರಿಭಾವನೆ ಆಗಿದೆ.' ಈ ಅನುವಾದವನ್ನು ಒಡೆಯರ್ ಡಿ ಹೆಗ್ಗಡೆ ಇವರು ಸೂಕ್ಷ್ಮದರ್ಶಿ ಅರ್ಥಶಾಸ್ತ್ರ ೨೦೦೫:೧೦೬ರಲ್ಲಿ ಭಾಷಾಂತರ ಮಾಡಿರುತ್ತಾರೆ. ಅಂದರೆ ಬೇಡಿಕೆಯು ಈ ಮೊದಲು ತಿಳಿದಂತೆ ಮೂರು ಅಂಶಗಳಲ್ಲದೇ ನಾಲ್ಕನೇಯ ಅಂಶ ಮಾರುಕಟ್ಟೆಯೂ ಒಂದು ಸೇರುತ್ತದೆ. ಬೇಡಿಕೆಯು ನಿರ್ದಿಷ್ಟ ಸಮಯದಲ್ಲಿ ಘಟಿಸುವುದರಿಂದ ಅದು ಸ್ಥಿರವಾಗಿರುವುದಿಲ್ಲ. 'ಸರಕನ್ನು ಪಡೆಯುವ ಬಯಕೆ, ಕೊಂಡುಕೊಳ್ಳುವ ಶಕ್ತಿ ಕೂಡಿದಾಗ ಬೇಡಿಕೆ ಎನಿಸಿಕೊಳ್ಳುತ್ತದೆ. ಉದಾಹರಣೆ ಒಬ್ಬ ವ್ಯಕ್ತಿಗೆ ಕಾರನ್ನು ಪಡೆಯುವ ಬಯಕೆ ಇರುತ್ತದೆ. ಆದರೆ ಅದಕ್ಕೆ ತೆರಲು ಬೆಲೆ, ಹಣದ ಸಾಮರ್ಥ್ಯ ಇರದಿದ್ದಲ್ಲಿ ಬೇಡಿಕೆ ಎನಿಸುವುದಿಲ್ಲ.' ಇದನ್ನು ಸಿ. ಕೆ. ರೇಣುಕಾರ್ಯ(ಸಂ) ಅರ್ಥಶಾಸ್ತ್ರ ೨೦೦೪:೭೯ರಲ್ಲಿ ಹೇಳಿರುತ್ತಾರೆ. ಬಯಕೆಯು ಬೇಡಿಕೆಯಾಗಲು ಉಳಿದ ಎರಡು ಅಂಶಗಳ ಅಗತ್ಯತೆಯನ್ನು ಒತ್ತಿ ಹೇಳಲಾಗಿದೆ. ಕಾರು ನೋಡಿದ ವ್ಯಕ್ತಿಗೆ ಇಲ್ಲಿ ಯಾವ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ. ವಸ್ತುವಿನ ಬೆಲೆ ಪೂರೈಸಲು ಹಣದ ಅಗತ್ಯತೆಯನ್ನು ಇದು ಸ್ಪಷ್ಟ ಪಡಿಸುತ್ತದೆ. 'ಬೇಡಿಕೆ(Demand) ಎಂದರೆ ಕೇವಲ ಬಯಕೆ ಅಥವಾ ಆಶೆಯಲ್ಲ, ಮೋಟಾರ ಕಾರಿನಲ್ಲಿ ಐಷಾರಾಮದಿಂದ ತಿರುಗಾಡುವವರನ್ನು ನೋಡಿದರೆ ನಮಗೂ ಹಾಗೆ ತಿರುಗಾಡಬೇಕೆಂಬ ಬಯಕೆಯಾಗುತ್ತದೆ. ಆದರೆ ಅದು ಬೇಡಿಕೆಯಾಗುವುದಿಲ್ಲ. ಅದು ಕೇವಲ ಆಶೆಯಾಗುತ್ತದೆ. ಏಕೆಂದರೆ ಮೋಟಾರ್ ಕಾರನ್ನು ಕೊಂಡುಕೊಳ್ಳಲು ನಮ್ಮ ಹತ್ತಿರ ಸಾಕಷ್ಟು ಹಣ ಇರಬೇಕು. ಆ ಹಣವನ್ನು ಕೊಟ್ಟು ಅದನ್ನು ಕೊಳ್ಳುವ ಮನಸ್ಸು ಇರಬೇಕು. ಅಂದರೆ ಮಾತ್ರ ಅದು ಬೇಡಿಕೆಯಾಗುತ್ತದೆ.' ಈ ವಿಚಾರವನ್ನು ಕೆ. ಡಿ. ಬಸವಾ ಇವರು 'ಅರ್ಥಶಾಸ್ತ್ರ ಪರಿಚಯ' ೨೦೦೦:೪೭ರಲ್ಲಿ ಭಾಷಾಂತರ ಮಾಡಿರುತ್ತಾರೆ. ಸಾಮಾನ್ಯ ವ್ಯಕ್ತಿಯಲ್ಲಿ ಮೂಡಬಹುದಾದ ಆಸೆಯ ಪರಿಭಾಷೆಯು ಅರ್ಥಪೂರ್ಣ. ಇಲ್ಲಿ ಕೇವಲ ಕಾರು ಎಂದರೆ ಸಾಕಾಗುತ್ತಿದ್ದರೂ ಸಹ 'ಮೋಟಾರ' ಉಪಮೇಯದ ಮೂಲಕ ಇನ್ನಷ್ಟು ಅರ್ಥೈಸಲು ಪ್ರಯತ್ನಿಸಲಾಗಿದೆ. 'ಉದಾಹರಣೆಗೆ; ಅನುಭೋಗಿ ಟಿ.ವ್ಹಿ.ಯ ಬೇಡಿಕೆ ಇದೆ ಎಂದರೆ, ಅವನಲ್ಲಿ ಟಿ.ವ್ಹಿ.ಯ ಬಗ್ಗೆ ಬಯಕೆಯಿರಬೇಕು. ಅವನಲ್ಲಿ ಅದನ್ನು ಕೊಳ್ಳಲು ಬೇಕಾಗುವಷ್ಟು ಹಣವಿರಬೇಕು. ಅನುಭೋಗಿಯು ವಸ್ತುಗಳನ್ನು ಕೊಳ್ಳುವ ಪ್ರಮಾಣವು ಬೆಲೆಯನ್ನು ಅವಲಂಬಿಸಿರುತ್ತದೆ.' ಈ ಅನುವಾದವನ್ನು ಜಿ. ಎನ್. ಕೆಂಪಯ್ಯ. ಇವರು 'ಮೂಲ ಆರ್ಥಿಕ ಸಿದ್ದಾಂತ' ೨೦೦೬:೬೭ರಲ್ಲಿ ಹೇಳಿರುತ್ತಾರೆ. ಈ ವಿಚಾರದಲ್ಲಿ ಬರಹಗಾರ 'ಅನುಭೋಗಿ' ಎಂಬ ಪರಿಭಾವನೆಯ ಮೂಲಕ ಬೇಡಿಕೆಯನ್ನು ವಿಶ್ಲೇಷಿಸಿದ್ದಾರೆ. ಬೇಡಿಕೆಯ ಪರಿಕಲ್ಪನೆಗೆ ಇರಬೇಕಾದ ಅರ್ಹತೆಯ ಮೂರು ಅಂಶಗಳನ್ನು ಒಳಗೊಂಡಿರುವುದು ಸಾಧ್ಯವಿದೆ. 'ಕೇವಲ ಆಸೆ ಅಥವಾ ಬಯಕೆಯು ಬೇಡಿಕೆಯಾಗುವುದಿಲ್ಲ. ಉದಾಹರಣೆಗೆ ಒಬ್ಬ ಭಿಕ್ಷುಕನು ವಿಮಾನದಲ್ಲಿ ಪ್ರಮಾಣ ಮಾಡಲು ಬಯಸುತ್ತಾನೆ. ಆದರೆ ಅದು ಬೇಡಿಕೆಯಾಗುವುದಿಲ್ಲ. ಏಕೆಂದರೆ, ಅವನಿಗೆ ವಿಮಾನದಲ್ಲಿ ಪ್ರಯಾಣಿಸುವ

ಟಿಕೇಟನ್ನು ಖರೀದಿಸುವ ಅಥವಾ ಕೊಂಡುಕೊಳ್ಳುವ ಶಕ್ತಿ ಇರುವುದಿಲ್ಲ. ಹಾಗೆಯೇ ಕೇವಲ ವಸ್ತುವನ್ನು ಕೊಂಡುಕೊಳ್ಳುವ ಶಕ್ತಿ ಇದ್ದರೆ ಮಾತ್ರ ಬಯಕೆ ಬೇಡಿಕೆಯಾಗುವುದಿಲ್ಲ. ಏಕೆಂದರೆ, ಒಬ್ಬ ಶ್ರೀಮಂತನ ಹತ್ತಿರ ಸಾಕಷ್ಟು ಹಣವಿರಬಹುದು. ಆದರೆ ಅವನಿಗೆ ವಸ್ತುವನ್ನು ಕೊಂಡುಕೊಳ್ಳುವ ಬಯಕೆ ಇರದಿದ್ದರೆ, ಅದು ಸಹ ಬೇಡಿಕೆಯಾಗಿ ಪರಿವರ್ತನೆ ಹೊಂದುವುದಿಲ್ಲ. ಇದಲ್ಲದೇ ವಸ್ತುವನ್ನು ಯಾವಾಗಲೂ ಬೆಲೆಯ ಮುಖಾಂತರ ವ್ಯಕ್ತಪಡಿಸಬೇಕಾಗುತ್ತದೆ.' ಗೂಡೂರು ಭೀಮಸೇನರವರು 'ಅರ್ಥಶಾಸ್ತ್ರದ ಮೂಲ ತತ್ವಗಳು' ೧೯೬೯:೪೦ರಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ವಿಶ್ಲೇಷಣೆಯು ವಿಸ್ತೃತವಾಗಿದೆ. ಬೇಡಿಕೆಯ ಪರಿಪೂರ್ಣತೆಯು ವಿವಿಧ ಮುಖಗಳನ್ನು ಸ್ಪಷ್ಟೀಕರಿಸುತ್ತದೆ. ಅದು ಅಪೂರ್ಣ ಎಂಬುದನ್ನು ಸಮರ್ಥವಾಗಿ ಬಿಂಬಿಸಿದೆ. ಅದರಂತೆ ಇರುವ ಮತ್ತೊಂದು ಬರಹ ಕುರಿತು ನೋಡೋಣ. 'ಅರ್ಥಶಾಸ್ತ್ರದ ಅರ್ಥದಲ್ಲಿ ಬೇಡಿಕೆ ಎಂದರೆ, ಕೇವಲ ಬಯಕೆ ಅಥವಾ ಆಸೆ ಅಲ್ಲಾ. ಒಂದು ವಸ್ತವನ್ನು ಕಂಡು ನಮಗೆ ಅದನ್ನು ಹೊಂದಬೇಕೆಂಬ ಅಥವಾ ಉಪಯೋಗಿಸಬಕೆಂಬ ಬಯಕೆಯಾದರೆ ಅದು ಬೇಡಿಕೆಯೆನಿಸುವುದಿಲ್ಲ. ಒಂದು ವಸ್ತುವಿಗೆ ಬೇಡಿಕೆ ಎಂದರೆ ನಿಶ್ಚಿತವಾದ ಬೆಲೆಯಲ್ಲಿ, ನಿಶ್ಚಿತ ಕಾಲವಧಿಯಲ್ಲಿ ಗ್ರಾಹಕರು ಆ ವಸ್ತುವನ್ನು ಕೊಂಡುಕೊಳ್ಳುವ ಪ್ರಮಾಣ. ಅಂದರೆ, ಒಬ್ಬ ಗ್ರಾಹಕನು ಒಂದು 'ಬೆಲೆಯಲ್ಲಿ, ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಕೊಳ್ಳುವ ಒಂದು ವಸ್ತುವಿನ ಪ್ರಮಾಣಕ್ಕೆ ಅರ್ಥಶಾಸ್ತ್ರದಲ್ಲಿ ಬೇಡಿಕೆಯೆಂದು ಕರೆಯಲಾಗುತ್ತದೆ.' ಈ ಭಾಷಾಂತರವು ಎಮ್. ಎಸ್. ಸುಂಕಾಪುರ (ಸಂ) 'ಅರ್ಥಶಾಸ್ತ್ರ ಪರಿಚಯ' ೧೯೭೫:೪೨ರಲ್ಲಿ ಪರಿಚಯಿಸಿದ್ದಾರೆ. ಈ ಹೇಳಿಕೆಯು ಮತ್ತಷ್ಟು ನಾವಿನ್ಯತೆಯ ತಂತ್ರಗಾರಿಕೆ ಹೊಂದಿರುವುದನ್ನು ಗಮನಿಸಬಹುದಾಗಿದೆ.

## ೪.೩. ವಾಕ್ಯಗಳ ರಚನೆ

ಅರ್ಥಶಾಸ್ತ್ರವು ಇಂಗ್ಲಿಷ್ ಭಾಷೆಯ ಮೂಲಕ ಕನ್ನಡಕ್ಕೆ ಬಂದಿರುತ್ತದೆ. ಅರ್ಥಶಾಸ್ತ್ರ ಹವ್ಯಾಸಿ ಅನುವಾದಕರಿಂದ ಬಂದಿರುವುದು ತಿಳಿಯುತ್ತದೆ. ವೃತ್ತಿ ಅನುವಾದಕರಾಗಿದ್ದರೆ ಅವರು ಪೂರ್ವ ತಯಾರಿ ಮಾಡಿಕೊಳ್ಳುತ್ತಿದ್ದರು. ಅಂದರೆ ಪದಕೋಶಗಳ ರಚನೆಯ ನಂತರ ಭಾಷಾಂತರ ಕಾರ್ಯವನ್ನು ಆರಂಭಿಸುತ್ತಿದ್ದರು. ಆದರೆ ಹವ್ಯಾಸಿ ಅನುವಾದಕರ ಸಂದರ್ಭಗಳೇ ಬೇರೆ. ಕರ್ನಾಟಕದ ಶೈಕ್ಷಣಿಕ ಕ್ಷೇತ್ರದಲ್ಲಿ ಅಂದಿನ ಸಮಸ್ಯೆಗಳ ಪೂರೈಸಿಕೊಳ್ಳಬೇಕಾಗಿತ್ತು. ಆಗ ಇಂಗ್ಲಿಷ್ ಭಾಷೆ ತಿಳಿದ ಕನ್ನಡಿಗರು ಈ ಪಠ್ಯಗಳನ್ನು ಭಾಷಾಂತರಿಸಿದ್ದಾರೆಂದು ಭಾವಿಸಬಹುದಾಗಿದೆ. ವಸಾಹತುಶಾಹಿಯ ಪ್ರಭಾವ ದಟ್ಟವಾಗಿದ್ದ ಈ ಪ್ರದೇಶದಲ್ಲಿ ಇಂಗ್ಲಿಷ್ ಪಠ್ಯಗಳೇ ಮುಖ್ಯವಾಗಿದ್ದವು. ಹೀಗಾಗಿ ಕನ್ನಡ ಮಾಧ್ಯಮದ ಪಠ್ಯಗಳ ಕೊರತೆ ನೀಗಿಸುವ ಉದ್ದೇಶದಿಂದ ಅಲ್ಲಲ್ಲಿ ಕನ್ನಡ ಪಠ್ಯಗಳು ರಚಿಸಲ್ಪಟ್ಟಂತೆ ಕಂಡು ಬರುತ್ತದೆ. ಇಂಗ್ಲಿಷ್‌ನ ಪದಗಳನ್ನು ಕನ್ನಡದ ಬೇರೆ ಬೇರೆ ಭಾಷಾಂತರಕಾರರು ಯಾವ-ಯಾವ ರೂಪದಲ್ಲಿ ಬಳಸಿಕೊಂಡಿದ್ದಾರೆ ಎಂಬುದನ್ನು ಗುರುತಿಸುವ ಪ್ರಯತ್ನವಿದು. ವಾಕ್ಯಗಳ ರಚನೆ

ಸರಳವಾಗಿವೆಯೇ, ಸಂಕೀರ್ಣವಾಗಿವೆಯೇ, ಗೊಂದಲದಿಂದ ಕೂಡಿದೆಯೇ ಹೇಗೆ ಬಳಕೆಯಾಗಿವೆಂಬುದನ್ನು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

Wants : ಈ ಇಂಗ್ಲಿಷ್ ಪದವು ಕನ್ನಡದಲ್ಲಿ ಹಲವಾರು ರೂಪಗಳಲ್ಲಿ ವ್ಯಕ್ತವಾಗಿದೆ. ಇಷ್ಟಗಳು ಎಂಬುದಾಗಿ ೧೯೭೫ ರಲ್ಲಿ ಪ್ರಯೋಗಿಸಲಾಗಿದೆ. ಮಾನವನ ಬಯಕೆಗಳಿಗೆ ಮಿತಿಯೇ ಇಲ್ಲ. ಅವನ ಇಷ್ಟ ಅಥವಾ ಬಯಕೆಗಳು ಅಸಂಖ್ಯಾತವೂ ವೈವಿಧ್ಯಪೂರ್ಣವೂ ಆಗಿವೆ. ಕನಿಷ್ಠ ಇಚ್ಛೆಗಳ ತೃಪ್ತಿಯಾಗದೇ ಅವನು ಜೀವಿಸಲಾರ. ಈ ಭಾಷಾಂತರವನ್ನು ಎಮ್. ಎಸ್. ಸುಂಕಾಪೂರವರು (ಸಂ) 'ಅರ್ಥಶಾಸ್ತ್ರ ಪರಿಚಯ' ೧೯೭೫:೨೫ರಲ್ಲಿ ತಿಳಿಸಿರುತ್ತಾರೆ. ಈ ಮಾತುಗಳನ್ನು ಗಮನಿಸಿದಾಗ 'ಇಷ್ಟ' ಎಂಬುದು ಧಾರವಾಡ ಪ್ರದೇಶದಲ್ಲಿ ಬಳಕೆಯಲ್ಲಿರುವ ಪದವಾಗಿದೆ. 'ಬಯಕೆ' ಎಂಬುದು ಸಾಮಾನ್ಯವಾಗಿ ಬಳಸಲಾಗುತ್ತಿದ್ದ ಪದ ಎಂದು ಗುರುತಿಸಬಹುದಾಗಿದೆ. ಕಾರಣ 'ಮಾನವನ ಬಯಕೆಗಳು' ಎಂದು ಆರಂಭಿಸುವ ಪೂರ್ವದಲ್ಲಿ. 'ಮಾನವನ ಇಷ್ಟಗಳು ಮತ್ತು ಅವುಗಳ ತೃಪ್ತಿ' ಎಂಬ ತಲೆಬರಹ ನೀಡಿದ್ದನ್ನು ಗಮನಿಸಿ ಈ ತೀರ್ಮಾನಕ್ಕೆ ಸಧ್ಯಕ್ಕೆ ಬರಬಹುದಾಗಿದೆ. 'ಸಾಮಾನ್ಯವಾದ ಭಾಷೆಯಲ್ಲಿ ಬೇಡಿಕೆ ಎಂಬ ಪದದ ಅರ್ಥ ಇಷ್ಟ ಅಥವಾ ಇಚ್ಛೆಯಾಗಿರುತ್ತದೆ. ಆದ್ದರಿಂದ ನಮ್ಮ ಆಶೆ ಅಥವಾ ಇಷ್ಟಗಳು (Wants) ಬೇಡಿಕೆಗಳಾಗಿ ಪರಿವರ್ತನೆ ಹೊಂದಲು ಈ ಕೆಳಗಿನ ಮೂರು ಷರತ್ತುಗಳು ಅವಶ್ಯಕ.' ಈ ಭಾಷಾಂತರವು ಎಮ್. ಎಸ್. ಸುಂಕಾಪೂರ ಇವರು 'ಅರ್ಥಶಾಸ್ತ್ರ ತತ್ವ ವಿವೇಚನೆ' ೧೯೭೭:೮೦ರಲ್ಲಿ ತಿಳಿಸಿರುತ್ತಾರೆ. ಇಲ್ಲಿನ ವಾಕ್ಯಗಳು ಸರಳವಾಗಿರುವುವು. ಈ ಮಾಹಿತಿಯಲ್ಲಿಯೂ 'ಇಷ್ಟ' ಎಂಬ ಪದವಿದೆ. ಜೊತೆಗೆ 'ಆಶೆ' ಎಂಬುದನ್ನು ಸೇರ್ಪಡೆ ಮಾಡಿರುವುದು ಕಂಡುಬರುತ್ತದೆ. 'ಅರ್ಥಶಾಸ್ತ್ರದಲ್ಲಿ ಬೇಡಿಕೆಯು ಆಸೆಗಿಂತ ಭಿನ್ನವಾಗಿದೆ. ಆಸೆಯೆಂದರೆ ಕೇವಲ ಒಂದು ವಸ್ತುವನ್ನು ಪಡೆಯುವ ಅಪೇಕ್ಷೆ. ಆದರೆ ಆ ವ್ಯಕ್ತಿಗೆ ತಾನು ಆಪೇಕ್ಷಿಸಿದ ವಸ್ತುವನ್ನು ಕೊಂಡುಕೊಳ್ಳುವ ಶಕ್ತಿ ಇಲ್ಲದಿರಬಹುದು. ಉದಾಹರಣೆಗೆ ಒಬ್ಬ ವಿದ್ಯಾರ್ಥಿಗೆ ಒಂದು ಸ್ಕೂಟರ್ ಪಡೆಯುವ ಆಸೆ ಇರುತ್ತದೆ. ಆದರೆ ಆತನಲ್ಲಿ ಅದನ್ನು ಕೊಂಡುಕೊಳ್ಳುವ ಶಕ್ತಿ ಇರುವುದಿಲ್ಲ. ಆಗ ಅದು ಕೇವಲ ಆಸೆಯಾಗುತ್ತದೆ. ಆದುದರಿಂದ ಬೇಡಿಕೆಯು ಆಸೆಗಿಂತ ಭಿನ್ನವಾಗಿದೆ.' ಈ ಅನುವಾದವನ್ನು ಎಸ್.ಶರಣಪ್ಪ ಇವರು 'ಆಸೆ' ಎಂದು ವಿಶ್ಲೇಷಿಸಿದ್ದಾರೆ. 'ಆಸೆ'ಯ ಪದದಂತೆ 'ಅಪೇಕ್ಷೆ' ಯನ್ನು ಮತ್ತೊಂದು ಪದ ಬಳಸಿರುವುದನ್ನು ಗಮನಿಸಬಹುದಾಗಿದೆ. 'ವಿದ್ಯಾರ್ಥಿ' ಪ್ರತಿಮೆಯ ಮೂಲಕ Wantsನ್ನು ಕನ್ನಡದಲ್ಲಿ ವಿಶ್ಲೇಷಿಸುವ ಪ್ರಯತ್ನ ಎನ್ನಲುಬಹುದು. 'ಬಳಕೆಯ ಭಾಷೆಯಲ್ಲಿ 'ಬೇಡಿಕೆ' ಎಂದರೆ 'ಬಯಕೆ' ಇಲ್ಲವೆ 'ಆಶೆ' ಎಂದು ಅರ್ಥವಾಗುತ್ತದೆ. ಆದರೆ ಕೇವಲ ಬಯಕೆಯು ಬೇಡಿಕೆಯಾಗಲಾರದು.' ಈ ಭಾಷಾಂತರವು ಬಸವರಾಜ ಕುಮ್ನೂರ ಇವರು 'ಸೂಕ್ಷ್ಮ ಅರ್ಥಶಾಸ್ತ್ರ' ೨೦೧೩:೧೭೭ರಲ್ಲಿ ಹೇಳಿರುತ್ತಾರೆ. ಈ ವಾಕ್ಯದಲ್ಲಿ ಬಳಸಿದ ಬಹು ಮುಖ್ಯ ಪದ 'ಬಳಕೆಯ ಭಾಷೆ'. ಇದನ್ನು 'ಸಾಮಾನ್ಯ ಭಾಷೆ'ಯಲ್ಲಿ ಎಂದು ಗುರುತಿಸುವುದರ ಪರ್ಯಾಯ ಪದವಾಗಿ ಬಳಸಿರುವುದು ಕಂಡುಬರುತ್ತದೆ. ಭಾಷಾಂತರಕಾರರು ಅರಿವಿನಿಂದ

ನುಸುಳಿದ ಪದ ಇದಾಗಿರಬೇಕು. ಅಂದರೆ 'ಆಶೆ' ಆಡು ಭಾಷೆ ಅಥವಾ ಸಾಮಾನ್ಯ ಭಾಷೆಯ ಪದ 'ಆಶೆ' ಗ್ರಂಥಸ್ಥ ಭಾಷೆ. ಹೀಗಾಗಿ ಬರಹಗಾರರ ಅನುಭವ ಅಪೇಕ್ಷೆಯಿಂದಲೇ ಪ್ರಾರಂಭವಾಗುತ್ತದೆ. ಈ ಪಠ್ಯವು ವಿದ್ಯಾರ್ಥಿಗಳ ಅಧ್ಯಯನಕ್ಕೆ ಸಹಕಾರಿಯಾಗಿವೆ. ವಾಕ್ಯಗಳು ಚಿಕ್ಕಚಿಕ್ಕವಾಗಿವೆ, ಸರಳವಾಗಿವೆ. 'ಮಾನವನು ಬಯಕೆಗಳ ಮುದ್ದೆ. ಮಾನವನ ಬಯಕೆಗಳು ಅಪರಿಮಿತವಾಗಿದ್ದು, ಇವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿವೆ.'ಇದನ್ನು ಅಂದರೆ ಬಯಕೆ ಮತ್ತು ಅಪೇಕ್ಷೆ ಎಂಬ ಎರಡೂ ಪದಗಳನ್ನು ಸಮನಾರ್ಥಕವಾಗಿ ಎಸ್. ಶರಣಪ್ಪನವರಂತೆ ಗುಡೂರು ಭಿಮಸೇನರೂ ಬಳಸಿರುವುದು ಕಂಡುಬರುತ್ತದೆ. ಆದರೆ ಇವರು ಆರ್ಥಿಕ ಚಟುವಟಿಕೆಗಳ ಉಗಮಕ್ಕೆ 'Wants' ಹೇಗೆ ಕಾರಣ ಎಂಬುದನ್ನು ಪರೋಕ್ಷವಗಿ ಹೇಳುವ ಪ್ರಯತ್ನ ಮಾಡಿದ್ದಾರೆ. ಅವರು ಬಳಸಿದ ಉಪಮೇಯ ಇದಕ್ಕೆ ಪೂರಕ ಅನ್ನಬಹುದು. 'ನಿರ್ದಿಷ್ಟ ಸಮಯದಲ್ಲಿ ಕೊಳ್ಳುವ ಶಕ್ತಿಯೊಂದಿಗೆ ಸರಕನ್ನು ಖರೀದಿಸುವ ಆಶಯ ಮತ್ತು ಇಚ್ಛಾಶಕ್ತಿಯನ್ನು ವ್ಯಕ್ತಿ ಹೊಂದಿದ್ದರೆ. ಅದು ಬೇಡಿಕೆ ಆಗುತ್ತದೆ.' ಇದನ್ನು ಟಿ. ಆರ್. ಗುರುಬಸಪ್ಪ ಮತ್ತು ಮಲ್ಲೇಶಪ್ಪ ಕುಂಬಾರ ಇವರು 'ಸೂಕ್ಷ್ಮ ಅರ್ಥಶಾಸ್ತ್ರ' ೨೦೧೩:೧೧೮ರಲ್ಲಿ ಭಾಷಾಂತರ ಮಾಡಿರುತ್ತಾರೆ. ಈ ಒಂದೇ ಒಂದು ವಾಕ್ಯದಲ್ಲಿ ಬೇಡಿಕೆಯ ಪರಿಭಾಷೆಯನ್ನು ವ್ಯಕ್ತಪಡಿಸಿದ್ದಾರೆ. ಅದರಲ್ಲಿಯೇ 'Wants' ಪದಕ್ಕೆ ಸಂವಾದಿಯಾಗಿ 'ಆಶಯ' ಪದ ಪ್ರಯೋಗ ಮಾಡಿರುವುದನ್ನು ಗಮನಿಸಬಹುದಾಗಿದೆ. 'ಮಾನವನು ಸಮಾಜದಲ್ಲಿ ಬದುಕಬೇಕಾದರೆ ಕೆಲವು ವಸ್ತುಗಳನ್ನು ಬಳಸಲೇ ಬೇಕಾಗುತ್ತದೆ. ಇತರರ ಸೇವೆಗಳನ್ನು ಪಡೆಯಲೇ ಬೇಕಾಗುತ್ತದೆ. "ಸರಕುಗಳು ಮತ್ತು ಸೇವೆಗಳನ್ನು ಬಳಸುವ ಮಾನವನ ಇಚ್ಛೆಯನ್ನು ಬಯಕೆ" ಎನ್ನುತ್ತೇವೆ. ಉದಾಹರಣೆ : ಹಸಿವಾದಾಗ ಊಟ ಮಾಡಬೇಕೆಂದು ಬಯಸುತ್ತೇವೆ. ಬಾಯಾರಿದಾಗ ನೀರು ಬೇಕೆನಿಸುತ್ತದೆ. ಬೇಸರವಾದಾಗ ಸಂಗೀತ ಕೇಳಬೇಕೆನಿಸುತ್ತದೆ. ಅನಾರೋಗ್ಯಕ್ಕೆ ತುತ್ತಾದಾಗ ವೈದ್ಯರ ಸೇವೆ ಪಡೆಯಬೇಕೆನಿಸುತ್ತದೆ. ಇತ್ಯಾದಿ.' ಈ ಭಾಷಾಂತರವು ಜಿ. ಎನ್. ಕೆಂಪಯ್ಯ ಇವರಿಂದ ಮೂಲ ಆರ್ಥಿಕ ಸಿದ್ಧಾಂತ ೨೦೦೬:೫೨ರಲ್ಲಿ ದಾಖಲಾಗಿರುತ್ತದೆ. ಇದನ್ನು ಗಮನಿಸಿದಾಗ 'ಇಚ್ಛೆ'ಯೇ 'ಬಯಕೆ' ಎಂದು ಒಂದು ಹೇಳಿಕೆ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ಈ ಎರಡೂ ಪದಗಳು ಬೇರೆ-ಬೇರೆ ಎಂಬುದಾಗಿ ಭಾವಿಸಿದಂತೆ ಕಂಡುಬರುತ್ತದೆ. ಆದರೆ ಅನೇಕ ಬರಹಗಾರರು ಈ ಪದಗಳನ್ನು ಸಮನಾರ್ಥಕವಾಗಿ ಭಾವಿಸಿ ಉಪಯೋಗಿಸಿರುವುದು ತಿಳಿದು ಬರುತ್ತದೆ. ಉಳಿದ ಬರಹಗಾರರಗಿಂತ ಇದು ಭಿನ್ನವಾದ ಅರ್ಥದಲ್ಲಿ ಬಳಸಿದ್ದಾರೆ. ಮಾನವನು ಆಸೆಗಳ ಆಗರವಾಗಿದ್ದಾನೆ. ಅವನು ಹುಟ್ಟಿನಿಂದ ಸಾಯುವರೆಗೂ ಬಯಕೆಗಳನ್ನು ಹೊಂದಿರುತ್ತಾನೆ. ಅವನ ಬಯಕೆಗಳಿಗೆ ಇತಿ-ಮಿತಿ ಎಂಬುದೇ ಇಲ್ಲವಾಗಿದೆ. ಅವನ ಈ ಬಯಕೆಯಗಳು ಮಾನವನ ಎಲ್ಲಾ ಚಟುವಟಿಕೆಗಳಿಗೆ ಪ್ರೇರಣೆಯಾಗಿವೆ. ಇದರಿಂದಾಗಿ ಬಯಕೆಗಳಿಗೆ ಅರ್ಥಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು ಕಲ್ಪಿಸಲಾಗಿದೆ. ಮಾನವನ ಬಯಕೆಗಳು ಮಾನವನಷ್ಟೇ ಪುರಾತನವಾದವುಗಳು. ಈ ಪಠ್ಯ ಭಾಗದಲ್ಲಿ ಭಾಷೆಯಲ್ಲಿ ಸರಳ ರೂಪದ ವಾಕ್ಯವನ್ನು ಬಳಸಿ ವಿಶ್ಲೇಷಣೆ ಮಾಡಲಾಗಿದೆ.

'ಮಾನವನ ಬಯಕೆಗಳ ಅರ್ಥವಿವರಣೆ (Meaning of Human Wants) ಸರಕು ಮತ್ತು ಸೇವೆಗಳಿಂದ ತೃಪ್ತಿಪಡಿಸಬಹುದಾದ ಆಸೆಗಳನ್ನು ಬಯಕೆಗಳು ಎನ್ನಲಾಗುತ್ತದೆ. ಬಯಕೆಗಳು ಸರಕು ಮತ್ತು ಸೇವೆಗಳಿಗಿರುವ ಮಾನವನ ಆಸೆಯನ್ನು ಬಿಂಬಿಸುತ್ತವೆ. ಆದರೆ, ಅರ್ಥಶಾಸ್ತ್ರದಲ್ಲಿ ಕೇವಲ ಆಸೆಯನ್ನು ಬಯಕೆ ಎಂದು ಪರಿಗಣಿಸಲಾಗುವುದಿಲ್ಲ. ಏಕೆಂದರೆ, ಆಸೆಗಳೆಲ್ಲಾ ಬಯಕೆಗಳಾಗುವುದು ಸಾಧ್ಯವಿಲ್ಲ. ಒಂದು ನಾಣ್ಣುಡಿಯು ಹೇಳುವಂತೆ–'ಆಸೆಗಳೇ ಕುದುರೆಗಳಾದರೆ ಭಿಕ್ಷುಕರೂ ಸಹ ಅವನ್ನು ಸವಾರಿ ಮಾಡುವರು.' ಎಂಬುದನ್ನು ಹೆಚ್.ಆರ್.ಕೆ. ಯವರ ಈ ಪದ ಬಳಕೆಯನ್ನು ಪರಿಶೀಲಿಸಲಾಗಿ ಬೇರೆ ರೀತಿಯ ಅರ್ಥ ಬರುವಂತೆ ಬಳಸಿರುವುದು ಕಂಡು ಬರುತ್ತದೆ. ಇಲ್ಲಿ ಬೇಡಿಕೆಗೆ ಇರಬೇಕಾದ ಅರ್ಹತೆಗಳನ್ನು ಇವರು ವ್ಯಕ್ತಪಡಿಸಿದ್ದಾರೆ. ಮನಸ್ಸು ಮತ್ತು ಕೊಂಡುಕೊಳ್ಳುವ ಸಾಮರ್ಥ್ಯವನ್ನೊಳಗೊಂಡ ಆಸೆಯು ಬಯಕೆಯಾಗುತ್ತದೆ. ಇದರಲ್ಲಿ ಆಸೆ ಮತ್ತು ಬಯಕೆ ವಿಭಿನ್ನವೆಂದು ವ್ಯಕ್ತವಾಗುತ್ತದೆ. ಈ ಮೊದಲು ಈ ಎರಡೂ ಪದಗಳು ಸಮಾನ ಅರ್ಥ ಬರುವಂತೆ ಉಪಯೋಗಿಸಿದ್ದನ್ನು ಗುರುತಿಸಬಹುದಾಗಿದೆ. ಇದೇ ಪಠ್ಯದಲ್ಲಿ ಬೇಡಿಕೆ ಕುರಿತು ಹೀಗಿಯೇ ವಿವರಣೆ ಇದೆ. 'ಸಾಮಾನ್ಯ ಅರ್ಥದಲ್ಲಿ ಬೇಡಿಕೆ ಎಂದರೆ, 'ಆಸೆ' ಅಥವಾ 'ಬಯಕೆ' ಎಂದಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಬೇಡಿಕೆ ಎಂಬ ಪರಿಕಲ್ಪನೆಗೆ ಒಂದು ವಿಶೇಷ ಅರ್ಥವನ್ನು ನೀಡಲಾಗಿದೆ. ಬೇಡಿಕೆಯು ಆಸೆ ಅಥವಾ ಬಯಕೆಗಿಂತ ಭಿನ್ನವಾಗಿದೆ. ಬಯಕೆ ಅಥವಾ ಆಸೆ ಎಂದರೆ ಕೇವಲ ಒಂದು ವಸ್ತುವನ್ನು ಪಡೆಯುವ ಹಂಬಲ ಅಥವಾ ಅಪೇಕ್ಷೆಯಾಗುತ್ತದೆ. ಈ ಹಂಬಲ ಅಥವಾ ಅಪೇಕ್ಷೆ ಅರ್ಥಶಾಸ್ತ್ರದಲ್ಲಿ ಬೇಡಿಕೆಯಾಗುವುದಿಲ್ಲ. ಏಕೆಂದರೆ ಹಂಬಲ ಅಥವಾ ಆಸೆ ಎಂಬುದು ಬೇಡಿಕೆಯಾಗಬೇಕಾದರೆ ಅಪೇಕ್ಷೆಪಟ್ಟ ವಸ್ತುವನ್ನು ಕೊಳ್ಳುವ ಶಕ್ತಿಯಿರಬೇಕಾಗುತ್ತದೆ.' ಎಂಬ ಭಾಷಾಂತರವನ್ನು ಹೆಚ್.ಆರ್.ಕೆ. ಯವರು 'ಬೇಡಿಕೆ' ಅರ್ಥ ವಿವರಣೆ ನೀಡುವಲ್ಲಿ ಕೊಟ್ಟಿರುವ ಮಾಹಿತಿಯು 'Wants' ಗೆ ಇರಬೇಕಾದ ಅರ್ಹತೆಯೇ ಇಲ್ಲಿಯೂ ಇದೆ. ಇವರು ಒಂದು ಕಡೆಗೆ 'ಆಸೆ' 'ಅಪೇಕ್ಷೆ' ಬಯಕೆಯ ಸ್ಥಾನದಲ್ಲಿ ವಿವರವಿದೆ. ಇದು ಒಂದು ಗೊಂದಲದ ಪದ ಬಳಕೆ ಎನ್ನಬಹುದಾಗಿದೆ. ಒಟ್ಟಾರೆ ಇಂಗ್ಲಿಷದಲ್ಲಿರುವ ಅರ್ಥಶಾಸ್ತ್ರದ ಪದವು ಕನ್ನಡ ಭಾಷೆಯ ಪಠ್ಯದಲ್ಲಿ ಬೇರೆ–ಬೇರೆ ಅರ್ಥ ನೀಡುವ ಪದವಾಗಿ ಬಳಕೆಯಾಗುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ. ಅದು ಆಸೆ, ಆಶೆ, ಇಚ್ಛೆ, ಹಂಬಲ, ಅಪೇಕ್ಷೆ, ಇಷ್ಟ, ಬಯಕೆ ಈ ಮೊದಲಾದ ಪದಗಳು 'Wants' ಪದಕ್ಕೆ ಸಂವಾದಿಯಾಗಿ ಬೇರೆ–ಬೇರೆ ಬರಹಗಾರರು ಇದರಲ್ಲಿಯ ಒಂದೇರಡು ಪದ ಪ್ರಯೋಗಿಸಿರುತ್ತಾರೆ. ಮತ್ತೇ ಕೆಲವು ಬರಹಗಾರರು ಬಯಕೆ ಪದವನ್ನು ಬೇಡಿಕೆಗೆ ಸಮಾನವಾಗಿ ಉಪಯೋಗಿಸಿದ್ದಾರೆ. ಅಲ್ಲದೇ ಉಳಿದ ಪದಗಳು ಬೇರೆಯೇ ಎಂಬ ಭಾವನೆ ಮೂಡಿಸಿದ್ದಾರೆನ್ನಬಹುದು.

Margin – Marginal ಎಂಬ ಪದವು ಕನ್ನಡದಲ್ಲಿ ಬಳಕೆ ಹೇಗಾಗಿದೆ ಎಂಬುದನ್ನು ತಿಳಿಯೋಣ. 'ಅರ್ಥಶಾಸ್ತ್ರದಲ್ಲಿ ಅಂಚು ಅಥವಾ ಬದಿ ಎಂಬ ಪದಕ್ಕೂ ವಿಶೇಷ ಅರ್ಥವುಂಟು.

ಈ 'ಅಂಚು' ಉತ್ಪಾದನೆಯಲ್ಲಿಯೂ ಮತ್ತು ಸರಬರಾಜಿನಲ್ಲಿಯೂ ಬಹು ಮಹತ್ವದ ಪಾತ್ರವಹಿಸುತ್ತದೆ. ಒಂದು ಸರಕಿನ ಒಟ್ಟು ಉತ್ಪಾದನೆ ಮಾಡುವಾಗ ಉತ್ಪಾದಕರು ಕೊನೆಯ ಬಿಡಿ ಭಾಗದ ಕಡೆಗೆ ಲಕ್ಷ್ಯ ಕೊಡುತ್ತಾನೆ. ಅದರಂತೆ ಒಂದು ಸರಕನ್ನು ಉಪಭೋಗಿಸಲು ಕೊಳ್ಳುವಾಗ ಗ್ರಾಹಕನು ಒಟ್ಟು ಖರೀದಿಯ ಕೊನೆಯ ಬಿಡಿ ಭಾಗಕ್ಕೆ ವಿಶೇಷ ಲಕ್ಷ್ಯ ಕೊಡುತ್ತಾನೆ. ಏಕೆಂದರೆ, ಕೊನೆಯ ಭಾಗವು ಉತ್ಪಾದನೆಯ ಫಲಿತಾಂಶವನ್ನು ಮತ್ತು ಕೊಳ್ಳುವವನ ಹಿತಾಸಕ್ತಿಯನ್ನು ನಿರ್ಧರಿಸಲು ಕಾರಣವಾಗುತ್ತದೆ. ಹೀಗಿರುವುದರಿಂದ ಅಂಚು ಎಂಬ ಪದಕ್ಕೆ ಬಲು ಗೂಢ ಅರ್ಥ ಬಂದಿದೆ.' ಈ ಭಾಷಾಂತರವು ಎಮ್. ಎಸ್. ಸುಂಕಾಪೂರರವರು ಸಂಪಾದಿಸಿದ 'ಅರ್ಥಶಾಸ್ತ್ರ ತತ್ವ ವಿವೇಚನೆಯಲ್ಲಿ' ದಾಖಲಾಗುತ್ತದೆ. ಉತ್ಪಾದನೆ ಮತ್ತು ಅನುಭೋಗದಲ್ಲಿ 'ಅಂಚು' ಎಂಬ ಪದವು ವಿಶೀಷ್ಠ ಅರ್ಥದಲ್ಲಿ ಬಳಸಲಾಗಿದೆ. ಅಂಚಿನ ಮೂಲಕ ನಷ್ಟ ಸಂಭವಿಸದಂತೆ ಉತ್ಪಾದಕರು ಮತ್ತು ಗ್ರಾಹಕರು ನಿರ್ಧಾರ ತೆಗೆದುಕೊಳ್ಳಲು ಅನುಕೂಲಕರ. 'ಅಂಚು' ಎಂಬ ಪದವು 'ಕೊನೆ'ಯ ಎಂಬ ಅರ್ಥದಲ್ಲಿ ಬಳಸಿದಂತಿದೆ. ವಸ್ತುವಿನ ಕೊನೆಯ ಮೊತ್ತವನ್ನು ಮಾರಿಬಂದ ಆದಾಯಕ್ಕೆ ಅಂಚಿನ ಆದಾಯ ಎನ್ನುವರು. ಒಂದು ನಿರ್ದಿಷ್ಟ ಪ್ರಮಾಣದ ನಂತರದ ಪ್ರಮಾಣವೇ 'ಅಂಚಿನ' ಪರಿಕಲ್ಪನೆಯಾಗಿದೆ. ಇಲ್ಲಿಯೂ ಕೊನೆಯ ಎಂಬ ಅರ್ಥದಲ್ಲಿಯೇ ಬಳಸಲಾಗಿದೆ. 'ಅಂಚು' 'ಉ'ಕಾರ ಹೊಂದಿದ್ದರೆ. 'ಅಂಚಿನ' ಎಂಬುದು 'ಇ' ಕಾರದೊಂದಿಗೆ 'ನ' ಪ್ರತ್ಯಯ ಹಚ್ಚಿಕೊಂಡು ಬಂದಿರುತ್ತದೆ. ಇದು ಭಾಷಾ ಬೆಳವಣಿಗೆಯನ್ನು ಸೂಚಿಸುತ್ತದೆಂದು ತಿಳಿಯಬಹುದಾಗಿದೆ. 'ನಾನು ಸೇವಿಸುವ ಐದನೇಯ ಮಾವಿನ ಹಣ್ಣೇ ಕೊನೆಯ ಹಣ್ಣು. ಇದನ್ನು ಅಂಚಿನ ಹಣ್ಣು (Marginal Mango) ಎಂದು ಕರೆಯುವುದು. ಈ ಅಂಚಿನ ಹಣ್ಣಿನ ಸೇವನೆಯಿಂದ ದೊರೆವ ತುಷ್ಟಗುಣವೇ ಅಂಚಿನ ತುಷ್ಟಿಗುಣ (Marginal Utility).' ಈ ಭಾಷಾಂತರವನ್ನು ಎನ್.ಆರ್. ಅಪರಂಜಿಯವರು 'ಅಂಚಿನ' ಪದ ಬಳಕೆಯ ವಾಕ್ಯದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. 'ಅಂಚಿನ' ಎಂಬುದು 'ಕೊನೆಯ' ಎಂದು ಮಾವಿನ ಹಣ್ಣಿನ ರೂಪಕದ ದೃಷ್ಟಾಂತದಲ್ಲಿ ತಿಳಿಸಿದ್ದಾರೆ. ಇದರಿಂದ ಅರ್ಥಶಾಸ್ತ್ರದ ಸಾಮಾನ್ಯ ವಿದ್ಯಾರ್ಥಿಯ ಗ್ರಹಿಕೆಗೆ ನಿಲುಕತ್ತದೆ. ಅರ್ಥಶಾಸ್ತ್ರದ ತಾಂತ್ರಿಕ ಪದ ಪರಿಚಯವನ್ನು ಸಾಹಿತ್ಯದ ಪದದ ಮೂಲಕ ಮಾಡಿರುವುದು ಕಂಡುಬರುತ್ತದೆ. 'ನಾವು ಒಂದು ಸಮಯದಲ್ಲಿ ಒಂದು ವಸ್ತುವನ್ನು ಒಂದಾದ ಮೇಲೊಂದರಂತೆ ಸೇವಿಸುತ್ತಾ ಹೋದಲ್ಲಿ, ಆ ವಸ್ತುವಿನ ಸೀಮಂತ ಘಟಕಗಳಿಂದ ಪಡೆಯುವ ತೃಪ್ತಿಯು ಕ್ಷೀಣಿಸುತ್ತಾ ಹೋಗುತ್ತದೆ'. ಹೀಗೆ ಒಬ್ಬ ಅನುಭೋಗಿಯು ಒಂದಾದ ಅನಂತರ ಇನ್ನೊಂದು ಹಣ್ಣನ್ನು ಸೇವಿಸುತ್ತಾ ಹೋದರೆ ಅವನು ಸೀಮಾಂತ ಘಟಕಗಳಿಂದ ಪಡೆಯುವ ತೃಪ್ತಿಯು ಕ್ಷೀಣಿಸುತ್ತಾ ಹೋಗುತ್ತದೆ. ಕೊನೆಯಲ್ಲಿ ತುಷ್ಟಿಗುಣವೇ ಇಲ್ಲದಂತಾಗುತ್ತದೆ. ಈ ಭಾಷಾಂತರವು ಎಮ್. ಎಸ್. ಸುಂಕಾಪುರವರು ಸಂಪಾದಿಸಿದ ಪಠ್ಯಪುಸ್ತಕದಲ್ಲಿ ಹೇಳಿದ್ದಾರೆ. ಮಾರ್ಷಲ್ ಅವರ ಇಳಿಮುಖ ತುಷ್ಟಿಗುಣ ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ Marginal ಪದವು ಸೀಮಾಂತ ಪದವಾಗಿದೆ. ಈ ಪದವು ಭೌಗೋಳಿಕ ಅಧ್ಯಯನದಲ್ಲಿಯೂ ಬಳಕೆಯಾಗುತ್ತದೆ.

ಅರ್ಥಶಾಸ್ತ್ರದಲ್ಲಿ ಭೂಮಿ ಮಹತ್ವದ ಸ್ಥಾನ ಪಡೆದಿದೆ. ಅದರ ಬಳಕೆ ವಿಸ್ತೃತವಾಗಿದೆ. ಒಂದು ಪ್ರದೇಶವನ್ನು ನಿರ್ದಿಷ್ಟವಾಗಿ ಪ್ರತ್ಯೇಕಿಸುವ ಕಾರ್ಯವನ್ನು 'ಸೀಮೆ' ಅಥವಾ 'ಸೀಮಾ' ಮಾಡುತ್ತದೆ. ಇಲ್ಲಿಯೂ ಅನುಭೋಗಿ ತಾನು ನೀರಿಕ್ಷಿಸಿದ ಒಟ್ಟು ಪ್ರಮಾಣ ಮತ್ತು ಹೆಚ್ಚುವರಿ ಪ್ರಮಾಣವನ್ನು ಪ್ರತ್ಯೇಕಿಸುವ ಪದವಾಗಿ ಬಳಕೆಯಾಗಿರಬೇಕು ಎಂದು ತಿಳಿಯಲು ಅಡ್ಡಿಯಿಲ್ಲ. ಕಾರಣ ಸೀಮೆ ಮತ್ತು ಸೀಮಾಂತ ಎರಡೂ ಪದಗಳಿಗೆ ಸಂಬಂಧವಿರುವುದನ್ನು ಕಾಣಲು ಸಾಧ್ಯವಿದೆ. 'ಅನುಭೋಗಿಯು ಪಡೆಯುವ ಯಾವುದೊಂದು ವಸ್ತುವಿನ ಅಂಚಿನ (ಸೀಮಾಂತ) ತುಷ್ಟಿಗುಣಕ್ಕೂ ಮತ್ತು ಅವನು ಆ ವಸ್ತುವಿಗೆ ಕೊಡುವ ಬೆಲೆಗೂ ಸಂಬಂಧವಿದೆ. ಅನುಭೋಗಿಯು ಕೊಡುವ ಬೆಲೆಯು ಆ ವಸ್ತುವಿನಿಂದ ಸಿಗುವ ತುಷ್ಟಿಗುಣವನ್ನು ಇಲ್ಲವೇ ತೃಪ್ತಿಯನ್ನು ಸೂಚಿಸುತ್ತದೆ. ಈ ಭಾಷಾಂತರದ ಬರಹವು ಪ್ರಭಾಕರ ಶಿಶಿರವರು 'ಸೂಕ್ಷ್ಮ ಅರ್ಥಶಾಸ್ತ್ರದಲ್ಲಿ' ವಿವರಿಸಲ್ಪಟ್ಟಿದೆ. ಈ ಬರಹಗಾರರು ಏಕಕಾಲಕ್ಕೆ ಎರಡೂ ಪದಗಳನ್ನು ಬಳಸಿರುತ್ತಾರೆ. ಆಂಗ್ಲ ಭಾಷೆಯನ್ನು ಪರಿಚಯಿಸದಿದ್ದರೂ ಇದರ ಬಳಕೆಯಿಂದ ಅರ್ಥವಾಗುತ್ತದೆ. ಬಳಸಿರುವ ದೃಷ್ಟಾಂತವು ಪದದ ಪರಿಕಲ್ಪನೆ ಅಧ್ಯಯನಕಾರರಲ್ಲಿ ಮೂಡುತ್ತದೆ. ಈ ಎರಡೂ ಪದಗಳು ಸಮನಾರ್ಥಕ ಪದಗಳು ಇವು ಬೇರೆ-ಬೇರೆ ಎಂದು ತಿಳಿಯುವ ಅಗತ್ಯವಿಲ್ಲ ಎಂಬ ಮಾತು ಎರಡನ್ನು ಒಟ್ಟಿಗೆ ಬಳಸಿರುವುದನ್ನು ಸೂಚಿಸುತ್ತದೆ. ಇಂಥ ಹಲವಾರು ಪದಗಳ ಬಳಸಿ ರಚಿಸಿದ ವಾಕ್ಯಗಳು ಸರಳವಾಗಿವೆ. ವಿಷಯ ನಿರೂಪಣೆ ಮತ್ತು ವಿಶ್ಲೇಷಣೆ ಸರಾಗವಾಗಿವೆ.

**ಉತ್ಪಾದನೆ (Production)** : ಈ ಪದದ ಪರಿಕಲ್ಪನೆ ಬೇರೆ-ಬೇರೆ ಬರಹಗಾರರು ವಿಭಿನ್ನ ರೀತಿಯಲ್ಲಿ ಹೇಳಿದ್ದಾರೆ. 'ಉತ್ಪಾದನೆ ಎಂದರೆ ಉಪಯುಕ್ತತೆಯನ್ನು ನಿರ್ಮಿಸುವುದು.' ಎಂಬುದಾಗಿ ಅರ್ಥಶಾಸ್ತ್ರ ತತ್ವ ನಿರೂಪಣೆಯಲ್ಲಿ ದಾಖಲಿಸಿದೆ. ಸಾಮಾನ್ಯವಾಗಿ ಉತ್ಪಾದನೆ ಎಂಬ ಶಬ್ದಕ್ಕೆ ಪದಾರ್ಥವನ್ನು ನಿರ್ಮಿಸುವುದು ಎಂಬುದಾಗಿ ಅರ್ಥವಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಇದಕ್ಕೆ ವಿಶಿಷ್ಟವಾದ ಅರ್ಥವಿದೆ. ಪದಾರ್ಥದ ಪ್ರಯೋಜನವನ್ನು ಹೆಚ್ಚಿಸುವುದು. ಅಲ್ಲದೆ ಅದರ ಬೆಲೆಯನ್ನು ವೃದ್ಧಿಸುವುದು ಎಂದು ಅರ್ಥಶಾಸ್ತ್ರಜ್ಞರು ವಿವರಿಸುತ್ತಾರೆ. ಪದಾರ್ಥ ಎಂದರೆ ವಸ್ತು ಎಂಬ ಅರ್ಥದಲ್ಲಿ ಬಳಸಿದ್ದಾರೆ. 'ಪ್ರಯೋಜನ' ಎಂಬುದು ಉಪಯುಕ್ತತೆಯ ಅರ್ಥದಲ್ಲಿ ವ್ಯಕ್ತಪಡಿಸಿದ್ದಾರೆ. ಇದರ ಪ್ರಮಾಣವನ್ನು ವಿಸ್ತರಿಸುವ ಕ್ರಮವು ಇದರಲ್ಲಿ ಅಡಗಿರುವುದು ತಿಳಿಸಯುತ್ತದೆ. 'ಜನಸಾಮಾನ್ಯರ ಭಾಷೆಯಲ್ಲಿ ಉತ್ಪಾದನೆ (Production) ಎಂದರೆ ಯಾವುದೇ ಒಂದು ವಸ್ತುವನ್ನು ಯಂತ್ರದ ಸಹಾಯದಿಂದ ತಯಾರಿಸುವುದು ಎಂದು ಅರ್ಥವಾಗುವುದು. ಅರ್ಥಶಾಸ್ತ್ರದಲ್ಲಿ ವಸ್ತುವಿನ ಉಪಯುಕ್ತತೆಯನ್ನು ಹೆಚ್ಚಿಸಿ ಆ ಮೂಲಕ ಅದರ ಮೌಲ್ಯವನ್ನು (Value) ಹೆಚ್ಚಿಸುವುದು ಉತ್ಪಾದನೆ ಎನಿಸುವುದು (Production is the creation of utility).' ಈ ಭಾಷಾಂತರವು ಎನ್. ಆರ್. ಅಪರಂಜಿಯವರ ಆಧುನಿಕ ಆರ್ಥಶಾಸ್ತ್ರದ ಪುಟ ೧೩೩ರಲ್ಲಿ ವಿವರಿಸಲ್ಪಟ್ಟಿದೆ. ಇಂಗ್ಲಿಷನ ಒಂದು ವಾಕ್ಯದ ಸಾರಾಂಶವು ಕನ್ನಡದ ಎರಡು ವಾಕ್ಯಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಆದರೂ

ಇಂಗ್ಲಿಷಿನ ವಾಕ್ಯವು ನೀಡುವ ಅರ್ಥವು ಕನ್ನಡಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ಅರ್ಥ ನೀಡುತ್ತದೆ. ಆದರೆ ವಿಶ್ಲೇಷಣೆ ಅರ್ಥಮಾಡಿಸುವಲ್ಲಿ ಪ್ರಯತ್ನಿಸಿದೆ. ಇಂಗ್ಲಿಷ್ ವಾಕ್ಯದಲ್ಲಿ ಗೌನವಾದ ವಸ್ತವನ್ನು ಕನ್ನಡದಲ್ಲಿ ಬಿಡಿಸಿಟ್ಟಿದ್ದಾರೆ. 'ಉತ್ಪಾದನೆ' ಎಂಬ ಶಬ್ದವನ್ನು ಬಹಳ ವಿಶಾಲವಾದ ಅರ್ಥದಲ್ಲಿ ಉಪಯೋಗಿಸುವುದಾದರೆ ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಸಲುವಾಗಿ ಕೈಗೊಳ್ಳುವ ಚಟುವಟಿಕೆಗಳೇ ಉತ್ಪಾದನೆ ಎಂದು ಹೇಳಬಹುದು. ಆದರೆ ಅರ್ಥಶಾಸ್ತ್ರದಲ್ಲಿ ಈ ಪದಕ್ಕೆ ಒಂದು ನಿರ್ದಿಷ್ಟವಾದ ಅರ್ಥವಿದೆ. ವಸ್ತುವಿನ ತುಷ್ಟಿಗುಣವನ್ನು ಸೃಷ್ಟಿಸುವುದೇ ಉತ್ಪಾದನೆ ಎಂಬುದಾಗಿ ಕೆಲವರು ಅಭಿಪ್ರಾಯ ಪಟ್ಟಿದ್ದಾರೆ. ಮಾನವ ತನ್ನ ಪ್ರಯತ್ನದಿಂದ ವಸ್ತುವಿನ ಉಪಯುಕ್ತತೆಯನ್ನು ಹೆಚ್ಚಿಸುವುದೇ ಅಲ್ಲದೆ ಅದರ ಮೌಲ್ಯವನ್ನು ಹೆಚ್ಚಿಸುತ್ತಾನೆ. ಈ ಬಗೆಯ ಚಟುವಟಿಕೆಗೆ ಉತ್ಪಾದನೆ ಎಂದು ಹೆಸರು. ಎಂಬುದನ್ನು ಎಸ್. ಶರಣಪ್ಪ ಇವರು 'ಆಧುನಿಕ ಆರ್ಥಿಕ ಸಿದ್ಧಾಂತದಲ್ಲಿ' ವಿಶ್ಲೇಷಣೆ ಮಾಡಿರುತ್ತಾರೆ. ಈ ಪರಿಕಲ್ಪನೆಯಲ್ಲಿಯೂ ಯಾವುದೇ ವಿಶೇಷತೆ ಕಂಡು ಬರುವುದಿಲ್ಲ. ಇಂಗ್ಲಿಷ್ ಪದ ಇಲ್ಲವೆ ವಾಕ್ಯ ಬಳಸದಿದ್ದರೂ ಅದರ ಭಾವಾನುವಾದವನ್ನು ಪರಿಕಲ್ಪನೆಗೆ ಬಳಸಿದ್ದಾರೆ. ನಂತರ ದೃಷ್ಟಾಂತದ ಮೂಲಕ ವಿಶ್ಲೇಷಿಸಿರುವುದನ್ನು ಗಮನಿಸಬಹುದಾಗಿದೆ.

'ವಿಶಾಲವಾದ ಅರ್ಥದಲ್ಲಿ ಉತ್ಪಾದನೆ ಎಂದರೆ ಮಾನವನ ಬಯಕೆಗಳನ್ನು ತೃಪ್ತಿ ಪಡಿಸುವುದರ ಸಲುವಾಗಿ ಕೈಗೊಳ್ಳುವ ಚಟುವಟಿಕೆಗಳೆಂದು ಅರ್ಥ. ಆದರೆ ಅರ್ಥಶಾಸ್ತ್ರದಲ್ಲಿ ಇದಕ್ಕೆ ಒಂದು ವಿಶಿಷ್ಟ ಅರ್ಥವಿದೆ. ವಸ್ತುವಿಗೆ ತುಷ್ಟಗುಣ ಸೇರಿಸುವುದಕ್ಕೆ ಉತ್ಪಾದನೆ ಎಂದು ಕರೆಯುತ್ತಾರೆ. ಬಳಕೆಯ ಭಾಷೆಯಲ್ಲಿ ವಸ್ತುಗಳನ್ನು ತಯಾರಿಸುವುದಕ್ಕೆ ಉತ್ಪಾದನೆ ಎಂದು ಕರೆಯುತ್ತಾರೆ. ಆದರೆ ಇದು ಸರಿಯಲ್ಲ. ಕೇವಲ ತುಷ್ಟಿಗುಣ ಸೃಷ್ಟಿಯೇ ಉತ್ಪಾದನೆಯಾಗದು. ತುಷ್ಟಿಗುಣದ ಜೋತೆಗೆ ಮೌಲ್ಯವೂ ಹೆಚ್ಚಾಗಬೇಕು. ಆದುದರಿಂದ ಉತ್ಪಾದನೆಯೆಂದರೆ ವಸ್ತುಗಳ ಸೃಷ್ಟಿಯೆಂದು ತಿಳಿದುಕೊಳ್ಳಬಾರದು. ಏಕೆಂದರೆ ಮಾನವನು ಯಾವ ವಸ್ತುಗಳನ್ನು ಸೃಷ್ಟಿಸಲಾರನು.' ಈ ಭಾಷಾಂತರವು ಆಧುನಿಕ ಅರ್ಥಶಾಸ್ತ್ರ (೧೩೮)ದಲ್ಲಿ ಕೆ.ಡಿ. ಬಸವರಾವರು ವಿವರಣೆ ಮಾಡಿರುತ್ತಾರೆ. ಉತ್ಪಾದನೆಯ ಪರಿಕಲ್ಪನೆಯನ್ನು ಅರ್ಥಶಾಸ್ತ್ರದ ವಿದ್ಯಾರ್ಥಿಗಳಲ್ಲದವರಿಗೂ ಅರ್ಥವಾಗುವಂತೆ ವಿಶ್ಲೇಷಣೆ ಮಾಡಿರುವುದನ್ನು ಗುರುತಿಸಬಹುದಾಗಿದೆ. ವಿಷಯ ನಿರೂಪಣೆಯೂ ಸರಳವಾಗಿದ್ದರೂ ಸಹ ಅಧ್ಯಯನ ಮಾಡುವವರಿಗೆ ಮನವರಿಕೆ ಮಾಡುವಲ್ಲಿ ಬಹುತೇಕ ಯಶಸ್ವಿಯಾಗಿದೆ ಎಂದು ಭಾವಿಸಬಹುದು. 'ನಿಸರ್ಗದತ್ತವಾದ ಪ್ರಯೋಜನಯುಕ್ತ ಅಥವಾ ಪ್ರಯೋಜನ ರಹಿತ ವಸ್ತುಗಳಿಗೆ ತುಷ್ಟಿಗುಣ ಸೇರಿಸಿ, ಅಂತಹ ವಸ್ತುಗಳ ಉಪಯುಕ್ತತೆ ಹಾಗೂ ಮೌಲ್ಯವನ್ನು ಅಧಿಕಗೊಳಿಸುವುದೇ ಉತ್ಪಾದನೆಯಾಗಿದೆ.' ಎಂಬುದನ್ನು ಗೂಡೂರು ಭೀಮಸೇನರವರು ಅರ್ಥಶಾಸ್ತ್ರದ ಮೂಲಾಂಶಗಳು ಎಂಬ ಪತ್ಯದಲ್ಲಿ (೨೫೮) ವಿಶ್ಲೇಷಣೆ ಮಾಡಿರುತ್ತಾರೆ. ಅಂದರೆ 'ಉತ್ಪಾದನೆ' ಎಂಬ ಪದದ ಪರಿಭಾಷೆಯಲ್ಲಿ ತಷ್ಟಗುಣ, ಉಪಯುಕ್ತತೆ ಮತ್ತು ಮೌಲ್ಯಗಳು ಅಡಕವಾಗಿವೆ. ಇವುಗಳ ಕುರಿತಾದ ಸಂಕ್ಷಿಪ್ತ ವಿಶ್ಲೇಷಣೆ ಇದೆ. ಇಲ್ಲಿ ತುಷ್ಟಿಗುಣ ಮತ್ತು ಉಪಯುಕ್ತತೆ ಬೇರೆ-ಬೇರೆ ಎಂದು ಪರಿಗಣಿಸಿದ್ದನ್ನು

ಗಮನಿಸಬೇಕು. ಅನೇಕ ಬರಹಗಾರರಿಂದ ಅವು ಸಮಾನ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. 'ವಸ್ತುವಿನ ಉಪಯುಕ್ತತೆಯನ್ನು ಅಂದರೆ ಅದರ ತುಷ್ಟಿಗುಣವನ್ನು ಹೆಚ್ಚಿಸಿ ಇಲ್ಲವೆ ವಸ್ತುವಿಗೆ ತುಷ್ಟಿಗುಣವನ್ನು ಸೇರಿಸಿ ಅದರ ವಿನಿಮಯದ ಮೌಲ್ಯವನ್ನು (Value) ಹೆಚ್ಚಿಸುವ ಪ್ರಕ್ರಿಯೆಗೆ ಅರ್ಥಶಾಸ್ತ್ರದಲ್ಲಿ 'ಉತ್ಪಾದನೆ' ಎಂದು ಕರೆಯುತ್ತಾರೆ.' ಎಂಬುದು ಕೆ.ಡಿ. ಬಸವಾ ಅವರ ಹೇಳಿಕೆ. ಈ ಮೊದಲು ಇವರು 'ಮೌಲ್ಯ' ಎಂಬ ಪದಬಳಕೆ ಮಾಡಿದ್ದರು. ಈಗ ವಿನಿಮಯ ಮೌಲ್ಯ ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. 'ಉತ್ಪಾದನೆ' ಪರಿಭಾಷೆಯ ವಿಶ್ಲೇಷಣೆಯಲ್ಲಿ ಬಳಸಿರುವ ಪದಗಳಲ್ಲಿ ಭಿನ್ನತೆಗಳನ್ನು ಗುರುತಿಸಬಹುದಾಗಿದೆ. ಪದ ಭಿನ್ನತೆಯು ಅರ್ಥ ಭಿನ್ನತೆಗೂ ಕಾರಣವಾಗುತ್ತದೆ. ಇವರು 'ಮೌಲ್ಯ' ಪದವನ್ನು 'ವಿನಿಮಯ ಮೌಲ್ಯ' ಎಂಬುದನ್ನು ಏಕೆ ಬಳಸಿರಬೇಕೆಂಬುದನ್ನು ಪರಿಶೀಲಿಸುವ ಅಗತ್ಯವಿದೆ ಎನಿಸುತ್ತದೆ. ಮೌಲ್ಯವು ಬೆಲೆಯ ಅರ್ಥ ನೀಡುತ್ತದೆ. ವಿನಿಮಯ ಮೌಲ್ಯವೂ ಇದೇ ಅರ್ಥವನ್ನು ನೀಡಿದರೂ 'ವಿನಿಮಯ' ನಾವಿನ್ಯ ಪಡೆದಿದೆ. ಅರ್ಥಶಾಸ್ತ್ರ ಪಠ್ಯಗಳಲ್ಲಿ ಬಳಸಿದ ವಾಕ್ಯಗಳು ಸರಳವಾಗಿರುವವೇ ಹೆಚ್ಚು. ಸಂಕೀರ್ಣ ಗೊಂಡಯುಕ್ತ ವಾಕ್ಯಗಳು ಬಳಕೆಯಾಗಿದ್ದರೂ ತುಂಬ ಕಡಿಮೆ ಪ್ರಮಾಣದಲ್ಲಿವೆ. ವಿದ್ಯಾರ್ಥಿಗಳನ್ನು ಗಮನಿಸಿ ರಚಿಸಿದ ಪಠ್ಯಗಳಾಗಿವೆ. ಆದ್ದರಿಂದ ಸುಲಭವಾಗಿ ಅರ್ಥೈಸಿಕೊಳ್ಳಲು ಸಹಾಯಕ್ಕಾಗಿ ಸರಳ ವಾಕ್ಯಗಳಿರುವುದನ್ನು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

### ೪.೪. ನಿರೂಪಣೆ ಮತ್ತು ವಿಶ್ಲೇಷಣೆ

ಅರ್ಥಶಾಸ್ತ್ರದಲ್ಲಿ ಅನೇಕ ಪರಿಕಲ್ಪನೆಗಳು ಬಳಕೆಯಾಗುತ್ತವೆ. ಅವುಗಳ ನಿರೂಪಣೆಯನ್ನು ಬೇರೆ ಬೇರೆ ಭಾಷಾಂತರಕಾರರು ವಿಭಿನ್ನ ರೀತಿಯಲ್ಲಿ ನಿರೂಪಿಸಿರುವುದನ್ನು ಗುರುತಿಸಬಹುದಾಗಿದೆ. ವಿವಿಧ ಕಾಲಘಟ್ಟಗಳಲ್ಲಿಯೂ ಯಾವುದೇ ಒಂದು ಪರಿಕಲ್ಪನೆ ಒಂದೇ ರೀತಿಯಲ್ಲಿ ಅದು ನಿರೂಪಿಸಲ್ಪಟ್ಟಂತೆ ಕಂಡು ಬರುವುದಿಲ್ಲ. ಈಗ ನಾವು ಬೇಡಿಕೆಗೆ ಸಂಬಂಧಿಸಿದಂತೆ ಇರುವ ನಿಯಮವನ್ನು ಗಮನಿಸೋಣ. ಬೇಡಿಕೆಯ ನಿಯಮದಲ್ಲಿ ಅತೀ ಹೆಚ್ಚು ಬಳಕೆಗೆ ಬರುವ ಪದಗಳೆಂದರೆ ಬೇಡಿಕೆಯ ಪ್ರಮಾಣ, ಬೆಲೆ ಮತ್ತು ಅನುಭೋಗಿಯ ವರ್ತನೆ ಇತ್ಯಾದಿ.'ಬೆಲೆ ಬದಲಾವಣೆಗಳಿಗನು ಗುಣವಾಗಿ ಆಗುವ ಬೇಡಿಕೆಯ ಬದಲಾವಣೆಗೆ ಆಕುಂಚನ ಮತ್ತು ಪ್ರಸರಣ ಎಂಬ ಪದಗಳನ್ನು ಬಳಸುತ್ತೇವೆ. ಆದರೆ ಬೆಲೆ ಹೊರತು ಪಡಿಸಿ ಬೇಡಿಕೆಯಲ್ಲಿ ಉಳಿದ ಕಾರಣಗಳಿಂದ ಆಗುವ ಬದಲಾವಣೆಗಳಿಗೆ ಬೇಡಿಕೆಯ ಹೆಚ್ಚಳ ಮತ್ತು ಕಡಿತವೆಂಬ ಪದಗಳನ್ನು ಉಪಯೋಗಿಸುತ್ತೇವೆ. ಬೇಡಿಕೆಯ ಹೆಚ್ಚಳ ಮತ್ತು ಪ್ರಸರಣ : ಯಾವುದೇ ವಸ್ತುವಿನ ಬೆಲೆ ಕಡಿಮೆಯಾಗಿ, ಅದರ ಬೇಡಿಕೆ ಹೆಚ್ಚಾದರೆ ಅದಕ್ಕೆ ಬೇಡಿಕೆಯ ಪ್ರಸರಣವೆಂದು ಕರೆಯುತ್ತಾರೆ. ಉದಾಹರಣಾರ್ಥವಾಗಿ ಹಾಲಿನ ಬೆಲೆ ಕಡಿಮೆಯಾದರೆ ಹಾಲಿನ ಬೇಡಿಕೆಯೂ ಅಧಿಕವಾಗುತ್ತದೆ. ಇದಕ್ಕೇನೇ ಪ್ರಸರಣವೆಂದೆನ್ನುತ್ತಾರೆ. ಯಾವುದೇ ವಸ್ತುವಿನ ಬೇಡಿಕೆಯು ಬೆಲೆಯ ಬದಲಾವಣೆಯ ಮೇಲೆ ಅವಲಂಬಿಸಿದೆ. ಹೆಚ್ಚಾದರೆ ಅದಕ್ಕೆ ಬೇಡಿಕೆಯ ಹೆಚ್ಚಳವೆನ್ನುತ್ತಾರೆ. ಯಾವುದೇ ಒಂದು ಕಾರಣಕ್ಕಾಗಿ ಇದ್ದ ಬೆಲೆಗೆನೇ ಒಬ್ಬ

ವ್ಯಕ್ತಿ ಹೆಚ್ಚು ಹಾಲನ್ನು ಕೊಂಡರೆ ಬೇಡಿಕೆಯ ಹೆಚ್ಚಳವೆನ್ನಬೇಕಾಗುತ್ತದೆ. ಬೇಡಿಕೆಯ ಪ್ರಸರಣವೆಂದರೆ ಕಡಿಮೆ ಬೆಲೆಗೆ ಅಧಿಕವಾಗಿ ಕೊಳ್ಳುವುದು, ಬೇಡಿಕೆಯ ಹೆಚ್ಚಳವೆಂದರೆ ಅದೇ ಬೆಲೆಗೆ ಹೆಚ್ಚು ಕೊಳ್ಳುವುದು, ಇಲ್ಲವೆ ಹೆಚ್ಚಿನ ಬೆಲೆಗೆ ಮೊದಲಿನಷ್ಟೇ ಕೊಳ್ಳುವುದು. ಬೇಡಿಕೆಯ ಕಡಿತ ಮತ್ತು ಆಕುಂಚನ: ಯಾವುದೇ ವ್ಯಕ್ತಿ ಬೆಲೆ ಹೆಚ್ಚಿದಂತೆ ವಸ್ತುವನ್ನು ಕಡಿಮೆ ಕೊಂಡರೆ ಅದು ಬೇಡಿಕೆಯ ಆಕುಂಚನವೆಂದೆನಿಸುತ್ತದೆ. ಆದರೆ ಬೆಲೆ ಬದಲಾವಣೆ ಇಲ್ಲದೇನೇ ಆ ವಸ್ತುವನ್ನು ಅವನು ಕಡಿಮೆ ಕೊಂಡರೆ ಅದಕ್ಕೆ ಬೇಡಿಕೆಯ ಕಡಿತವೆಂದೆನ್ನುತ್ತಾರೆ. ಬೆಡಗು-ಬಿನ್ನಾಣ ಮುಂತಾದ ಪರಿಸ್ಥಿತಿಯ ಬದಲಾವಣೆಯಿಂದಾಗಿ ಉಪಭೋಗಿಯು ಇದ್ದ ಬೆಲೆಗೆನೇ ಕಡಿಮೆ ಕೊಳ್ಳಬಹುದು. ಇಲ್ಲವೆ ಬೆಲೆ ಕಡಿಮೆಯಾದರೂ ಕೂಡ ಮೊದಲಿನಷ್ಟೇ ಪರಿಮಾಣವನ್ನು ಕೊಳ್ಳುತ್ತಾಹೋಗಬಹುದು. ಆಕುಂಚನವೆಂದರೆ ಹೆಚ್ಚಿನ ಬೆಲೆಗೆ ಕಡಿಮೆ ಬೇಡಿಕೆ, ಬೇಡಿಕೆಯ ಕಡಿತವೆಂದರೆ ಅಷ್ಟೆ ಬೆಲೆಗೆ ಕಡಿಮೆ ಬೇಡಿಕೆ, ಇಲ್ಲವೆ ಕಡಿಮೆ ಬೆಲೆಗೆ ಮೋದಲಿನಷ್ಟೆ ಬೇಡಿಕೆ' ಈ ಭಾಷಾಂತರವು 'ಅರ್ಥಶಾಸ್ತ್ರ ತತ್ವ ನಿರೂಪಣೆ' ೧೯೭೧:೭೧-೭೩ರಲ್ಲಿ ಸುಂಕಾಪುರವರು ಹೇಳಿರುತ್ತಾರೆ.

ಬೇಡಿಕೆಯ ಆಕುಂಚನ ಮತ್ತು ಪ್ರಸರಣ, ಬೇಡಿಕೆಯ ಹೆಚ್ಚಳ ಮತ್ತು ಕಡಿತ' ಪರಿಕಲ್ಪನೆಯ ನಿರೂಪಣೆ ಸೊಗಸಾಗಿದೆ. ಇವೆರಡರ ನಡುವಿನ ಭಿನ್ನತೆಯನ್ನು ಚೆನ್ನಾಗಿ ವ್ಯಕ್ತಪಡಿಸಿರುವುದನ್ನು ಗಮನಿಸಬಹುದು. ಹಾಲಿನ ದೃಷ್ಟಾಂತದ ಮೂಲಕ ವಿಷಯವು 'ಪದ' ಭಿನ್ನತೆಯೊಂದಿಗೆ ಅರ್ಥ ಭಿನ್ನತೆಯನ್ನು ಉತ್ತಮವಾದ ವಿಶ್ಲೇಷಣೆಯ ಭಾಷಾಂತರ ಮಾಡಲಾಗಿದೆ. ಅನೇಕ ಸಂದರ್ಭಗಳಲ್ಲಿ ಈ ರೀತಿಯ ಪದಗಳ ಬಳಕೆ ಸಮನಾರ್ಥಗಳಂತೆ ಬಳಸಿದ ನಿದರ್ಶಗಳಿರಲೂಬಹುದು. ಆದರೆ ಈ ಪದಗಳಲ್ಲಿನ ಸೂಕ್ಷ್ಮತೆಯ ಮೂಲಕ ಅರ್ಥವನ್ನು ನಿರೂಪಿಸಿದರೆ ಅಧ್ಯಯನ ಮಾಡುವವರಿಗೆ ಹೆಚ್ಚು ಪ್ರಯೋಜನ ಲಭಿಸಬಹುದಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಾಲ್ಕು ರೇಖಾ ಚಿತ್ರಗಳನ್ನು ನೇರಭಾಷಾಂತರದ ಮೂಲಕ ರಚಿಸಿದ್ದಾರೆ. ಅವುಗಳ ಮೂಲಕ ವಿಷಯವನ್ನು ಹೆಚ್ಚು ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಆದರೆ ನಾಲ್ಕು ರೇಖಾ ಚಿತ್ರಗಳಲ್ಲಿ ಅಂದರೆ ಪುಟ ೭೨ ರಲ್ಲಿನ ಚಿತ್ರ ೫ ಮತ್ತು ಪುಟ ೭೩ರಲ್ಲಿನ ಚಿತ್ರ ೬ರಲ್ಲಿ ಬಳಸಿರುವ ಅಕ್ಷರಗಳು ಕನ್ನಡ ಅಕ್ಷರ [ಅ ಬ ಕ ಯ ರ ಲ ಇ ಈ ಡ ಢ ಫ ] ಗಳ ಬದಲಿ ಇಂಗ್ಲಿಷ್ ಅಕ್ಷರಗಳನ್ನು ಬಳಸಿದ್ದರೆ ಇನ್ನು ಹೆಚ್ಚು ಪರಿಣಾಮಕಾರಿಯಾಗಬಹುದಿತ್ತು ಅನಿಸುತ್ತದೆ. ಆದರೆ ಎಪ್ಪತ್ತರ ದಶಕದಲ್ಲಿ ಕನ್ನಡಿಕರಣದ ಕಾರ್ಯ ಚುರುಕಾಗಿ ಸಾಗಿಸಿದಂತೆ ತೋರುತ್ತದೆ.

ಹೀಗಾಗಿ ಇಂಗ್ಲೀಷ್ ಮಾಧ್ಯಮದ ಅರ್ಥಶಾಸ್ತ್ರ ಪಠ್ಯಗಳಲ್ಲಿನ ಎಲ್ಲಾ ಅಂಶಗಳನ್ನು ಕನ್ನಡಕ್ಕೆ ಅನುವಾದಿಸುವ ಸಂದರ್ಭದಲ್ಲಿ ರೇಖಾ ಚಿತ್ರಗಳಲ್ಲಿನ ಸಂಕೇತಾ ಅಕ್ಷರಗಳೂ ಕನ್ನಡಮಯವಾಗಿವೆ ಎಂದು ಭಾವಿಸಬಹುದಾಗಿದೆ. 'ಬೇಡಿಕೆಯ ಪ್ರಥಮ ನಿಯಮ ನಮಗೆಲ್ಲಾ ಗೊತ್ತೇ ಇದೆ. ಬೆಲೆ ಜಾಸ್ತಿ ಅದಕ್ಕೆ ಸ್ವಲ್ಪ ಕೊಂಡೆ 'ಅಥವಾ' ಬೆಲೆ ಕಡಿಮೆ ಅದಕ್ಕೆ ಸ್ವಲ್ಪ ಹೆಚ್ಚು ಕೊಂಡೆ' ಎಂದು ಎಲ್ಲಾರೂ ಹೇಳುವುದಿಲ್ಲವೆ! ಇದೇ ಬೇಡಿಕೆಯ ಪ್ರಥಮ ನಿಯಮ. ಪಾರಿಭಾಷಿಕವಾಗಿ ಹೇಳಬೇಕಾದರೆ,

ಯಾವ ಪ್ರಭಾವ ಮತ್ತು ಒತ್ತಡಗಳಿಗೆ ಸಿಕ್ಕದೇ ಸಂದರ್ಭ ಸನ್ನಿವೇಶಗಳು ಸ್ಥಿರವಾಗಿವೆ ಎಂದು ಕೊಂಡರೆ, ಬೇಡಿಕೆಯ ಚಲನೆ ಬೆಲೆಯ ಚಲನೆಯ ದಿಕ್ಕಿಗೆ ವಿರುದ್ಧವಾಗಿ ಮುಂದುವರೆಯುತ್ತದೆ ಎಂಬುವುದೇ ಬೇಡಿಕೆಯ ಪ್ರಥಮ ನಿಯಮ, ಬೆಲೆ ಹೆಚ್ಚಾದರೆ ಬೇಡಿಕೆ ಕುಗ್ಗುತ್ತದೆ ಬೆಲೆ ಕಡಿಮೆಯಾದರೆ ಬೇಡಿಕೆ ಹಿಗ್ಗುತ್ತದೆ. ಇದು ಸರ್ವವ್ಯಪ್ತಿಯಾದ ನಿಯಮ, ವಿಪರೀತ ಸಂದರ್ಭಗಳ ಅಪವಾದಗಳನ್ನು ಈ ನಿಯಮದಿಂದ ದೂರವಿರಿಸೋಣ. ಈ ಪ್ರಥಮ ನಿಯಮ ಬಹು ವಿಸ್ತಾರವಾಯಿತು. ಬೆಲೆ ಎಷ್ಟು ಹೆಚ್ಚಿದ್ದರಿಂದ ಅಥವಾ ಕುಗ್ಗಿದ್ದರಿಂದ ಬೇಡಿಕೆ ಎಷ್ಟು ಹೆಚ್ಚಾಯಿತು, ಕಡಿಮೆಯಾಯಿತು, ಇಲ್ಲಾ ಸರಿಸಮನಾಯಿತು. ಎಂಬ ಕ್ಲಿಷ್ಟ ಸಮಸ್ಯೆಗೆ ಮೇಲಿನ ಪ್ರಥಮ ನಿಯಮ ಖಚಿತವಾದ ಯಾವ ಉತ್ತರವನ್ನೂ ಕೊಡಲಿಲ್ಲ'. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಬೆಲೆಯ ಪರಿಣಾಮ ಕುರಿತಾದ ಭಾಷಾಂತರದ ನಿರೂಪಣೆ ಸೊಗಸಾಗಿದೆ.

ಬೆಲೆಯ ಹೊರತಾದ ಬೇಡಿಕೆಯ ಕುರಿತು ಇರಬಹುದಾದ ಪದ ಬಳಕೆಯ ನಿರೂಪಣೆ ಇರುವುದು. ಈ ಸನ್ನಿವೇಶವನ್ನು ಬೇಡಿಕೆಯ ನಿಯಮದ ಅಪವಾದಗಳು ಎಂದು ಪರಿಭಾವಿಸಿದ್ದಾರೆ. ಬೆಲೆಯ ಪರಿಣಾಮವಾಗಿ ಬೇಡಿಕೆಯ ಆಕುಂಚನ ಮತ್ತು ಪ್ರಸರಣ ಪದಗಳಿಗೆ ಪರ್ಯಾಯವಾಗಿ ಕುಗ್ಗು ಮತ್ತು ಹಿಗ್ಗು ಎಂಬ ಪದಗಳ ಬಳಕೆ ಮಾಡಿರುತ್ತಾರೆ. ಬೆಲೆಯನ್ನು ಹೊರತು ಪಡಿಸಿದ ಬೇಡಿಕೆ ಪ್ರಮಾಣಗಳನ್ನು ಸ್ಪಷ್ಟವಾಗಿ ಇಲ್ಲವೆ ನಿರ್ದಿಷ್ಟ ಪದ ಬಳಕೆ ಮಾಡಿರುವುದಿಲ್ಲ. ಆದರೆ ಬೆಲೆಯ ಏರಿಳಿತದಿಂದ ಬೇಡಿಕೆಯಲ್ಲಿ ಎಷ್ಟು ಏರಿಳಿತ ಇಲ್ಲವೆ ಅದೇ ಪ್ರಮಾಣದಲ್ಲಿ ಬದಲಾಗಿದೆಯೋ ಅಥವಾ ಸ್ಥಿರವಾಗಿದೆಯೋ ಎಂಬುದನ್ನು ಮಾರ್ಷಲ್ಲರ ಸ್ಥಿತಿಸ್ಥಾಪಕ ಸಿದ್ಧಾಂತದ ವಿವರಣೆ ಮಾಡಿರುವುದನ್ನು ಗಮನಿಸಬಹುದಾಗಿದೆ. ಮತ್ತೊಂದು ಅಂಶವೆಂದರೆ ಇದಕ್ಕೆ ಸಂಬಂಧಿಸಿದ ರೇಖಾ ಚಿತ್ರಗಳನ್ನು ಬಳಸಿರುವುದಿಲ್ಲ. 'ಬೆಲೆಗಳ ಏರಿಕೆ ಮತ್ತು ಇಳಿಕೆ(Increase and Decrease of Demand) ಗಳ ಪರಿಣಾಮವಾಗಿ ಬೇಡಿಕೆಯ ಪ್ರಮಾಣವನ್ನು ಏರಿಕೆ ಮತ್ತು ಇಳಿಕೆಗಳು ಆಗುವದು ಸರ್ವ ಸಾಮಾನ್ಯ. ಇದು ಬೇಡಿಕೆಯ ನಿಯಮವನ್ನು ಸಹ ಸೂಚಿಸುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ಬೆಲೆಗಳ ಏರಿಳಿತದ ಕಾರಣವಿಲ್ಲದೆ ಬೇಡಿಕೆಯು ಹೆಚ್ಚಬಹುದು ಅಥವಾ ಕಡಿಮೆಯಾಗಬಹುದು. ಇದಕ್ಕೆ ಬೆಲೆಯಲ್ಲದೆ ಇತರ ಅಂಶಗಳು ಕಾರಣವಾಗಿರಬಹುದು.

ಬೇಡಿಕೆಯ ಏರಿಕೆ: ಬೇಡಿಕೆಯ ಏರಿಕೆಯು ಎರಡು ವಿಧಗಳಲ್ಲಿ ಆಗಬಹುದು. ೧. ವಸ್ತುವಿನ ಬೆಲೆಯಲ್ಲಿ ಯಾವುದೇ ಹೆಚ್ಚು ಕಡಿಮೆಯಾಗದಿದ್ದರೂ ಬೇಡಿಕೆಯ ಪ್ರಮಾಣವು ಹೆಚ್ಚುತ್ತದೆ. ೨. ಕೆಲವು ಸಲ ಅಷ್ಟೇ ಪ್ರಮಾಣದ ವಸ್ತುಗಳನ್ನು ಕೊಳ್ಳಲು ಬಳಕೆದಾರರ ಸಂಖ್ಯೆ(Number) ಹೆಚ್ಚಾಗಿರಬಹುದು ಅಥವಾ ಬಳಕೆದಾರರ ಆದಾಯ(Income) ಹೆಚ್ಚಾಗಿರಬಹುದು ಅಥವಾ ಜನರ ಅಭಿರುಚಿಯು ಆ ವಸ್ತುವಿನ ಬಗ್ಗೆ ಹೆಚ್ಚಾಗಿರಬಹುದು ಇತ್ಯಾದಿ. ಯಾವುದೇ ಕಾರಣದಿಂದ ಬೇಡಿಕೆ ಏರಿದರೂ ಬೇಡಿಕೆಯ ರೇಖೆಯೂ(Demand curve) ಬಲಗಡೆಗೆ ಸರಿಯುತ್ತದೆ' ಎನ್‌ಆರ್ ಅಪರಂಜಿಯವರು ಬೇಡಿಕೆಯ ಏರಿಳಿತಗಳಿಗೆ ಬೆಲೆ ಒಂದೇ ಕಾರಣವೆಂದು ಹೇಳುತ್ತಿಲ್ಲ. ಆದರೆ

ಇತರ ಅಂಶಗಳ ಪ್ರಭಾವದಿಂದಲೂ ಸಹ ಬೇಡಿಕೆಯಲ್ಲಿ ಹೆಚ್ಚು ಕಡಿಮೆಯಾಗುವುದನ್ನು ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಪ್ರಮುಖ ಅಂಶವೆಂದರೆ ಬೆಲೆಯ ಕಾರಣ ಮತ್ತು ಬೆಲೆ ಹೊರತು ಪಡಿಸಿ ಬೇಡಿಕೆಯ ಬದಲಾವಣೆಗಳನ್ನು ಗುರುತಿಸಲು 'ಹೆಚ್ಚು ಕಡಿಮೆ' ಎಂಬ ಪದಗಳನ್ನು ಬಲಸಿದ್ದಾರೆ. ಬೆಲೆ ಪರಿಣಾಮದಿಂದ ಬೇಡಿಕೆಯ ಪ್ರಮಾಣಗಳನ್ನು 'ಏರಿಕೆ-ಇಳಿಕೆ' ಎಂಬ ಪದಗಳ ಮೂಲಕ ವಿಶ್ಲೇಷಿಸಿದ್ದಾರೆ. ಇವರು ಒಟ್ಟು ನಾಲ್ಕು ರೇಖಾ ಚಿತ್ರಗಳನ್ನು ಬಳಸಿದ್ದಾರೆ. ಅವುಗಳಲ್ಲಿ ಇಂಗ್ಲೀಷಿನ ಸಂಕೇತಾಕ್ಷರಗಳಿಂದ ಗುರುತಿಸಿದ್ದಾರೆ. ಈ ಎರಡೂ ಪರಿಣಾಮದ ವಿಷಯವನ್ನು ಮನವರಿಕೆ ಮಾಡಲು ಮತ್ತು ತೌಲನಿಕ ಅಧ್ಯಯನ ಮಾಡಲು ಒಂದೇ ಬಗೆಯ ಆಕೃತಿಗಳನ್ನು ನೀಡಿದ್ದಾರೆ. ಒಟ್ಟು ನಾಲ್ಕು ಆಕೃತಿಗಳಿದ್ದು ಪುಟ ೪೮ ರಲ್ಲಿ ಆಕೃತಿ ನಂ.೪ ಮತ್ತು ೫ ಇವೆ. ಉಳಿದ ಎರಡು ಆಕೃತಿಗಳಾದ ೬ ಮತ್ತು ೭ ಪುಟ ೪೯ರಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ಈ ಆಕೃತಿಗಳ ಕೆಳಭಾಗದಲ್ಲಿ ಆಕೃತಿಗಳಲ್ಲಿನ ಮಾಹಿತಿ ವಿಶ್ಲೇಷಣೆಗೆ ಒಳಪಟ್ಟಿದೆ. ಆದರೆ ಬೆಲೆ ಪರಿಣಾಮದ ಬೇಡಿಕೆಯ ಪ್ರಮಾಣದ ಏರಿಳಿತಗಳಿಗೆ 'ಇಂಥದ್ದೇ ಪದ' ಇಲ್ಲವೆ ಬೆಲೆ ಹೊರತಾದ ಇತರ ಅಂಶಗಳಿಂದ ಬೇಡಿಕೆಯ ಹೆಚ್ಚು ಕಡಿಮೆ ಎಂಬಂಥ 'ಇಂಥದ್ದೇ ಪದ' ಎಂಬುದಾಗಿ ಎಲ್ಲಿಯೂ ಪ್ರಸ್ತಾಪಿಸಿರುವುದು ಕಂಡು ಬರುವುದಿಲ್ಲ. 'ಬೇಡಿಕೆಯ ಹೆಚ್ಚಳ ಹಾಗೂ ಇಳಿತ ಮತ್ತು ಬೇಡಿಕೆಯ ಹಿಗ್ಗುವಿಕೆ ಹಾಗೂ ಕುಗ್ಗುವಿಕೆ: ಬೆಲೆ ಮತ್ತು ಬೇಡಿಕೆ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತವೆ ಎಂಬುದನ್ನು ತಿಳಿಸಲಾಗಿದೆ. ಅಂದರೆ ಬೆಲೆ ಏರಿದರೆ ಬೇಡಿಕೆ ಕಡಿಯಾಗುತ್ತದೆ ಎನ್ನುವುದಕ್ಕಿಂತ "ಬೇಡಿಕೆಯು ಕುಗ್ಗುತ್ತದೆ" ಎಂದು ಹೇಳುವುದು ಸೂಕ್ತ ಇದೇ ರೀತಿ ಬೆಲೆ ಇಳಿದಾಗ ಬೇಡಿಕೆ ಹೆಚ್ಚಾಗುತ್ತದೆ ಎಂದು ಹೇಳುವುದಕ್ಕೆ ಬದಲಾಗಿ "ಬೇಡಿಕೆ ಹಿಗ್ಗುತ್ತದೆ" ಎನ್ನುವುದು ಸರಿಯಾದ ವಿವರಣೆಯಾಗುತ್ತದೆ. ಬೇಡಿಕೆ ಹಿಗ್ಗುವುದಕ್ಕೆ ಅಥವಾ ಕುಗ್ಗುವುದಕ್ಕೆ ಬೆಲೆಯೇ ಕಾರಣವಾಗಿದೆ.

ಬೇಡಿಕೆಯ ಪ್ರಮಾಣ ಹೆಚ್ಚಾಗುವುದು ಮತ್ತು ಕಡಿಮೆಯಾಗುವುದನ್ನು ತಿಳಿದುಕೊಳ್ಳಬೇಕಾದರೆ ಬೆಲೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಬೇಡಿಕೆಯ ಪ್ರಮಾಣ ಹೆಚ್ಚಾಗುತ್ತದೆ ಎಂದು ಹೇಳಿದರೆ, ಅದರ ಬೆಲೆಯಲ್ಲಿ ಬದಲಾವಣೆ ಇಲ್ಲದಿದ್ದರೂ ಅದನ್ನು ಅಧಿಕ ಪ್ರಮಾಣದಲ್ಲಿ ಕೊಂಡುಕೊಳ್ಳಲಾಗುತ್ತಿದೆ ಎಂಬುವುದು ವ್ಯಕ್ತವಾಗುತ್ತದೆ. ಬೇಡಿಕೆ ಹೆಚ್ಚಾಗುವುದು ಮತ್ತು ಕಡಿಮೆಯಾಗುವುದನ್ನು ನಕ್ಷೆಗಳ ಮೂಲಕ ವಿವರಿಸಬಹುದು.' ಈ ಭಾಷಾಂತರವನ್ನು ಎಸ್. ಶರಣಪ್ಪನವರು ಬೆಲೆಯ ಪರಿಣಾಮ ಮತ್ತು ಇತರ ಅಂಶಗಳ ಸನ್ನಿವೇಶವನ್ನು ಚೆನ್ನಾಗಿ ನಿರೂಪಿಸಲು ಪ್ರಯತ್ನಿಸಿದ್ದಾರೆ. ಬೇಡಿಕೆಯ ಹಿಗ್ಗುವ-ಕುಗ್ಗುವ ಕುರಿತು ಬಳಸಿದ ಪದಗಳ ಪರಿಭಾಷೆಯನ್ನು ಪ್ರಚುರ ಪಡಿಸಲು ಯತ್ನಿಸಿದ್ದಾರೆ. ಬೆಲೆಯ ಹೊರತಾದ ಬೇಡಿಕೆಯ ಪರಿಮಾಣವನ್ನು ಪ್ರತ್ಯೇಕಿಸಲು ಬಳಸುವ ಪದಗಳನ್ನು ವಿಷದಪಡಿಸಿದ್ದಾರೆ. ಆದರೆ ದೃಷ್ಟಾಂತ ಬಳಸಿರುವುದಿಲ್ಲ. ವಿಷಯ ವಿಶ್ಲೇಷಣೆಗಾಗಿ ನಕ್ಷೆಗಳನ್ನು ಬಳಸಿರುತ್ತಾರೆ. ಪುಟ ೬೪ರಲ್ಲಿನ ನಕ್ಷೆ ೧೧ರಲ್ಲಿ ಬೇಡಿಕೆ ರೇಖೆಗಳು ಎರಡು ಇರುತ್ತವೆ. DD೧, DD೨ ಎಂದು ನಮೂದಿಸಲ್ಪಟ್ಟಿವೆ. ಪುಟ ೬೫ರಲ್ಲಿನ ನಕ್ಷೆ ೧೨ರಲ್ಲಿಯೂ ಎರಡು ಬೇಡಿಕೆ

ರೇಖೆಗಳಿವೆ. ಅವು DD, D೧, D೧ ಎಂದು ನಮೂದಿಸಲ್ಪಟ್ಟವೆ. ಆದರೆ ಈ ಬೇಡಿಕೆ ರೇಖೆ (DD)ಗಳ ಕುರಿತು ವಿಷಯ ನಿರೂಪಣೆಯಲ್ಲಿ ಕಂಡು ಬರುವುದಿಲ್ಲ. ಅಂದರೆ DD ರೇಖೆ ಮತ್ತು D೧,D೧ ರೇಖೆ ಏನನ್ನು ಸೂಚಿಸುತ್ತದೆ ಎಂಬುದರ ಬಗ್ಗೆ ಮಾಹಿತಿ ಇರುವುದಿಲ್ಲ. ಅಲ್ಲದೇ ನಕ್ಷೆ ೧೧ರಲ್ಲಿನ ಮತ್ತು ೧೨ರಲ್ಲಿನ ಬೇಡಿಕೆ ರೇಖೆಗಳಲ್ಲಿನ ಸಂಕೇತಾಕ್ಷರಗಳಲ್ಲಿ ದೋಷ ಇರುವುದನ್ನು ಸರಿಪಡಿಸುವ ಅಗತ್ಯತೆ ಎದ್ದು ಕಾಣುತ್ತದೆ. ಅರ್ಥಶಾಸ್ತ್ರ ಅಧ್ಯಯನ ಮಾಡುವ ವಿದ್ಯಾರ್ಥಿಗೆ ತಪ್ಪು ಸಂದೇಶ ರವಾನೆಯಾಗುವ ಸಾಧ್ಯತೆಗಳಿವೆ. ಇಂಥ ದೋಷಗಳು ನುಸುಳದಂತೆ ಸಾಧ್ಯವಾದ ಮಟ್ಟಿಗೆ ತಡೆಯುವ ಪ್ರಯತ್ನವಾಗಬೇಕು. 'ಬೇಡಿಕೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆ(Extention and contraction of Demand) ವಸ್ತುವಿನ ಬೆಲೆಯಲ್ಲಿ ಬದಲಾವಣೆ ಯಾದಾಗ ಅದರ ಬೇಡಿಕೆಯಲ್ಲಿಯೂ ಬದಲಾವಣೆಯಾಗುತ್ತದೆ. ಇಂತಹ ಬದಲಾವಣೆಯ ಬೇಡಿಕೆಯು ಹಿಗ್ಗುವಿಕೆ ಯಾಗಿರಬಹುದು ಇಲ್ಲವೆ ಕುಗ್ಗುವಿಕೆಯಾಗಿರಬಹುದು. ವಸ್ತುವಿನ ಬೆಲೆ ಇಳಿದಾಗ ಅದರ ಬೇಡಿಕೆಯು ಹೆಚ್ಚಾಗುತ್ತದೆ. ಇದಕ್ಕೆ ಬೇಡಿಕೆಯ ಹಿಗ್ಗುವಿಕೆ ಎಂದು ಕರೆಯುತ್ತಾರೆ.

ಬೇಡಿಕೆಯ ಏರಿಕೆ ಮತ್ತು ಇಳಿಕೆ (Increase and Decrease of Demand): ಬೆಲೆಯಲ್ಲಿ ಯಾವ ಬದಲಾವಣೆಯಾಗದಿದ್ದರೂ ಕೆಲವು ಸಲ ಬೇಡಿಕೆಯು ಬದಲಾಗುತ್ತದೆ. ಇಂತಹ ಬದಲಾವಣೆಯು ಇತರ ಸ್ಥಿತಿಗತಿಗಳಲ್ಲಿ ಉಂಟಾದ ಬದಲಾವಣೆಗಳಿಂದ ಆಗುತ್ತದೆ. ಅವು ಯಾವುವೆಂದರೆ ಜನರ ಆದಾಯ, ಜನಸಂಖ್ಯೆ, ಬಳಕೆದಾರರ ಅಭಿರುಚಿ, ಬದಲಿ ವಸ್ತುಗಳ ಲಭ್ಯತೆ, ಆದಾಯದ ಹಂಚಿಕೆ ಇವೇ ಮೊದಲಾದವು. ಈ ಅಂಶಗಳಲ್ಲಿ ಬದಲಾವಣೆಯಾದರೆ ಬೇಡಿಕೆಯೂ ಸಹ ಬದಲಾವಣೆಯಾಗುತ್ತದೆ. ಆಗ ಬೆಲೆಯಲ್ಲಿ ಮಾತ್ರ ಯಾವ ಬದಲಾವಣೆಯೂ ಆಗುವುದಿಲ್ಲ. ಹೀಗೆ ಬೆಲೆ ಸ್ಥಿರವಾಗಿದ್ದು ಇತರ ಸ್ಥಿತಿಗತಿಗಳಲ್ಲಿ ಬದಲಾವಣೆಗಳಾದಾಗ ಬೇಡಿಕೆಯೂ ಬದಲಾಗುವ ಸಂಭವವಿರುತ್ತದೆ. ಇನ್ನು ಕೆಲವು ಸಲ ಬೆಲೆ ಏರಿದರೂ ಇಲ್ಲವೆ ಇಳಿದರೂ ಬೇಡಿಕೆಯಲ್ಲಿ ಯಾವ ಬದಲಾವಣೆಗಳೂ ಆಗದೆ ಇರಬಹುದು. ಏಕೆಂದರೆ ಆಗ ಇತರ ಸ್ಥಿತಿಗತಿಗಳಲ್ಲಿ ಬದಲಾವಣೆಗಳಾಗಿರುತ್ತವೆ. ಇಂತಹ ಪರಿಸ್ಥಿತಿಯನ್ನು ಬೇಡಿಕೆಯ ಏರಿಕೆ ಮತ್ತು ಇಳಿಕೆಗಳ ಮೂಲಕ ವಿವರಿಸಬಹುದು. ವಸ್ತುವಿನ ಬೇಡಿಕೆಯು ಎರಡು ಪ್ರಕಾರವಾಗಿ ಹೆಚ್ಚಾದಾಗ ಅದಕ್ಕೆ ಬೇಡಿಕೆಯ ಏರಿಕೆ ಎಂದು ಹೇಳುತ್ತೇವೆ. ಮೊದಲನೆಯದು ವಸ್ತುವಿನ ಬೆಲೆಯು ಸ್ಥಿರವಾಗಿದ್ದರೂ ಅದರ ಬೇಡಿಕೆಯು ಹೆಚ್ಚಾಗಬಹುದು. ಎರಡನೆಯದು ವಸ್ತುವಿನ ಬೆಲೆ ಏರಿದರೂ ಅದರ ಬೇಡಿಕೆಯ ಪ್ರಮಾಣ ಮೊದಲಿನಷ್ಟೇ ಉಳಿಯಬಹುದು. ಅಂದರೆ ವಸ್ತುವಿನ ಬೆಲೆ ಏರಿದರೂ ಜನರು ಆ ವಸ್ತುವನ್ನು ಅಷ್ಟೇ ಪ್ರಮಾಣದಲ್ಲಿ ಕೊಂಡುಕೊಳ್ಳುತ್ತಾರೆ. ಈ ಎರಡೂ ಸಂದರ್ಭಗಳಲ್ಲಿ ಬೇಡಿಕೆಯ ರೇಖೆಯು ಬಲಗಡೆಗೆ ಸರಿಯುತ್ತದೆ. ಇದನ್ನು ಕೆಳಗೆ ಕೊಟ್ಟ ರೇಖಾಚಿತ್ರದಲ್ಲಿ ತೋರಿಸಲಾಗಿದೆ. ಎಂಬ ಭಾಷಾಂತರವನ್ನು ಕೆ.ಡಿ ಬಸವಾ ಅವರು 'ಬೇಡಿಕೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆ ಹಾಗೂ ಬೇಡಿಕೆಯ ಏರಿಕೆ ಮತ್ತು ಇಳಿಕೆ' ಪದಗಳ ಪರಿಕಲ್ಪನೆಯನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ಈ ವಿಷಯವನ್ನು ವಿರಳ ವಿರಳವಾಗಿ ಇಲ್ಲವೆ ಹಂತ ಹಂತವಾಗಿ ಸರಳ ಭಾಷೆಯಲ್ಲಿ ವಿಶ್ಲೇಷಣೆ ಮಾಡಿರುವುದನ್ನು ಗಮನಿಸಬಹುದಾಗಿದೆ. ಬೇಡಿಕೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆಗೆ ಇಂಗ್ಲಿಷ್ ಭಾಷೆಯಲ್ಲಿ ಬಳಸಿದ ಪದಗಳನ್ನು ಈ ಪದಗಳ ಮುಂದೆ ಆವರಣದಲ್ಲಿ ನೀಡಿರುತ್ತಾರೆ. ಬೆಲೆಯ ಪರಿಣಾಮವಾಗಿ ಬೇಡಿಕೆಯ ಏರಿಕೆಗೆ ಇಂತಹ ಪದವನ್ನೇ ಬಳಸಬೇಕು ಮತ್ತು ಬೇಡಿಕೆಯ ಇಳಿಕೆಗೆ ಅಂತಹ ಪದವನ್ನೇ ಬಳಸಬೇಕೆಂದು ನಿರೂಪಿಸಿದ್ದಾರೆ. ಬೆಲೆಯನ್ನು ಹೊರತು ಪಡಿಸಿ ಬೇಡಿಕೆಯಲ್ಲಿ ಏರಿಳಿತಗಳಿಗೆ ಇಲ್ಲವೆ ಸ್ಥಿರತೆಗೆ ಇತರ ಅಂಶಗಳು ಕಾರಣವೆಂದು ಪ್ರತಿಪಾದಿಸುತ್ತಾರೆ. ಇತರ ಸ್ಥಿತಿಗತಿಗಳಲ್ಲಿ ಮುಖ್ಯ ಅಂಶಗಳ ಪಟ್ಟಿನೀಡಿದ್ದಾರೆ. ಕೊಟ್ಟ ಅಂಶಗಳು ಅಷ್ಟೇ ಅಲ್ಲದೆ ಇನ್ನೂ ಇರುತ್ತವೆ ಎಂಬುವುದನ್ನು ಸೂಚಿಸುವುದಕ್ಕಾಗಿ 'ಇವೆ ಮೊದಲಾದವು' ಎಂದು ತಿಳಿಸಿರುತ್ತಾರೆ. ಇತರ ಸ್ಥಿತಿಗತಿಗಳಲ್ಲಿ ಬದಲಾವಣೆಗಳಾದಾಗ ಬೇಡಿಕೆಯ ಪ್ರಮಾಣಗಳಲ್ಲಿ ಬದಲಾವಣೆಗಳಾಗುವ ಸಂಭವವಿರುತ್ತದೆ ಎಂಬುವುದಾಗಿ ಸೂಕ್ಷ್ಮತೆಯನ್ನು ವ್ಯಕ್ತಪಡಿಸಿದ್ದಾರೆ. ಇವರು ಯಾವ ಉದಾಹರಣೆಗಳನ್ನು ಬಳಸಿರುವುದಿಲ್ಲ. ರೇಖಾ ಚಿತ್ರಗಳ ಮೂಲಕ ನಿರೂಪಿಸಿದ್ದಾರೆ. ರೇಖಾ ಚಿತ್ರ ೯.೪ ಮತ್ತು ೯.೫ರಲ್ಲಿ ತಲಾ ಎರಡು ರೇಖಾಚಿತ್ರಗಳನ್ನು ಬಳಸಿದ್ದಾರೆ. ಇವುಗಳ ಮೂಲಕ ಬೇಡಿಕೆಯ ಏರಿಕೆ ಮತ್ತು ಬೇಡಿಕೆಯ ಇಳಿಕೆಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿರುತ್ತಾರೆ. ರೇಖಾಚಿತ್ರ ೯.೬ರನ್ನು ಬೇಡಿಕೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆಯನ್ನು ನಿರೂಪಿಸಲು ಬಳಸಿದ್ದಾರೆ.

ಒಟ್ಟಾರೆ ಈ ೫ ರೇಖಾಚಿತ್ರಗಳಿಗೆ ಸಂಬಂಧಿಸಿದ ವಿಶ್ಲೇಷಣೆ ಅತ್ಯಂತ ಸಂಕ್ಷಿಪ್ತವಾಗಿದೆ. ಅವುಗಳಲ್ಲಿ ಬಳಸಿದ ಸಂಕೇತಾಕ್ಷರಗಳು ಸಂಪೂರ್ಣ ಕನ್ನಡ ಅಕ್ಷರಗಳಿಂದ ಕೂಡಿವೆ. ವಿಷಯವನ್ನು ಗ್ರಹಿಸಲು ಇಂಗ್ಲೀಷ್ ಸಂಕೇತಾಕ್ಷರಗಳು ಹೆಚ್ಚು ಪರಿಣಾಮಕಾರಿಯಾಗುತ್ತಿದ್ದವು. ವಿಷಯ ಸಮಗ್ರವಾಗಿ ಗ್ರಹಿಸುವಲ್ಲಿ ಇದೊಂದು ಕೊರತೆ ಮತ್ತೊಂದು ಅಂಶವೆಂದರೆ ಬೇಡಿಕೆಯ ರೇಖೆಯನ್ನು ಪರಿಚಯಿಸುವಾಗ 'ಡಿಡಿ 'ರೇಖೆ ಎನ್ನುತ್ತೇವೆ. ಹಾಗೆಯೇ ರೇಖಾಚಿತ್ರದಲ್ಲಿ ಬಳಸುತ್ತೇವೆ. ಅದೇ ಚಿತ್ರದಲ್ಲಿ ಮತ್ತೊಂದು ರೇಖಾಚಿತ್ರವನ್ನು ಬಳಸಿದಾಗ ಅದು ಎರಡನೇಯ ರೇಖಾಚಿತ್ರವಾಗುತ್ತದೆ. ಆ ಬೇಡಿಕೆಯ ರೇಖೆಯನ್ನು ಪರಿಚಯಿಸುವಾಗ ಡಿ೨ ಡಿ೨ ಎನ್ನುತ್ತೇವೆ. 'ಡಿ' ಬೇಡಿಕೆ ರೇಖೆಯ ಒಂದು ತುದಿಯಲ್ಲಿರುತ್ತದೆ. ಇನ್ನೊಂದು ತುದಿಯಲ್ಲಿ ಪುನಃ 'ಡಿ' ಎಂದು ಗುರುತಿಸುತ್ತೇವೆ. ಅವುಗಳನ್ನು ವಿಶ್ಲೇಷಣೆಯಲ್ಲಿ 'ಡಿಡಿ' ಇಲ್ಲವೆ 'ಡಿಡಿ' ಎಂದು ದಾಖಲಿಸುತ್ತೇವೆ. ಇದು ಇಂಗ್ಲೀಷ್ ಭಾಷೆಯ ಪಠ್ಯಗಳಲ್ಲಿ ಇರುವುದು ಸರ್ವಸಾಮಾನ್ಯ ಸಂಗತಿಯಾಗಿದೆ. ಆದರೆ ಇಲ್ಲಿ ಎರಡು ಬೇಡಿಕೆಯನ್ನು ಪರಿಚಯ ಮಾಡುವಾಗ ಡಡ೧ ಮತ್ತು ಡಡ೨ ಎಂಬುದಾಗಿ ಬಳಸಿದ್ದಾರೆ. ಇದು 'ಡ೧ ಡ೧'ಮತ್ತು 'ಡ೨ ಡ೨' ಎಂದಾಗಿರಬೇಕೆಂದು ಭಾವಿಸಬಹುದಾಗಿದೆ. ಇವರ ದೃಷ್ಟಿಯಲ್ಲಿ ಡ ಡ೧'ಇದು ಒಂದು ಸಮಗ್ರ ಬೇಡಿಕೆಯ ರೇಖೆ ಮತ್ತು 'ಡಡ೨' ಇದು ಎರಡನೇಯ ಸಮಗ್ರ ಬೇಡಿಕೆ ರೇಖೆ ಎಂಬ ಅರ್ಥ ಬರುವಂತೆ ಬಳಸಿರುತ್ತಾರೆ. ಯಾವುದೇ ಎರಡು ಬೇಡಿಕೆಗಳನ್ನು ಪ್ರತ್ಯೇಕವಾಗಿ ಗುರುತಿಸಲು ಅನುಕೂಲವಾಗಲೆಂದು ಸಾಂಕೇತಿಕವಾಗಿ ಸಂಖ್ಯಾಸೂಚಕ ಪದ

ಬಳಸಲಾಗುತ್ತದೆ. ಗುಡೂರ ಭೀಮಸೇನರವರು ಇದೇ ಪದಗಳ ನಿರೂಪಣೆಯನ್ನು ಭಿನ್ನವಾದ ರೀತಿಯಲ್ಲಿ ನಿರೂಪಿಸಲು ಯತ್ನಿಸಿದ್ದಾರೆ. "ಬೇಡಿಕೆಯ ಹಿಗ್ಗುವಿಕೆ ಹಾಗೂ ಕುಗ್ಗುವಿಕೆ (Extention and contraction of Demand):ವಸ್ತುಗಳ ಬೆಲೆಯಲ್ಲಿ ಬದಲಾವಣೆಯಾದಾಗ ಸಾಮಾನ್ಯವಾಗಿ ಅದರ ಬೇಡಿಕೆಯಲ್ಲೂ ಬದಲಾವಣೆಯನ್ನು ನಿರೀಕ್ಷೀಸುತ್ತೇವೆ.

ಇಂತಹ ಬದಲಾವಣೆ ಬೇಡಿಕೆಯ ಹಿಗ್ಗುವಿಕೆ ಅಥವಾ ಕುಗ್ಗುವಿಕೆಗೆ ಸಂಬಂಧಿಸಿರಬಹುದಾಗಿದೆ. ಒಂದು ವೇಳೆ ವಸ್ತುವಿನ ಬೆಲೆ ಕುಗ್ಗಿ ಅದರ ಬೇಡಿಕೆ ಅಧಿಕವಾದಾಗ ಅದನ್ನು ನಾವು 'ಬೇಡಿಕೆಯ ಹಿಗ್ಗುವಿಕೆ' ಎನ್ನುತ್ತೇವೆ. ಹಾಗೆಯೇ ವಸ್ತುವಿನ ಬೆಲೆ ಹೆಚ್ಚಿ ಅದರ ಬೇಡಿಕೆ ಕಡಿಮೆಯಾದಾಗ ಅದನ್ನು ನಾವು 'ಬೇಡಿಕೆಯ ಕುಗ್ಗುವಿಕೆ' ಎನ್ನುತ್ತೇವೆ. ಈ ಸನ್ನಿವೇಶಗಳೆರಡನ್ನು ರೇಖಾಚಿತ್ರದ ಸಹಾಯದಿಂದ ತೋರಿಸಬಹುದಾಗಿದೆ... ಬೇಡಿಕೆಯ ಹೆಚ್ಚಳ ಹಾಗೂ ಇಳಿತ(Increase and Decrease in Demand) ಬೇಡಿಕೆಯಲ್ಲುಂಟಾಗುವ ಬದಲಾವಣೆಯನ್ನು ಸೂಚಿಸಲು ಈ ಎರಡು ಪದಗಳನ್ನು ಉಪಯೋಗಿಸಲಾಗುತ್ತದೆ. ಒಂದು ವೇಳೆ ವಸ್ತುವಿನ ಬೆಲೆ ನಿರ್ಧಿಷ್ಟವಾಗಿದ್ದು ಅದರ ಬೇಡಿಕೆ ಹೆಚ್ಚುತ್ತಿದ್ದರೆ ಅಥವಾ ವಸ್ತುವಿನ ಬೆಲೆ ಸ್ಥಿರವಾಗಿದ್ದರೆ ಅದನ್ನು ನಾವು ಬೇಡಿಕೆಯಲ್ಲಿ ಹೆಚ್ಚಳ ಎನ್ನುತ್ತೇವೆ. ಅಂದರೆ ಮೊದಲಿಗಿಂತ ಹೆಚ್ಚು ವಸ್ತುಗಳನ್ನು ಅದೇ ಬೆಲೆಯಲ್ಲಿ ಅಥವಾ ಹೆಚ್ಚುತ್ತಿರುವ ಬೆಲೆಯಲ್ಲಿ ಕೊಂಡುಕೊಳ್ಳುವ ಬಗೆ ಇದಾಗಿದೆ. ಗುಡೂರು ಭೀಮಸೇನ ಅವರು 'ಬೇಡಿಕೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆ ಹಾಗೂ ಬೇಡಿಕೆಯ ಹೆಚ್ಚಳ ಮತ್ತು ಇಳಿತ ಎಂಬ ಪದಗಳನ್ನು ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ಪರಿಶೀಲಿಸಲಾಗಿದೆ.

'ನಾವು' ಎಂಬ ಪದ ಪ್ರಯೋಗಿಸಿದ್ದಾರೆ. 'ಬೇಡಿಕೆಯ ಹಿಗ್ಗುವಿಕೆ' ಎಂಬ ಪರಿಕಲ್ಪನೆ ನೋಡಿದಾಗ ಅದರ ವಾಕ್ಯಪೂರ್ಣಗೊಳಿಸಲು 'ಎನ್ನುವರು' ಇಲ್ಲವೆ 'ಎನ್ನುತ್ತಾರೆ' ಎಂಬುದಾಗಿ ಉಪಯೋಗಿಸುವುದು ಸಾಮಾನ್ಯ. ಆದರೆ ಇವರು 'ನಾವು ಬೇಡಿಕೆಯ ಹಿಗ್ಗುವಿಕೆ' ಎನ್ನುತ್ತೇವೆ. ಈ ವಾಕ್ಯದಲ್ಲಿ ಈ 'ನಾವು' ಎಂಬುದಾಗಿ ಸಂಕುಚಿತವಾದ ವ್ಯಾಪ್ತಿಯನ್ನು ಇದು ಸೂಚಿಸುತ್ತದೆ. ಇಲ್ಲಿನ ನಿರೂಪಣೆ ಪರಿಪೂರ್ಣತೆಯ ಕೊರತೆಯನ್ನು ಕಾಣುತ್ತದೆ. ವಿಶ್ಲೇಷಣೆಯ ಕೊರತೆಯನ್ನೂ ಹೊಂದಿದೆ . ಇಲ್ಲಿ ಮುಖ್ಯವಾಗಿ ಮೂರು ರೇಖಾಚಿತ್ರಗಳನ್ನು ಬಳಸಿಕೊಂಡಿದ್ದಾರೆ. ಅವು ಪುಟ ೪೫ರಲ್ಲಿನ ರೇಖಾಚಿತ್ರ ೪ಮತ್ತು ೫ ಹಾಗೂ ಪುಟ ೪೬ರಲ್ಲಿ ರೇಖಾಚಿತ್ರ ೬ರಲ್ಲಿ ಬಳಸಿರುವ ಸಂಕೇತಾಕ್ಷರಗಳು ಇಂಗ್ಲೀಷ್ ಅಕ್ಷರಗಳಾಗಿವೆ. ಇದು ಒಳ್ಳೆಯ ಬೆಳವಣಿಗೆ. ಅಧ್ಯಯನಕ್ಕೆ ಉತ್ತಮ ಸಹಕಾರಿಯಾಗಿದೆ. ಆದರೆ ಅದರಲ್ಲಿರುವ ಎಲ್ಲಾ ಅಕ್ಷರಗಳನ್ನು ಬಳಸಿ ವಿಷಯ ನಿರೂಪಣೆ ಮಾಡಿರುವುದಿಲ್ಲ. ಉದಾಹರಣೆಗಾಗಿ ಹೇಳುವುದಾದರೆ ರೇಖಾಚಿತ್ರ ೪ ಮತ್ತು ೫ ರಲ್ಲಿ L, L೧ L೨ ಗಳನ್ನು ಏಕೆ ಬಳಸಲಾಗಿದೆ ಮತ್ತು ಅವುಗಳ ಅರ್ಥ ಕುರಿತು ಏನನ್ನು ಪ್ರಸ್ತಾಪಿಸಿರುವುದಿಲ್ಲ. ಅಂದರೆ ಮೂಲದಲ್ಲಿನ ಮಾಹಿತಿಯು ಭಾಷಾಂತರದಲ್ಲಿ ತಂದಿರುವುದಿಲ್ಲ. ಅದರಂತೆ ರೇಖಾಚಿತ್ರ ೬ರಲ್ಲಿನ K ಕುರಿತು ಯಾವ ಮಾಹಿತಿಯೂ ಈ ನಿರೂಪಣೆಯಲ್ಲಿ ಪ್ರಸ್ತಾಪವಾಗಿರುವುದಿಲ್ಲ. ಇದು

ಒಂದು ಕೊರತೆ ಎಂಬುದಾಗಿ ಪರಿಗಣಿಸಬಹುದಾಗಿದೆ K ಅಕ್ಷರ P ಆಗಬೇಕಿತ್ತು ಈ ದೋಷದತ್ತ ಗಮನಹರಿಸಿದಂತಿಲ್ಲ. ಪಿಯುಸಿ ತರಗತಿಗೆ ಹೆಚ್ಚು ವಿವರಣೆ ಬೇಕಾಗದಿರಬಹುದು. ಆದರೆ ಸಂಕ್ಷಿಪ್ತವಾಗಿದ್ದರೂ ಸಹ ಸ್ಪಷ್ಟವಾಗಿರಬೇಕು. ರೇಖಾಚಿತ್ರ ೬ರಲ್ಲಿ ಬೇಡಿಕೆಯ ಹಿಗ್ಗುವಿಕೆ ಮತ್ತು ಬೇಡಿಕೆಯ ಕುಗ್ಗುವಿಕೆಯನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ನಿರೂಪಿಸಿದ್ದಾರೆ. ಆ ಚಿತ್ರವನ್ನು ವಿಕ್ಷಿಸಿದಾಗಲೇ ಅರ್ಥವಾಗುವಂತೆ ರೇಖಾಚಿತ್ರವಿದೆ. ಆದರೆ ಆ ರೇಖಾ ಚಿತ್ರದ ಕೆಳಗೆ ನೀಡಿರುವ ವಿವರಣೆಯಲ್ಲಿ ಕೊರತೆ ಇರುವುದನ್ನು ಗುರುತಿಸಬಹುದಾಗಿದೆ.

ಕನ್ನಡದಲ್ಲಿ ಅರ್ಥಶಾಸ್ತ್ರ ವಿಷಯವನ್ನು ಸರಳಿಕರಣಮಾಡುವುದಕ್ಕಾಗಿ ನಡೆಯುತ್ತಿರುವ ಪ್ರಯತ್ನಗಳಲ್ಲಿ ಇಂಥ ಅಪೂರ್ಣತೆಗಳು ಬೆಳವಣಿಗೆಯ ಸಂಕೇತಗಳೆಂದು ಸಧ್ಯಕ್ಕೆ ತೀರ್ಮಾನಕ್ಕೆ ಬರಬಹುದಾಗಿದೆ. ಪ್ರಭಾಕರ ಶಿಶಿಲರವರು ಬೇಡಿಕೆಯ ಬದಲಾವಣೆ ಕುರಿತು ಭಿನ್ನರೀತಿಯಲ್ಲಿ ತಮ್ಮ ವಿಶ್ಲೇಷಣೆಯನ್ನು ನೀಡುತ್ತಾರೆ. ಅರ್ಥಶಾಸ್ತ್ರಜ್ಞರ ಇಂಗ್ಲಿಷ್ ಭಾಷೆಯಲ್ಲಿನ ವಿಚಾರಗಳನ್ನು ಕನ್ನಡಕ್ಕೆ ಅನುವಾದಿಸುವಾಗ ನಿರೂಪಣೆ ವಿಸ್ತೃತವಾಗಿ ಮಾಡಿರುತ್ತಾರೆ. ಕೆಲವು ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿರುವುದನ್ನು ನೋಡಬಹುದಾಗಿದೆ. 'ಬೇಡಿಕೆಯಲ್ಲಿ ಬದಲಾಣೆಗಳು (Changes in Demand) ಬೇಡಿಕೆಯ ನಿಯಮದ ಪ್ರಕಾರ ಬೆಲೆ ಕಡಿಮೆ ಇರುವಾಗ ಬೇಡಿಕೆ ಹೆಚ್ಚಾಗುತ್ತದೆ ಮತ್ತು ಬೆಲೆ ಹೆಚ್ಚಿರುವಾಗ ಬೇಡಿಕೆ ಕಡಿಮೆಯಾಗುತ್ತದೆ. ಸಾಮಾನ್ಯ ಮಾತುಗಳಲ್ಲಿ ಹೇಳುವದಾದರೆ ಬೆಲೆಯಲ್ಲಿ ವ್ಯತ್ಯಾಸವಾದಾಗ ಬೇಡಿಕೆಯಲ್ಲಿ ವ್ಯತ್ಯಾಸವಾಗುತ್ತದೆ. ಆದರೆ ಈ ಪದ ಬಳಕೆ ತಪ್ಪು. ಬೆಲೆಯಲ್ಲಿ ವ್ಯತ್ಯಾಸವಾದಾಗ ಬೇಡಿಕೆಯ ಪ್ರಮಾಣದಲ್ಲಿ ವ್ಯತ್ಯಾಸವಾಗುತ್ತದೆಯೇ ಹೊರತು ಮೂಲ ಬೇಡಿಕೆಯಲ್ಲಿ ಅಲ್ಲ. ಬೆಲೆ ಹೆಚ್ಚಾದಾಗ ಬೇಡಿಕೆಯ ಪ್ರಮಾಣದಲ್ಲಿ 'ಸಂಕುಚಿತತೆ' (Contraction) ಉಂಟಾಗುತ್ತದೆ. ಅಂದರೆ ಬೇಡಿಕೆಯ ಪ್ರಮಾಣ ಕುಗ್ಗುತ್ತದೆ. ಬೆಲೆ ಕಡಿಮೆಯಾದಾಗ ಬೇಡಿಕೆಯ ಪ್ರಮಾಣದಲ್ಲಿ 'ವಿಕಸನ'(Extention) ಉಂಟಾಗುತ್ತದೆ.

ಅಂದರೆ ಬೇಡಿಕೆ ಪ್ರಮಾಣ ಹಿಗ್ಗುತ್ತದೆ. ಈ ಪದ ಪ್ರಯೋಗದ ಮೂಲಕ ಬೇಡಿಕೆಯು ನಿಯಮವನ್ನು ವಿವರಿಸುವುದು ಸಮಂಜಸವಾಗಿದೆ. ಹಾಗಾದರೆ "ಬೇಡಿಕೆಯ ಪ್ರಮಾಣದಲ್ಲಿ ವ್ಯತ್ಯಾಸ" ಮತ್ತು "ಬೇಡಿಕೆಯಲ್ಲಿ ವ್ಯತ್ಯಾಸ" ಎಂಬ ಮಾತುಗಳ ನಡುವಿನ ವ್ಯತ್ಯಾಸವೇನೆಂದು ತಿಳಿಯೋಣ. ಬೇಡಿಕೆಯ ಪ್ರಮಾಣದಲ್ಲಿ ಬದಲಾವಣೆ : ಆ ಬೆಲೆಯಲ್ಲಿ ಬದಲಾವಣೆಯಾದಾಗ ಬೇಡಿಕೆಯ ಪ್ರಮಾಣದಲ್ಲಿ ಬದಲಾವಣೆಯಾಗುತ್ತದೆ. ಈ ಬದಲಾವಣೆಯನ್ನು ಸಂಕುಚಿತ ಬೇಡಿಕೆ ಅಥವಾ ವಿಕಸಿತ ಬೇಡಿಕೆ ಎನ್ನಲಾಗುತ್ತದೆ. ಉಳಿದ ವಿಷಯಗಳು ಸ್ಥಿರವಾಗಿದ್ದು ಬೆಲೆಯಲ್ಲಿ ಬದಲಾವಣೆಯಾದರೆ ಬೇಡಿಕೆಯ ಪ್ರಮಾಣದಲ್ಲೂ ವ್ಯಾತ್ಯಾಸ ಉಂಟಾಗುತ್ತದೆ. ಬೆಲೆ ಕಡಿಮೆಯಾದರೆ ಬೇಡಿಕೆಯ ಪ್ರಮಾಣ ಅಧಿಕವಾಗುತ್ತದೆ. ಬೆಲೆ ಹೆಚ್ಚಾದರೆ ಬೇಡಿಕೆಯ ಪ್ರಮಾಣ ಕಡಿಮೆಯಾಗುತ್ತದೆ. ಬೇಡಿಕೆಯ ಪ್ರಮಾಣ ಹೆಚ್ಚಾದರೆ ಅದನ್ನು ಬೇಡಿಕೆಯ ವಿಕಸನ ಎಂದೂ, ಕಡಿಮೆಯಾದರೆ ಸಂಕುಚಿತತೆ ಎಂದೂ ಪರಿಗಣಿಸಲಾಗುತ್ತದೆ. ಬೇಡಿಕೆಯ ಪ್ರಮಾಣದಲ್ಲಿ ಬದಲಾವಣೆಯಾಗಲು ಬೆಲೆಯಲ್ಲಿ

ಬದಲಾವಣೆಯಿದ್ದು, ಉಳಿದ ವಸ್ತುಗಳು ಸ್ಥಿರವಾಗಿರಬೇಕು. ಬೇಡಿಕೆಯ ಪ್ರಮಾಣದಲ್ಲಿ ಬದಲಾವಣೆಯೊಂದರ ಬೇಡಿಕೆಯ ನಿಯಮ ಅನ್ವಯವಾಗುವುದು ಎಂದರ್ಥ....ಬೇಡಿಕೆಯ ಪ್ರಮಾಣ ಬದಲಾಗುವುದು ಏಕೆ? ಬೇಡಿಕೆಯ ಪ್ರಮಾಣ ಬದಲಾಗಲು ಬೇಡಿಕೆಯ ನಿಯಮ ಅನ್ವಯವಾಗುವುದೇ ಕಾರಣವಾಗುತ್ತದೆ. ಬೇಡಿಕೆಯ ನಿಯಮ ಐದು ಕಾರಣಗಳಿಂದಾಗಿ ಅನ್ವಯವಾಗುತ್ತದೆ.... ಬೇಡಿಕೆಯಲ್ಲಿ ಬದಲಾವಣೆ : ಬೇಡಿಕೆಯಲ್ಲಿ ಬದಲಾವಣೆಯಾದರೆ ಅದು ಬೇಡಿಕೆಯ ಹೆಚ್ಚಳ (Increased Demand) ಅಥವಾ ಬೇಡಿಕೆಯ ಇಳಿತ(Decresed Demand) ಎನಿಸುತ್ತದೆ. ಇಂತಹ ಸನ್ನಿವೇಶಗಳಲ್ಲಿ ಅನುಭೋಗಿಯ ಪ್ರವೃತ್ತಿಯಲ್ಲಿ ಬದಲಾವಣೆ ಎಂದರ್ಥ. ಬೆಲೆಯೂ ಸ್ಥಿರವಾಗಿದ್ದು ಇತರ ವಿಷಯಗಳಾದ ಆದಾಯ, ಅಭಿರುಚಿ, ನೀಟುಗಾರಿಕೆ ಇತ್ಯಾದಿಗಳಲ್ಲಿ ಬದಲಾವಣೆಯಾದಾಗ ಅದು ಬೇಡಿಕೆಯ ಬದಲಾವಣೆಗೆ ಕಾರಣವೆನಿಸುತ್ತದೆ. ಬೇಡಿಕೆಯಲ್ಲಿ ಹೆಚ್ಚಳವೆಂದರೆ ನಿರ್ದಿಷ್ಟ ಬೆಲೆಯಲ್ಲಿ ಅಧಿಕ ಬೇಡಿಕೆ ಅಥವಾ ಅಧಿಕ ಬೆಲೆಯಲ್ಲಿ ನಿರ್ಧಿಷ್ಟ ಬೇಡಿಕೆ ಎಂದರ್ಥ. ಕಡಿಮೆ ಬೇಡಿಕೆ ಎಂದರೆ ಹೆಚ್ಚು ಬೆಲೆಯಲ್ಲಿ ಕಡಿಮೆ ಪ್ರಮಾಣ ಅಥವಾ ಕಡಿಮೆ ಬೆಲೆಯಲ್ಲಿ ಒಂದೇ ರೀತಿಯ ಪ್ರಮಾಣ ಎಂದರ್ಥ.

ಒಟ್ಟಿನಲ್ಲಿ ಬೇಡಿಕೆಯಲ್ಲಿ ಬದಲಾವಣೆ ಎಂದರೆ ಬೇಡಿಕೆಯ ಪ್ರವೃತ್ತಿಯಲ್ಲಿ ಬದಲಾವಣೆ. ಇವೆರಡು ಹೇಗೆ ಭಿನ್ನವಾಗಿವೆ? ಬೇಡಿಕೆಯ ಪ್ರಮಾಣ ಬದಲಾವಣೆಯೆಂದರೆ ಸಂಖ್ಯಾತ್ಮಕ (ಪ್ರಮಾಣಾತ್ಮಕ) ಬದಲಾವಣೆ ಎಂದರ್ಥ. ಬೇಡಿಕೆಯ ಬದಲಾವಣೆಯು ಗುಣಾತ್ಮಕ ಬದಲಾವಣೆಯಾಗಿದೆ. ಬೇಡಿಕೆಯ ಪ್ರಮಾಣ ಬದಲಾವಣೆಯನ್ನು ಬೇಡಿಕೆಯ ನಿಯಮವು ವಿವರಿಸುತ್ತದೆ. ಬೇಡಿಕೆಯ ಬದಲಾವಣೆಯನ್ನು ಏಂಗೆಲನ ಅನುಭೋಗದ ನಿಯಮದ ಮೂಲಕ ವಿವರಿಸಬಹುದಾಗಿದೆ.' ಶಿಶಿಲರ ಬೇಡಿಕೆಯ ಬದಲಾವಣೆಯ ವಿಶ್ಲೇಷಣೆ ಕುರಿತು ಪರಿಶೀಲಿಸಲಾಗಿ ನಮಗೆ ಭಿನ್ನವಾದ ಪರಿಕಲ್ಪನೆಗಳು ಗೋಚರಿಸುತ್ತವೆ. ಬೆಲೆ ಬೇಡಿಕೆ ಪರಿಣಾಮದ ಬದಲಾವಣೆಯ ಪರಿಭಾವನೆಯು ಸ್ಪಷ್ಟವಾಗಿ ಮೂಡಿಬಂದಿದೆ. 'ಪ್ರಮಾಣ' ಎಂಬುವದು ಬೆಲೆಗೆ ಸಂಬಂಧಿಸಿದ ಬದಲಾವಣೆ ಎಂಬುವುದನ್ನು ಇವರು ಸರಳ ಭಾಷೆಯ ಭಾಷಾಂತರದ ಮೂಲಕ ನಿರೂಪಿಸಿದ್ದಾರೆ. ಅದು ಕೇವಲ ಆಕುಂಚನ ಮತ್ತು ವಿಕಸನಕ್ಕೆ ಮಾತ್ರ ಸೀಮಿತ ಪರಿಕಲ್ಪನೆ ಮಾಡಿರುವ ಇತರ ಭಾಷಾಂತರಕಾರರಿಗಿಂತ ಇವರ ಪರಿಕಲ್ಪನೆ ವಿಶಾಲವಾದದ್ದು. ಬೆಲೆಯನ್ನು ಹೊರತುಪಡಿಸಿ ಆಗುವ ಬದಲಾವಣೆಯ ಪರಿಕಲ್ಪನೆ ಭಿನ್ನವಾದದ್ದು. ಅದು ಹೇಗೆ ಬೇರೆಯಾಗಿದೆ ಎಂಬುದನ್ನು ಕುರಿತು ಸರಳ ಮತ್ತು ವಿವರವಾಗಿ ವಿಶ್ಲೇಷಿಸಿದ್ದಾರೆ. ವಿಷಯದ ಪರಿಕಲ್ಪನೆಯ ಸ್ಪಷ್ಟ ಚಿತ್ರಣ ನೀಡುವಲ್ಲಿ ಇವರ ಭಾಷಾಂತರ ಯಶಸ್ವಿಯಾದದ್ದು. ಬೇಡಿಕೆಯ ಗುಣಾತ್ಮಕ ಬದಲಾವಣೆ ಅನುಭೋಗಿಯ ಪ್ರವೃತ್ತಿ ಪ್ರಭಾವದಿಂದ ಬೇಡಿಕೆ ಪಲ್ಲಟವಾಗುತ್ತದೆ ಎಂಬುವುದನ್ನು ಸರಳ ಭಾಷೆಯಲ್ಲಿ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ಬೇಡಿಕೆ ಪ್ರಮಾಣ ಬದಲಾವಣೆ ಮತ್ತು ಬೇಡಿಕೆಯ ಬದಲಾವಣೆಗಳ ಅಂತರವನ್ನು ಸೂಕ್ಷ್ಮಸಂವೇದನಗಳ ಮೂಲಕ ಪರಿಕಲ್ಪನೆ ಕಟ್ಟಿಕೊಡುವ ಒಂದು ವಿಶಿಷ್ಟ ಪ್ರಯತ್ನವಾಗಿದೆ.

## ೪.೫. ಪ್ರಚ್ಛನ್ನ ಭಾಷೆ

ಭಾಷಾಂತರ ಪ್ರಕ್ರಿಯೇ ನಡೆಯುವುದು ಆ ವಿಷಯ ವಸ್ತು, ವಿಚಾರದ ಔಚಿತ್ಯದಿಂದಾಗಿ, ಭಾಷಾಂತರಿತ ಪಠ್ಯಗಳಿಗಾಗಿ ಬೇರೆ ಬೇರೆ ವಿಧಾನಗಳನ್ನು ಅನುಸರಿಸಲಾಗುತ್ತದೆ. ಆ ವಿಧಾನಗಳು ಪಠ್ಯ ರಚಿತವಾಗುವ ಉದ್ದೇಶವನ್ನು ಅವಲಂಬಿಸಿರುತ್ತವೆ. ಮೂಲದ ಕ್ರಿಯೆ ತದ್ರುಪತೆಯಂತಿರಲು ಪ್ರಚ್ಛನ್ನ ಭಾಷಾಂತರ ವಿಧಾನವನ್ನು ಅನುಸರಿಸಲಾಗುತ್ತದೆ. ಎಂ.ಉಷಾ ಅವರ ಅಭಿಪ್ರಾಯದಂತೆ ಒಂದು ಪಠ್ಯ(ಮೂಲ)ವು ತನ್ನ ಸಂಸ್ಕೃತಿಯಲ್ಲಿ ಪಡೆದುಕೊಂಡ ಸ್ಥಾನಮಾನವನೇ ಅದರ ಭಾಷಾಂತರವು ತನ್ನ(ಉದ್ದಿಷ್ಟ) ಸಂಸ್ಕೃತಿಯ ಸಂದರ್ಭದಲ್ಲಿಯೂ ಪಡೆದುಕೊಳ್ಳುವುದನ್ನು ವಿವರಿಸಲು ಈ ಪರಿಕಲ್ಪನೆಗಳನು ಬಳಸಲಾಗುತ್ತದೆ. ಒಂದು ಭಾಷಾಂತರವು ಮೂಲ ಪಠ್ಯವನ್ನು ಭಾಷಿಕ ನೆಲೆಯಲ್ಲಿ ಪಠೀಯ ನೆಲೆಯಲ್ಲಿ ಯಥಾವತ್ತಾಗಿ ಅನುಸರಿಸದಿದ್ದರೂ, ಮೂಲದ ಕ್ರಿಯೆಯನ್ನು ಯಥಾವತ್ತಾಗಿ ಮರು ಉತ್ಪಾದಿಸುವ ಮೂಲಕ ಮೂಲದ ಸ್ಥಾನಮಾನವನ್ನೇ ಪಡೆಯಬಹುದು. ಉದಾಹರಣೆಗೆ ಭಾಷಾಂತರಿತ ಪಠ್ಯಪುಸ್ತಕಗಳು, ಪ್ರವಾಸಿ ಕೈಪಿಡಿಗಳು ಇತ್ಯಾದಿ. ಇವು ಮೂಲ(ಪಠ್ಯಪುಸ್ತಕ, ಕೈಪಿಡಿ)ವು ನಿರ್ವಹಿಸುವ ಬೋಧನೆ, ಕಲಿಕೆಯ ಮತ್ತು ಮಾರ್ಗದರ್ಶಿ ಕೆಲಸವನ್ನು ಅದರ ಭಾಷಾಂತರದ ಸಂದರ್ಭದಲ್ಲಿಯೂ ನಿರ್ವಹಿಸುತ್ತವೆ(ಭಾಷಾಂತರ ಪ್ರವೇಶಿಕೆ, ೨೦೧೪, ಪು. ೨೦೨) ಎಂದು ಹೇಳಿದ್ದಾರೆ.

ಕನ್ನಡದ ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ಇದನ್ನು ಗಮನಿಸಬಹುದಾಗಿದೆ. ಇಲ್ಲಿ ಅಧ್ಯಯನಕ್ಕಾಗಿ ಒಟ್ಟು ಹನ್ನೆರಡು ಭಾಷಾಂತರಿತ ಪಠ್ಯ ಸಾಮಗ್ರಿಗಳನ್ನು ಒಂದೇ ವಿಷಯಕ್ಕೆ ಸಂಬಂಧಿಸಿದ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಬಳಸಿಕೊಳ್ಳಲಾಗಿದೆ. ಇದು ಒಂದು ಮಾದರಿ ಪಠ್ಯ ಸಾಮಗ್ರಿಗಳಲ್ಲಿನ ಅನುವಾದಿತ ಮಾದರಿ ಬಗ್ಗೆ ಪರಿಶೀಲಿಸಬಹುದು.

೧. "ಅರ್ಥಶಾಸ್ತ್ರವನ್ನು ಆಂಗ್ಲ ಭಾಷೆಯಲ್ಲಿ 'ಇಕೊನೋಮಿಕ್ಸ್' ಎಂದು ಕರೆಯುತ್ತಾರೆ. 'ಇಕೊನೋಮಿಕ್ಸ್' ಪದವು ಗ್ರೀಕ್ ಭಾಷೆಯ 'ಐಕೋಸ್' ಮತ್ತು 'ನೋಮಾಸ್' ಎನ್ನುವ ಪದಗಳಿಂದ ಬಂದದ್ದು. ಈ ಎರಡು ಪದಗಳೂ ಸೇರಿ 'ಐಕೋನೋಮಿಯಾ' ಎಂಬ ಪದ ಸೃಷ್ಟಿಯಾಯಿತು. ಗ್ರೀಕ್ ಭಾಷೆಯಲ್ಲಿ ಇದರ ಅರ್ಥ "ಗೃಹ ವ್ಯವಹಾರ". ತನ್ನ ಅಲ್ಪ ಆದಾಯದಿಂದ ಗೃಹ ವ್ಯವಹಾರವನ್ನು ಸುಗಮವಾಗಿ ಸಾಗಿಸಲು ಮಾನವನು ಕೈಗೊಂಡ ಸೂತ್ರಗಳಿಂದಲೇ ಈ ಶಾಸ್ತ್ರ ಆರಂಭವಾಯಿತು" ಎಂಬುದನ್ನು ಎಸ್.ಎನ್.ಸಿ. ರಾವ್ ಮತ್ತು ಎಸ್.ಎನ್. ನಾಯಕ ಇವರು ಅರ್ಥಶಾಸ್ತ್ರ, ೧೯೮೭ ರಲ್ಲಿ ದಾಖಲಿಸಿದ್ದಾರೆ.

೨. ಅರ್ಥಶಾಸ್ತ್ರಕ್ಕೆ ಆಂಗ್ಲ ಭಾಷೆಯಲ್ಲಿ 'ಎಕನಾಮಿಕ್ಸ್' ಎಂದು ಹೆಸರು. ಈ ಶಬ್ದವು 'ಎಕೋಸ್' ಮತ್ತು 'ನೋಮಾಸ್' ಎಂಬ ಬಿಡಿ ಪದಗಳು ಸೇರಿ ಉತ್ಪತ್ತಿಯಾದ 'ಎಕನೋಮಿಯಾ'ದಿಂದ ಉದ್ಭವವಾಯಿತು. ಗ್ರೀಕ್ ಭಾಷೆಯಲ್ಲಿ 'ಎಕಾನೋಮಿಯಾ' ಅಂದರೆ ಮನೆಯ ಆಡಳಿತ ವೆಂದರ್ಥ. ಗ್ರೀಕ್‌ರು ಮನೆಯ ಆಡಳಿತ ಪದ್ಧತಿಯನ್ನು ತಮ್ಮ ನಗರರಾಜ್ಯಗಳಲ್ಲಿ

ಅಳವಡಿಸಿದುದರಿಂದ ಅರ್ಥವಿಜ್ಞಾನಕ್ಕೆ ರಾಜಕೀಯ ಅರ್ಥಶಾಸ್ತ್ರ ಎಂಬ ಹೆಸರು ಬಂತು. ಅರ್ಥಶಾಸ್ತ್ರ ಒಂದು ಪ್ರಾಚೀನ ವಿಜ್ಞಾನ" ಎಂಬುದಾಗಿ ಪ್ರಭಾಕರ ಬಿ. ಶಿಶಿಲ ಇವರು ಆರಂಭಿಕ ಅರ್ಥಶಾಸ್ತ್ರ, ೧೯೮೬:೧ರಲ್ಲಿ ಅನುವಾದಿಸಿದ್ದಾರೆ.

೩. "ಅರ್ಥಶಾಸ್ತ್ರವು ಇಂಗ್ಲಿಷ್ ಭಾಷೆಯಲ್ಲಿ ಇಕೊನಾಮಿಕ್ಸ್ (Economics) ಎಂದು ಕರೆಯಲ್ಪಡುತ್ತದೆ. ಈ ಶಬ್ದವು ಗ್ರೀಕ್ ಭಾಷೆಯ ಇಕೊನಾಮಿಯಾ (Economia) ಎಂಬ ಶಬ್ದದಿಂದ ಬಂದಿದೆ. ಇಕೋಸ್ (Ekos) ಮತ್ತು ನೋಮಸ್ (Nomas) ಎಂಬ ಎರಡು ಪದಗಳು ಸೇರಿ ಇಕೊನೋಮಿಯಾ ಎಂಬ ಪದವು ರೂಪಗೊಂಡಿದೆ. ಗೃಹಕಾರ್ಯ ನಿರ್ವಹಣೆ ಎಂಬುದು ಈ ಪದದ ಅರ್ಥ. ಕ್ರಮೇಣ ಇದೇ ಪದವನ್ನು ರಾಜ್ಯದ ಕಾರ್ಯನಿರ್ವಹಣೆಗೆ ಬಳಸಲಾಯಿತು. ರಾಜ್ಯದ ಕಾರ್ಯ ನಿರ್ವಹಣೆಯಲ್ಲಿ ರಾಜಕೀಯ ಮತ್ತು ಆರ್ಥಿಕ ಸಂಗತಿಗಳಲ್ಲಿ ಸೇರುತ್ತವೆ. ಆದ್ದರಿಂದಲೇ ಪ್ರಾಚೀನ ಗ್ರೀಕರು ಇದಕ್ಕೆ ರಾಜಕೀಯ ಅರ್ಥಶಾಸ್ತ್ರ (Political Economy) ಎಂದು ಕರೆದರು. ಹತ್ತೊಂಬತ್ತನೇ ಶತಮಾನದವರೆಗೂ ಇದೇ ಕಲ್ಪನೆ ಮುಂದುವರೆಯಿತು. ನಂತರ ಇದು ಒಂದು ಸ್ವತಂತ್ರಶಾಸ್ತ್ರವಾಗಿ ಬೆಳೆಯಿತು. ಈಗ ಅರ್ಥಶಾಸ್ತ್ರವೆಂಬ ವಿಷಯವು ಎಲ್ಲರಿಗೂ ಉಪಯುಕ್ತವೆನಿಸಿದ ಒಂದು ಮಹತ್ವದ ಶಾಸ್ತ್ರವಾಗಿ ಬೆಳೆದಿದೆ". ಎಂಬುದನ್ನು ಎಂ.ಎಸ್. ಬದಾಮಿ(೧೯೯೬:೧)ಅವರು ಭಾಷಾಂತರಿಸಿದ್ದಾರೆ.

೪. "ಅರ್ಥಶಾಸ್ತ್ರ ಎಂಬ ಪದವು ಗ್ರೀಕ್ ಭಾಷೆಯ ಓಕಸ್ (ಮನೆ) ಮತ್ತು ನೊಮೆನ್ (ಆಡಳಿತ) ಎಂಬ ಎರಡು ಪದಗಳಿಂದ ಕೂಡಿದ್ದಾಗಿದೆ. ಅಂದರೆ ನಮಗೆ ಲಭ್ಯವಿರುವ ನಿಯತ ಸಂಪನ್ಮೂಲಗಳಿಂದ ನಮ್ಮ ಬಯಕೆಗಳನ್ನು ಸಮರ್ಪಕವಾಗಿ ತೃಪ್ತಿಪಡಿಸುವ ಬಗೆಯಾಗಿದೆ. ಒಂದು ಕುಟುಂಬವು ಹೇಗೆ ದೊರೆಯುತ್ತಿರುವ ಆದಾಯವನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು, ಕುಟುಂಬದ ಸದಸ್ಯರೆಲ್ಲರ ಬಯಕೆಗಳನ್ನು ಮಿತವ್ಯಯ ತತ್ವದಿಂದ ಪೂರೈಸುತ್ತಿದೆಯೋ ಹಾಗೆಯೇ ಸಮಾಜದ ಎಲ್ಲ ವರ್ಗದ ಜನರು ಮಿತವ್ಯಯ ತತ್ವದಿಂದ ತಮ್ಮ ಬಯಕೆಯನ್ನು ತೃಪ್ತಿಪಡಿಸುವ ಬಗೆಯನ್ನು ಅಭ್ಯಾಸಿಸುವ ಶಾಸ್ತ್ರವಾಗಿದೆ" ಎಂಬುದಾಗಿ ಗುಡೂರ ಭೀಮಸೇನ ಇವರು ಅರ್ಥಶಾಸ್ತ್ರದ ಮೂಲಾಂಶಗಳು(೧೯೯೯:೨) ಎಂಬುದಾಗಿ ಭಾಷಾಂತರಿಸಿದ್ದಾರೆ.

೫. "'ಇಕನಾಮಿಕ್ಸ್' ಎಂಬ ಪದದಲ್ಲಿ 'ಇಕ್ಸ್' ಎಂಬ ಪದವು ನಮ್ಮ ಶಾಸ್ತ್ರವು ಫಿಸಿಕ್ಸ್ ಮತ್ತು ಡೈನಾಮಿಕ್ಸ್‌ಗಳಂತೆ ವಿಜ್ಞಾನ ಎಂಬುದನ್ನೂ ಮತ್ತು 'ಪೊಲಿಟಿಕಲ್ ಅಥವಾ ರಾಜಕೀಯ' ಎಂಬ ಪದವನ್ನು ಕೈಬಿಟ್ಟುದರಿಂದ ಅದು ನಮ್ಮ ಅಧ್ಯಯನವು ವ್ಯಕ್ತಿಗಳನ್ನು ಕುರಿತುದುದಾಗಿದೆಯೇ ಹೊರತು ರಾಜ್ಯಗಳನ್ನಲ್ಲ ಎಂಬ ವಿಷಯವನ್ನು ಪ್ರತಿನಿಧಿಸುವುದು. ಹೀಗೆ ಕಾಲಕ್ರಮೇಣವಾಗಿ ಆರ್ಥಿಕ ಅಧ್ಯಯನಕ್ಕೆ ಸಂಬಂಧಿಸಿದ ಶಾಸ್ತ್ರವನ್ನು ಹೆಚ್ಚು ವೈಜ್ಞಾನಿಕವೂ, ಸ್ಪಷ್ಟವೂ ಮತ್ತು ಸ್ವತಂತ್ರವನ್ನಾಗಿಯೂ ಬೆಳೆಸುವ ನಿರಂತರ ಯತ್ನ ನಡೆಯಿತು. ಇವುಗಳ ಫಲವಾಗಿ ಇಂದು

ಮಾನವನಿಗೆ ಅಧಿಕ ಸವಲತ್ತು ಮತ್ತು ಉಪಯೋಗಗಳನ್ನು ನೀಡುವ ಹಾಗೂ ಮಾನವ ಸಂಕುಲದ ಏಳ್ಗೆಯನ್ನೇ ಪ್ರಧಾನ ಧ್ಯೇಯವಾಗುಳ್ಳ ಅತ್ಯಂತ ಫಲಪ್ರದ ಶಾಸ್ತ್ರವಾಗಿ ಅರ್ಥಶಾಸ್ತ್ರ ಬೆಳವಣಿಗೆ ಹೊಂದುತ್ತಿದೆ" ಎಂಬುದಾಗಿ ಒಡೆಯರ್ ಡಿ. ಹೆಗ್ಗಡೆ ಇವರು, ಸೂಕ್ಷ್ಮ ಅರ್ಥಶಾಸ್ತ್ರ ೨೦೦೫:೧ರಲ್ಲಿ ಅನುವಾದಿಸಿದ್ದಾರೆ.

೬. "ಆಂಗ್ಲ ಭಾಷೆಯಲ್ಲಿ ಅರ್ಥಶಾಸ್ತ್ರವನ್ನು ಎಕನಾಮಿಕ್ಸ್ ಎಂದು ಕರೆಯಲಾಗುತ್ತದೆ. ಈ ಶಬ್ದವು ಎರಡು ಗ್ರೀಕ್ ಶಬ್ದಗಳಾದ 'ಇಕೋಸ್' (Eikos) ಮತ್ತು 'ನೋಮಾಸ್ (Nomas) ಎಂಬ ಶಬ್ದಗಳಿಂದ ಉತ್ಪತ್ತಿಯಾಗಿ, ಕೊನೆಗೆ 'ಎಕನೋಮಿಯಾ'(Eikonomia) ಎಂಬ ಸಂಯುಕ್ತ ಪದವಾಯಿತು. ಎಕನೋಮಿಯಾ ಎಂದರೆ ಗ್ರೀಕ್ ಭಾಷೆಯಲ್ಲಿ 'ಮನೆಯ ಆಡಳಿತ' ಎಂದರ್ಥ. ಗ್ರೀಕ್‌ರು ಮನೆಯ ಆಡಳಿತ ಪದ್ಧತಿಯನ್ನು ನಗರರಾಜ್ಯಗಳಲ್ಲೂ ಅಳವಡಿಸಿದುದರಿಂದ ಅರ್ಥ ವಿಜ್ಞಾನಕ್ಕೆ 'ಎಕನಾಮಿಕ್ಸ್' ಎನ್ನುವ ಹೆಸರು ಉಳಿದುಕೊಂಡಿತು". ಎಂಬುದಾಗಿ ಪ್ರಭಾಕರ ಬಿ. ಶಿಶಿಲ ಇವರು ೨೦೦೭:೪೫ರಲ್ಲಿ ಭಾಷಾಂತರಿಸಿದ್ದಾರೆ.

೭. "ಅರ್ಥಶಾಸ್ತ್ರ ಎನ್ನುವ ಪರಿಭಾವನೆ ತುಂಬಾ ಪ್ರಾಚೀನವಾದದ್ದು. ಈ ಪರಿಭಾವನೆ ಎರಡು ಗ್ರೀಕ್ ಪದಗಳಾದ "Oikos" ಮತ್ತು "Nemein" ಗಳಿಂದ ಉಗಮವಾಗಿದೆ. ಈ ಎರಡು ಪದಗಳ ಸಂಯೋಜನೆಯಿಂದ 'ಎಕೊನೊಮಿಯಾ" ಎನ್ನುವ ಪದ ಬಂದಿದೆ. ಇಂದು ನಾವು ಕರೆಯುತ್ತಿರುವ ಆಂಗ್ಲ ಪದವಾದ ಎಕನಾಮಿಕ್ಸ್(Economics)ನ ಮೂಲ ಪದವೇ ಗ್ರೀಕ್ ಭಾಷೆಯ "ಎಕೊನೊಮಿಯಾ". ಎಕೊನೊಮಿಯಾದ ಅರ್ಥ ಮನೆತನಗಳ ವ್ಯವಹಾರ ನಿರ್ವಹಣೆ. ಇಂದಿಗೂ ಮನೆತನಗಳ ವ್ಯವಹಾರ ನಿರ್ವಹಣೆಯ ಸಮಸ್ಯೆ ಪ್ರಮುಖ ಸಮಸ್ಯೆಯಾಗಿಯೇ ಉಳಿದಿದೆ. ಕ್ರಮೇಣವಾಗಿ ಅರ್ಥಶಾಸ್ತ್ರದ ಈ ಜ್ಞಾನವನ್ನು ಪಟ್ಟಣ ರಾಜ್ಯಗಳ ಆಡಳಿತ ನಿರ್ವಹಣೆಗೆ ಅನ್ವಯಿಸಲಾಯಿತು. ಆದ್ದರಿಂದ ಅರ್ಥಶಾಸ್ತ್ರವನ್ನು "ರಾಜಕೀಯ ಅರ್ಥವಿಜ್ಞಾನ"(Political Economy) ಎನ್ನುವ ಹೆಸರಿನಿಂದ ಕರೆಯ ಲಾಯಿತು. ಪ್ರೊ. ಮಾರ್ಷಲ್‌ರವರು ಅರ್ಥಶಾಸ್ತ್ರವನ್ನು ಶಾಸ್ತ್ರೀಯವಾಗಿ ಮಂಡಿಸುವವರೆಗೂ ಅದು ರಾಜಕೀಯ ಅರ್ಥವಿಜ್ಞಾನವಾಗಿಯೇ ಇತ್ತು. ಇತ್ತೀಚೆಗೆ ಮಾನವನ ಆರ್ಥಿಕ ಚಟುವಟಿಕೆಗಳು ಅಧಿಕಗೊಳ್ಳುವುದರ ಜೊತೆಗೆ ಸಂಕಿರ್ಣತೆಯ ಸ್ವರೂಪವನ್ನು ಪಡೆದು ಕೊಂಡಿವೆ. ಹೀಗಾಗಿ ಅರ್ಥಶಾಸ್ತ್ರ ಇಂದು ರಾಜಕೀಯ ಶಾಸ್ತ್ರದಿಂದ ಬೇರ್ಪಟ್ಟು ಸ್ವತಂತ್ರ ಅಧ್ಯಯನ ವಿಷಯವಾಗಿ ಪರಿಣಮಿಸಿದೆ" ಎಂಬುದಾಗಿ ಕೆ.ಎಂ. ವೀರಯ್ಯ ಇವರು ೨೦೦೭-೦೮:೩ರಲ್ಲಿ ಭಾಷಾಂತರಿಸಿದ್ದಾರೆ.

೮. "ಅರ್ಥಶಾಸ್ತ್ರವು ಬಹಳ ಪುರಾತನ ವಿಷಯವಾಗಿದೆ. 'ಎಕೋನಾಮಿಕ್ಸ್'(Economics) ಎಂಬುದು ಆಂಗ್ಲ ಭಾಷೆಯ ಮೂಲವಾಗಿದೆ. ಇದು ಗ್ರೀಕ್ ಭಾಷೆಯ 'ಇಕೋಸ್' ಮತ್ತು

'ನೊಮಾಸ್' ಎಂಬ ಮೂಲದಿಂದ ಬಂದುದಾಗಿದೆ. ಈ ಎರಡು ಪದಗಳ ಜೋಡಣೆಯಲ್ಲಿ 'ಎಕೊನೋಮಿಯ' ಎಂಬ ಪದವು ಹುಟ್ಟಿಕೊಂಡಿದೆ. ಈ ಎಕೊನೋಮಿಯಾ ಎಂಬ ಗ್ರೀಕ್ ಪದವು ಆಂಗ್ಲ ಭಾಷೆಯಲ್ಲಿನ "ಎಕೋನಾಮಿಕ್ಸ್"(Economics) ಎಂಬುದಕ್ಕೆ ಕಾರಣವಾಗಿದೆ ಎಂಬುದು ಕಂಡುಬರುತ್ತದೆ.

ಅರ್ಥಶಾಸ್ತ್ರ(ಎಕೋನಾಮಿಕ್ಸ್) ಎಂಬ ಪದದ ಮೂಲ ಅರ್ಥವನ್ನು ನಾವು ಹುಡುಕಲು ಪ್ರಯತ್ನಿಸಿದಾಗ ನಮಗೆ ತಿಳಿದು ಬರುವುದೇನೆಂದರೆ ಲಭ್ಯವಿರುವ ಮಿತವಾದ ಸಂಪನ್ಮೂಲಗಳನ್ನು ವಿವಿಧ ಉಪಯೋಗಗಳಿಗೆ ಮಿತವ್ಯಯದಿಂದ ಬಳಸಿಕೊಂಡು ತೃಪ್ತಿಪಡಿಸಿಕೊಳ್ಳುವಂತಹ ಕಲೆಯಾಗಿದೆ" ಎಂಬುದಾಗಿ ಎಸ್.ಜೆ. ಬೋರೇಗೌಡ ಇವರು ೨೦೦೯:೧೯ರಲ್ಲಿ ಭಾಷಾಂತರಿಸಿದ್ದಾರೆ.

೯. "ಅರ್ಥಶಾಸ್ತ್ರ (Economics) ಎಂಬ ಪದನಾಮವನ್ನು ಗ್ರೀಕ್ ಭಾಷೆಯ 'ಇಕೋಸ್' Oikos ಮತ್ತು 'ನೊಮಸ್' Nomos ಎಂಬ ಎರಡು ಪದಗಳಿಂದ ಪಡೆಯಲಾಗಿದೆ. ಗ್ರೀಕ್ ಭಾಷೆಯಲ್ಲಿ 'ಇಕೋಸ್' ಎಂದರೆ 'ಮನೆ' ಅಥವಾ 'ಗೃಹ' ಎಂತಲೂ, 'ನೋಮಸ್' ಎಂದರೆ 'ನಿರ್ವಹಣೆ' ಎಂತಲೂ ಅರ್ಥ ಕೊಡುತ್ತವೆ. ಆ ಮೇರೆಗೆ ಅರ್ಥಶಾಸ್ತ್ರವು 'ಗೃಹ ನಿರ್ವಹಣೆಯ ಕಲೆ' (The art of household management) ಎಂಬ ಅರ್ಥ ಕೊಡುತ್ತದೆ. ಆದ್ದರಿಂದ ಗ್ರೀಕ್ ಮೂಲದ ಮೇರೆಗೆ ಅರ್ಥಶಾಸ್ತ್ರ ಎಂದರೆ ಲಭ್ಯವಿರುವ ಮಿತವಾದ ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಂಡು ಕುಟುಂಬವನ್ನು ನಿರ್ವಹಿಸುವುದು ಎಂದರ್ಥವಾಗುತ್ತದೆ". ಎಂಬುದಾಗಿ ಎಚ್.ಆರ್. ಕೃಷ್ಣಮೂರ್ತಿ ಹೊಸಬೀಡು ಇವರು ಮೂಲ ಆರ್ಥಿಕ ಸಿದ್ಧಾಂತ ೨೦೦೯:೦೯ರಲ್ಲಿ ಭಾಷಾಂತರಿಸಿರುತ್ತಾರೆ. ಇದೇ ಲೇಖಕರು 'ಸೂಕ್ಷ್ಮ ಅರ್ಥಶಾಸ್ತ್ರ' ಭಾಗ–೧.೨೦೧೩:೨ರಲ್ಲಿ ಯಥಾವತ್ತಾಗಿ ದಾಖಲಿಸಿದ್ದಾರೆ.

೧೦. "ಅರ್ಥಶಾಸ್ತ್ರ ಎಂಬ ಪದವನ್ನು ಇಂಗ್ಲೀಷಿನ 'Economics' ಪದಕ್ಕೆ ಸಮಾನಾರ್ಥಕ ಪದವಾಗಿ ಬಳಸಲಾಗಿದೆ. ಇಂಗ್ಲಿಷಿನ 'Economics' ಪದ ಗ್ರೀಕ್ ಭಾಷೆಯ 'ಓಕೋಸ್' (Oikos) ಮತ್ತು 'ನೋಮೊಸ್' (Nomos) ಎಂಬ ಎರಡು ಪದಗಳಿಂದ ಬಂದಿದೆ. 'ಓಕೋಸ್' ಎಂದರೆ ಗೃಹ ಎಂತಲೂ, 'ನೋಮೊಸ್' ಎಂದರೆ 'ನಿರ್ವಹಣೆ' ಎಂತಲೂ ಅರ್ಥ ಕೊಡುತ್ತದೆ. ಆದುದರಿಂದ ಅರ್ಥಶಾಸ್ತ್ರವೆಂದರೆ "ಗೃಹ ನಿರ್ವಹಣೆಯ ಕಲೆ" ಎಂದು ಅರ್ಥವಾಗುತ್ತದೆ. ಅಂದರೆ ಲಭ್ಯವಿರುವ ಮಿತವಾದ ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಂಡು ಕುಟುಂಬ ನಿರ್ವಹಣೆ ಮಾಡುವುದು ಎಂದರ್ಥ" ಎಂಬುದಾಗಿ ಜಿ.ಎನ್. ಕೆಂಪಯ್ಯ ಇವರು ಮೂಲ ಆರ್ಥಿಕ ಸಿದ್ಧಾಂತ, ೨೦೦೪, ೨೦೧೦:೨ರಲ್ಲಿ ಭಾಷಾಂತರ ಮಾಡಿರುತ್ತಾರೆ.

೧೧. "ಅರ್ಥಶಾಸ್ತ್ರವನ್ನು ಆಂಗ್ಲ ಭಾಷೆಯಲ್ಲಿ ಎಕನಾಮಿಕ್ಸ್ ಎಂದು ಕರೆಯಲಾಗುತ್ತದೆ. ಎಕನಾಮಿಕ್ಸ್ ಎಂಬ ಪದಕ್ಕೆ ಎಕಾನಾಮಿಯಾ ಎಂಬ ಗ್ರೀಕ್ ಪದವು ಮೂಲವಾಗಿದೆ. ಎಕಾನಾಮಿಯಾ ಎಂಬ ಪದವು ಇಕೋಸ್ಪ್ ಮತ್ತು ನೊವಾಸ್ ಎಂಬೆರಡು ಪದಗಳಿಂದ ವ್ಯುತ್ಪತ್ತಿಯಾಗಿದೆ. ಎಕಾನಾಮಿಯಾ ಎಂದರೆ ಮನೆಯ ಆಡಳಿತ ಅಥವಾ ಗೃಹಕೃತ್ಯ ನಿರ್ವಹಣೆ ಎಂದರ್ಥ. ಪ್ರಾಚೀನ ಗ್ರೀಕ್‌ರು ಅರ್ಥಶಾಸ್ತ್ರವನ್ನು ಗೃಹಕೃತ್ಯ ನಿರ್ವಹಣೆ ಎಂದೇ ವ್ಯಾಖ್ಯಾನಿಸಿದ್ದರು. ಗೃಹಕೃತ್ಯ ನಿರ್ವಹಣಾ ವ್ಯವಸ್ಥೆ ಗ್ರೀಕ್ ನಗರರಾಜ್ಯಗಳ (City states) ಆರ್ಥಿಕ ಜೀವನ ನಿರ್ವಹಣೆಗೆ ಅನ್ವಯಗೊಂಡಿತು. ಆಧುನಿಕ ರಾಜ್ಯಗಳು ಆರ್ಥಿಕ ಜೀವನ ನಿರ್ವಹಣೆಯ ಕ್ರಮಗಳಲ್ಲಿ ಸಾಕಷ್ಟು ಮಾರ್ಪಾಡುಗಳನ್ನು ಮಾಡಿಕೊಂಡವು. ಅದಕ್ಕೆ ತಕ್ಕಂತೆ ಎಕಾನಾಮಿಯಾ ಪದ ಆಧರಿಸಿದ ಎಕನಾಮಿಕ್ಸ್ ಎಂಬ ಶಾಸ್ತ್ರವು ಒಂದು ಬೃಹತ್ ಬಹು ಆಯಾಮದ ಜ್ಞಾನಾಂಗವಾಗಿ ಬೆಳೆಯುತ್ತಾ ಹೋಯಿತು" ಎಂಬುದಾಗಿ ಪ್ರಭಾಕರ ಬಿ. ಶಿಶಿಲ ಇವರು ೨೦೦೯:೩ರಲ್ಲಿ ಭಾಷಾಂತರ ಮಾಡಿರುತ್ತಾರೆ.

೧೨. "ಅರ್ಥಶಾಸ್ತ್ರವನ್ನು ಇಂಗ್ಲಿಷಿನಲ್ಲಿ ಎಕಾನಾಮಿಕ್ಸ್ ಎಂದು ಕರೆಯಲಾಗುತ್ತದೆ. ಎಕಾನಾಮಿಕ್ಸ್ ಎಂಬ ಶಬ್ದವು ಗ್ರೀಕ್ ಭಾಷೆಯಿಂದ ಇಕೋಸ್ (Oikos) ಮತ್ತು ನೊಮಾಸ್ (Nomos) ಎಂಬ ಎರಡು ಪದಗಳಿಂದ ಪಡೆಯಲಾಗಿದೆ. ಗ್ರೀಕ್ ಭಾಷೆಯಲ್ಲಿ ಇಕೋಸ್ ಎಂದರೆ 'ಮನೆ' ಅಥವಾ 'ಗೃಹ' ಎಂದು, ನೊಮಸ್ ಎಂದರೆ 'ನಿರ್ವಹಣೆ' ಎಂತಲೂ ಅರ್ಥ ನೀಡುತ್ತದೆ. ಹೀಗಾಗಿ 'ಅರ್ಥಶಾಸ್ತ್ರ' ಅಥವಾ ಎಕಾನಾಮಿಯಾ ಎಂದರೆ 'ಗೃಹ ನಿರ್ಮಾಣ ಕಲೆ' (art of household management) ಎಂಬ ಅರ್ಥಕೊಡುತ್ತದೆ. ಆದ್ದರಿಂದ ಪ್ರಾಚೀನ ಗ್ರೀಕ್‌ರ ಮೇರೆಗೆ ಅರ್ಥಶಾಸ್ತ್ರವೆಂದರೆ ಲಭ್ಯವಿರುವ ಸಂಪನ್ಮೂಲಗಳನ್ನು ದಕ್ಷರೀತಿಯಲ್ಲಿ ಬಳಸಿಕೊಂಡು ಕುಟುಂಬವನ್ನು ನಿರ್ವಹಿಸುವುದು ಎಂದಾಗುತ್ತದೆ. ಇಂದು ಎಕಾನಾಮಿಯಾ ಪದ ಆಧರಿಸಿದ ಅರ್ಥಶಾಸ್ತ್ರವು ಒಂದು ಬಹು ಆಯಾಮದ ಮತ್ತು ಜಾಗತಿಕ ಅರ್ಥ ವ್ಯವಸ್ಥೆಗೂ ಅನ್ವಯಿಸುವ ಜ್ಞಾನಾಂಗವಾಗಿ ಹೊರಹೊಮ್ಮಿದೆ. ಅಷ್ಟೇ ಅಲ್ಲ ಅರ್ಥಶಾಸ್ತ್ರವು ಇಂದು ಸರ್ಕಾರಗಳನ್ನು ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ನಿಯಂತ್ರಿಸುವಷ್ಟು ಶಕ್ತಿಯುತವಾಗಿ ಬೆಳೆದಿದೆ". ಎಂಬುದಾಗಿ ಟಿ.ಆರ್. ಗುರುಬಸಪ್ಪ ಮತ್ತು ಮಲ್ಲೇಶಪ್ಪ ಕುಂಬಾರ ಇವರು ಸೂಕ್ಷ್ಮ ಅರ್ಥಶಾಸ್ತ್ರ ಭಾಗ–೧, ೨೦೧೩:೧೫ರಲ್ಲಿ ಭಾಷಾಂತರ ಮಾಡಿರುತ್ತಾರೆ.

ಅರ್ಥಶಾಸ್ತ್ರದ ಪಠ್ಯ ಸಾಮಗ್ರಿಗಳ ಮೂಲಭಾಷೆ ಇಂಗ್ಲಿಷ್ ಕಾಲಾಂತರ ಮತ್ತು ಕಾರಣಾಂತರಗಳಿಂದ ಅವು ಭಾರತದಲ್ಲಿ ಪ್ರಾದೇಶಿಕ ಭಾಷೆಯಲ್ಲಿರುವುದು ಅಗತ್ಯವೆಂದು ಭಾವಿಸಲಾಯಿತು. ಆಗ ಅವು ಭಾಷಾಂತರಗೊಳ್ಳುವ ಔಚಿತ್ಯ ಒದಗಿತು. 'ಒಂದು ಭಾಷಾಂತರವು ಮೂಲ ಪಠ್ಯವನ್ನು ಭಾಷಿಕ ನೆಲೆಯಲ್ಲಿ ಪಠೀಯ ನೆಲೆಯಲ್ಲಿ ಯಥಾವತ್ತಾಗಿ ಅನುಸರಿಸದಿದ್ದರೂ, ಮೂಲದ ಕ್ರಿಯೆಯನ್ನು ಯಥಾವತ್ತಾಗಿ ಮರುಉತ್ಪಾದಿಸುವ ಮೂಲಕ ಮೂಲದ ಸ್ಥಾನಮಾನವನ್ನೇ ಪಡೆಯಬಹುದು'.

ಎಂಬುದಾಗಿ ಎಂ. ಉಷಾ, ಭಾಷಾಂತರ ಪ್ರವೇಶಿಕೆ ೨೦೧೪:೨೦೨ರಲ್ಲಿ ಹೇಳಿರುತ್ತಾರೆ. ಇದನ್ನು ಕನ್ನಡ ಅರ್ಥಶಾಸ್ತ್ರದ ಸಂದರ್ಭದಲ್ಲಿ ಪರಿಶೀಲಿಸುವ ಪ್ರಯತ್ನವಿದು.

ಈ ಮೇಲೆ ಪ್ರಸ್ತಾಪಿಸಿದಂತೆ, ಇಂಗ್ಲಿಷ್ 'Economics' ಎಂಬ ಪದದ ಉತ್ಪತ್ತಿಗೆ ಸಂಬಂಧಿಸಿದಂತೆ ಒಟ್ಟು ಹನ್ನೆರಡು ಅನುವಾದಕರ 'ಅನುವಾದ'ದ ಪಠ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಈ ಭಾಷಾಂತರಕಾರರು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿದವರಾಗಿದ್ದಾರೆ. ಭಾಷಾಂತರದ ಕಾಲಘಟ್ಟದಲ್ಲಿ ತುಂಬಾ ಅಂತರವಿರದಿದ್ದರೂ, ಇದ್ದರೂ ಭಾಷಾಂತರದ ಪರಿಕಲ್ಪನೆಯಲ್ಲಿ (ಸಧ್ಯಕ್ಕೆ) ಯಾವ ಬದಲಾವಣೆಗಳು ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಬಳಕೆಯಾಗುತ್ತಿರುವ 'ಅರ್ಥಶಾಸ್ತ್ರ'ವು ಕ್ರಿಸ್ತಶಕ ಪೂರ್ವದಲ್ಲಿ ಭಾರತದಲ್ಲಿ 'ಕೌಟಿಲ್ಯನ ಅರ್ಥಶಾಸ್ತ್ರ'ದ ಮೂಲಕ ಪರಿಚಯವಾಗಿತ್ತು. ಆದರೆ ಭಾರತೀಯ ಇತಿಹಾಸ 'ವಿಸ್ಮೃತಿ'ಗೆ ಒಳಗಾದಂತೆ ಕಂಡುಬರುತ್ತದೆ. ಈಗ ಈ ಚರ್ಚೆ ಬೇಡ. ಕನ್ನಡ ಅರ್ಥಶಾಸ್ತ್ರದ ಸಂದರ್ಭಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಬಳಕೆಯಾಗುವ 'ಅರ್ಥಶಾಸ್ತ್ರ'ವು ಇಂಗ್ಲಿಷಿನ 'Economics' (ಎಕನಾಮಿಕ್ಸ್ ಅಥವಾ ಇಕನಾಮಿಕ್ಸ್)ಗೆ 'ಸಮಾನ' ಎಂದು ಪಠ್ಯಸಾಮಗ್ರಿಗಳಲ್ಲಿ ಬಳಸಲಾಗುತ್ತದೆ. ಹನ್ನೆರಡು ಜನ ಭಾಷಾಂತರಕಾರರ ಭಾಷಾಂತರದಲ್ಲಿ ರೂಪಿಸಲ್ಪಟ್ಟಿವೆ. 'Economics' ಎಂಬ ಆಂಗ್ಲ ಪದವು 'ಗ್ರೀಕ್ ಭಾಷೆಯ ಎರಡು ಪದಗಳಿಂದ ಉತ್ಪತ್ತಿಯಾಗಿದೆ' ಎಂಬುದು ಎಲ್ಲ ಅನುವಾದಕರು ಹೇಳಿರುತ್ತಾರೆ. ಆದರೆ ಆ 'ಎರಡು ಗ್ರೀಕ್ ಪದಗಳಲ್ಲಿ' ಭಿನ್ನತೆಗಳಿರುವುದನ್ನು ಗುರುತಿಸಬಹುದಾಗಿದೆ. ಹನ್ನೆರಡು ಜನ ಭಾಷಾಂತರಕಾರರನ್ನು ಕ್ರಮ ಸಂಖ್ಯೆ ಒಂದರಿಂದ ಹನ್ನೆರಡರವರೆಗೆ ಸಂಖ್ಯೆಗಳನ್ನು ಕೊಟ್ಟು ಅವರು ಬಳಸಿರುವ 'ಪದ' ಕುರಿತು ಅವಲೋಕಿಸಲಾಗಿದೆ.

೧. 'ಐಕೋಸ್' ಮತ್ತು 'ನೊಮಾಸ್' ಈ ಎರಡು ಪದಗಳು ಸೇರಿ 'ಐಕೋನೋಮಿಯಾ', ಗ್ರೀಕ್ ಭಾಷೆಯಲ್ಲಿ "ಗೃಹವ್ಯವಹಾರ" ಎಂಬುದಾಗಿ ಹೇಳಿರುತ್ತಾರೆ.

೨. 'ಎಕೋಸ್' ಮತ್ತು 'ನೋಮಾಸ್' ಈ ಬಿಡಿ ಪದಗಳು ಸೇರಿ 'ಎಕನೋಮಿಯಾ' ಗ್ರೀಕ್ ಭಾಷೆಯಲ್ಲಿ 'ಮನೆಯ ಆಡಳಿತ' ಎಂಬುದಾಗಿ ಹೇಳಿರುತ್ತಾರೆ.

೩. 'ಇಕೋಸ್' (Ekos) ಮತ್ತು 'ನೊಮಸ್' (Nomas) ಎಂಬ ಎರಡು ಪದಗಳು ಸೇರಿ 'ಇಕನೋಮಿಯಾ''Economia' "ಗೃಹಕಾರ್ಯ ನಿರ್ವಹಣೆ" ಎಂಬುದು ಈ ಪದದ ಅರ್ಥವೆಂದಿದ್ದಾರೆ.

೪. ಓಕಸ್ (ಮನೆ) ಮತ್ತು ನೋಮನ್ (ಆಡಳಿತ). ಇಲ್ಲಿ ವ್ಯಕ್ತಿ, ಕುಟುಂಬ ಮತ್ತು ಸಮಾಜದ ಬಯಕೆಗಳನ್ನು ಮಿತ ಸಂಪನ್ಮೂಲಗಳಿಂದ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುವ ಶಾಸ್ತ್ರವೆಂದು ಹೇಳಿದ್ದಾರೆ. ಇವರು ಈ ಎರಡು ಪದಗಳಿಂದ ರೂಪಿತ ಸಂಯುಕ್ತ ಪದವನ್ನು ನೀಡಿರುವುದಿಲ್ಲ.

೫. 'ಇಕನಾಮಿಕ್ಸ್' ಎಂಬ ಪದದಲ್ಲಿ 'ಇಕ್ಸ್' ಎಂಬ ಪದವು ನಮ್ಮ ಶಾಸ್ತ್ರವು ಫಿಸಿಕ್ಸ್ ಮತ್ತು ಡೈನಾಮಿಕ್ಸ್‌ಗಳಂತೆ ಇಲ್ಲಿನ ವಿಚಾರವೇ ಬೇರೆಯಿದೆ.

೬. ಆಂಗ್ಲ ಭಾಷೆಯಲ್ಲಿ ಅರ್ಥಶಾಸ್ತ್ರವನ್ನು 'ಎಕನಾಮಿಕ್ಸ್', 'ಇಕೋಸ್' (Eikos) ಮತ್ತು ನೊಮಾಸ್ (Nomas) ಎಕನೋಮಿಯ (Economia) "ಮನೆಯ ಆಡಳಿತ" ಎಂಬ ಅರ್ಥವಿದೆ ಎಂಬುದಾಗಿ ಹೇಳಿದ್ದಾರೆ.

೭. 'oikos' ಮತ್ತು 'Nemein' ಎಂಬ ಗ್ರೀಕ್ ಪದಗಳಿಂದ 'ಎಕೊನೊಮಿಯಾ', "ಮನೆತನಗಳ ವ್ಯವಹಾರ" ಎಂಬುದಾಗಿ ದಾಖಲಿಸಿದ್ದಾರೆ.

೮. 'ಇಕೋಸ್' ಮತ್ತು 'ನೊಮಾಸ್' 'ಎಕೊನೋಮಿಯಾ', ಇದು ಆಂಗ್ಲ ಭಾಷೆಯ 'ಎಕೋ' "'Economics' ಎಂಬುದಕ್ಕೆ ಕಾರಣವಾಗಿದೆ.

೯. 'ಇಕೋಸ್' (Oikos) ಮತ್ತು 'ನೊಮಸ್' (Nomos), 'ಇಕೋಸ್' ಎಂದರೆ 'ಮನೆ/ಗೃಹ' 'ನೊಮಸ್' ಎಂದರೆ 'ನಿರ್ವಹಣೆ', 'ಗೃಹ ನಿರ್ವಹಣೆಯ ಕಲೆ' (Art of household management)

೧೦. 'ಓಕೋಸ್' (oikos) ಮತ್ತು 'ನೋಮೊಸ್' (Nomos) 'ಓಕೋಸ್' ಎಂದರೆ 'ಗೃಹ' ಮತ್ತು 'ನೊಮಾಸ್ ಎಂದರೆ 'ನಿರ್ವಹಣೆ'. ಆದುದರಿಂದ 'ಗೃಹ ನಿರ್ವಹಣೆಯ ಕಲೆ'.

೧೧. 'ಇಕೋಸ್ಟ್' ಮತ್ತು 'ನೊವಾಸ್' "ಎಕಾನಾಮಿಯಾ" ಎಂದರೆ 'ಮನೆಯ ಆಡಳಿತ' ಅಥವಾ ಗೃಹಕೃತ್ಯ ಆಡಳಿತ.

೧೨. 'ಇಕೋಸ್' (Oikos) ಮತ್ತು 'ನೊಮಸ್' (Nomos) ಇಕೋಸ್ ಎಂದರೆ 'ಮನೆ/ಗೃಹ' 'ನೋಮಸ್ ಎಂದರೆ ನಿರ್ವಹಣೆ. 'ಗೃಹ ನಿರ್ವಹಣೆಯ ಕಲೆ' ಅರ್ಥಶಾಸ್ತ್ರ ಅಥವಾ ಎಕನಾಮಿಯಾ ಎಂದರೆ 'ಗೃಹ ನಿರ್ಮಾಣ ಕಲೆ' (Art of household management)

'ಗೃಹ' ಎಂಬ 'ಅರ್ಥ' ಕಲ್ಪಿಸುವ ಗ್ರೀಕ್ ಭಾಷೆಯ ಪದವನ್ನು ಎಲ್ಲರೂ ಒಂದೇ ರೂಪದಲ್ಲಿ ಬಳಸದಿರುವುದು ಕಂಡುಬರುತ್ತದೆ. ಇಲ್ಲಿ ಪ್ರಸ್ತಾಪಿತ ಅನುವಾದಗಳಲ್ಲಿ 'ಐಕೋಸ್' ಎಂದು ಒಬ್ಬರು ಭಾಷಾಂತರಿಸಿದರೆ, 'ಎಕೋಸ್' ಎಂಬುದಾಗಿ ಮತ್ತೊಬ್ಬರು ಅನುವಾದಿಸಿದ್ದಾರೆ. 'ಇಕೋಸ್' ಎಂಬುದಾಗಿ ಆರು ಜನ ಅನುವಾದಕರು ಭಾಷಾಂತರ ಮಾಡಿದ್ದಾರೆ. 'ಓಕೋಸ್', 'ಐಕೋಸ್', ಓಕಸ್' ಹಾಗೂ 'ಇಕೋಸ್ಟ್' ಎಂಬುದಾಗಿ ತಲಾ ಒಬ್ಬರು ಭಾಷಾಂತರ ಮಾಡಿರುತ್ತಾರೆ. ಈ ಪದಗಳ ರೂಪ ಮತ್ತು ಅರ್ಥದಲ್ಲಿ ಏಕರೂಪತೆ ಇರುವುದು ಅವಶ್ಯ. ಅದರಂತೆ ಆವರಣದಲ್ಲಿ ನೀಡಿದ ಇಂಗ್ಲಿಷ್ ಅಕ್ಷರಗಳಲ್ಲಿಯೂ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ಉದಾ: 'Eikos' ಮತ್ತು 'oikos'. ಈ ಎರಡು ಪದಗಳನ್ನು ಗಮನಿಸಿದಾಗ ಮೊದಲ ಪದದ ಮೊದಲ ಒಂದು

ಅಕ್ಷರ ಬೇರೆಯದಾಗಿರುತ್ತದೆ. ನಂತರದ ಮೂರು ಅಕ್ಷರಗಳು ಎರಡನೇ ಪದದಲ್ಲಿಯೂ ಹೊಂದಾಣಿಕೆಯಾಗುತ್ತವೆ. ಎರಡನೇ ಪದದ ಮೊದಲ ಎರಡು ಇಂಗ್ಲಿಷ್ (oi) ಅಕ್ಷರಗಳು ಮೊದಲ ಪದದಲ್ಲಿನ ಇಂಗ್ಲಿಷ್(E) ಅಕ್ಷರಕ್ಕಿಂತ ಭಿನ್ನವಾಗಿವೆ

**ಸಮಾರೋಪ:** ಬಹುತೇಕ ಅನುವಾದಗಳು ಗ್ರೀಕ್ ಭಾಷೆಯಲ್ಲಿ ಆ ಎರಡು ಪದಗಳನ್ನು ಬಿಡಿಬಿಡಿಯಾಗಿ ಇಲ್ಲವೇ ಅವುಗಳಿಂದಾದ ಸಂಯುಕ್ತ ಪದದ ಪರಿಕಲ್ಪನೆ ಒಂದೇ ಎಂಬುದನ್ನು ಗಮನಿಸಬೇಕಾದ ಪ್ರಮುಖ ಅಂಶವಾಗಿದೆ. ಆದರೆ ಹನೆರಡನ್ನೆಯ ಭಾಷಾಂತರಕಾರರ ಕನ್ನಡ ಅನುವಾದ ಇದಕ್ಕೆ ಭಿನ್ನವಾಗಿದೆ. 'ಗೃಹ ನಿರ್ವಹಣೆಯ ಕಲೆ' ಎಂಬುದರ ಬದಲಾಗಿ, 'ಗೃಹ ನಿರ್ಮಾಣದ ಕಲೆ' ಎಂದು ಅನುವಾದಿಸಿದ್ದಾರೆ. ಈ ಎರಡು ಪದಗಳ ಅರ್ಥ ಬೇರೆ ಬೇರೆಯಾಗಿರುತ್ತದೆ. ಆದರೆ ಆ ಪದದ ಮುಂದೆ ಆವರಣದಲ್ಲಿರುವ ಇಂಗ್ಲಿಷ್ ಪದಗಳು ಉಳಿದ ಎಲ್ಲ ಭಾಷಾಂತರಗಳ ಸಾರವನ್ನೆ(Art of household management)rt of household management) ವ್ಯಕ್ತಪಡಿಸುತ್ತವೆ. ಇದು ಮುದ್ರಣದ ಸಂದರ್ಭದಲ್ಲಿ ತಪ್ಪಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಆದರೂ ಅನುವಾದಕರು ಮುದ್ರಣ ದೋಷಗಳತ್ತ ಗಮನ ಅರಿಸುವ ಜವಾಬ್ದಾರಿ ಇರಬೇಕೆಂದು ಭಾವಿಸುವುದ ಸೂಕ್ತವಾಗಿದೆ. ಹನ್ನೆರಡು ಜನ ಭಾಷಾಂತರಕಾರರಲ್ಲಿ ಐದನೆಯವರು 'ಅರ್ಥಶಾಸ್ತ್ರ' ಎಂಬ ಪದವು ಇಂಗ್ಲಿಷಿನ ಯಾವ ಪದದ 'ಅನುವಾದ' ಎಂಬುದನ್ನಾಗಲಿ, ಇಂಗ್ಲಿಷಿನ 'Economics' ಪದವು ಗ್ರೀಕ್ ಪದದ ಯಾವುದರಿಂದ ವ್ಯುತ್ಪತ್ತಿಯಾಗಿದೆ ಎಂಬುದರ ಬಗ್ಗೆ ಏನನ್ನು ಹೇಳಿರುವುದಿಲ್ಲ. ಇದೊಂದು ಬೇರೆಯದೇ ಆದ ಪರಿಕಲ್ಪನೆಗೆ ಅವಕಾಶ ನೀಡಿದೆ. ಅಲ್ಲದೆ ಗ್ರೀಕ್ ಭಾಷೆಯ ಮೂಲ ಪದವನ್ನು ಕುರಿತು ಪ್ರಸ್ತಾಪಿಸದಿರುವುದು ಒಂದು ಕೊರತೆ ಎಂದು ಭಾವಿಸಬಹುದಾಗಿದೆ.

ಪಠ್ಯ ಸಾಮಗ್ರಿಗಳಲ್ಲಿ ಈ ರೀತಿಯ 'ಪದ' ಮತ್ತು 'ಮೂಲ'ಗಳಲ್ಲಿ ವ್ಯತ್ಯಾಸಗಳು ಕಂಡು ಬರುವುದರಿಂದ ವಿದ್ಯಾರ್ಥಿಗಳಲ್ಲಿ ಗೊಂದಲ ಮೂಡುತ್ತದೆ. ಇವುಗಳಲ್ಲಿ ಯಾವುದು 'ಸರಿ' ಯಾವುದು 'ತಪ್ಪು' ಎಂಬುದರ ತೀರ್ಮಾನವಾಗದು. ಗೊಂದಲಗಳಿರುವ ಪಠ್ಯ ಸಾಮಗ್ರಿಗಳು ವಿದ್ಯಾರ್ಥಿಗಳ ವಿಶ್ವಾಸವನ್ನು ಗಳಿಸಲು ಸಾಧ್ಯವಾಗದು. ವಿಷಯ ಗ್ರಹಿಕೆಯಲ್ಲಿ ಅವರ ನಂಬಿಕೆ ಬಲಗೊಳ್ಳುವ ಬದಲಿ ಸಡಿಲವಾಗುವ ಸಾಧ್ಯತೆಗಳಿವೆ. ಆದ್ದರಿಂದ ಭಾಷಾಂತರ ಪ್ರಕ್ರಿಯೆಯೂ ಬಹಳ ಎಚ್ಚರಿಕೆಯಿಂದ ನಡೆಯಬೇಕಾಗಿರುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಭಾಷಾಂತರ ಚಟುವಟಿಕೆ ಶ್ರಮದಾಯಕ ಮತ್ತು ಕೃತಜ್ಞತೆಗೆ ಯೋಗ್ಯವಾಗಿದ್ದರೂ ತನ್ನ ಜವಾಬ್ದಾರಿಯಿಂದ ಜಾರಿಕೊಳ್ಳದಂತಿರಬೇಕು.

# ಅಧ್ಯಾಯ ಐದು

## ಪಾರಿಭಾಷಿಕ ಪದಗಳ ವಿಶ್ಲೇಷಣೆ

೫.೧. ಸ್ವೀಕರಣ

೫.೨. ಸ್ಥಾನಾಂತರ ಸ್ವೀಕರಣ

೫.೩. ಮಿಶ್ರ ಸ್ವೀಕರಣ

೫.೪. ಸಮನಾರ್ಥಕ ವಿಶೇಷ ಪದಗಳು

೫.೫. ಸಾಮಾನ್ಯ ಪದಗಳು

೫.೫. ಪರಿಕಲ್ಪನೆಗಳು

# ಅಧ್ಯಾಯ ಐದು

# ಪಾರಿಭಾಷಿಕ ಪದಗಳ ವಿಶ್ಲೇಷಣೆ

## ೫.೧. ಸ್ವೀಕರಣ(Borrowing)

ಶಬ್ದಗಳ ಮಟ್ಟದಲ್ಲಿ ಸ್ವೀಕೃತ ಭಾಷೆಯು ಮೂಲ ಭಾಷೆಯೊಂದಿಗಿರುವ ಅಂತರವನ್ನು ತುಂಬಿಕೊಳ್ಳಲು ಎರವಲು ಪಡೆಯುವುದು. ಹಾಗೆ ಪಡೆಯುವಾಗ ಹಲವು ಬಾರಿ ಅದಕ್ಕೆ ಸ್ಥಳೀಯ ಛಾಯೆಯನ್ನು ನೀಡುವುದು. ಉದಾಹರಣೆಗೆ ಕಾರ್–ಕಾರು, ಪರ್ಸ್–ಪರ್ಸು ಇತ್ಯಾದಿ. ಡಾ.ಎಂ. ಉಷಾ ಅವರು ಭಾಷಾಂತರ ಪ್ರವೇಶಿಕೆ ೨೦೧೪:೧೩೨ರಲ್ಲಿ ಪ್ರಸ್ತಾಪಿಸಿರುತ್ತಾರೆ. ಇವರ ವಿಚಾರವನ್ನೇ ಹೋಲುವ ಅಭಿಪ್ರಾಯ ಡಾ.ಜೆ.ಎಸ್. ಕುಳ್ಳಿ ಮತ್ತು ಜಿ.ಪಿ. ಮುರಡಿ ಇವರು 'ಅನುವಾದ ಕಲೆ' ೧೯೭೫:೪೯ರಲ್ಲಿ ವ್ಯಕ್ತಪಡಿಸಿದ್ದಾರೆ. 'ಸ್ವೀಕರಣ: ಸ್ವೀಕರಣವೆಂದರೆ, ಇನ್ನೊಂದು ಭಾಷೆಯಿಂದ ಸ್ವೀಕರಿಸುವುದು ಎಂದೇ ಅರ್ಥವಾದರೂ, ಸ್ವೀಕರಣದ ಅವಶ್ಯಕತೆ ಬೀಳುವುದು ನಮ್ಮಲ್ಲಿಲ್ಲದ ಒಂದು ವಿಚಾರ, ವಸ್ತು ಅಥವಾ ವ್ಯವಹಾರವನ್ನು ಸ್ವೀಕರಿಸಬಹುದು. ಈ ರೀತಿ ವಸ್ತು, ವಿಚಾರ ಇಲ್ಲವೆ ವ್ಯವಹಾರವನ್ನು ಸ್ವೀಕರಿಸಬೇಕಾದಾಗ ನಾವು ಅದನ್ನು ಪ್ರಕಟಿಸುವ ಮೂಲದ ಶಬ್ದವನ್ನೇ ಸ್ವೀಕರಿಸುತ್ತೇವೆಂದಲ್ಲ. ಇದರಲ್ಲಿ ಬೇರೆ ಬೇರೆ ಸನ್ನಿವೇಶಗಳಿವೆ.

ಒಂದು ಭಾಷೆಯ ವಸ್ತು, ವಿಚಾರ, ವ್ಯವಹಾರಗಳನ್ನು ಸ್ವೀಕರಿಸಬೇಕಾದಾಗ ಮುಖ್ಯವಾದ ಮೂರು ವಿಧಗಳಲ್ಲಿ ನಾವು ಅವನ್ನು ಸ್ವೀಕರಿಸುತ್ತೇವೆ. ೧. ಶಬ್ದ ಸ್ವೀಕರಣ (Loan word) ೨. ಸ್ಥಾನಾಂತರ ಸ್ವೀಕರಣ (Loan shift) ೩. ಮಿಶ್ರ ಸ್ವೀಕರಣ(Loan blend)

**೧. ಶಬ್ದ ಸ್ವೀಕರಣ(Loan word) :** ಮೂಲ ಭಾಷೆಯಿಂದ ಒಂದು ವಿಚಾರ, ವಸ್ತು ಇಲ್ಲವೆ ವ್ಯವಹಾರವನ್ನು ಸ್ವೀಕರಿಸಬೇಕಾದಾಗ ನಾವು ಅದನ್ನು ನಿರ್ವಚಿಸುವ ಶಬ್ದವನ್ನು ಸ್ವೀಕರಿಸಬಹುದು. ಇದಕ್ಕೆ ಶಬ್ದ ಸ್ವೀಕರಣವೆಂದು ಹೆಸರು. ಇಲ್ಲಿ ಮೂಲ ಭಾಷೆಯ ಶಬ್ದವನ್ನೇ ಸ್ವೀಕರಿಸುವುದರಿಂದ, ಅದಕ್ಕೆ ಶಬ್ದ ಸ್ವೀಕರಣವೆಂದು ಕರೆಯಬಹುದು. ಉದಾಹರಣೆಗಾಗಿ ಸಂಸ್ಕೃತದಿಂದ ನಾವು... ನೂರಾರು ಪದಗಳನ್ನು ಸ್ವೀಕರಿಸಿದ್ದೇವೆ. ಇಂಗ್ಲಿಷಿನಿಂದ ಇದೇ ಪ್ರಕಾರ ನೂರಾರು ಪದಗಳನ್ನು

ಸ್ವೀಕರಿಸಿದ್ದೇವೆ. Sputnic, Car, Bus, Train, Cheque, Bank ಇತ್ಯಾದಿ. ಈ ಪದಗಳನ್ನು ಇದ್ದಕ್ಕಿದ್ದಂತೆ ಸ್ವೀಕರಿಸಿದ್ದೇವೆಂದರೂ, ನಮ್ಮ ಭಾಷೆಯ ರಚನೆಗನುಗುಣವಾಗಿ ಅಲ್ಪಸ್ವಲ್ಪ ಮಾರ್ಪಡುಗಳು ಆಗುತ್ತವೆಂಬುದು ನಿಜ. ಚೆಕ್ಕು, ಬ್ಯಾಂಕು ಇತ್ಯಾದಿ. ನಮ್ಮ ಭಾಷಾ ರಚನೆಯ ಅವಶ್ಯಕತೆಯನ್ನು ಅವಲಂಬಿಸಿ, ಸ್ವಲ್ಪ ಮಾರ್ಪಾಡುಗಳಾಗಬಹುದು. ಈ ವಿಚಾರವನ್ನು ಜೆ.ಎಸ್.ಕುಳ್ಳಿ ಮತ್ತು ಜೆ.ಪಿ. ಮುರಡಿ ಅವರು ವ್ಯಕ್ತಪಡಿಸಿದ್ದಾರೆ. ಭಾಷಾಂತರ ಕೃತಿಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಪದಕೋಶಗಳು ನೆರವಾಗುತ್ತವೆ. ಭಾಷಾಂತರಕಾರರು ತಮಗೆ ತೋಚಿದಂತೆ ಭಾಷಾಂತರವನ್ನು ರೂಪಿಸುತ್ತ ಹೋಗುವುದಿಲ್ಲ. ಆಕರ ಭಾಷೆಯ ಕೃತಿಯನ್ನು ಲಕ್ಷ್ಯ ಭಾಷೆಯಲ್ಲಿ ಸಂವಹನಗೊಳ್ಳುವ ಸಲುವಾಗಿ ಶ್ರಮಪೂರ್ವಕವಾಗಿ ರೂಪಿಸಿದ ಭಾಷಾಂತರದ ಪರಿಣಾಮವೇ ಪದಕೋಶಗಳು ಎಂಬ ವಿಚಾರವನ್ನು ಮೋಹನ ಕುಂಟಾರ ಅವರು ಕನ್ನಡ ಮಲಯಾಳಂ ಭಾಷಾಂತರ ಪ್ರಕ್ರಿಯೆ ೨೦೧೪:೧೫೭ರಲ್ಲಿ ವ್ಯಕ್ತಪಡಿಸಿದ್ದನ್ನು ಒಪ್ಪಿಕೊಂಡು, ಅರ್ಥಶಾಸ್ತ್ರದ ಸಂದರ್ಭದಲ್ಲಿ ಪಠ್ಯಗಳಲ್ಲಿ ಬಳಸಿದ ಪದಕೋಶಗಳಲ್ಲಿನ ಎರವಲು ಅಥವಾ ಸ್ವೀಕರಣ ಪದಗಳನ್ನು ಈ ಕೆಳಗಿನಂತೆ ಪರಿಶೀಲಿಸಬಹುದಾಗಿದೆ.

**Cheque ಚೆಕ್ಕು, ಧನಾದೇಶ:** ಕನ್ನಡದಲ್ಲಿ 'ಚೆಕ್' ಪದಕ್ಕೆ ಸಂವಾದಿಯಾದ 'ಪದ' ಇರಲಿಲ್ಲ. ಈ ಕಾರಣಕ್ಕಾಗಿ 'ಧನಾದೇಶ' ಪದವನ್ನು ಟಂಕಿಸಲಾಯಿತು. ಆದರೂ ಸಹಿತ ಅರ್ಥಶಾಸ್ತ್ರ ಅಧ್ಯಯನ ಮಾಡಿರುವವರು, ಉಳಿದಂತೆ ಸಾಕ್ಷರರು ಮತ್ತು ಸಾಮಾನ್ಯ ಜನರು ಧನಾದೇಶ ಪದವನ್ನು ಬಳಸುತ್ತಿಲ್ಲ. ಅದು ಪಠ್ಯೀಯ ಪದವಾಗಿ ಉಳಿದಿದೆ. ಬಳಕೆಯಲ್ಲಿ ಇಂಗ್ಲಿಷಿನ ಮೂಲಪದವೇ ಚಲಾವಣೆಯಲ್ಲಿದೆ. ಹೀಗಾಗಿ ಪದ ನೇರ ಭಾಷಾಂತರದ ಪದವನ್ನೇ ಓರಲ್ ಮತ್ತು ಬರವಣಿಗೆಯಲ್ಲಿ ಉಪಯೋಗಿಸಲಾಗುತ್ತದೆ. ಈ ಪದ ಹೆಚ್ಚು ಸಂವಹನಶೀಲ ಪದವಾಗಿದೆ. ಅಲ್ಲದೇ ಪರಿಣಾಮಕಾರಿಯಾದ ಅರ್ಥವಂತಿಕೆ ಹೊಂದಿದೆ.

**Open Cheque ಓಪನ್ ಚೆಕ್ಕು, ತೆರೆದ ಧನಾದೇಶ, ತೆರೆದ ಚೆಕ್ಕು :** ಬ್ಯಾಂಕಿನ ವ್ಯವಹಾರದಲ್ಲಿ ಈ ಪದವನ್ನು ಉಪಯೋಗಿಸಲಾಗುತ್ತದೆ. ಕನ್ನಡದಲ್ಲಿ 'ತೆರೆದ ಧನಾದೇಶ' ಪದ ರೂಪಿಸಲ್ಪಟ್ಟಿದೆ. ಮತ್ತೊಂದು 'ತೆರೆದ ಚೆಕ್ಕು' ಎಂಬ ಪದವಿದೆ. ಆದರೆ ವ್ಯವಹಾರದಲ್ಲಿ ಮೌಖಿಕವಾಗಿ ಮತ್ತು ಬರವಣಿಗೆಯಲ್ಲಿ ಬಳಸುವ ಪದ ಓಪನ್ ಚೆಕ್ಕು. ಈ ಪದವು ಉಳಿದ ಪದಗಳಿಗಿಂತ ಸುಲಭವಾಗಿ ಅದರ ಪರಿಭಾಷೆಯನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಇದು ಕನ್ನಡ ಪದವಾಗಿರದಿದ್ದರೂ, ಮೂಲದ ಆಶಯವನ್ನು ಪೂರೈಸುತ್ತದೆ. ಈ ಕಾರಣಕ್ಕಾಗಿ ಕನ್ನಡ ಭಾಷಿಕರು ಈ ಪದ ಬಳಕೆ ಮಾಡುವುದಾಗಿ ಕಂಡುಬರುತ್ತದೆ.

**Credit card ಕ್ರೆಡಿಟ್ ಕಾರ್ಡು, ಉದ್ದರಿ ಕಾರ್ಡು, ಸಾಲದ ಕಾರ್ಡ :** ಆಧುನಿಕ ವ್ಯವಹಾರ ತುಂಬಾ ಬದಲಾಗಿದೆ. ಹಣವನ್ನು ಕೈಯಲ್ಲಿಡಿದುಕೊಂಡು ವ್ಯವಹರಿಸುವ ಅಗತ್ಯವಿಲ್ಲ. ತಾವು ಪಡೆದ ಸರಕು ಸೇವೆಗೆ ಹಣದ ಬದಲಾಗಿ ಕ್ರೆಡಿಟ್ ಕಾರ್ಡ್ ಬಳಸಲಾಗುತ್ತದೆ. ಕನ್ನಡದಲ್ಲಿ ಇದಕ್ಕೆ

'ಉದ್ದರಿ ಕಾರ್ಡು' ಮತ್ತು 'ಸಾಲದ ಕಾರ್ಡು' ಎಂಬ ಪದಗಳಿವೆ. ಆದರೆ ವ್ಯವಹಾರದಲ್ಲಿ ಜನರೆಲ್ಲ ಉಪಯೋಗಿಸುವ ಪದವೆಂದರೆ, 'ಕ್ರೆಡಿಟ್ ಕಾರ್ಡ್'. ಈ ಪದ ನೀಡುವ ಪರಿಭಾಷೆಯನ್ನು 'ಉದ್ದರಿ ಕಾರ್ಡು' ಮತ್ತು 'ಸಾಲದ ಕಾರ್ಡು' ನೀಡಲಾರವು. ಆದರೂ ಈ ಪದಕ್ಕೆ ಕನ್ನಡದಲ್ಲಿ ಪದವಿಲ್ಲವೆಂಬ ಕೊರಗನ್ನು ನೀಗಿಸಲು ಪದಗಳು ರೂಪುಗೊಂಡಿರಬೇಕು. ಇವು ಸಂವಹನ ಕಲ್ಪಿಸುವಲಲ್ಲಿ ಸೋತಂತೆ ತೋರುತ್ತದೆ.

**Debentures ಡಿಬೆಂಚರ್ಸ್, ಸಾಲಪತ್ರಗಳು** : ಹಣದ ಮಾರುಕಟ್ಟೆಯಲ್ಲಿ ಈ ಪದದ ಬಳಕೆಯಾಗುತ್ತದೆ. ಸಾಲಪತ್ರಗಳು ಎಂಬ ಕನ್ನಡ ಪದವು ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ರೂಪಿತವಾಯಿತು. ಆ ಪದ ಇಲ್ಲ ಎಂಬ ಕೊರಗನ್ನು ನಿವಾರಣೆ ಮಾಡಿತು. ಆದರೆ ಹಣದ ಮಾರುಕಟ್ಟೆಯಲ್ಲಿ ಬಳಕೆಯಾಗುತ್ತಿರುವ ಪದವೆಂದರೆ 'ಡಿಬೆಂಚರ್ಸ್'. ಈ ಪದವು ನೀಡುವ ಪರಿಣಾಮಕಾರಿ ಪರಿಭಾಷೆಯನ್ನು ಸಾಲಪತ್ರಗಳು ಎಂಬ ಪದ ಸಂವಹನ ನೀಡುವುದಿಲ್ಲವೆಂಬ ಅಭಿಪ್ರಾಯಗಳೇ ಅಧಿಕ. ಈಗಾಗಿ ಕನ್ನಡ ಪದಗಳಿದ್ದರೂ ಇಂಗ್ಲಿಷ್ ಪದದ ಪಾರಿಭಾಷಿಕ ಪದವನ್ನು ಉಪಯೋಗಿಸುವುದಾಗಿ ತಿಳಿದುಬರುತ್ತದೆ.

**Promissary Notes ಪ್ರಾಮಿಸರಿ ನೋಟ್ಸ್, ವಚನ ಪತ್ರಗಳು** : ಹಣದ ಮಾರುಕಟ್ಟೆಯಲ್ಲಿ ಈ ಪದದ ಬಳಕೆಯಾಗುತ್ತದೆ. ಹಣದ ವ್ಯವಹಾರದಲ್ಲಿ ಬಳಸುವ ಆಧಾರಗಳಲ್ಲಿ ಇದು ಒಂದು. ಇಲ್ಲಿ 'ವಚನ ಪತ್ರಗಳು' ಎಂಬ ಕನ್ನಡ ಪದಕ್ಕಿಂತ ಇಂಗ್ಲಿಷಿನ ಪದ ಪ್ರಾಮಿಸರಿ ನೋಟ್ಸ್ ಹೆಚ್ಚು ಆಕರ್ಷಕ ಅರ್ಥವಂತಿಕೆಯುಳ್ಳದ್ದಾಗಿದೆ. ಇಂಥ ಪದ ಬಳಸುವ ವ್ಯಕ್ತಿಯು ಉನ್ನತ ವ್ಯಕ್ತಿತ್ವವುಳ್ಳವನೆಂಬ ಭ್ರಮೆ ಹೊಂದಿದವರೂ ಇರಬೇಕೆಂಬ ಅನುಮಾನ ಮೂಡುತ್ತದೆ. ಪಾರಿಭಾಷಿಕ ಪದಗಳ ಶೋಧನೆಯಾಗಿದ್ದರೂ ಬಳಕೆಯಲ್ಲಿ ಹಿನ್ನಡೆಯಾಗಿರುವುದನ್ನು ಗುರುತಿಸಲು ಅವಕಾಶವಿದೆ. ಜನಸಾಮಾನ್ಯರೊಳಗೊಂಡು ಎಲ್ಲರೂ 'ಪ್ರಾಮಿಸರಿ ನೋಟ್ಸ್' ಪದವನ್ನೆ ಬಳಸುತ್ತಿದ್ದಾರೆ.

ಎಟಿಎಂ, ಅಟೋಮ್ಯಾಟಿಕ್ ಟೆಲ್ಲರ್ ಮಸಿನ್, ಸ್ವಯಂಚಾಲಿತ ನಗದು ಯಂತ್ರ, ಅಟೋಮ್ಯಾಟೆಡ್ ಟೆಲ್ಲರ ಮಸಿನ್: ಎಟಿಎಂ ಎಂಬುದು ಇಂಗ್ಲಿಷಿನ ಒಂದು ಸಂಕ್ಷಿಪ್ತ ರೂಪದ ಪದ. ಇದರ ವಿಸ್ತೃತ ರೂಪದ ಪರಿಕಲ್ಪನೆಗಿಂತಲೂ, ಅದರ ಸಂಕ್ಷಿಪ್ತತೆಯಲ್ಲಿಯೇ ಅದರ ಪರಿಭಾಷೆ ತಿಳಿಯುತ್ತದೆ. ಹೀಗಾಗಿ 'ಸ್ವಯಂಚಾಲಿತ ನಗದು ಯಂತ್ರ' ಪದವನ್ನು ಅಧಿಕ ಸಂಖ್ಯೆಯ ಜನಸಮೂಹ ಬಳಸುತ್ತಿಲ್ಲ. ಎಟಿಎಂ ಎಂದರೆ ಎಂಥವರಿಗೂ ಅದರ ಪರಿಭಾಷೆ ತಕ್ಷಣಕ್ಕೆ ನೆನಪಾಗುತ್ತದೆ. ಅದರ ಚಿತ್ರಣ ಮತ್ತು ಕಾರ್ಯಗಳನ್ನು ತಿಳಿಸುವಷ್ಟು ಶಕ್ತವಾಗಿರುತ್ತದೆ. ಇದರ ಬಳಕೆ ಇಚೀನ ದಿನಗಳಲ್ಲಿ ಅತ್ಯಧಿಕವಾಗುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಇದರ ಬಳಕೆಗಾಗಿ ವ್ಯಾಪಕ ಪ್ರಚಾರ ಕಾರ್ಯವೂ ನಡೆದಿದೆ.

**Payee ಪೇಯಿ, ಪ್ರಾಪ್ತಿಕರ್ತ** : ಈ ಪದವನ್ನು ಬ್ಯಾಂಕಿಂಗ್ ವ್ಯವಹಾರದಲ್ಲಿ ಬಳಸಲಾಗುತ್ತದೆ. ಅದು ವಿಶೇಷವಾಗಿ ಚೆಕ್ಕಿನಲ್ಲಿ ಈ ಪದದ ಬಳಕೆಯಾಗುತ್ತದೆ. 'ಪೇಯಿ' ಎಂದರೇ ಎಲ್ಲರಿಗೂ

ಗ್ರಹಿಕೆಯಾಗುವ ಅರ್ಥ ಬರುತ್ತದೆ. ಇಂಗ್ಲಿಷ್ ಬಾರದ ಸಾಮಾನ್ಯರೂ ಆ ಪದದ ಗ್ರಹಿಕೆ ಮಾಡುತ್ತಾರೆ. ಆದರೆ ಕನ್ನಡವನ್ನು ಚೆನ್ನಾಗಿ ಬಲ್ಲವರೂ ಪ್ರಾಪ್ತಿಕರ್ತ ಎಂದರೆ ಏನೆಂಬುದನ್ನು ಗ್ರಹಿಸಲು ಅಶಕ್ತರಾಗುತ್ತಾರೆ. ಇದರ ಅರ್ಥ ತಿಳಿಯಲು ಹೆಣಗಾಡಬೇಕಾಗುತ್ತದೆ. ಆದ್ದರಿಂದ 'ಪದ' ಯಾವ ಭಾಷೆಯಲ್ಲಿದೆ ಎಂಬುದು ಮುಖ್ಯವಾಗುವುದಿಲ್ಲ. ಅದರ ತಿಳುವಳಿಕೆಗಾಗಿನ ಪರಿಭಾಷೆ ಮುಖ್ಯವೆನಿಸುತ್ತದೆ.

**Drawee ಡ್ರಾಯೀ, ಆಜ್ಞಾಪಿತ :** ಬ್ಯಾಂಕಿನ ತನ್ನ ಖಾತೆಯಿಂದ ಹಣವನ್ನು ಹಿಂಪಡೆಯುವ ವ್ಯಕ್ತಿಗೆ ಸಂಬಂಧಿಸಿ ಈ ಪದ ಬಳಕೆಯಾಗುತ್ತದೆ. 'ಹಣ ಹಿಂಪಡೆಯುವ ವ್ಯಕ್ತಿ' ಎಂದರೆ ವಿಸ್ತಾರ ಪರಿಭಾಷೆಯಾಯಿತು. 'ಡ್ರಾಯೀ' ಎಂದು ಬಳಸುವ ಪದ ಬೀರುವ ಪರಿಣಾಮ ಕನ್ನಡದ 'ಆಜ್ಞಾಪಿತ' ಬೀರಲಾರದು. ಖಾತೆದಾರ ತನ್ನ ಖಾತೆಯಲ್ಲಿರುವ ಹಣದಲ್ಲಿ ಇಂತಿಷ್ಟು ಹಣವನ್ನು ಕೊಡಬೇಕೆಂದು ಆಜ್ಞಾಪಿಸುತ್ತಾನೆಂಬುದು ಅದರ ಸಂಕ್ಷಿಪ್ತ ರೂಪ. ಇಂಗ್ಲಿಷ ಪರಿಭಾಷಿಕ ಪದ ಬಳಕೆ ಹೀಗೆ ಸಾಗುತ್ತದೆ.

**Discount ಡಿಸ್ಕೌಂಟ್, ವಟ್ಟಾಯಿಸು :** ಬ್ಯಾಂಕಿನ ವ್ಯವಹಾರದಲ್ಲಿ ಈ ಪದವನ್ನು ಬಳಸುವಂತೆ ಇಂದು ಸಾಮಾನ್ಯ ಮಾರುಕಟ್ಟೆಯಿಂದ ಹಣದ ಮಾರುಕಟ್ಟೆಯವರೆಗೆ ಈ ಪದವನ್ನು ಬಳಸಲಾಗುತ್ತದೆ. ಪ್ರತಿಯೊಂದು ವ್ಯವಹಾರದಲ್ಲಿನ ಈ ಡಿಸ್ಕೌಂಟ್ ವಿಶೇಷ ಸಂದರ್ಭ ಮತ್ತು ದೊಡ್ಡ ಹಬ್ಬಗಳಲ್ಲಿ ಅತೀ ಹೆಚ್ಚು ಬಳಕೆಯಾಗುತ್ತಿರುವುದನ್ನು ಗಮನಿಸಬಹುದಾಗಿದೆ. 'ಡಿಸ್ಕೌಂಟ್' ಪದವು ನೀಡಿದಂತೆ ವಟ್ಟಾಯಿಸು ಪದ ಸರಿಯಾದ ಪರಿಭಾಷೆ ನೀಡದು. ಆದ್ದರಿಂದ ಬಹುತೇಕ ಜನಸಮೂಹ ಮತ್ತು ವಿದ್ಯಾರ್ಥಿಗಳು ಡಿಸ್ಕೌಂಟ್ ಎಂಬ ಪದವನ್ನೇ ಬಳಸುತ್ತಿದ್ದಾರೆ.

**Subsidies ಸಬ್ಸಿಡಿಸ್, ಸಹಾಯಧನ :** ಕೇಂದ್ರ ಮತ್ತು ರಾಜ್ಯ ಸರಕಾರಗಳು ತನ್ನ ಅರ್ಹರ ಪ್ರಜೆಗಳಿಗೆ, ಸಮಾಜದ ವಿವಿಧ ಸಮುದಾಯದವರಿಗೆ ಕೆಲವು ಸೌಲಭ್ಯಗಳನ್ನು ನೀಡುವ ಸಂದರ್ಭದಲ್ಲಿ ಈ ಪದ ಬಳಕೆಯಾಗುತ್ತದೆ. 'ಸಹಾಯಧನ' ಎಂಬ ಕನ್ನಡ ಪದ ಬಳಕೆಗಿಂತಲೂ 'ಸಬ್ಸಿಡಿಸ್' ಪದದ ಬಳಕೆ ಅಧಿಕ ಪ್ರಮಾಣದ್ದಾಗಿದೆ. ವಿವಿಧ ಇಲಾಖೆಯ ಅಧಿಕಾರಿಗಳು ಅನಿವಾರ್ಯವಿದ್ದಾಗ ಕನ್ನಡ ಪದ ಬಳಕೆ ಮಾಡುತ್ತಾರೆ. ಇಲ್ಲದಿದ್ದರೆ ಸಾಮಾನ್ಯರಂತೆ ಅವರೂ ಇಂಗ್ಲಿಷ ಪದ ಸಬ್ಸಿಡಿ ಎಂಬುದನ್ನು ಚಲಾವಣೆಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಬಡತನ ರೇಖೆಗಿಂತ ಕೆಳಹಂತದಲ್ಲಿರುವವರಿಗೆ ಇರುವ ಸೌಲಭ್ಯ ಕುರಿತಾದ ಮಾಹಿತಿಯಲ್ಲಿನ 'ಸಹಾಯಧನ' ಸರಿಯಾಗಿ ಸಂವಹನವಾಗದೆ ಸಬ್ಸಿಡಿ ಹೆಚ್ಚು ಮಹತ್ವ ಪಡೆಯುವಲ್ಲಿ ಯಶಸ್ವಿಯಾಗಿದೆ.

**Investment ಇನ್ವೆಸ್ಟ್‌ಮೆಂಟ್, ಹೂಡಿಕೆ, ಬಂಡವಾಳ ತೊಡಗಿಸುವಿಕೆ :** ಅರ್ಥಶಾಸ್ತ್ರದಲ್ಲಿ ಉತ್ಪಾದನೆಯನ್ನು ಕೈಗೊಳ್ಳುವ ಉದ್ದಿಮೆಗಳಿಗೆ ಬಂಡವಾಳ ಬೇಕಾಗುತ್ತದೆ. ಸಣ್ಣ ಪ್ರಮಾಣದ ಬಂಡವಾಳ ಬೇಕಾಗಿದ್ದರೆ, ಉದ್ದಿಮೆದಾರರೇ ಬಂಡವಾಳ ತೊಡಿಸುತ್ತಾರೆ. ದೊಡ್ಡ ಪ್ರಮಾಣದ

ಬಂಡವಾಳ ಬೇಕಾಗಿದ್ದರೆ (ಅದು ಸರಕಾರಿ ಇಲ್ಲವೆ ಖಾಸಗಿಯಾಗಿದ್ದರೂ) ಸಾರ್ವಜನಿಕರಿಂದ ಸಂಗ್ರಹಿಸಲಾಗುತ್ತದೆ. ಹೀಗೆ ಮಾಡುವಾಗ ಅನೇಕ ನಿಯಮಾವಳಿಗಳನ್ನು ಅನುಸರಿಸಲಾಗುತ್ತದೆ. (ಅದು ಈಗ ಚರ್ಚೆಯ ವಿಷಯವಲ್ಲ) ಈ ರೀತಿ ಹಣವನ್ನು ಉತ್ಪಾದನೆಯಲ್ಲಿ ಸೇರಿಸುವ ಕ್ರಮಕ್ಕೆ 'ಹೂಡಿಕೆ', ಬಂಡವಾಳ ತೊಡಗಿಸುವಿಕೆ ಎಂದೆಲ್ಲಾ ಗುರುತಿಸಲಾಗುತ್ತದೆ. ಇದನ್ನು ಇಂಗ್ಲಿಷಿನಲ್ಲಿ 'ಇನ್ವೆಷ್ಟ್‌ಮೆಂಟ್' ಎನ್ನುವರು. 'ಹೂಡಿಕೆ' ಎಂದರೆ ಸರಿಯಾಗಿ ತಿಳಿಯದ ಪರಿಭಾಷೆ ಇನ್ವೆಷ್ಟ್‌ಮೆಂಟ್ ಎಂದರೆ ಮನವರಿಕೆಯಾಗುತ್ತದೆ. ಈ ಕಾರಣಕ್ಕಾಗಿಯೇ ಅಧಿಕ ಸಂಖ್ಯೆಯ ಜನಸಮೂಹ ಇನ್ವೆಷ್ಟ್‌ಮೆಂಟ್ ಪದವನ್ನೆ ಬಳಸುತ್ತಿರುವುದಾಗಿ ತಿಳಿದುಬರುತ್ತದೆ. ಅವರಿಗೆ ತಾವು ಬಳಸುವ ಪದ ಯಾವ ಭಾಷೆಯದು ಎಂಬುದು ಮುಖ್ಯವಲ್ಲ. ಅದರ ಪರಿಭಾಷೆಯ ಸಂವಹನ ಪ್ರಮುಖವಾಗುತ್ತದೆ.

**Locker ಲಾಕರು, ಕಕ್ಷಗಳು** : ಬ್ಯಾಂಕುಗಳಲ್ಲಿ ಗ್ರಾಹಕರ ಮೌಲ್ಯಯುತ ವಸ್ತು ಮತ್ತು ಮಹತ್ವದ ಕಾಗದ ಪತ್ರಗಳನ್ನಿಡಲು 'ಲಾಕರ್' ವ್ಯವಸ್ಥೆ ಮಾಡಲಾಗಿದೆ. ಇವುಗಳಿಗೆ ಮಾಸಿಕ ಬಾಡಿಗೆಯನ್ನು ಗೊತ್ತುಪಡಿಸುತ್ತವೆ. ಬೇರೆ ಬೇರೆ ಕಾರಣಗಳಿಗಾಗಿ ಗ್ರಾಹಕರು ಇವುಗಳನ್ನು ಬಳಸುತ್ತಾರೆ. ಇಂಗ್ಲಿಷಿನ ಲಾಕರ್‌ಗೆ ಕನ್ನಡದಲ್ಲಿ 'ಕಕ್ಷಗಳು' ಎಂಬ ಪದ ಬಳಕೆಗೆ ಬಂದಿದೆ. ಸಾಮಾನ್ಯವಾಗಿ ಎಲ್ಲರಿಗೂ ಚಿರಪರಿಚಿತವಾದ ಪದವೆಂದರೆ ಲಾಕರ್. ಆದ್ದರಿಂದ ಕನ್ನಡ ಪದ ಶೋಧಿಸಲ್ಪಟ್ಟಿದ್ದರೂ ಇಂಗ್ಲಿಷ್ ಪದವನ್ನೆ ಬಳಸುವುದನ್ನು ಗಮನಿಸಬಹುದಾಗಿದೆ.

**Lock out ಲಾಕ್ ಔಟ್, ಬೀಗ ಮುದ್ರೆ, ಸಂಪು** : ಈ ಪದವನ್ನು ಸಾಮಾನ್ಯವಾಗಿ ಕೈಗಾರಿಕಾ ವಲಯದಲ್ಲಿ ಬಳಸಲಾಗುತ್ತದೆ. ಯಾವುದೇ ಒಂದು ಉದ್ದಿಮೆಯಲ್ಲಿನ ಕಾರ್ಮಿಕರ ಮತ್ತು ಮಾಲಿಕರ ನಡುವೆ ವಿವಿಧ ಕಾರಣಗಳಿಂದ ಭಿನ್ನಾಭಿಪ್ರಾಯಗಳು ಉಂಟಾದಾಗ, ಪರಸ್ಪರರು ಸಮಾಲೋಚನೆಯ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಸಮಸ್ಯೆ ಅಥವಾ ಸಮಸ್ಯೆಗಳು ಪರಿಹಾರ ಕಾಣದೆ ವಿಕೋಪಕ್ಕೆ ತಿರುಗಿದಾಗ ಲಾಕ್‌ಔಟ್ ನಂತಹ ಘಟನೆ ಸಂಭವಿಸುತ್ತವೆ. ಕಾರ್ಮಿಕರು ಮಾಲಿಕರ ನಿರ್ಣಯಗಳಿಗೆ ಒಪ್ಪದಿದ್ದಾಗ, ಮಾಲಿಕರು ಉತ್ಪಾದನೆಯನ್ನು ನಿಲ್ಲಿಸಿ ಉದ್ದಿಮೆಯಿಂದ ಕಾರ್ಮಿಕರನ್ನು ಹೊರಹಾಕುವರು. ಉದ್ದಿಮೆಗೆ ಬೀಗ ಹಾಕುವರು. ಈ ಸನ್ನಿವೇಶವೇ 'ಲಾಕ್‌ಔಟ್'. ಕನ್ನಡದಲ್ಲಿ ಇದಕ್ಕೆ 'ಸಂಪು' ಮತ್ತು 'ಬೀಗ ಮುದ್ರೆ' ಎಂಬ ಪದಗಳನ್ನು ಟಂಕಿಸಲಾಗಿದೆ. ಕಾರ್ಮಿಕರು ಮುಷ್ಕರ, ಸಂಪಿನಲ್ಲಿ ತೊಡಗಿದ್ದಾರೆಂಬುದನ್ನು 'ಲಾಕ್‌ಔಟ್' ಪದ ಸೂಚಿಸುತ್ತದೆ. ಆದರೂ ನಮ ಬರಹಗಾರರು ಲಾಕ್‌ಔಟ್ ಎಂಬ ಪದವನ್ನೆ ಅಧಿಕ ಪ್ರಮಾಣದಲ್ಲಿ ಬಳಸುತ್ತಿದ್ದಾರೆ. 'ಸಂಪು' ಮತ್ತು 'ಬೀಗ ಮುದ್ರೆ' ಪದಗಳಿಗಿಂತ ಹೆಚ್ಚು ಅರ್ಥವಂತಿಕೆ ಹೊಂದಿವೆಂಬುದನ್ನು ಗಮನಿಸಬಹುದಾಗಿದೆ.

**Technique ಟೆಕ್ನಿಕ್ಕು, ತಂತ್ರ, ತಂತ್ರಗಾರಿಕೆ, ತಾಂತ್ರಿಕತೆ** : ಉತ್ಪಾದನಾ ಉದ್ದಿಮೆಗಳಲ್ಲಿ ಈ ಪದವನ್ನು ಬಳಸಲಾಗುತ್ತದೆ. ಉತ್ಪಾದನಾ ವೆಚ್ಚ ಕಡಿಮೆಯಾಗಿ ಉತ್ಪಾದನಾ ಪ್ರಮಾಣ ಅಧಿಕವಾಗಲು ಅನೇಕ ತಂತ್ರಗಳನ್ನು ಬಳಸಲಾಗುತ್ತದೆ. ಟೆಕ್ನಿಕ್‌ಗೆ ಪಾರಿಭಾಷಿಕವಾಗಿ ಕನ್ನಡ ಪದಗಳು ರೂಪುಗೊಂಡಿವೆ. ಈ ಪದಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಲಾಗುತ್ತದೆ. ಆದರೆ

ಅರ್ಥಶಾಸ್ತ್ರದ ಸಂದರ್ಭದಲ್ಲಿ 'ಟೆಕ್ನಿಕ್' ಪದವನ್ನು ಅಧಿಕವಾಗಿ ಬಳಸಿರುವುದನ್ನು ಗುರುತಿಸಬಹುದಾಗಿದೆ. ಕನ್ನಡ ಪದಗಳ ಬಳಕೆ ತೀರಾ ಕಡಿಮೆ ಎಂದೇ ಹೇಳಬಹುದು.

**Demand ಡಿಮ್ಯಾಂಡ್, ಬೇಡಿಕೆ :** ಅರ್ಥಶಾಸ್ತ್ರದ ಸಂದರ್ಭದಲ್ಲಿ ಸರಕುಗಳ ಮಾರಾಟದ ಸಮಯದಲ್ಲಿ ಈ ಪದ ಬಳಕೆಗೆ ಬರುತ್ತದೆ. ಬೆಲೆಯ ನಿರ್ಧಾರದಲ್ಲಿ ಇದರ ಪಾತ್ರವೂ ಇದೆ. 'ಡಿಮ್ಯಾಂಡ್' ಅಥವಾ ಡಿಮಾಂಡ್ ಪದಕ್ಕೆ ಕನ್ನಡದಲ್ಲಿ ಬೇಡಿಕೆ ಪದ ರೂಪಿಸಲ್ಪಟ್ಟಿದೆ. ಕನ್ನಡದ ಪಠ್ಯಗಳಲ್ಲಿ 'ಬೇಡಿಕೆ' ಪದದ ವ್ಯಾಪಕ ಬಳಕೆಯಾಗಿರುತ್ತದೆ. ಪಠ್ಯದಾಚೆ ವಿವೇಚಿಸುವುದಾದರೆ, ಬೇಡಿಕೆಗಿಂತ ಡಿಮಾಂಡ್ ಪದವನ್ನು ಬಳಸುತ್ತಿರುವುದು ಕಂಡುಬರುವುದು. ವ್ಯವಹಾರಿಕ ಭಾಷೆಯಲ್ಲದೆ ಸಾಮಾನ್ಯ ವಿಷಯದಲ್ಲಿಯೂ ಡಿಮಾಂಡ್ ಪದದ ಬಳಕೆಯಾಗುತ್ತಿರುವುದು ವಿಶೇಷ. ಅಲ್ಲಿ ಬೇಡಿಕೆ ಪದ ಬಳಕೆ ಯಾವ ಪರಿಕಲ್ಪನೆಗೂ ಅರ್ಥಶಾಸ್ತ್ರದ ಪರಿಕಲ್ಪನೆಗೂ ವ್ಯತ್ಯಾಸವಿರುವುದನ್ನು ಗುರುತಿಸಲು ಅವಕಾಶವಿದೆ.

**Division ಡಿವಿಜನ್, ವಿಭಾಗ :** ಉತ್ಪಾದನಾ ಕೌಶಲ್ಯಗಳನ್ನು ಗುರುತಿಸಿ ಪ್ರತ್ಯೇಕಗೊಳಿಸುವ ಸಂದರ್ಭದಲ್ಲಿ ಈ ಪದ ಬಳಕೆಯಾಗುತ್ತದೆ. 'ಶ್ರಮ ವಿಭಜನೆ'ಯ ಸನ್ನಿವೇಶವನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಅರ್ಥಶಾಸ್ತ್ರ ಪಠ್ಯಗಳಲ್ಲಿ 'ವಿಭಾಗ' ಪದದ ಬಳಕೆ ವ್ಯಾಪಕವಾಗಿದೆ. ಅಲ್ಲಲ್ಲಿ 'ಡಿವಿಜನ್' ಪದ ಬಳಸಿರುವುದನ್ನು ಗುರುತಿಸಬಹುದು. ಅಲ್ಲದೆ ಸಾಮಾನ್ಯ ವಿಷಯಗಳಲ್ಲಿಯೂ ಈ ಪದ ಬಳಕೆಯಲ್ಲಿದೆ. ಇವುಗಳಲ್ಲಿ ಸಾಮ್ಯತೆ ಕಾಣಿಸಿದರೂ, ಅರ್ಥಶಾಸ್ತ್ರದಲ್ಲಿನ ವೈಶಿಷ್ಟ್ಯತೆಯೇ ಬೇರೆ ಎಂಬುದನ್ನು ಮರೆಯಬಾರದು.

**Use ಯುಸ್, ಉಪಯುಕ್ತ, ಉಪಯೋಗ, ಬಳಕೆ :** ಅರ್ಥಶಾಸ್ತ್ರದ ಸಂದರ್ಭದಲ್ಲಿ ಈ ಪದದ ಬಳಕೆ ಸಾಮಾನ್ಯ ಸಂದರ್ಭಗಳಿಂದ ಭಿನ್ನವಾಗಿದೆ. 'ಬಳಕೆ' ಮತ್ತು 'ಉಪಯುಕ್ತ' ಎಂಬ ಪದಗಳು ಪಠ್ಯಗಳಲ್ಲಿ ಬಳಕೆಯಾಗಿರುತ್ತವೆ. 'ಉಪಯೋಗ'ದ ಬಳಕೆ ತೀರಾ ಕಡಿಮೆ ಇರುತ್ತದೆ.

**Ratio ರೇಷಿಯೋ, ನಿಷ್ಪತ್ತಿ, ಅನುಪಾತ :** ಈ ಪದದಲ್ಲಿ 'ರೇಷಿಯೋ' ಎಂಬುದನ್ನು ಆರ್ಥಿಕ ವಿಚಾರಗಳ, ಜನಸಂಖ್ಯೆಗೆ ಸಂಬಂಧಿಸಿದ ಚರ್ಚೆಗಳಲ್ಲಿ ಬಜೆಟ್ ಹಂಚಿಕೆಯ ವಿಷಯದಲ್ಲಿ ಹೀಗೆ ಬೇರೆ ಬೇರೆ ಸನ್ನಿವೇಶಗಳಲ್ಲಿ ಈ 'ಪದ'ದ ಪ್ರಯೋಗ ನಡೆಯುತ್ತದೆ. 'ನಿಷ್ಪತ್ತಿ' ಎಂಬ ಪದ 'ಸಂಸ್ಕೃತ'ದಿಂದ ಬಂದಿರಬೇಕು. ಇದರ ಸಂವಹನ ಸರಳವಾಗಿಲ್ಲ. ಇದು ಎಲ್ಲರಿಗೂ ಅರ್ಥವಾಗುವುದು ಕಠಿಣವೆಂದು ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಅಭಿಪ್ರಾಯಪಟ್ಟಿದ್ದಾರೆ. ಆದರೂ ತಾಂತ್ರಿಕ ಭಾಷೆಯ ಪದವೆಂಬುದನ್ನು ಒಪ್ಪಿಕೊಳ್ಳಬಹುದು. ಪಠ್ಯಗಳಲ್ಲಿ ಈ ಪದದ ಪ್ರಯೋಗ ತುಂಬಾ ಕಡಿಮೆ. 'ಅನುಪಾತ' ಪದವನ್ನು ಪಠ್ಯಗಳಲ್ಲಿ ವ್ಯಾಪಕವಾಗಿ ಪ್ರಯೋಗಿಸಲಾಗಿದೆ. ಗಣಿತದ 'ಪದ'ವಾದ ಇದನ್ನು ಒಪ್ಪಿಕೊಂಡಂತೆ 'ನಿಷ್ಪತ್ತಿ'ಯನ್ನು ಅರಗಿಸಿಕೊಳ್ಳಲು ತ್ರಾಸಪಡುತ್ತಿದ್ದಾರೆ. 'ನಿಷ್ಪತ್ತಿ'ಯೂ ಗಣಿತಾತ್ಮಕದಲ್ಲಿ ಬಳಕೆಯಾಗುತ್ತಿರುವ ಪದವೆ. 'ರೇಷಿಯೋ' ಸಂಖ್ಯಾಶಾಸ್ತ್ರದ ಅಂದರೆ ಗಣಿತ ಸಂಬಂಧಿ ಪದ. 'ಇಂಗ್ಲಿಷ' ಪದದೊಂದಿಗೆ ಹೆಚ್ಚು ಪರಿಣಾಮ ನೀಡುತ್ತದೆ.

**Demand Draft ಡಿಮ್ಯಾಂಡ್ ಡ್ರಾಫ್ಟ್, ಬೇಡಿಕೆ ಹುಂಡಿ :** ಬ್ಯಾಂಕಿಂಗ್ ವ್ಯವಹಾರದಲ್ಲಿ ಈ ಪದದ ಬಳಕೆಯನ್ನು ಕಾಣುತ್ತೇವೆ. ಪತ್ರಿಕೆಗಳಲ್ಲಿ 'ಬೇಡಿಕೆ ಹುಂಡಿ' ಇಚೀನ ದಿನಗಳಲ್ಲಿ ಹೆಚ್ಚು ಪ್ರಯೋಗಿಸಲ್ಪಡುತ್ತದೆ. ಆದರೆ ಅದರ ಬಳಕೆ 'ಡಿಡಿ' ಎಂದು ಅತ್ಯಧಿಕವಾಗಿ ಬಳಕೆಯಲ್ಲಿದೆ. ಈ ಪದವನ್ನು ಪೂರ್ಣ ಪದಗಳಿಂದ ಮೌಖಿಕವಾಗಿ ವ್ಯವಹಾರ ಮಾಡುವುದಿಲ್ಲ. ಸಂಕ್ಷಿಪ್ತವಾಗಿ ಡಿಡಿ ಎಂಬುದಾಗಿ ಬಳಸಲಾಗುತ್ತದೆ. ಇದು ನೀಡುವ ಪರಿಭಾಷೆ ಪರಿಣಾಮಕಾರಿಯಾಗಿದೆಂಬುದನ್ನು ಇದು ಸೂಚಿಸುತ್ತದೆ.

**Table ಟೇಬಲ್ಲು, ಕೋಷ್ಟಕ, ಕೋಷ್ಟಕೀಕರಣ :** ಸಾಮಾನ್ಯ ಭಾಷೆಯಲ್ಲಿ 'ಮೇಜು' ಇಲ್ಲವೆ 'ಟೇಬಲ್' ಎಂದರೆ ನಾಲ್ಕು ಕಾಲುಗಳುಳ್ಳ ಒಂದು ಪೀಠೋಪಕರಣ. ಅರ್ಥಶಾಸ್ತ್ರದಲ್ಲಿ ಟೇಬಲ್ ಬೇರೆಯದಾದ ಪರಿಕಲ್ಪನೆಯನ್ನು ನೀಡುತ್ತದೆ. ದತ್ತಾಂಶಗಳನ್ನು ವ್ಯವಸ್ಥಿತವಾಗಿ ಅಡ್ಡ ಸಾಲುಗಳಲ್ಲಿ ಮತ್ತು ಕಂಬ ಸಾಲುಗಳಲ್ಲಿ ಜೋಡಿಸುವ ಕ್ರಮವಾಗಿದೆ. ಪತ್ರಿಕೆಗಳಲ್ಲಿ ವ್ಯಾಪಕವಾಗಿ ಈ ಪದಗಳು ಪ್ರಯೋಗಿಸಲ್ಪಟ್ಟಿವೆ. 'ಕೋಷ್ಟಕ' ಪದವು ಅತಿ ಹೆಚ್ಚಿನ ಪ್ರಮಾಣದಲ್ಲಿ ಬಳಸಿರುವುದನ್ನು ಗಮನಿಸಬಹುದು.

**Ability ಎಬಿಲಿಟಿ, ಸಾಮರ್ಥ್ಯ :** ಈ ಪದಕ್ಕೆ 'ಸಾಮರ್ಥ್ಯ' ಎನ್ನುವ ಪದ ಕನ್ನಡದಲ್ಲಿ ಬಳಕೆಯಲ್ಲಿ ಇದ್ದರೂ ಸಹ ಅದು 'ಎಬಿಲಿಟಿ' ಎಂಬ ಪದ ನೀಡುವ ಅರ್ಥವಂತಿಕೆ ಸಾಮರ್ಥ್ಯ ನೀಡಲಾರದು ಎಂಬ ಕಾರಣದಿಂದಾಗಿ ಕನ್ನಡದ ಬರಹಗಾರರು ಇಂಗ್ಲಿಷಿನ ಪದ ಸ್ವೀಕರಣ ಮಾಡಿರುವುದಾಗಿ ತಿಳಿದುಬರುತ್ತದೆ.

**Balance ಬ್ಯಾಲನ್ಸು, ಸಮತೋಲನ, ಸಮತೋಲಿತ, ಶೇಷ, ಶಿಲ್ಕು :** ಈ ಸಮಾನಾರ್ಥಕ ಪದಗಳನ್ನಾಗಿ ಕನ್ನಡದಲ್ಲಿ ಬಳಸಲಾಗುತ್ತಿದೆ. ಕನ್ನಡದಲ್ಲಿ ಉಪಯೋಗಿಸುವ ಪದಗಳ ಅರ್ಥ ಇಂಗ್ಲಿಷ್ ಪದ ನೀಡುವ ಅರ್ಥದಂತೆ ಪರಿಣಾಮಕಾರಿಯಾಗಿರುವುದಿಲ್ಲ. ಆದರೂ ಕನ್ನಡದಲ್ಲಿ ಸಮಾನ ಅರ್ಥ ಕಲ್ಪಿಸುವಂತಹ ಪದಗಳನ್ನು ಬಳಸಲಾಗುತ್ತದೆ.

**Bank ಬ್ಯಾಂಕು :** ಇಂಗ್ಲಿಷಿನ ಈ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಪದಗಳಿಲ್ಲ. ಆದ್ದರಿಂದ ನಮ್ಮ ಭಾಷೆಗೆ ಹೊಂದಾಣಿಕೆಯಾಗುವಂತೆ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ಬಳಸಲಾಗುತ್ತದೆ. ಅಂದರೆ 'ಬ್ಯಾಂಕ್' ಅನ್ನು 'ಬ್ಯಾಂಕು' ಎಂಬುದಾಗಿ ಸ್ವಲ್ಪ ಬದಲಾಯಿಸಿ ಬಳಸಲಾಗುತ್ತಿದೆ.

**Bank rate ಬ್ಯಾಂಕು ರೇಟು, ಬ್ಯಾಂಕ ದರ :** ಇಲ್ಲಿ 'ರೇಟು' ಬದಲಾಗಿ 'ದರ' ಟಂಕಿಸದಿದ್ದರೂ ಸಹ ಇಂಗ್ಲಿಷ ಪದವನ್ನು ಟಂಕಿಸಿ ಉಪಯೋಗಿಸಲಾಗುತ್ತದೆ.

**Black market ಬ್ಲ್ಯಾಕ ಮಾರ್ಕೆಟು, ಕಾಳಸಂತೆ :** ಕಾಳಸಂತೆ ಎಂಬುದು ಕನ್ನಡ ಪದ ಬಳಕೆಯಲ್ಲಿ ಇದ್ದರೂ ಇಂಗ್ಲಿಷಿನ ಬ್ಲ್ಯಾಕ ಮಾರ್ಕೆಟು ಹೆಚ್ಚು ಪ್ರಚಲಿತದಲ್ಲಿದೆ.

**Black money ಬ್ಲ್ಯಾಕ ಮನಿ, ಕಪ್ಪು ಹಣ** : ಕನ್ನಡದಲ್ಲಿ ಇದಕ್ಕೆ ಸಂವಾದಿಯಾಗಿ ಕಪ್ಪು ಹಣ ಎಂಬ ಪದವನ್ನು ಶೋಧಿಸಿದ್ದರೂ ಪರಿಣಾಮಕಾರಿ ಪದವೆಂದರೆ ಇಂಗ್ಲಿಷಿನದು. ಆದ್ದರಿಂದ ಅನುವಾದರಲ್ಲಿ ಹೆಚ್ಚಿನವರು ಬ್ಲಾಕ್ ಮನಿ ಪದವನ್ನು ಬಳಸುತ್ತಾರೆ.

**Budget ಬಜೆಟ್, ಮುಂಗಡ ಪತ್ರ, ಆಯವ್ಯಯ ಪತ್ರ** : ಕನ್ನಡದಲ್ಲಿ ಒಂದಕ್ಕಿಂತ ಹೆಚ್ಚು ಸಮಾನ ಅರ್ಥ ನೀಡುವ ಪದ ಬಳಕೆ ಇದ್ದರೂ ಇಂಗ್ಲಿಷಿನ ಬಜೆಟ್ಟು ಪದ ಸಂವಹನವಾಗುವ ರೀತಿಗಿಂತ ಭಿನ್ನವಾಗಿರುತ್ತವೆ. ಆದರೂ ಸಹ ಕನ್ನಡದ ಪದಗಳ ಬಳಕೆ ಹೆಚ್ಚುತ್ತಿದೆ.

**Business ಬ್ಯುಜಿನೆಸ್, ವ್ಯಾಪಾರ, ಉದ್ಯಮ, ವ್ಯವಹಾರ, ಕೊಡುಕೊಳ್ಳುವಿಕೆ** : ಕನ್ನಡದ ಇಂಥ ಪದಗಳು ಇಂಗ್ಲಿಷಿನ ಪದದ ಪರಿಭಾವನೆಯನ್ನು ನೀಡಲಾರವು. ಆದರೂ ಕನ್ನಡದಲ್ಲಿ ಪದಗಳ ಶೋಧನೆ ಇನ್ನು ಮುಂದುವರಿದಿದೆ.

**Central ಸೆಂಟ್ರಲ್, ಕೇಂದ್ರ, ಕೇಂದ್ರ ಸರಕಾರ** : ಸಂದರ್ಭಕ್ಕನುಸಾರವಾಗಿ ಕನ್ನಡದಲ್ಲಿ ಇಂಥ ಪದಗಳನ್ನು ಬಳಸುತ್ತಿದ್ದೇವೆ. ಅರ್ಥ ವಿಸ್ತಾರವಾಗದಿದ್ದರೂ ಅದು ಇಂಗ್ಲಿಷ ಭಾಷೆಯಲ್ಲಿನ ಪದದ ಸಾರವನ್ನು ಕನ್ನಡದಲ್ಲಿ ಪ್ರಸ್ಥಾಪಿಸುವಂತಿರಬೇಕು.

**Central Finance ಸೆಂಟ್ರಲ್ ಫೈನಾನ್ಸು, ಕೇಂದ್ರ ಸರಕಾರದ ಹಣಕಾಸು, ಕೇಂದ್ರ ಹಣಕಾಸು:** ಇಂಗ್ಲಿಷಿನ ಪದಗಳು ಕನ್ನಡದ ಪದಗಳಿಗಿಂತ ಹೆಚ್ಚು ಅರ್ಥವಂತಿಕೆ ಹೊಂದಿರುತ್ತವೆ.

Civil ಸಿವಿಲ್ಲ, ನಾಗರಿಕ, ಪೌರ, Corporate ಕಾರ್ಪೋರೇಟು, ಸಾಂಸ್ಥಿಕ, Corporation ಕಾರ್ಪೋರೇಷನ್ನು, Cycle ಸೈಕಲ್ಲು ಈ ಪದಗಳಲ್ಲಿ ಇಂಗ್ಲಿಷ ಪದಗಳು ಹೆಚ್ಚು ಸಂವಹನಶೀಲವಾಗಿವೆ. ಅವು ಕನ್ನಡದ ಪದಗಳಿಗಿಂತ ಹೆಚ್ಚು ಪರಿಣಾಮವನ್ನು ಮತ್ತು ಅರ್ಥವನ್ನು ಶಿಷ್ಟವಾಗಿ ಒದಗಿಸುತ್ತವೆ. ಇಂಥ ಪದಗಳು ಅನುಬಂಧ-೧ರಲ್ಲಿ ಸಿಗುತ್ತವೆ. ಅವುಗಳನ್ನು ಗಮನಿಸಬಹುದು.

ಸಮಾರೋಪ: ಶಬ್ದ ಸ್ವೀಕರಣ(Borrowing) ಅಧ್ಯಯನದಿಂದ ಕಂಡುಕೊಂಡ ವಿಚಾರವೆಂದರೆ, ಸ್ವೀಕೃತ ಶಬ್ದವು ಮೂಲಭಾಷೆಯದಾಗಿದ್ದರೂ ಅದಕ್ಕೆ ಸ್ಥಳೀಯ ಛಾಯೆಯನ್ನು ನೀಡಬೇಕಾದ ಅತ್ಯವನ್ನು ಗುರುತಿಸಲಾಗಿದೆ. ಉದಾ ಬ್ಯಾಂಕ್, ಬ್ಯಾಂಕು, ಚೆಕ್-ಚೆಕ್ಕು, ಕ್ರೆಡಿಟ್ ಕಾರ್ಡ್-ಕ್ರೆಡಿಟ್ ಕಾರ್ಡು, ಡಿಬೆಂಚರ್ಸ್-ಡಿಬೆಂಚರ್ಸು, ಡಿಸ್ಕೌಂಟ್, ಡಿಸ್ಕೌಂಟು, ಲಾಕರ್-ಲಾಕರು ಇತ್ಯಾದಿ ಪಾರಿಭಾಷಿಕ ಪದಗಳು ಕನ್ನಡದಲ್ಲಿ ರೂಪುಗೊಂಡಿದ್ದರೂ, ಅವುಗಳಿವೆ ಎಂಬ ಕಾರಣಕ್ಕಾಗಿ ಎಲ್ಲರೂ ಆ ಪದಗಳನ್ನು ಬಳಸದಿರುವುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕೆ ಇರಬಹುದಾದ ಕಾರಣಗಳನ್ನು ತಿಳಿಯುವ ಯತ್ನವನ್ನು ಮಾಡಲಾಗಿದೆ. ಅಂದರೆ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಕನ್ನಡ ಪದಗಳು ಟಂಕಿಸಲ್ಪಟ್ಟಿವೆ. ಆದರೂ 'ಸ್ವೀಕೃತ' ಪದ ಬಳಸುತ್ತಿದ್ದಾರೆ. ಇದು ಅರ್ಥಶಾಸ್ತ್ರದ ವಿದ್ಯಾರ್ಥಿಯನ್ನೊಳಗೊಂಡು ಸಾಮಾನ್ಯರೂ ಬಳಸುತ್ತಿದ್ದಾರೆ. ಕಾರಣ ಪರಿಭಾಷೆಯ ಸಂವಹನ ನಿರೀಕ್ಷಿತವಾಗಿದೆ. ಉದಾ. ಚೆಕ್ಕು ಎಂಬುದು ಎಲ್ಲರಿಗೂ ಗ್ರಹಿಕೆಗೆ ನಿಲುಕುವ ಪದ. ಕನ್ನಡದ

'ಧನಾದೇಶ' ಪದ ಎಲ್ಲರಿಗೂ ಅರ್ಥವಾಗುವುದಿಲ್ಲ. ಇಂಥ ಅನೇಕ ಪದಗಳಿವೆ. ಆದ್ದರಿಂದ ಕನ್ನಡದ ಸಂದರ್ಭದಲ್ಲಿ ಕನ್ನಡ ಪದಗಳು ಇವೆ ಎಂಬ ಕಾರಣಕ್ಕಾಗಿ ಬಳಕೆಯಾಗದೇ ಸಂವಹನಾತ್ಮಕ ಪರಿಭಾಷೆಯ ಪದ ಮುಖ್ಯವೆಂಬುದನ್ನು ಗುರುತಿಸಲಾಗಿದೆ. ಅಲ್ಲದೆ ಪಠ್ಯದಲ್ಲಿ ಬಳಸಿರುವ ಪದಗಳು 'ಸಾಮಾನ್ಯ' ಪದಗಳಂತೆ ಕಂಡುಬಂದರೂ ಅವು ಅರ್ಥಶಾಸ್ತ್ರದಲ್ಲಿ ವಿಶೇಷತೆ ಪಡೆದಿವೆ. ಉದಾ. ಟೇಬಲ್-ಕೋಷ್ಟಕ, ಕೋಷ್ಟಕೀಕರಣ, ಡಿಸ್ಕೌಂಟು, ಲಾಕರು, ಲಾಕೌಟು, (ಲಾಕ್ಔಟು), ಟೆಕ್ನಿಕ್ಕು, ಡಿಮಾಂಡ್, ಡಿವಿಜನ್, ಬ್ಯಾಲನ್ಸ್, ಬಜೆಟ್ಟು, ಸೆಂಟ್ರಲ್, ಬ್ಯುಜಿನೆಸ್ ಇತ್ಯಾದಿಗಳನ್ನು ಗುರುತಿಸಲಾಗಿದೆ. ಪದ ಸ್ವೀಕರಣದ ಹಿಂದಿನ ಚಹರೆಯನ್ನು ಇದು ತಿಳಿಯುತ್ತದೆ. ಇಂಗ್ಲಿಷ ಪರಿಭಾಷೆಗೆ ಕನ್ನಡದ ಪದಗಳ ಟಂಕಿಸುವಿಕೆ ಎಷ್ಟು ಮುಖ್ಯವೋ ಅದರ ಬಳಕೆಯ ಅಗತ್ಯವು ಅಷ್ಟೇ ಮುಖ್ಯ. ಆದರೆ ಇದು ಕಷ್ಟ ಸಾಧ್ಯ. ಇಲ್ಲದಿರುವುದನ್ನು ಶೋಧಿಸಿದಂತೆ, ಇರುವುದನ್ನು ಬಳಸಿದರೂ ಸಂವಹನವಾಗದಿದ್ದರೆ ಇಲ್ಲವೆ ಪರಿಭಾಷೆ ತಿಳಿಯದಿದ್ದರೆ ನಿರುಪಯುಕ್ತ ಎಂಬ ಭಾವನೆ ಬಾರದಂತೆ ನೋಡಿಕೊಳ್ಳುವ ಎಚ್ಚರಿಕೆಯನ್ನು ಗಮನಿಸಬೇಕು.

### ೫.೨. ಸ್ಥಾನಾಂತರ ಸ್ವೀಕರಣ (Loan Shift)

ಅರ್ಥಶಾಸ್ತ್ರದ ಪಾರಿಭಾಷಿಕ ಪದಗಳಲ್ಲಿ ಗುರುತಿಸಬಹುದಾದ ಅಂಶಗಳಲ್ಲಿ ಸ್ಥಾನಾಂತರ ಸ್ವೀಕರಣವೂ ಒಂದು. ಇದರ ಪರಿಕಲ್ಪನೆ ಹೀಗಿವೆ. ಮೂಲ ಭಾಷೆಯಲ್ಲಿಯ ವಿಚಾರ, ವ್ಯವಹಾರ ಅಥವಾ ವಸ್ತುವನ್ನು ಸ್ವೀಕರಿಸಬೇಕಾದಾಗ, ನಾವು ಅದನ್ನು ನಿರ್ದೇಶಿಸುವ ಶಬ್ದವನ್ನು ಸ್ವೀಕರಿಸಲ್ಲಿಲ್ಲ. ಆ ಶಬ್ದಕ್ಕೆ ಬದಲಾಗಿ, ನಮ್ಮ ಭಾಷೆಯಲ್ಲಿಯೇ ಇರುವ ಪದವನ್ನು ಅದರ ಸ್ಥಾನದಲ್ಲಿ ಬಳಸಬಹುದು. ಈ ರೀತಿ ಪದವನ್ನು ಸ್ಥಾನಾಂತರಗೊಳಿಸುವುದೇ ಸ್ಥಾನಾಂತರ ಸ್ವೀಕರಣ. ಇಲ್ಲಿ ಮೂಲ ಭಾಷೆಯ ವಿಚಾರವನ್ನು ನಿರ್ದೇಶಿಸುವ ಶಬ್ದದ ಬದಲಾಗಿ ನಮ್ಮ ಭಾಷೆಯ ಶಬ್ದವನ್ನು ಸಂದರ್ಭಾನುಸಾರ ಸ್ಥಾನಾಂತರಗೊಳಿಸುತ್ತೇವೆ ಎಂಬ ವಿಷಯವನ್ನು ಜೆ.ಎಸ್. ಕುಳ್ಳಿ ಮತ್ತು ಜಿ.ಪಿ. ಮುರಡಿ ಇವರು ಅನುವಾದ ಕಲೆ ೧೯೭೫:೪೯ರಲ್ಲಿ ದಾಖಲಿಸಿದ್ದಾರೆ. ಈ ವಿಚಾರವನ್ನು ಅರ್ಥಶಾಸ್ತ್ರದ ಸಂದರ್ಭಕ್ಕೆ ಅನ್ವಯಿಸಿ ಪರಿಶೀಲಿಸಿದಾಗ, ಗಮನ ಸೆಳೆದ ಅಂಶಗಳಲ್ಲಿ ಇದು ಒಂದು. ಇಂಗ್ಲಿಷ ಭಾಷೆಯಲ್ಲಿನ ಅರ್ಥಶಾಸ್ತ್ರದ ಪದ ಕನ್ನಡಕ್ಕೆ ಭಾಷಂತರಗೊಳ್ಳುವ ಪೂರ್ವದಲ್ಲಿ ಬಳಕೆಯಲ್ಲಿ ಅನೇಕ ಪದಗಳಿದ್ದವು. ಉದಾ : Deposit ಎಂಬ ಇಂಗ್ಲಿಷ ಪದಕ್ಕೆ ಸಂವಾದಿಯಾಗಿ 'ಇಡಿಗಂಟು' ಎಂಬ ಪದ ಬಳಸುತ್ತಿದ್ದೇವು. ಕ್ರಮೇಣ 'ಠೇವಣಿ' ಪದದ ಸೃಷ್ಟಿಯಾಯಿತು. Barter 'ಅದಲಾ ಬದಲಿ' ಪದ ಬಳಕೆಯಾಗುತ್ತಿತ್ತು. ಅದು ನಂತರ 'ವಸ್ತು ವಿನಿಮಯ' ಎಂಬ ಪದದ ರೂಪಕ್ಕೆ ಅವಕಾಶವಾಯಿತು. Budget ಪದಕ್ಕೆ 'ಅನುಮಾನ ಪತ್ರ' ಎಂಬ ಪದ ಬಳಕೆಯಾಗುತ್ತಿರುವುದು ತಿಳಿದುಬರುತಯ್ತದೆ. ಅನಂತರ ಅಂದಾಜು ಪತ್ರಿಕೆ, ಆಯ-ವ್ಯಯ ಪತ್ರಿಕೆ, ಮುಂಗಡ ಪತ್ರಿಕೆಗಳಂಥ ಸಮಾನಾರ್ಥಕ ಪದಗಳು ಸೃಷ್ಟಿಯಾಗಿರುವ ಬಗ್ಗೆ ತಿಳಿದುಬರುತ್ತದೆ. 'Agent' ಎಂಬುದಕ್ಕೆ 'ದಳ್ಳಾಳಿ' ಪದ ಬಳಕೆಯಾಗುತ್ತಿತ್ತು. ನಂತರ ದಲ್ಲಾಳಿ, ಮಧ್ಯವರ್ತಿ, ಮಧ್ಯಸ್ಥ ಎಂಬ ಪದಗಳು ಸೃಷ್ಟಿಗೊಂಡಿವೆ.

'Assets' ಎಂಬ ಪದಕ್ಕೆ ಸಂವಾದಿಯಾಗಿ 'ಲೇಣಿ' ಎಂಬ ಕನ್ನಡ ಪದ ಬಳಸುತ್ತಿದ್ದರು. ಸ್ವತ್ತು, ಆಸ್ತಿ ಎನ್ನುವ ಪದಗಳು ರಚನೆಗೊಂಡಿವೆ. Assumption ಪದಕ್ಕೆ 'ಊಹೆ' ಎಂಬ ಶಬ್ದದ ಉಪಯೋಗವಿತ್ತು. ಕ್ರಮೇಣ ಪೂರ್ವಗ್ರಹಿಕೆಗಳು, ಕಲ್ಪನೆಗಳು ಎನ್ನುವಂಥ ಪದಗಳು ಸೃಷ್ಟಿಗೊಂಡಿವೆ. ಇಂಥ ಪದಗಳು ಪಾರಿಭಾಷಿಕ ಪದಕೋಶಗಳಲ್ಲಿ ವ್ಯಾಪಕವಾಗಿವೆ. ಇವುಗಳನ್ನು ಕುರಿತು ಅಧ್ಯಯನ ಮಾಡಲು ಅವಕಾಶವಿದೆ. ಇಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ.

### ೫.೩. ಮಿಶ್ರ ಸ್ವೀಕರಣ(Loanblend)

ಮಿಶ್ರ ಸ್ವೀಕರಣದಲ್ಲಿ ಶಬ್ದ ಸ್ವೀಕರಣ (Loan word) ಮತ್ತು ಸ್ಥಾನಾಂತರ ಸ್ವೀಕರಣ (Loan shift) ಎರಡೂ ಪ್ರಕ್ರಿಯೆಗಳು ಕೆಲಸ ಮಾಡುತ್ತವೆ. ಅಂದರೆ ಮೂಲ ಭಾಷೆಯ ವಸ್ತು, ವಿಚಾರ ಅಥವಾ ವ್ಯವಹಾರಗಳನ್ನು ಸ್ವೀಕರಿಸಬೇಕಾದಲ್ಲಿ ಶಬ್ದ ಸ್ವೀಕರಣದಲ್ಲಿಯಂತೆ ಶಬ್ದವನ್ನು ಸ್ವೀಕರಿಸಬಹುದು. ಸ್ಥಾನಾಂತರ ಸ್ವೀಕರಣದಲ್ಲಿ ನಡೆಯುವಂತೆ ಉದ್ದಿಷ್ಟ ಭಾಷೆಯ ಸಾಮಗ್ರಿಗಳನ್ನು ಪೂರೈಸಲೂಬಹುದು. ಹೀಗಾದರೆ ಅದಕ್ಕೆ ಮಿಶ್ರ ಸ್ವೀಕರಣವೆಂದು ಹೆಸರು. ಎರಡೂ ಪ್ರಕ್ರಿಯೆಗಳ ಮಿಶ್ರಣವಿರುವುದರಿಂದ ಇದು ಮಿಶ್ರ ಸ್ವೀಕರಣ. ಉದಾಹರಣೆಗೆ, Commercial Bank ಎಂಬ ಶಬ್ದ ಕನ್ನಡಕ್ಕೆ ಬರಬೇಕಾಗಿದೆ ಎಂದರೆ ಅದನ್ನು ಅರ್ಧ ಇದ್ದಕ್ಕಿದ್ದಂತೆ ಸ್ವೀಕರಿಸುತ್ತೇವೆ. ಇನ್ನರ್ಧವನ್ನು ನಮ್ಮ ಭಾಷೆಯಿಂದ ಪೂರೈಸುತ್ತೇವೆ.

ಶಬ್ದ ನಿರ್ಮಾಣ ಕ್ರಿಯೆ ನಡೆದಾಗಲೂ ಪ್ರಮುಖ ಅಂಶವೆಂದರೆ ಜನರಿಂದ ಅದರ ಒಪ್ಪಿಗೆ(Acceptance). ಹೀಗೆ ನಿರ್ಮಾಣವಾದ ಶಬ್ದಗಳೆಲ್ಲ ಉಳಿಯುತ್ತವೆಯೆಂದೇನಲ್ಲ. ಇಂಥ ಪ್ರಯೋಗಗಳಲ್ಲಿ ಹೆಚ್ಚಿನವು ಉಳಿಯಬಹುದು. ಆ ಮಾತು ಬೇರೆ. ಉದಾಹರಣೆಗೆ Radio ಅವುಗಳಲ್ಲಿ ಗ್ರಂಥಗಳಲ್ಲಿ ಹೆಚ್ಚಾಗಿ ಬಳಕೆಯಾಗುವುದು ಆಕಾಶವಾಣಿಯೇ. ಆದರೆ ಸಾಮಾನ್ಯ cinema ಪದದ ಸಂವಾದಿ 'ಚಲನಚಿತ್ರ' ಎಂದಿದ್ದರೆ, ಜನರೆಲ್ಲಾ ಸಿನಿಮಾ ಎಂದೇ, ಎಂಬ ವಿಚಾರವನ್ನು ಜೆ.ಎಸ್. ಕುಳ್ಳಿ ಮತ್ತು ಜಿ.ಪಿ. ಮುರಡಿ ಇವರು ಅನುವಾದ ಕಲೆ(೧೯೭೫: ೫೩)ಯಲ್ಲಿ ದಾಖಲಿಸಿದ್ದಾರೆ.

ಕನ್ನಡ ಅರ್ಥಶಾಸ್ತ್ರದ ಸಂದರ್ಭಕ್ಕನುಸರಿಸಿ ಮಿಶ್ರ ಸ್ವೀಕರಣವನ್ನು ಪರಿಶೀಲಿಸೋಣ. ಇಂಗ್ಲಿಷ್ ಮೂಲದ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳನ್ನು ಕನ್ನಡಿಕರಿಸುವ ಕಾಯಕ ವಸಾಹತುಶಾಹಿ ಕಾಲಘಟ್ಟದಿಂದ ಆರಂಭವಾದಂತೆ ಕಂಡುಬಂದರೂ, ಅದು ಚುರುಕುತನ ಪಡೆದುಕೊಂಡದ್ದು ಸ್ವತಂತ್ರ ಭಾರತದಲ್ಲಿ. ವಿಶೇಷವಾಗಿ ಭಾಷಾವಾರು ಪ್ರಾಂತಗಳ ರಚನೆಯಾದ ತರುವಾಯವೇ. ಭಾಷಾಂತರ ಪ್ರಕ್ರಿಯೆ ದೀರ್ಘಕಾಲದಿಂದ ನಡೆಯುತ್ತಿದೆ. ಆದರೂ ಅರ್ಥಶಾಸ್ತ್ರದ ಪಠ್ಯಸಾಮಗ್ರಿಗಳು ಪೂರ್ಣಪ್ರಮಾಣದಲ್ಲಿ ಸಮರ್ಪಕ ಕನ್ನಡದಲ್ಲಿ ನಿರ್ಮಾಣಗೊಳ್ಳದಿರುವುದು ವಿಷಾದದ ಸಂಗತಿಯಾಗಿದೆ. ಹಾಗಂತ ಭಾಷಾಂತರ ಪ್ರಕ್ರಿಯೆಗಳು ಸಮರ್ಪಕ ರೀತಿಯಲ್ಲಿ ನಡೆದಿಲ್ಲವೆಂದಲ್ಲ. ಇಲ್ಲವೇ ಕಂಟುತ್ತಾ ಸಾಗಿದೆ

ಎಂದು ಭಾವಿಸಲೂಬಾರದು. ಒಂದು ಭಾಷೆಯ ಬೆಳವಣಿಗೆ ಮಾಯಾಜಾಲದಿಂದ ಆಗುವ ಕೆಲಸವಲ್ಲ. ಅದು ಗುಪ್ತಗಾಮಿನಿಯ ಹಾಗೆ ಸೂಕ್ಷ್ಮತೆಯಿಂದ ನಿರಂತರವಾಗಿ ನಡೆಯುವ ಕ್ರಿಯೆ. ಅಲ್ಲದೆ ಅದು ಸದಾ ಚಲನಶೀಲವಾದುದಾಗಿದೆ. ಹೀಗಾಗಿ ಇಂಗ್ಲಿಷಿನ ಒಂದು ಶಬ್ದಕ್ಕೆ ಕನ್ನಡದಲ್ಲಿ ಒಂದು ಕಾಲಘಟ್ಟದಲ್ಲಿ ಸೃಷ್ಟಿಯಾದ ಪದವು, ಕಾಲಾನಂತರ ಅದು ಹಳತಾಗಿ ಹೊಸ ಪದದ ಶೋಧಕ್ಕೆ ಅವಕಾಶ ಮಾಡಿಕೊಡುತ್ತದೆ. ಇದಕ್ಕೆ ಬೇಕಾದಷ್ಟು ಸಾಕ್ಷಿ ಸಿಗುತ್ತವೆ.

ಇಂಗ್ಲಿಷ್ ಪದಗಳಿಗೆ ಸರಿಯಾದ ಸಂವಾದ ಪದಗಳು ಕನ್ನಡದಲ್ಲಿ ಸೃಷ್ಟಿಯಾಗದ ಕಾರಣ ನಾವು ಅವುಗಳನ್ನೇ ಸ್ವೀಕರಿಸಿ ಬಳಸುತ್ತಿದ್ದೇವೆ. ಮತ್ತೆ ಕೆಲವನ್ನು ನಿರ್ಮಿಸಿಕೊಂಡರೂ ಸರಿಯಾದ ಸಂವಹನವಾಗುವುದಿಲ್ಲವೆಂದು ಇಂಗ್ಲಿಷ್‌ಗಳನ್ನೆ ಅವಲಂಬಿಸಿದ್ದೇವೆ. ಇನ್ನೂ ಕೆಲವು ಪದಗಳಿಗೆ ಅರ್ಧ ಪದ ಕನ್ನಡ ದಕ್ಕಿದರೆ, ಇನ್ನರ್ಧ ಇಂಗ್ಲಿಷ ಪದವೇ ಗತಿಯಾಗಿ ಉಳಿದಿದೆ. ಇದುವೇ ಮಿಶ್ರ ಸ್ವೀಕರಣವೆನಿಸಿದೆ. ಈಗ ಮಿಶ್ರ ಸ್ವೀಕರಣವನ್ನು ಉದಾಹರಣೆಯೊಂದಿಗೆ ಪರಿಶೀಲಿಸೋಣ.

**Banking system ಬ್ಯಾಂಕಿಂಗ್ ಪದ್ಧತಿ** : ಇಲ್ಲಿ ಬ್ಯಾಂಕಿಂಗ್ ಎನ್ನುವ ಪದವನ್ನು ಕನ್ನಡಿಕರಿಸಲು ಸಾಧ್ಯವಾಗದ ಕಾರಣ ಅದನ್ನು ನೇರವಾಗಿ ಪದ ಸ್ವೀಕರಿಸಲಾಗಿದೆ. 'ಸಿಸ್ಟಮ್' ಪದಕ್ಕೆ ಸಂವಾದಿಯಾಗಿ 'ಪದ್ಧತಿ' ಪದವನ್ನು ನಿರ್ಮಿಸಿಕೊಳ್ಳಲಾಗಿದೆ. ಒಟ್ಟಾರೆ ಮೂಲ ಪದದ ಪರಿಭಾಷೆಯನ್ನು ತಿಳಿಯುವ ಉದ್ದೇಶ ಈಡೇರಿಸಿಕೊಂಡಂತೆ ಕಂಡುಬರುತ್ತದೆ. ಇದು ಬ್ಯಾಂಕಿಂಗ್ ಪದ್ಧತಿಯ ವಿಚಾರವನ್ನು ತಿಳಿಸುವುದಕ್ಕೆ ಬಳಸಿರುವ ಉದ್ದೇಶವಿರಬಹುದು. ಅಥವಾ ಖಾಸಗಿ ಹಣಕಾಸಿನ ವ್ಯವಹಾರವು ಕ್ರಮಬದ್ಧವಾಗಿರುವುದನ್ನು ಸೂಚಿಸಲು ಈ ಪದ ಬಳಕೆಯಾಗಿರುವ ಸಾಧ್ಯತೆ ಇದೆ.

**Hard currency ಕಠಿಣ ಕರೆನ್ಸಿ** : ಮೊದಲನೆ ಅರ್ಧಭಾಗ ಕನ್ನಡ ಪದವನ್ನು ನಂತರದ ಅರ್ಧ ಪದ ಇಂಗ್ಲಿಷ್ ಅನ್ನು ಬಳಸಲಾಗಿದೆ. ನಗದು ಹಣವನ್ನು ಸೂಚಿಸುವ ಪದವಿದು. ಹಣಕಾಸಿನ ವ್ಯವಹಾರದಲ್ಲಿ ಡಿಡಿ, ಚೆಕ್ಕು, ವಚನ ಪತ್ರಗಳು, ಟ್ರೆಜರಿಬಿಲ್ಲು, ಪ್ರಾಮಿಸರಿ ನೋಟ್ಸ್ ಹೀಗೆ ಹಲವಾರು ಪದಗಳು ಬಳಕೆಯಾಗುತ್ತವೆ. ಇವು ಯಾವವೂ ನಗದು ಹಣವನ್ನು ಸೂಚಿಸುವುದಿಲ್ಲ. ಈ ಪದವು ವಿಶೇಷವಾದ ಅರ್ಥಹೊಂದಿರುವುದನ್ನು ಗಮನಿಸಬಹುದಾಗಿದೆ.

**Government bonds ಸರಕಾರಿ ಬಾಂಡುಗಳು** : ಸಾರ್ವಜನಿಕರು ಹಣವನ್ನು ತೊಡಗಿಸಿದಾಗ ರಸೀದಿ ರೂಪದಲ್ಲಿ ನಿಯಮಾವಳಿಗಳೊಂದಿಗೆ ಸಿಗುವ ಪ್ರತಿಫಲವನ್ನು ತೋರಿಸುವ ಒಂದು ಮೌಲ್ಯಯುತ ಕಾಗದ ಪತ್ರವಾಗಿದೆ. ಅರ್ಥಶಾಸ್ತ್ರದ ಸಂದರ್ಭದಲ್ಲಿನ ಬಳಸುವ ಪದವಿದು. ಈ ಪದವನ್ನು ಅರ್ಥಶಾಸ್ತ್ರವನ್ನು ಹೊರತುಪಡಿಸಿ ಬೇರೆ ಬೇರೆ ಅರ್ಥಗಳಲ್ಲಿ ಬಳಸುವ ಸಾಧ್ಯತೆಗಳಿವೆ. ಆಸ್ತಿ ಖರೀದಿ ಮತ್ತು ಮಾರಾಟದ ಸಂದರ್ಭದಲ್ಲಿ 'ಸರಕಾರಿ ಬಾಂಡು' ಪೇಪರನ್ನು ಬಳಸುವುದು ಉತ್ತಮ. ನ್ಯಾಯಾಲಯಕ್ಕೆ ಮುಚ್ಚಳಿಕೆ ಬರೆದುಕೊಡಲು ಬೇಕಾಗುವ ಕಾಗದಕ್ಕೂ ಈ ಪದ ಬಳಸಲಾಗುತ್ತದೆ. ಅದರಂತೆ ಇತರ ಸನ್ನಿವೇಶಗಳಲ್ಲಿಯೂ ಈ ಪದ ಬಳಕೆಯಾಗುತ್ತದೆ.

**Payment of premium ಪ್ರೀಮಿಯಮ್ ತುಂಬುವುದು** : ಹಣಕಾಸಿನ ವ್ಯವಹಾರದಲ್ಲಿ ಈ ಪದ ಬಳಕೆಯಾಗುತ್ತದೆ. ಅರ್ಥಶಾಸ್ತ್ರದ ಸಂದರ್ಭದಲ್ಲಿ ಉದ್ದಿಮೆಗೆ ಬಂಡವಾಳವನ್ನು ಸಾಲವಾಗಿ ಪಡೆದಿರುವುದನ್ನು ಕಂತುಗಳ ರೂಪದಲ್ಲಿ ಪಾವತಿಸುವುದನ್ನು ಇದು ಸೂಚಿಸುತ್ತದೆ. ಕಾರ್ಮಿಕರಿಗೆ ಮತ್ತು ನೌಕರರಿಗೆ ವೇತನ ಬಾಕಿ ಉಳಿದಿದ್ದು, ಅದು ದೊಡ್ಡ ಮೊತ್ತವಾಗಿದ್ದ ಸಂದರ್ಭದಲ್ಲಿ ಅದರ ಪಾವತಿಯನ್ನು ಕಂತಿನ ರೂಪದಲ್ಲಿ ಪಾವತಿಸಲು ಕ್ರಮ ಕೈಗೊಂಡಾಗಲೂ ಈ ಪದ ಬಳಕೆಯಾಗುತ್ತದೆ. ಪಠ್ಯದಲ್ಲಿ ದೃಷ್ಟಾಂತ ನೀಡುವಾಗ ಎಲ್‌ಐಸಿಗಳಂಥ ವಿಮಾ ಕಂತುಗಳ ಪಾವತಿಗಾಗಿ ಈ ಪದ ಬಳಕೆಯಾಗುತ್ತದೆ. ಖಾಸಗಿ ಜೀವನದಲ್ಲಿಯೂ ಇದನ್ನು ಬಳಸಲಾಗುತ್ತದೆ.

**Budget line ಬಜೆಟ್ ಗೆರೆ** : ಅರ್ಥಶಾಸ್ತ್ರದಲ್ಲಿ ಬಳಕೆಯಾಗುವ ಪದಗಳಲ್ಲಿ ಇದು ಪ್ರಮುಖವಾದದ್ದು. ಮಾನವನ ಬಯಕೆಗಳು ಅಪರಿಮಿತವಾಗಿದ್ದರೂ ತನ್ನ ಆದಾಯದ ಮಿತಿಯಲ್ಲಿ ಅವುಗಳನ್ನು ಪೂರೈಸಿಕೊಳ್ಳುತ್ತಾನೆ. ಅಂದರೆ ಸಂಪನ್ಮೂಲಗಳ ಮಿತಿಯಲ್ಲಿಯೇ ಬೇಡಿಕೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾನೆ. ಅನುಭೋಗಿಯು ಇರುವ ಆದಾಯದ ಪರಿಮಿತಿಯಲ್ಲಿ ಬಜೆಟ್ ಹೊಂದಾಣಿಕೆ ಮಾಡಿಕೊಳ್ಳುತ್ತಾನೆ. ಅದಕ್ಕಾಗಿ ರೂಪಿಸಿಕೊಂಡ ಮಿತಿಯನ್ನು ಅಥವಾ ಗೆರೆಯನ್ನು ದಾಟಲಾರ. ಅದರಂತೆ ಬಜೆಟ್ ಗೆರೆಯ ಒಳಗೂ ಉಳಿಯಲಾರ. ಇದರ ಅರ್ಥ ಇರುವ ಆದಾಯದಲ್ಲಿ ರೂಪಿಸಲ್ಪಟ್ಟ ಬಜೆಟ್ ಗೆರೆಯು ಅನುಭೋಗಿಯ ಆದರ್ಶತೆಯನ್ನು ತೋರಿಸುತ್ತದೆ. ಬಜೆಟ್‌ಗೆರೆ ದಾಟಿದರೆ ಸಾಲಗಾರ ಆಗುತ್ತಾನೆ. ಹೀಗಾಗಿ ಅವನು ತನ್ನ ಆದಾಯದ ಮಿತಿ ದಾಟಿ ಬಜೆಟ್ ರೂಪಿಸಿಕೊಳ್ಳಲಾರ. ಇರುವ ತನ್ನ ಆದಾಯಕ್ಕಿಂತ ಕಡಿಮೆ ಬಜೆಟ್‌ನ್ನು ರೂಪಿಸಿಕೊಳ್ಳಲಾರ. ಉಳಿತಾಯದಿಂದ ತನ್ನ ಬೇಡಿಕೆಗಳನ್ನು ಕಡೆಗಾಣಿಸಿದಂತಾಗುತ್ತದೆ. ಇದರ ಪೂರ್ಣ ಪ್ರಮಾಣದ ಹೆಚ್ಚಿನ ಮಾಹಿತಿಯನ್ನು ಔದಾಸೀನ್ಯ ವಕ್ರರೇಖೆಯ ಸಿದ್ಧಾಂತದಲ್ಲಿ ನೋಡಬಹುದಾಗಿದೆ.

**Open cheque ತೆರೆದ ಚೆಕ್ಕು** : ಈ ಪದವನ್ನು ಬ್ಯಾಂಕಿಂಗ್ ವ್ಯವಹಾರದಲ್ಲಿ ಬಳಸಲಾಗುತ್ತದೆ. ಚೆಕ್ಕುಗಳ ವಿಧಗಳಲ್ಲಿ ಇದು ಒಂದು. ಈ ಮಾದರಿ ಚೆಕ್ಕು ಯಾರಿಗಾದರೂ ಕೊಡಬಹುದು. ಅಂದರೆ ಬ್ಯಾಂಕಿನಲ್ಲಿ ಖಾತೆ ಹೊಂದಿದವರು, ಖಾತೆ ಹೊಂದದವರಿಗೂ ನೀಡಬಹುದಾದ ಚೆಕ್ಕು ಇದಾಗಿದೆ. ಹಣಕಾಸಿನ ವ್ಯವಹಾರ ಮಾಡುವವರಲ್ಲಿ ಕೆಲವರು ಚೆಕ್ಕುಗಳ ಮೂಲಕ ವ್ಯವಹರಿಸುವಾಗ ಇದನ್ನು ಪರಿಗಣಿಸಲಾಗುತ್ತದೆ. ನಗದು ಹಣಕಾಸಿನ ವ್ಯವಹಾರಕ್ಕಿಂತ ಇದು ಸುರಕ್ಷಿತ ವಿಧಾನ. ಸಾಮಾನ್ಯವಾಗಿ ನಗರ ಪ್ರದೇಶಗಳಲ್ಲಿ ಸರಕಾರಿ ಇಲಾಖೆಗಳಲ್ಲಿ ಈ ಮಾದರಿಯ ಚೆಕ್ಕುಗಳು ಬಳಕೆ ಮಾಡುವುದನ್ನು ಕಾಣಬಹುದಾಗಿದೆ.

**Credit card ಸಾಲದ ಕಾರ್ಡು, ಉದ್ದರಿ ಕಾರ್ಡು** : ಈ ಪದದ ಬಳಕೆ ಇತ್ತೀಚಿನ ದಿನಗಳಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಬ್ಯಾಂಕಿಂಗ್ ಪದ್ಧತಿಯಲ್ಲಿ ಸಾಕಷ್ಟು ಸುಧಾರಣೆಗಳಾಗುತ್ತಲಿವೆ. ಈ ಪ್ರಗತಿಯ ವಿಚಾರವನ್ನು ಸಾರ್ವತ್ರಿಕರಿಸುವುದು ಅಷ್ಟೇ ಮಹತ್ವದ್ದಾಗಿದೆ. ಸಾರ್ವಜನಿಕರು

ತಮ್ಮ ದಿನನಿತ್ಯದ ವ್ಯವಹಾರಕ್ಕಾಗಿ ನಗದು ಹಣ ಬಳಕೆ ಮಾಡುವುದು ಸಹಜ. ಆದರೆ ಅದರಿಂದ ಅನೇಕ ತೊಂದರೆ, ಸಮಸ್ಯೆಗಳು ಎದುರಾಗುತ್ತಿದ್ದವು. ಈ ದೋಷವನ್ನು ತಪ್ಪಿಸಲು ಶೋಧಿತ ಅನೇಕ ವಿಧಗಳಲ್ಲಿ ಇದು ಒಂದು. ಗ್ರಾಹಕರಿಗೆ ಬ್ಯಾಂಕುಗಳು ಈ 'ಕ್ರೆಡಿಟ್ ಕಾರ್ಡು'ನ್ನು ವಿತರಿಸುತ್ತವೆ. ಗ್ರಾಹಕರು ತಮ್ಮ ಸಾಲದ ಕಾರ್ಡನ್ನು ಬಳಸಿ ತಮಗೆ ಬೇಕಾದ ಸರಕು ಸೇವೆ ಪಡೆಯಬಹುದಾಗಿದೆ. ಎಲ್ಲಿಯೂ ನಗದು ಹಣ ಬಳಕೆ ಮಾಡುವ ಅಗತ್ಯತೆ ಬರುವುದಿಲ್ಲ. ಆದರೆ ಈ ಕಾರ್ಡಿನ ಬಳಕೆ ಇನ್ನೂ ಪೂರ್ಣ ಪ್ರಮಾಣದಲ್ಲಿ ಬಳಕೆಯಾಗುತ್ತಿಲ್ಲ. ಗ್ರಾಮೀಣ ಮತ್ತು ಸಣ್ಣ ಪಟ್ಟಣಗಳಲ್ಲಿ ನಗದು ಹಣದ ಮೂಲಕ ವ್ಯವಹಾರ ನಡೆಯುತ್ತದೆ. ದೊಡ್ಡ ದೊಡ್ಡ ನಗರಗಳಲ್ಲಿ ಮಾತ್ರ ಸಾಲದ ಕಾರ್ಡು ಬಳಕೆಯಾಗುತ್ತದೆ.

**Registration fee ರಿಜಿಸ್ಟ್ರೇಷನ್ ಶುಲ್ಕ :** ಉತ್ಪಾದನಾ ಮತ್ತು ಮಾರಾಟ ವ್ಯವಸ್ಥೆಯಲ್ಲಿ ಈ ಪದ ಬಳಕೆಗೆ ಬರುತ್ತದೆ. ಸರಕಾರದಿಂದ ಅಧಿಕೃತ ಉದ್ದಿಮೆಯಾಗಿ ಕಾರ್ಯ ನಿರ್ವಹಿಸಲು ಈ ಶುಲ್ಕವನ್ನು ಪಾವತಿ ಮಾಡಬೇಕಾಗುತ್ತದೆ. ಸಂಬಂಧಿಸಿದ ಅಧಿಕಾರಿಗಳು ಕೇಳಿದಾಗ ರಿಜಿಸ್ಟ್ರೇಷನ್ ಪ್ರತಿಯನ್ನು ತೋರಿಸಬೇಕು.

**Optimum firm ಅತ್ಯಂತ ಅನುಕೂಲವುಳ್ಳ ಫರ್ಮು :** ವಿವಿಧ ಉದ್ದಿಮೆಗಳ ಸ್ಥಿತಿ-ಗತಿ ಕುರಿತು ಚರ್ಚಿಸುವ ಪಠ್ಯಗಳಲ್ಲಿ ಈ ಪದ ಬಳಕೆಯಾಗುತ್ತದೆ.

**Bank rate ಬ್ಯಾಂಕು ದರ :** ವಾಣಿಜ್ಯ ಬ್ಯಾಂಕುಗಳು ನಿರ್ಧರಿಸುವ ಬಡ್ಡಿದರ ಸೂಚಿಸಲು ಈ ಪದದ ಬಳಕೆಯಾಗುತ್ತದೆ. ಉಳಿತಾಯ ಹಣದ ಕಾಲಾವಧಿ ಮತ್ತು ಇತರ ತತ್ವಗಳಡಿ ಬಡ್ಡಿದರವು ಬೇರೆ ಬೇರೆಯಾಗಿರುತ್ತದೆ. ಅದರಂತೆ ನೀಡುವ ಉದ್ದೇಶಗಳ, ಆಧಾರದ ಮೇಲೆ ಬ್ಯಾಂಕುದರ ವಿಭಿನ್ನವಾಗಿರುತ್ತದೆ. ಜನಸಾಮಾನ್ಯರು ಬಳಸುವ 'ಬಡ್ಡಿದರ' ಪದಕ್ಕೆ ಬ್ಯಾಂಕಿನ ಸಿಬ್ಬಂದಿ 'ಬ್ಯಾಂಕು' ಭಾಷೆಯಲ್ಲಿ ಬ್ಯಾಂಕದರ ಎಂಬುದಾಗಿ ಬಳಸುತ್ತಾರೆ. ಬ್ಯಾಂಕಿನ ಕ್ಷೇತ್ರದಲ್ಲಿ ಕೆಲವು ವಿಶೇಷ ಪದಗಳು ಬಳಸಲ್ಪಡುತ್ತವೆ. ಅವುಗಳಲ್ಲಿ ಇದು ಒಂದು.

**Balanced budget ಸಮತೂಕ ಬಜೆಟ್ಟು, ಸಮತೋಲಿತ ಬಜೆಟ್ಟು, ಸಮತೋಲನ ಬಜೆಟ್ಟು :** ಸಾಮಾನ್ಯವಾಗಿ ಪ್ರತಿಯೊಂದು ದೇಶವೂ ವಾರ್ಷಿಕವಾಗಿ ಬಜೆಟ್ಟನ್ನು ತಯಾರಿಸಿಕೊಳ್ಳುತ್ತವೆ. ಅವು ಆಯಾ ದೇಶದ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ತಯಾರಿಸಲ್ಪಟ್ಟಿರುತ್ತವೆ. ಆದರೂ ಅವುಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಲಾಗುತ್ತದೆ. ಅವುಗಳಲ್ಲಿ ಇದು ಒಂದು. ಅದು ಮುಂಬರುವ ವರ್ಷದಲ್ಲಿ ಸಂಗ್ರಹವಾಗಲಿರುವ ಆದಾಯವು ಮಾಡಲಿರುವ ವೆಚ್ಚದ ಪ್ರಮಾಣಕ್ಕೆ ಸಮವಾಗಿರುವುದನ್ನು ಬ್ಯಾಲೆನ್ಸ್ ಬಜೆಟ್ ಎಂದು ಕರೆಯಲಾಗುತ್ತದೆ. ಇಂಥ ಬಜೆಟ್ ತಯಾರಿಸುವುದು ತುಂಬಾ ಅಪರೂಪ. ಸಾಮಾನ್ಯವಾಗಿ ಆರ್ಥಿಕವಾಗಿ ಮುಂದುವರಿದ ದೇಶಗಳು ಈ ಮಾದರಿಯ ಬಜೆಟ್ಟು ತಯಾರಿಸುತ್ತವೆ.

**Local Market ಸ್ಥಾನಿಕ ಮಾರುಕಟ್ಟೆ, ಸ್ಥಳೀಯ ಮಾರುಕಟ್ಟೆ** : ಮಾರುಕಟ್ಟೆಗಳನ್ನು ವರ್ಗೀಕರಣ ಮಾಡುವ ಸನ್ನಿವೇಶದಲ್ಲಿ ಈ ಪದ ಬಳಕೆಗೆ ಬರುತ್ತದೆ. ಮಾರುಕಟ್ಟೆಗಳನ್ನು ವಿಸ್ತೀರ್ಣದ ಆಧಾರದ ಮೇಲೆ ವರ್ಗೀಕರಿಸಿದಲ್ಲಿ ಇದು ಒಂದು ಮಾರುಕಟ್ಟೆಯಾಗಿ ಗುರುತಿಸಲ್ಪಡುತ್ತದೆ.

**Geometrical ratio ಜಾಮಿತಿಯ ಪ್ರಮಾಣ, ಜ್ಯಾಮಿತಿಯ ಶ್ರೇಣಿ** : ಅರ್ಥಶಾಸ್ತ್ರದಲ್ಲಿ ಗಣಿತೀಯ ಪ್ರಯೋಗದ ಸಂದರ್ಭಗಳಲ್ಲಿ ಈ ಪದದ ಬಳಕೆಯಾಗುತ್ತದೆ. ವಿಶೇಷವಾಗಿ ಮಾಲ್ಥಸ್‌ರು ರೂಪಿಸಿದ ಜನಸಂಖ್ಯಾ ಸಿದ್ಧಾಂತದಲ್ಲಿ ಈ ಪದದ ಪ್ರಯೋಗ ವ್ಯಾಪಕವಾಗಿರುವುದನ್ನು ಗಮನಿಸಬಹುದಾಗಿದೆ. ಜನಸಂಖ್ಯಾ ಬೆಳವಣಿಗೆ ಮತ್ತು ಆಹಾರೋತ್ಪಾದನೆಯ ಬೆಳವಣಿಗೆ ಪ್ರಮಾಣವನ್ನು ತೌಲನಿಕವಾಗಿ ವಿವರಿಸುವ ಸನ್ನಿವೇಶವನ್ನು ಪರಿಶೀಲಿಸಬಹುದಾಗಿದೆ.

**Treasury bill ಟ್ರಜರಿ ಪತ್ರ** : ಹಣದ ಪೇಟೆಯಲ್ಲಿ ಚರ್ಚಿತ ಪದಗಳಲ್ಲಿ ಇದು ಒಂದು. ಹಣದ ಮಾರುಕಟ್ಟೆಯಲ್ಲಿ ಪ್ರತ್ಯಕ್ಷವಾಗಿ ಹಣದ ಬಳಕೆಯಾಗುವುದಿಲ್ಲ. ಆದರೂ ಇದನ್ನು ಹಣದ ಮಾರುಕಟ್ಟೆ ಎಂದೇ ಗುರುತಿಸಲಾಗುತ್ತದೆ. ಹಣದಷ್ಟೇ ಪ್ರಾಮುಖ್ಯತೆ ಪಡೆದ ವಸ್ತುಗಳನ್ನು ಇಲ್ಲಿ ಬಳಸಲಾಗುತ್ತದೆ. ಚಕ್, ಡಿಡಿ, ಪ್ರಾಮಿಸರಿ ಪತ್ರಗಳು ಇತ್ಯಾದಿಗಳೊಂದಿಗೆ ಈ ಟ್ರೆಜರಿ ಪತ್ರವನ್ನೂ ಬಳಸಲಾಗುತ್ತದೆ. ಇವು ಕಾನೂನುಬದ್ಧ ಸಾಮಿಪ್ಯ ಹಣ ಎನಿಸಿಕೊಂಡಿವೆ.

**ಸಮಾರೋಪ:** ಅರ್ಥಶಾಸ್ತ್ರದ ಪಠ್ಯ ಸಾಮಗ್ರಿಗಳಲ್ಲಿ ಮಿಶ್ರ ಸ್ವೀಕರಣದ ಪದಗಳು ಇನ್ನೂ ಸಾಕಷ್ಟಿವೆ. ಅವುಗಳ ಕುರಿತಂತೆ ಇನ್ನೂ ಬೇರೆ ಬೇರೆ ಮಗ್ಗಲುಗಳಿಂದ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವನ್ನು ಗುರುತಿಸಲು ಅವಕಾಶವಿದೆ. ಅದರಂತೆ ಇಂಗ್ಲಿಷಿನ ಎರಡು, ಮೂರು ಪದಗಳು ಕನ್ನಡದ ಸಂದರ್ಭದಲ್ಲಿ ಒಂದೇ ಪದ ಸೃಷ್ಟಿಯಾಗಿದೆ. ಪಾರಿಭಾಷಿಕ ಪದಕೋಶ ಗಮನಿಸಿದಾಗ ಹಲವು ಹೊಸ ವಿಚಾರ ಹೊಳೆದಾವು. ಮಿಶ್ರ ಸ್ವೀಕರಣದಿಂದ ಕಂಡುಕೊಂಡ ಪ್ರಮುಖ ಅಂಶಗಳೆಂದರೆ, ಕನ್ನಡದ ಸಂದರ್ಭದಲ್ಲಿ ಭಾಷಾಂತರ ಪ್ರಕ್ರಿಯೆ ದೀರ್ಘ ಕಾಲದಿಂದ ನಡೆದುಕೊಂಡು ಬಂದಿದ್ದರೂ ಇಂಗ್ಲಿಷಿನ ಕೆಲವು ಪದಗಳಿಗೆ ಕನ್ನಡದಲ್ಲಿ ಪದ ಸೃಷ್ಟಿಯಾಗಿಲ್ಲ ಎಂಬುದನ್ನು ಖಾತರಿಪಡಿಸುತ್ತದೆ. ಕನ್ನಡದ ಪದಗಳು ಇಂಗ್ಲಿಷಿನ ಪರಿಭಾಷೆಯನ್ನು ಸಂಪೂರ್ಣವಾಗಿ ನೀಡುವಲ್ಲಿ ಕೆಲವು ಪದಗಳು ವಿಫಲವಾಗಿವೆ. ಈ ಕಾರಣಕ್ಕಾಗಿ 'ಮಿಶ್ರ ಸ್ವೀಕರಣ' ಪದಗಳು ಪಠ್ಯಗಳಲ್ಲಿ ಮತ್ತು ನಿಜ ಜೀವನದಲ್ಲಿ ತಮ್ಮ ಅಸ್ಥಿತ್ವ ಪಡೆದಿವೆ. ಈ ಮಿಶ್ರ ಸ್ವೀಕರಣದ ಪದಗಳು ಒಂದೊಂದು ನಿರ್ದಿಷ್ಟ ಕ್ಷೇತ್ರದಲ್ಲಿ ಬಳಸಲೇಬೇಕಾದ ಅನಿವಾರ್ಯತೆ ಎಂಬಂತೆ ತೋರಿಸಿಕೊಳ್ಳುತ್ತವೆ. ಉದಾ. ಬ್ಯಾಂಕುದರ, ರೇಪೋದರ, ಕಠಿಣ ಕರೆನ್ಸಿ, ಸರಕಾರಿ ಬಾಂಡು, ಜಾಮಿತಿಯ ಪ್ರಮಾಣ, ಆರ್ಕ್ ಸ್ಥಿತಿಸ್ಥಾಪಕತ್ವ ಪದ ಮತ್ತು ಇನ್ನುಳಿದ ಅರ್ಧಪದ ಇಂಗ್ಲಿಷನ್ನು ಬಳಸಲಾಗುತ್ತದೆ. ಆದರೆ ಆ ಪದದ ಬಳಕೆಯ ಸಂದರ್ಭದಲ್ಲಿ ಈ ರೀತಿಯ ಭಾವನೆ ಬಳಸುವವರ ಮನಸ್ಸಿನಲ್ಲಿ ಇರುವುದಿಲ್ಲ. ಆ ವ್ಯಕ್ತಿಗೆ ಸಂಬಂಧಿಸಿದ ವಿಷಯದ ಅರ್ಥ ತಿಳಿದು ಮಾಡಬೇಕಾದ ಕ್ರಿಯೆಯತ್ತ ಗಮನ ಅರಿಸುವುದು ಮುಖ್ಯವಾಗುತ್ತದೆ. ಅದರಂತೆ ಈ ಪದ ಕೇಳಿಸಿಕೊಳ್ಳುವ ವ್ಯಕ್ತಿಯೂ, ಇವನು ಅರ್ಧ ಇಂಗ್ಲಿಷ ಪದ ಮತ್ತು ಉಳಿದ ಅರ್ಧ

ಕನ್ನಡ ಪದ ಬಳಸುತ್ತಾನೆಂದು ಅರ್ಥೈಸಿಕೊಳ್ಳಲಾರ. ಪರಸ್ಪರರು ಸಂವಹನ ಕ್ರಿಯೆಗೆ ಬೇಕಾದ ಪರಿಭಾಷೆಯತ್ತ ಗಮನ ನೀಡುತ್ತಾರೆಂಬಂಥ ಅಂಶಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಇಂಥ ಅನೇಕ ಸುಳಿವು ಗುರುತಿಸಲು ಅವಕಾಶಗಳಿವೆ.

**೫.೪. ಸಮನಾರ್ಥಕ ವಿಶೇಷ ಪದಗಳು**

ಇಂಗ್ಲಿಷಿನಲ್ಲಿರುವ ಅರ್ಥಶಾಸ್ತ್ರದ ಒಂದು ಪದಕ್ಕೆ ಕನ್ನಡದ ಸಂದರ್ಭದಲ್ಲಿ ಒಂದೇ ಅರ್ಥವನ್ನು ಸೂಚಿಸುವ ಬೇರೆ ಬೇರೆ ಪದಗಳ ಬಳಕೆ ಮಾಡುವುದನ್ನು ಸಮನಾರ್ಥಕ ವಿಶೇಷ ಪದಗಳೆಂದು ಗುರುತಿಸಬಹುದು. ಇವುಗಳನ್ನು ಪರ್ಯಾಯ ಪದಗಳೆಂದೂ ಕರೆಯಬಹುದಾಗಿದೆ. ಭಾಷಾಂತರಕಾರರು ತಮ್ಮ ತಮ್ಮ ಅನುಭವದ ಮಿತಿಯಲ್ಲಿ ಹಾಗೂ ಪ್ರಾದೇಶಿಕ ನೆಲೆಯಲ್ಲಿ ಕನ್ನಡ ಪದಗಳು ರೂಪಿಸಿರುವ ಸಾಧ್ಯತೆ ಇದೆ. ಈ ಪದಗಳು ಬೇರೆ ಬೇರೆ ಪದಗಳಂತೆ ಕಂಡುಬಂದರೂ ಒಂದೇ ಅರ್ಥವನ್ನು ಸೂಚಿಸುತ್ತವೆಂಬುದು ವಿಶೇಷ. ಇಂಥ ಪದಗಳು ಕನ್ನಡದಲ್ಲಿ ಹೇರಳವಾಗಿವೆ. ಒಂದಕ್ಕಿಂತ ಹೆಚ್ಚು ಪದಗಳು ಕನ್ನಡದಲ್ಲಿ ಟಂಕಿಸಲಾಗಿದ್ದರೂ ಸಹ ಸಾಮಾನ್ಯವಾಗಿ ಒಂದೊಂದೇ ಪದ ಜನಸಾಮಾನ್ಯರು ಮತ್ತು ಅಧ್ಯಯನಕಾರರು ಬಳಸುತ್ತಿರುವುದನ್ನು ಗಮನ ಸೆಳೆಯುತ್ತವೆ. ಈಗ ಕೆಲವು ಪದಗಳನ್ನು ಉದಾಹರಣೆಗಾಗಿ ಪರಿಶೀಲಿಸಬಹುದಾಗಿದೆ.

**Agent ಏಜೆಂಟ್, ದಳ್ಳಾಳಿ, ಮಧ್ಯವರ್ತಿ** : 'ಎಜೆಂಟ್' ಎಂಬುದು ಪದ ಸ್ವೀಕರಣ. ಕನ್ನಡದ ಸಂದರ್ಭದಲ್ಲಿ ದಳ್ಳಾಳಿ, ದಲ್ಲಾಳಿ ಮತ್ತು ಮಧ್ಯವರ್ತಿಗಳೆಂಬ ಪದಗಳು ಸಮನಾರ್ಥಕ ಪದಗಳನ್ನಾಗಿ ಬಳಸಲಾಗುತ್ತದೆ. ಕನ್ನಡದಲ್ಲಿ 'Agent' ಪದಕ್ಕೆ ಪರ್ಯಾಯವಾಗಿ ಪದಗಳಿಲ್ಲವೆಂಬ ಕಾರಣಕ್ಕಾಗಿ ಈ ಪದಗಳನ್ನು ಟಂಕಿಸಲಾಗಿದೆ. ಪಠ್ಯ ಸಾಮಗ್ರಿಗಳಲ್ಲಿ ಬಳಕೆಯಾಗುವ ಈ ಪದಗಳನ್ನು ಎಲ್ಲರೂ ಬಳಸುತ್ತಿಲ್ಲ. ಅನುವಾದದಲ್ಲಿ ತೊಡಗಿದ ಭಾಷಾಂತರಕಾರರು ತಮ್ಮ ತಮ್ಮ ಅನುಭವಕ್ಕೆ ನಿಲುಕುವ ಪದಗಳನ್ನು ಸೃಷ್ಟಿಸಿರುವುದು ಒಂದು ಅಂಶವಾದರೆ, ಕನ್ನಡ ಭಾಷೆಯನ್ನು ಬಳಸುವ ಪ್ರದೇಶದ ಜನರು ಬೇರೆ ಬೇರೆ ಪದಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅರ್ಥಶಾಸ್ತ್ರದ ವಿದ್ಯಾರ್ಥಿಗಳು ಮಾತ್ರ ಸಮನಾರ್ಥಕ ಪದದತ್ತ ಗಮನಿಸುತ್ತಾರೆ. ಅವರು ಸಹ ಅಧ್ಯಯನ ಕ್ಷೇತ್ರದ ಆಚೆ ನಿಂತು ಆಲೋಚಿಸುವಾಗ ಜನಸಾಮಾನ್ಯರು ಬಳಸುವ ಪದವನ್ನೆ ಬಳಸುತ್ತಾರೆ. ಅವರ ಪರಿಕಲ್ಪನೆಯಲ್ಲಿ ಚರ್ಚಿಸಿದರೆ ಮಾತ್ರ ಪರಸ್ಪರರು ಅರ್ಥಗ್ರಹಿಸಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಬಳಕೆಯಲ್ಲಿರುವ ಪದ 'ಎಜೆಂಟ್' ಇದು ಸ್ವೀಕರಣದ ಪದ ಎಂಬುದು ಮುಖ್ಯವಲ್ಲ. ಅದು ಸಂವಹನಕ್ಕೆ ಸೂಕ್ತವಾಗಿರಬೇಕು. ಸರಿಯಾಗಿ ಮತ್ತು ಪೂರ್ಣಪ್ರಮಾಣದಲ್ಲಿ ಅರ್ಥ ನೀಡುವಂತಿರಬೇಕು. ಆ ನಿಟ್ಟಿನಲ್ಲಿ 'ದಲ್ಲಾಳಿ' ಮತ್ತು 'ಮಧ್ಯವರ್ತಿ' ಪದಗಳು ವಿದ್ಯಾವಂತರಿಗೆ ಅದರಲ್ಲಿ ಅರ್ಥಶಾಸ್ತ್ರದ ವಿದ್ಯಾರ್ಥಿಗಳಿಗೆ 'ಅರ್ಥ'ವು ಸರಿಯಾಗಿ ಆಗಬಹುದಾಗಿದೆ. ಆದರೆ 'ಎಜೆಂಟ್' ಪದವು ಎಲ್ಲರಿಗೂ ಮನವರಿಕೆ ಮಾಡುವಲ್ಲಿ ಯಶಸ್ವಿ ಪದವೆಂದು ಗುರುತಿಸಬಹುದಾಗಿದೆ.

**Budget** ಬಜೆಟ್ಟು, ಅನುಮಾನ ಪತ್ರ, ಮುಂಗಡ ಪತ್ರ, ಆಯ-ವ್ಯಯ ಪತ್ರ: ಈ ಪದಗಳನ್ನು ಪರ್ಯಾಯ ಪದಗಳನ್ನಾಗಿ ಬಳಸಲಾಗುತ್ತದೆ. ಪಾರಿಭಾಷಿಕ ಪದಗಳನ್ನು ಗಮನಿಸಿದಾಗ, ಕನ್ನಡಿಗರು ಇಂಗ್ಲಿಷಿನ ಪದದ ಅರ್ಥವಂತಿಕೆ ಸೂಚಿಸುವ ಪದಕ್ಕಾಗಿ ಸದಾ ಶೋಧದಲ್ಲಿ ತೊಡಗಿದಂತೆ ಕಂಡುಬರುತ್ತದೆ. ಇದರ ಪರಿಣಾಮವೆನ್ನುವಂತೆ ಒಂದಕ್ಕಿಂತ ಹೆಚ್ಚು ಪದಗಳು ಕನ್ನಡದಲ್ಲಿ ಕಾಣಸಿಗುತ್ತವೆ. ಈ ಸಮನಾರ್ಥಕ ವಿಶೇಷ ಪದಗಳೆಂದು ಪರಿಗಣಿಸಬಹುದಾಗಿದೆ. ಆರಂಭದಲ್ಲಿ 'ಅನುಮಾನ ಪತ್ರ' ಎಂಬ ಪದವನ್ನು ಬಳಸಿದ್ದುದನ್ನು ಗುರುತಿಸುವ ಸಾಧ್ಯತೆಗಳಿವೆ. 'ಆಯ-ವ್ಯಯ ಪತ್ರ'ಎಂಬುದು ಸಂಸ್ಕೃತ ಜನ್ಯ ಪದವಾಗೆ. ಇದು ವಿದ್ಯಾವಂತರಿಗೆ ಮತ್ತು ಆರ್ಥಿಕ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುವವರಿಗೆ ತಿಳಿದಿರುತ್ತದೆ. 'ಬಜೆಟ್' ಎಂಬ ಪದವು ಇಂಗ್ಲಿಷ ಪದದ ಸ್ವೀಕರಣ ಪದವಾಗಿದೆ. ಇದು ಇಂಗ್ಲಿಷ ಪದ ಎಂಬುದಕ್ಕಿಂತ ಆ ಪರಿಭಾಷೆಯ ಅರ್ಥವನ್ನು ಮೂರ್ತ ರೂಪದಲ್ಲಿ ನೀಡುತ್ತದೆ. ಎಲ್ಲರಿಗೂ ತಿಳಿದಿರುವ ಪದವೆಂದರೆ ಬಜೆಟ್ ಮುಂಗಡಪತ್ರ ಎಂಬುದು ಕನ್ನಡದ ಸಂದರ್ಭದಲ್ಲಿ ಹೆಚ್ಚು ಬಳಕೆಯಲ್ಲಿರುವ ಪದವಾಗಿದೆ. ಬಜೆಟ್ ಮತ್ತು ಮುಂಗಡ ಪತ್ರ ಈ ಪದಗಳಲ್ಲಿ ಬಜೆಟ್ ಹೆಚ್ಚು ಪ್ರಚಲಿತದಲ್ಲಿರುವ ಪದವಾಗಿದೆ.

**Barter ಅದಲಾಬದಲಿ, ವಸ್ತುವಿನಿಮಯ, ಸಾಟಿ ಪದ್ಧತಿ, ವಿನಿಮಯ ಪದ್ಧತಿ** : ಈ ಪದದ ಬಳಕೆ ಸಾಮಾನ್ಯವಾಗಿ ಹಣದ ಬಳಕೆ ಇಲ್ಲದಿರುವ ಸನ್ನಿವೇಶದಲ್ಲಿ ಹೆಚ್ಚು ಜನಪ್ರಿಯವಾಗಿತ್ತು. ಇದು ಇಂದಿಗೂ ಸಾಟಿಪದ್ಧತಿ ಎಂಬುದಾಗಿ ಎಲ್ಲರೂ ಬಲ್ಲ ಪದವಾಗಿದೆ. ಈ ಪದವು ಸಂಹವನಕ್ಕೆ ಹೆಚ್ಚು ಸೂಕ್ತವಾಗಿದೆ. ಅರವತ್ತರ ದಶಕದಲ್ಲಿ ಅದಲಾಬದಲಿ ಪದ ಬಳಕೆಗೆ ಬಂದಿರುವ ಸಾಧ್ಯತೆ ಇದೆ. ಆಗ ಕನ್ನಡಕ್ಕೆ ಭಾಷಾಂತರದ ಪಠ್ಯಗಳ ಅಗತ್ಯತೆ ಅಧಿಕವಾಗಿತ್ತು. ಈ ಪದ ಕನ್ನಡ ನಾಡಿನ ಒಂದು ಪ್ರಾದೇಶಿಕ ಪದವಾಗಿ ಬಳಕೆಯಲ್ಲಿರುವುದಾಗಿ ತಿಳಿದುಬರುತ್ತದೆ. 'ವಸ್ತು'ವನ್ನು ವಸ್ತುವಿಗಾಗಿ ಬದಲಾಯಿಸಿಕೊಳ್ಳುವ ಒಂದು ವಿಧಾನವೆಂಬುದನ್ನು ಇದು ತಿಳಿಸುತ್ತದೆ. ಸಾಕ್ಷರರು 'ವಿನಿಮಯ ಪದ್ಧತಿ'ಯನ್ನು ಬಳಸಿದರೂ 'ಸಾಟಿ ಪದ್ಧತಿ'ಯೇ ಹೆಚ್ಚು ಜನಪ್ರಿಯವಾಗಿದೆ.

**Customer ಕುಳ, ಕುಳವಾರು, ಗಿರಾಕಿ, ಗ್ರಾಹಕ, ಕಸ್ಟಮರ** : ಐವತ್ತರ ದಶಕದಲ್ಲಿ 'ಕುಳ' ಮತ್ತು 'ಕುಳವಾರು' ಪದಗಳು ಕನ್ನಡದಲ್ಲಿ ರೂಪಿಸಲ್ಪಟ್ಟಿವೆ. ಅನಂತರ 'ಗಿರಾಕಿ' ಮತ್ತು 'ಗ್ರಾಹಕ' ಪದಗಳು ಟಂಕಿಸಿರುವಂತೆ ಕಂಡುಬರುತ್ತದೆ. ಈ ಪದಗಳನ್ನು ಪರ್ಯಾಯ ಪದಗಳನ್ನಾಗಿ ಬಳಸಲಾಗುತ್ತದೆ. ಇವು ಸಮಾನ ಅರ್ಥ ನೀಡುವ ವಿಶೇಷ ಪದಗಳಾಗಿವೆ. ಕಸ್ಟಮರ್ ಎಂಬ ಪದವು ವ್ಯವಹಾರದಲ್ಲಿ ಬಳಕೆಗೆ ಬರುವ ಪದವಾಗಿದೆ. ಪ್ರತಿ ಮಾರಾಟದಲ್ಲಿಯೂ ಈ ಪದ ಬಳಸಲ್ಪಡುತ್ತದೆ. 'ಕಸ್ಟಮರ್' ಇಲ್ಲದೇ ಯಾವ ವ್ಯವಹಾರವೂ ಸಾಗುವುದಿಲ್ಲ. ಸಾಕ್ಷರತೆಯುಳ್ಳ ಇಂದಿನವರು 'ಗ್ರಾಹಕ' ಎಂಬ ಪದವನ್ನು ಬಳಸುತ್ತಾರೆ. ಆದರೆ ಜನಸಾಮಾನ್ಯರು 'ಗಿರಾಕಿ' ಎಂಬ ಪದವನ್ನು ಬಳಸುತ್ತಾರೆ. ಸುಶಿಕ್ಷಿತರೂ ಮತ್ತು ಅರ್ಥಶಾಸ್ತ್ರದ ವಿದ್ಯಾರ್ಥಿಗಳು ಆ ಸ್ಥಾನದಾಚೆಬಂದು 'ಗಿರಾಕಿ' ಎಂಬುದನ್ನು ಬಳಸುತ್ತಿರುವುದು ಕಂಡುಬರುತ್ತದೆ. ಈ ಸಮನಾರ್ಥಕ

ಪದಗಳಲ್ಲಿ 'ಗಿರಾಕಿ'ಯೇ ಎಲ್ಲರ ಮನಸ್ಸಿನಲ್ಲಿರುವ ಪದವಾಗಿದೆ. ಇದು ಹೆಚ್ಚು ಜನಪ್ರಿಯವಾದ ಮತ್ತು ಬಳಕೆಯಲ್ಲಿರುವ ಪದವಾಗಿದೆ.

**Supply ನೀಡಿಕೆ, ಪೂರೈಕೆ, ಸಪ್ಲೈಯ್** : ಇಂಗ್ಲಿಷ್ ಪದದೊಂದಿಗೆ ಕನ್ನಡದ ಪರ್ಯಾಯ ಪದಗಳನ್ನಾಗಿ ಇವುಗಳನ್ನು ಬಳಸಲಾಗುತ್ತದೆ. ಪ್ರತಿ ಉತ್ಪಾದನಾ ಘಟಕಗಳಲ್ಲಿ ಈ ಪದಗಳನ್ನು ಬಳಸಲೇಬೇಕು. 'ಹೋಟೆಲ್'ಗಳಲ್ಲಿ ಸಪ್ಲೈಯ್ ಪದ ಬಳಕೆಯಾಗುತ್ತದೆ. ಕನ್ನಡದ ಸಂದರ್ಭದಲ್ಲಿ 'ನೀಡಿಕೆ' ಪದವನ್ನು ಶೊಧಿಸಿ ಬಳಸುತ್ತಿದ್ದಾರೆ. ಆದರೆ 'ಪೂರೈಕೆ' ಎಂಬ ಪದ ಟಂಕಿಯಾದ ನಂತರ 'ನೀಡಿಕೆ'ಗಿಂತ ಹೆಚ್ಚು ಜನಪ್ರಿಯತೆ ಪಡೆಯಿತು. ಈಗಲೂ ಸಾಮಾನ್ಯವಾಗಿ ಬಳಸುತ್ತಿರುವ ಪದ 'ಪೂರೈಕೆ'ಯಾಗಿದೆ. ಅನಕ್ಷರಸ್ತರೂ ಸಹ ಸಪ್ಲಾಯ ಎಂದು ಬಳಸುತ್ತಿರುವುದು ಕಂಡುಬರುತ್ತದೆ.

**Competition ಮೇಲಾಟ, ಸ್ಪರ್ಧೆ, ಪೈಪೋಟಿ, ಕಾಂಪಿಟಿಷನ್**: ಇವು ಪರ್ಯಾಯ ಪದಗಳಾಗಿವೆ. 'ಮೇಲಾಟ' ಎಂಬ ಪದವನ್ನು ವೈಯಕ್ತಿಕ ಕ್ರೀಡಾಕೂಟಗಳಲ್ಲಿ/ಆಟೋಟಗಳಲ್ಲಿಯೂ ಬಳಸಲಾಗುತ್ತದೆ. 'ಸ್ಪರ್ಧೆ' ಎಂಬ ಪದವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸಲಾಗುತ್ತಿದೆ. ಆದರೆ ಅರ್ಥಶಾಸ್ತ್ರದ ಸಂದರ್ಭದಲ್ಲಿ ಮಾರುಕಟ್ಟೆಯಲ್ಲಿ ಉತ್ಪಾದಕರು ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡುವಾಗ ಬಳಸುವ ಪದಗಳಾಗಿವೆ. ಅರ್ಥಶಾಸ್ತ್ರದ ಸಂದರ್ಭದಲ್ಲಿ ಮೇಲಾಟ, ಸ್ಪರ್ಧೆ ಮತ್ತು ಪೈಪೋಟಿ ಪದಗಳನ್ನು ಸಮನಾರ್ಥಕ ಪದಗಳಾಗಿ ಉಪಯೋಗಿಸಲಾಗುತ್ತದೆ. ಇವುಗಳಲ್ಲಿ ಹೆಚ್ಚು ಬಳಕೆಯಾಗುವ ಪದವೆಂದರೆ ಪೈಪೋಟಿ. 'ಮೇಲಾಟ'ವು ಪ್ರಾದೇಶಿಕ ಪದವಾಗಿಯೂ ಬಳಕೆಯಾಗಿರುವುದನ್ನು ಗಮನಿಸಬಹುದಾಗಿದೆ.

**Transport ಟ್ರಾನ್ಸ್‌ಪೋರ್ಟ್, ಸಾಗುವಾಡು, ಸಾಗಾಟ, ಸಾರಿಗೆ** : ಇವು ಪರ್ಯಾಯ ಪದಗಳಾಗಿವೆ. ಕನ್ನಡದ ಸಂದರ್ಭದಲ್ಲಿ ಸಾಗುವಾಡು, ಸಾಗಾಟ ಮತ್ತು ಸಾರಿಗೆ. ಇವುಗಳಲ್ಲಿ 'ಸಾರಿಗೆ' ಎಂಬ ಪದವು ಹೆಚ್ಚು ಬಳಕೆಯಲ್ಲಿರುವ ಪದವಾಗಿದೆ. ಇದು ಗ್ರಾಂಥಿಕ ಭಾಷೆಯೂ ಹೌದು. 'ಸಾಗಾಟ' ಎಂಬ ಪದವನ್ನು ಕನ್ನಡದಲ್ಲಿ ರೂಪಿಸಿದರೂ ಸಹ ಇದು ಆಡು ಭಾಷೆಯನ್ನು ಹೋಲುವ ಪದವಾಗಿದೆ. 'ಸಾಗಾಟ'ವನ್ನು ಬಳಕೆಯಾದಂತೆ ಕಂಡುಬರುತ್ತದೆ. 'ಟ್ರಾನ್ಸ್‌ಪರ್ಟ್ ಅಥವಾ ಟ್ರಾನ್ಸ್‌ಪೋರ್ಟ್' ಪದವು ಇಚೀನ ದಿನಗಳಲ್ಲಿ ಸುಶಿಕ್ಷಿತ ಸಮುದಾಯ ಅಲ್ಲಲ್ಲಿ ಬಳಸುತ್ತಿರುವುದನ್ನು ಗಮನಿಸಬಹುದಾಗಿದೆ. ಸರಕಾರಿ ಬಸ್ಸುಗಳಲ್ಲಿ ಬಳಸಿರುವ ಸಾರಿಗೆ ಪದವು ಜನಪ್ರಿಯವಾಗಲು ಒಂದು ಕಾರಣವೆಂದು ತಿಳಿಯಲು ಅವಕಾಶವಿದೆ.

**Market ಮಾರ್ಕೆಟು, ಬಜಾರ, ಪೇಟೆ, ಮಾರುಕಟ್ಟೆ** : ಈ ಪದಗಳಲ್ಲಿ 'ಮಾರ್ಕೆಟು, ಮಾರುಕಟ್ಟೆ' ಎಂಬವುಗಳು ಇಂಗ್ಲಿಷಿನಿಂದ ನೇರವಾಗಿ ಸ್ವೀಕೃತ ಪದಗಳಾಗಿವೆ. 'ಮಾರುಕಟ್ಟೆ'ಗೆ ಕನ್ನಡದ ರೂಪಕೊಡಲಾಗಿದೆ. 'ಮಾರುಕಟ್ಟೆ'ಯಲ್ಲಿಯೂ ಅಲ್ಪ-ಸ್ವಲ್ಪ ಬದಲಾವಣೆ ಮಾಡಿರುವುದನ್ನು ಗಮನಿಸಬಹುದಾಗಿದೆ. 'ಬಜಾರ' ಎಂಬುದನ್ನು ಹಿಂದಿ ಭಾಷೆಯಿಂದ ಸ್ವೀಕರಿಸಲಾಗಿದೆ. ಉರ್ದು

ಮರಾಠಿ, ತೆಲುಗು ಮತ್ತು ಹಿಂದಿ ಭಾಷೆಗಳಿರುವ ಪ್ರದೇಶಗಳಲ್ಲಿ 'ಬಜಾರ' ಎಂಬ ಪದ ಬಳಕೆಯಲ್ಲಿದ್ದಂತೆ ಕಾಣುತ್ತದೆ. 'ಪೇಟೆ' ಎಂಬುದು ಕನ್ನಡ ಪದವಾದರೂ ಅದರ ಬಳಕೆ ನಿರೀಕ್ಷೆಯಷ್ಟಿಲ್ಲ. ಯಾವ ಪರಭಾಷೆಯ ಪ್ರಭಾವವಿಲ್ಲದ ಪ್ರದೇಶದಲ್ಲಿಯೂ 'ಪೇಟೆ'ಯ ಬಳಕೆ ತೀರಾ ಕಡಿಮೆ ಎಂಬುದು ವಾಸ್ತವಿಕ ವಿಚಾರ. ಜನಸಾಮಾನ್ಯರನ್ನೊಳಗೊಂಡು ಅಧಿಕ ಸಂಖ್ಯೆಯಲ್ಲಿ ಬಳಕೆಗೆ ಬಂದಿರುವ ಪದವೆಂದರೆ ಮಾರ್ಕೆಟು ಇದು ಕನ್ನಡದ್ದೋ, ಇಂಗ್ಲಿಷಿನದೋ ಅನ್ನುವುದಕ್ಕಿಂತ ಅದರ ಪರಿಭಾಷೆ ಜನರಿಗೆ ನಿಲುಕುವಂತೆ ಇರಬೇಕಾದದ್ದು ಬಹುಮುಖ್ಯವೆನಿಸುತ್ತದೆ.

**Identity ತಾದ್ಯಾತ್ಮ್ಯ, ಚಿಹ್ನೆ, ಗುರುತು, ಐಡೆಂಟಟಿ :** ಇಂದು ಜಗತ್ತು ಸ್ಪರ್ಧಾತ್ಮಕವಾಗಿದೆ. ಪ್ರತಿ ವ್ಯಾಪಾರಿ ತನ್ನದೇ ಆದ 'ಐಡೆಂಟಿಟಿ' ಸ್ಥಾಪಿಸಲು ಪ್ರಯತ್ನಿಸುತ್ತಾನೆ. ಸಮಾಜದಲ್ಲಿ ಪ್ರತಿಷ್ಠಿತತೆ ಪಡೆಯಬೇಕಾದರೆ ಅವರಿಗೊಂದು ಐಡೆಂಟಿಟಿ ಇರಬೇಕಾದ ಅಗತ್ಯತೆಯನ್ನು ಕುರಿತಂತೆ ಮಾತನಾಡುತ್ತಾರೆ. ಅಂದರೆ ಸಮಾಜದಲ್ಲಿ ಅಥವಾ ಮಾರುಕಟ್ಟೆಯಲ್ಲಿ ನಮ್ಮನ್ನು ಅಥವಾ ನಮ್ಮ ವಸ್ತುವಿನ 'ಗುರುತು' ಗಮನಿಸುವಂತಿರಬೇಕು. ಅರ್ಥಶಾಸ್ತ್ರದ ಸಂದರ್ಭದಲ್ಲಿ ಮಾರುಕಟ್ಟೆಯಲ್ಲಿ ವ್ಯಾಪಾರಿ ಚಿಹ್ನೆಯ ಮೂಲಕ ವಸ್ತುವನ್ನು ಗುರುತಿಸುವಂತೆ, ಅದರ ಗುಣಮಟ್ಟದಿಂದ ಅದು ಗುರುತಿಸುವಂತಾಗಲು ಈ ಪದವನ್ನು ಉಪಯೋಗಿಸಲಾಗುತ್ತದೆ. ಮೇಲಿನ ಸಮನಾರ್ಥಕ ವಿಶೇಷ ಪದಗಳಲ್ಲಿ 'ಗುರುತು' ಎಂಬ ಪದವನ್ನು ಅಧಿಕ ಪ್ರಮಾಣದಲ್ಲಿ ಬಳಸಲಾಗುತ್ತದೆ. 'ತಾದ್ಯಾತ್ಮ' ಎಂಬ ಪದವು ಕನ್ನಡಕ್ಕೆ ತಂದಿದ್ದರೂ ಸಹ ಅದು ಸಾರ್ವತ್ರಿಕ ಬಳಕೆಯಾಗದ ಪದ. ಅದು ಪ್ರಾದೇಶಿಕತೆಯ ಅಡಿಯಲ್ಲಿ ಉಳಿದುಕೊಂಡಿದೆ. 'ಚಿಹ್ನೆ' ಎಂಬ ಪದವು ಕನ್ನಡೀಕರಣಗೊಂಡರೂ ಅದು ಹೆಚ್ಚು ಗ್ರಾಂಥಿಕ ಪದವಾಗಿಯೇ ಉಳಿದಿದೆ. ಅರ್ಥಶಾಸ್ತ್ರ ಅಧ್ಯಯನದ ಸಂದರ್ಭದಲ್ಲಿ ಸರಳೀಕರಣ ಪದವೇ ಹೆಚ್ಚು ಮೆಚ್ಚುಗೆ ಪಡೆಯುವ ಸಾಧ್ಯತೆ ಇದೆ.

**Cheap ಸ್ವವಿ, ಕಡಿಮೆ ಬೆಲೆ, ಕಮ್ಮಿಬೆಲೆ, ಅಗ್ಗವಾಗಿ, ಚೀಪ :** ಈ ಪದಗಳಲ್ಲಿ ಗ್ರಾಮೀಣ ಪ್ರದೇಶದ ಸಮೂಹ 'ಸ್ವವಿ' ಎಂಬ ಪದವನ್ನೇ ಹೆಚ್ಚು ಬಳಸುತ್ತಾರೆ. ನಗರ ಪ್ರದೇಶದ ಸುಶಿಕ್ಷಿತರು 'ಕಡಿಮೆ ಬೆಲೆ' ಎಂಬುದಾಗಿ ಬಳಸುತ್ತಿರುವುದು ತಿಳಿದುಬರುತ್ತದೆ. ಆದರೆ ಆಧುನಿಕತೆಯ ಪ್ರಭಾವದಿಂದಾಗಿ 'ಚೀಪ್' ಪದ ಬಳಕೆಯಲ್ಲಿರುವುದನ್ನು ಗಮನಿಸಬಹುದು. 'ಅಗ್ಗದ ದರ' ಮತ್ತು 'ಸ್ವವಿ' ಎಂಬ ಪದಗಳೆರಡೂ ಹೆಚ್ಚು ಬಳಕೆಯಲ್ಲಿರುವುದನ್ನು ಗುರುತಿಸಲು ಅವಕಾಶವಿದೆ.

**Want ಆಸೆ, ಇಚ್ಛೆ, ಬಯಕೆ, ಬಯಸು :** ಇಂಗ್ಲಿಷ ಪದದ ಪರಿಭಾಷೆ ಕನ್ನಡದಲ್ಲಿ ಇರಬೇಕೆಂಬುದು ಕನ್ನಡ ಭಾಷಿಕರ ಅಭಿಲಾಷೆ. ಇಂಗ್ಲಿಷ ಪದಕ್ಕೆ ಸಂವಾದಿಯಾಗಿ ಬೇರೆ ಬೇರೆ ವಿಧಾನಗಳಿಂದ ಕನ್ನಡ ಪದಗಳು ರೂಪುಗೊಂಡಿವೆ, ಸೃಷ್ಟಿಯಾಗಿವೆ. ಕನ್ನಡದ 'ಆಸೆ' ಮತ್ತು 'ಇಚ್ಛೆ' ಎಂಬ ಪದಗಳು ಸಮಾನವಾಗಿವೆ. ಇವುಗಳಿಗೆ 'ಬಯಕೆ' ಮತ್ತು 'ಬಯಸು'ಗಳು ಸೇರಿಕೊಂಡಿವೆ. ಭಾಷಾಂತರದ ಸಂದರ್ಭದಲ್ಲಿ ಹಾಗೂ ಕಾಲಾಂತರದಲ್ಲಿ ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡಿವೆ. ಆದರೂ ಅವುಗಳನ್ನು ಪರ್ಯಾಯ ಪದಗಳನ್ನಾಗಿ ಬಳಸಲಾಗಿದೆ. ಅರ್ಥಶಾಸ್ತ್ರದ ಸಂದರ್ಭದಲ್ಲಿ

'ಬಯಕೆ' ಹೆಚ್ಚು ಸೂಕ್ತ ಪದವಾಗಿರುವುದನ್ನು ಪಠ್ಯಗಳ ಮೂಲಕ ತಿಳಿಯಬಹುದಾಗಿದೆ. ವಾಸ್ತವವಾಗಿ 'ಆಸೆ' ಎಂಬುದು ಅತ್ಯಧಿಕವಾಗಿ ಬಳಕೆಯಲ್ಲಿರುವ ಪದ. ಜನಸಾಮಾನ್ಯರು 'Want' ಎಂಬುದನ್ನು 'ಆಸೆ'ಯ ಮೂಲಕ ವ್ಯಕ್ತಪಡಿಸುತ್ತಿದ್ದಾರೆ. 'ಇಚ್ಛೆ' ಎಂಬುದನ್ನು ಸುಶಿಕ್ಷಿತರು ಬಳಸುವ ಪದವಾಗಿದೆ.

**Wage ಮುನಾಫೆ, ಕೂಲಿ, ಪಗಾರ, ಸಂಬಳ, ವೇತನ, ಬಟವಡೆ :** ಈ ಪದಗಳಲ್ಲಿ 'ಮುನಾಫೆ' ಎಂಬ ಪದವನ್ನು ಮೈಸೂರು ಪ್ರದೇಶದಲ್ಲಿ ಐವತ್ತರ ದಶಕದಲ್ಲಿ ಬಳಸುತ್ತಿದ್ದ ಪದವಾಗಿದೆ. ಕು.ಶಿ. ಹರಿದಾಸ ಭಟ್ಟರು 'ಏನಿದು ಅರ್ಥಶಾಸ್ತ್ರ' ಕೃತಿಯಲ್ಲಿ ಬಳಸಿದ್ದಾರೆ. ಈಗ ಆ ಪ್ರದೇಶದಲ್ಲಿಯೂ ಬಳಕೆಯಲ್ಲಿ ಇರಲಿಕ್ಕಿಲ್ಲ. ಕಾರಣ ಸಾಕ್ಷರತೆಯ ಬೆಳವಣಿಗೆಥಿಣ ಭಾಷಾ ಬೆಳವಣಿಗೆ ಮತ್ತು ಆಲೋಚನಾ ಕ್ರಮವನ್ನು ಬದಲಿಸುವ ಸಾಮರ್ಥ್ಯವೇ ಹೆಚ್ಚು. ಖಾಸಗಿ ಕೆಲಸಗಾರರು ಮತ್ತು ಸರಕಾರಿ ವಲಯದಲ್ಲಿನ ತಾತ್ಕಾಲಿಕ ನೌಕರರು ತಮ್ಮ ದುಡಿಮೆಯ ಪ್ರತಿಫಲ ಪಡೆಯುವುದನ್ನು 'ಕೂಲಿ' ಎಂಬುದಾಗಿ ಕರೆಯುತ್ತಾರೆ. ಈ ಕೂಲಿಯನ್ನು ವಾರಕ್ಕೊಮ್ಮೆ (ಸಾಮಾನ್ಯವಾಗಿ) ಇಲ್ಲವೆ ತಮ್ಮ ತಮ್ಮ ಅನುಕೂಲಕ್ಕೆ ತಕ್ಕ ದಿನಗಳಿಗೆ ಪಡೆಯುವುದನ್ನು 'ಬಟವಡೆ' ಎಂಬ ಪದ ಬಳಕೆ ಇರುವುದಾಗಿ ತಿಳಿದುಬರುತ್ತದೆ. ತಿಂಗಳಿಗೊಮ್ಮೆ ಶ್ರಮಕ್ಕೆ ಪ್ರತಿಫಲ ಪಡೆಯುವುದಕ್ಕೆ 'ಸಂಬಳ', 'ಪಗಾರ' ಮತ್ತು 'ವೇತನ' ಎನ್ನುವ ಪದಗಳನ್ನು ಬಳಸಲಾಗುತ್ತದೆ. ಈ ಪದಗಳಿಗೆ ಇಂಗ್ಲಿಷಿನಲ್ಲಿ ಸ್ಯಾಲರಿ ಎಂಬ ಪದವಿದ್ದಾಗಲೂ, ಅರ್ಥಶಾಸ್ತ್ರದಲ್ಲಿ ಬರುವ ಲೇಬರ್ ಎಂಬುದು ಶ್ರಮ ಎಂಬ ಪದದಿಂದ ಗುರುತಿಸಲಾಗುತ್ತದೆ. 'ಶ್ರಮ'ಕ್ಕೆ ಪ್ರತಿಯಾಗಿ ಪಡೆಯುವ ಪ್ರತಿಫಲವನ್ನು ದಿನದ ಲೆಕ್ಕದಲ್ಲಿ, ವಾರದ ಲೆಕ್ಕದಲ್ಲಿ, ಪಾಕ್ಷಿಕವಾಗಿ ಇಲ್ಲವೇ ಮಾಸಿಕವಾಗಿಯಾದರೂ ಪಡೆಯಬಹುದಾಗಿದೆ. ಈ ಹಿನ್ನೆಲೆಯಲ್ಲಿ 'Wage' ಎಂಬ ಪರಿಭಾಷೆ ಮೇಲಿನ ಸಮನಾರ್ಥಕ ವಿಶೇಷ ಪದಗಳೆಲ್ಲವನ್ನು ಒಳಗೊಂಡಿದೆ. ಕಾರಣ ಭಾಷಾಂತರಕಾರರು ಕನ್ನಡ ಅರ್ಥಶಾಸ್ತ್ರದ ಸಂದರ್ಭದಲ್ಲಿ ಅನುವಾದಿಸಿದ ಸಮನಾರ್ಥಕ ಪದ ಬಳಕೆ ಸರಿಯಾಗಿದೆ. ಈ ಪರ್ಯಾಯ ಪದಗಳ ಬಳಕೆಯ ಸಂದರ್ಭದಲ್ಲಿ ದಿನದ ವೇತನ, ವಾರದ ಮತ್ತು ಮಾಸಿಕ ವೇತನ ಎನ್ನುವಂತೆಯೇ, ವಾರದ ಕೂಲಿ, ತಿಂಗಳ ಕೂಲಿ, ವಾರ್ಷಿಕವಾಗಿ ಕೂಲಿ ಲೆಕ್ಕ ಹಾಕಿ ಮಾಸಿಕವಾಗಿ ಪಾವತಿಸುವುದನ್ನು ಪರಿಶೀಲಿಸಬಹುದು.

**Marginal ಪರಿಸರದ, ಅಂಚಿನ, ಬದಿಯ, ಸೀಮಾಂತ :** ಇಲ್ಲಿರುವ ಪರ್ಯಾಯ ಪದಗಳನ್ನು ಗಮನಿಸಿದಾಗ 'ಪರಿಸರ'ದ ಎಂಬ ಪದವು ಐವತ್ತರ ದಶಕದಲ್ಲಿ ಬಳಕೆಗೆ ಬಂದ ಪದವಾಗಿದೆ. ಅದರಂತೆ 'ಬದಿಯ' ಎಂಬುದು ಅದೇ ಅವಧಿಯಲ್ಲಿ ರೂಪುಗೊಂಡ ಪದವಾಗಿದೆ. ಈಗ ಈ ಎರಡೂ ಪದಗಳ ಬಳಕೆ ತುಂಬಾ ಕಡಿಮೆ. ಪ್ರಾದೇಶಿಕ ಅನುವಾದರು ತಮ್ಮ ಪ್ರದೇಶದ ಪದವನ್ನಾಗಿ ಸ್ವೀಕರಿಸುವವರು ಬಳಸುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಮೌಖಿಕವಾಗಿ ಮತ್ತು ಗ್ರಾಂಥಿಕವಾಗಿ 'ಸೀಮಾಂತ' ಎಂಬ ಪದವನ್ನು ಅಧಿಕ ಪ್ರಮಾಣದಲ್ಲಿ ಬಳಸಲಾಗುತ್ತದೆ. 'ಅಂಚಿನ' ಎಂಬ ಪದ ಬಳಕೆಯೂ 'ಸೀಮಾಂತ'ದ ಎಡಬಲದಂತೆ ಉಪಯೋಗಿಸಲ್ಪಡುತ್ತದೆ.

**Utility ಉಪಯುಕ್ತತೆ, ಉಪಭೋಗತೆ, ತುಷ್ಟಿಗುಣ :** ಈ ಪದಗಳಲ್ಲಿ 'ಉಪಭೋಗತೆ' ಎಂಬ ಪದವು ಪ್ರಾದೇಶಿಕತೆಗೆ ಸೀಮಿತವಾಗಿದೆ. ಬಯಕೆಯ ವಿಶ್ಲೇಷಣೆಯಲ್ಲಿ 'ಉಪಯುಕ್ತತೆ' ಮತ್ತು 'ತುಷ್ಟಿಗುಣ' ಮಹತ್ವದ್ದಾಗಿದೆ. ಈ ಎರಡೂ ಪದಗಳು ಸಮಾನವಾಗಿ ಬಳಕೆಯಲ್ಲಿರುವುದನ್ನು ಪಠ್ಯ ಸಾಮಗ್ರಿಗಳ ಅಧ್ಯಯನದಿಂದ ಗುರುತಿಸಲಾಗಿದೆ. ಗ್ರಾಂಥಿಕವಾಗಿ 'ತುಷ್ಟಿಗುಣ' ಎಂಬ ಪದವು ಅಧಿಕ ಪ್ರಮಾಣದಲ್ಲಿ ಬಳಕೆಯಲಲ್ಲಿರುತ್ತದೆ. ಅದರಂತೆ ಮೌಖಿಕವಾಗಿ ಹಾಗೂ ಗ್ರಾಂಥಿಕವಾಗಿ 'ಉಪಯುಕ್ತತೆ'ಯು ಪ್ರಯೋಗಿಸಲ್ಪಡುತ್ತದೆ. 'ಉಪಯುಕ್ತತೆ' ಎಂಬುದು ಸರಳೀಕರಣ ಹೊಂದಿರುವಂತೆ ತೋರುತ್ತದೆ. 'ತುಷ್ಟಿಗುಣ' ಎಂಬ ಪದವು ಸ್ವಲ್ಪಮಟ್ಟಿನ ಬಿಗಿತತೆ ಇದ್ದಂತೆ ಕಂಡುಬರುತ್ತದೆ. ಒಟ್ಟಾರೆ ಈ ಎರಡೂ ಪದಗಳು 'ಉಪಭೋಗತೆ'ಗಿಂತ ಮುಂದಿವೆ.

**Sale tax ಅಂಗಡಿ ತೆರಿಗೆ, ವ್ಯಾಪಾರ ತೆರಿಗೆ, ಮಾರಾಟ ತೆರಿಗೆ :** ಈ ಮೂರು ಪದಗಳು ಸಮಾನ ಪದಗಳನ್ನಾಗಿ ಬಳಸಲಾಗುತ್ತದೆ. ಸಾಮಾನ್ಯವಾಗಿ ವ್ಯಾಪಾರಸ್ಥರು ಮತ್ತು ಜನಸಾಮಾನ್ಯರು 'ಅಂಗಡಿ ತೆರಿಗೆ' ಎಂಬುದಾಗಿ ಗುರುತಿಸುತ್ತಿದ್ದಾರೆ. ಅವರ ಅಭಿಪ್ರಾಯದಂತೆ 'ಅಂಗಡಿ' ತೆರೆದಿರುವವರು ವಸ್ತುಗಳನ್ನು ವಿವಿಧ ಪ್ರಮಾಣದಲ್ಲಿ ಮಾರಾಟ ಮಾಡಲಾಗುತ್ತದೆ. ಅದರಿಂದ ಅಂಗಡಿಕಾರನಿಗೆ ಲಾಭವಾಗಿರುತ್ತದೆ. ಲಾಭದ ಕೆಲಭಾಗವನ್ನು ಸರಕಾರಕ್ಕೆ ತೆರಿಗೆ ರೂಪದಲ್ಲಿ ಕೊಡಬೇಕಾಗುತ್ತದೆಂಬುದನ್ನು ವ್ಯಾಪಾರಸ್ತರು ತಿಳಿದಿರುತ್ತಾರೆ. ಹೀಗೆಂದು ಭಾವಿಸಿದರೂ 'ವ್ಯಾಪಾರ ತೆರಿಗೆ' ಮತ್ತು 'ಮಾರಾಟ ತೆರಿಗೆ' ಎಂಬ ವಿಚಾರ ಸುಳ್ಳಲ್ಲ. ಬರವಣಿಗೆಯ ಸಂದರ್ಭದಲ್ಲಿ ಮತ್ತು ಸುಶಿಕ್ಷಿತ ವರ್ಗದವರಲ್ಲಿ ಬಳಕೆಯಾಗುವ ಭಾಷೆಯಲ್ಲಿ ಜನಪರವಾಗಿ ಚಲಾವಣೆಯ ಪದ ಅಂಗಡಿ ತೆರಿಗೆ ಯಾಗಿದೆ.

**Visible ದೃಶ್ಯ, ಭೌತಿಕ, ವಸ್ತು, ಸರಕು :** ಅರ್ಥಶಾಸ್ತ್ರದಲ್ಲಿ ಈ ಪದಗಳ ಬಳಕೆ ಬರುವುದು ಅಂತರಾಷ್ಟ್ರೀಯ ವ್ಯಾಪಾರ ವ್ಯಾಪ್ತಿಯಲ್ಲಿ. ಸಂದಾಯ ಬಾಕಿಗೆ ಸಂಬಂಧಿಸಿದಂತೆ ಬರುವ ಇಂಗ್ಲಿಷ 'Visible' ಬೇರೆ ಸಂದರ್ಭದಲ್ಲಿನ ಅರ್ಥಕ್ಕೂ ಅರ್ಥಶಾಸ್ತ್ರದ ಸಂದರ್ಭಕ್ಕೂ ವ್ಯತ್ಯಾಸವಿದೆ. ಇಲ್ಲಿ ಬಳಸಿರುವ ನಾಲ್ಕು ಪದಗಳು ಸಮಾನ ಅರ್ಥ ನೀಡುವ ವಿಶೇಷ ಪದಗಳಾಗಿವೆ. ಅನೇಕ ಭಾಷಾಂತರಕಾರರು ಸಮರ್ಥವಾಗಿ ಈ ಪದ ಬಳಕೆ ಮಾಡಿರುತ್ತಾರೆ. ಆರಂಭದ ಅನುವಾದಕರು 'ದೃಶ್ಯ' ಎಂಬುದಾಗಿ ಬಳಸಿ, 'ಸ್ಪರ್ಶಯೋಗ್ಯ ಅಂಶ' ಎಂಬುದನ್ನು ವಿವರಣೆಯಲ್ಲಿ ಹೇಳಿರುತ್ತಾರೆ. ನಂತರ 'ಭೌತಿಕ' ಅಂಶವೆಂಬುದಾಗಿ ವಿಶ್ಲೇಷಣೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ಸಂದರ್ಭದಲ್ಲಿ ಪಠ್ಯಸಾಮಗ್ರಿಗಳ ಅಧ್ಯಯನಕಾರರಿಗೆ ಕೆಲವೊಮ್ಮೆ ಗೊಂದಲವಾಗುವ ಸಾಧ್ಯತೆಗಳಿದ್ದವು. ಈಗ ಸ್ಪಷ್ಟವಾಗಿ 'ಸರಕು' ಅಥವಾ 'ವಸ್ತು' ಎಂಬುದನ್ನು ಬಳಸುತ್ತಿದ್ದಾರೆ. ಇದರಿಂದ ಗೊಂದಲವಾಗುತ್ತಿಲ್ಲ. ವಾಸ್ತವವಾಗಿ 'Visible'ನ್ನು 'ವಸ್ತು' ಎಂಬುದನ್ನು ಸೂಚಿಸುವುದಕ್ಕಾಗಿಯೇ ಅರ್ಥಶಾಸ್ತ್ರದಲ್ಲಿ ಬಳಸಲಾಗುತ್ತಿದೆ. ಇತರೆ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಸಾಮಾನ್ಯವಾಗಿ ಈ ಪದಕ್ಕೆ ಕನ್ನಡದ ಸಂದರ್ಭದಲ್ಲಿ ಬೇರೆಯದೇ ಅರ್ಥಗಳಿರುವುದನ್ನು ಪರಿಶೀಲಿಸಲು ಅವಕಾಶವಿದೆ.

**Invisible ಅದೃಶ್ಯ, ಅಭೌತಿಕ, ಸೇವೆ :** ಈ ಪದಗಳನ್ನು ಮೇಲೆ 'Visible' ಪದಕ್ಕೆ ನೀಡಿದ ವಿವರಣೆಯೇ ಅನ್ವಯಿಸುತ್ತದೆ. ಅಂದರೆ 'ಅಂತರರಾಷ್ಟ್ರೀಯ ವ್ಯಾಪಾರ' ಅಧ್ಯಯನದ ಭಾಗವಾಗಿ ಬರುವ ಸಂದಾಯ ಬಾಕಿಯಲ್ಲಿ ಈ ಪದದ ಬಳಕೆಯಾಗುತ್ತದೆ. ವಿದೇಶಗಳಿಂದ ಆಮದು ಮಾಡಿದ ಮತ್ತು ವಿದೇಶಗಳಿಗೆ ರಫ್ತು ಮಾಡಿದ ವಿವಿಧ 'ಸೇವೆ'ಗಳನ್ನು invisible ಪದದ ಮೂಲಕ ವಿವರಣೆ ಮತ್ತು ವಿಶ್ಲೇಷಣೆ ಸಾಗುತ್ತದೆ. ಈ ನಿಟ್ಟಿನಲ್ಲಿ ಈ ಪದಗಳು ಅರ್ಥಶಾಸ್ತ್ರದಲ್ಲಿ ವಿಶೇಷವಾಗಿ ಬಳಕೆಯಾಗುತ್ತಲಿವೆ.

**Arrange ಅನುಕ್ರಮಿಸು, ವ್ಯವಸ್ಥೆ ಮಾಡು :** ಅರ್ಥಶಾಸ್ತ್ರವನ್ನು ಕನ್ನಡಕ್ಕೆ ತರ್ಜುಮೆ ಪ್ರಕ್ರಿಯೆ ಆರಂಭದ ಸಂದರ್ಭದಲ್ಲಿ 'ಅನುಕ್ರಮಿಸು' ಎಂಬುದನ್ನು ರೂಪಿಕೊಂಡಿರಬೇಕೆಂದು ಭಾವಿಸಲು ಅವಕಾಶವಿದೆ. ಕಾಲಾನಂತರ ಭಾಷೆ, ಭಾಷಾಂತರದ ನಡುವೆ ಚಟುವಟಿಕೆಗಳು ನಿರಂತರವಾಗಿ ಬಲಗೊಂಡಾಗ ಅದರ ಸತ್ವವು ಹೆಚ್ಚಿರಬೇಕು. ಉತ್ಪಾದನಾ ಪ್ರಕ್ರಿಯೆಯನ್ನು ಆರಂಭಿಸಬೇಕಾದರೆ ಉತ್ಪಾದನಾಂಗಗಳನ್ನು 'ಆರೆಂಜ್' ಅಂದರೆ ವ್ಯವಸ್ಥೆ ಮಾಡುವ ಅಗತ್ಯವನ್ನು ಗುರುತಿಸುವುದಕ್ಕಾಗಿ 'ವ್ಯವಸ್ಥೆ ಮಾಡು' ಎಂಬ ಪದ ರೂಪುಗೊಂಡಿರಬೇಕೆನಿಸುತ್ತದೆ. ಅರ್ಥಶಾಸ್ತ್ರವಲ್ಲದ ಇದರ ಸಂದರ್ಭದಲ್ಲಿಯೂ ಇದು 'ಹೊಂದಾಣಿಕೆಯಾಗುವ ಪದ' ಎನ್ನಬಹುದು.

**Asset ಅಸೆಟ್, ಲೇಣಿ, ಸೊತ್ತು, ಆಸ್ತಿ :** ಸಾಮಾನ್ಯವಾಗಿ 'ಅಸೆಟ್' ಇಲ್ಲವೆ 'ಆಸ್ತಿ' ಎಂಬುದನ್ನು 'ಭೂಮಿ, ಕಟ್ಟಡ'ಗಳಂಥ ಸಂಪತ್ತಿನ ಪ್ರಸ್ತಾಪ ಬಂದಾಗ ಬಳಸುವ ಪದ ಎಂಬ ವಿಚಾರ ಬರಬಹುದು. ಆದರೆ ಅರ್ಥಶಾಸ್ತ್ರದ ಸಂದರ್ಭದಲ್ಲಿ ಇದರ ಪರಿಭಾಷೆಯೇ ಬೇರೆಯದಾಗಿದೆ. ಇಂಗ್ಲಿಷಿನ 'ಅಸೆಟ್' ಪದವು ಬ್ಯಾಂಕಿಂಗ್ ಪದ್ಧತಿಯಲ್ಲಿ ಬಳಕೆಗೆ ಬರುವ ಒಂದು ಪ್ರಮುಖ ಪದ. 'ಅಥಾವೆ ಪತ್ರ' ಎಂಬ ಅಂಶ ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಸ್ವೀಕರಿಸುವ ಠೇವಣಿಯ ಆರಂಭದಲ್ಲಿ 'ಋಣ/ಸಾಲ'ವಾಗಿಯೂ ನಂತರ 'ಆಸ್ತಿ/ಸೊತ್ತು' ಹೇಗಾತ್ತದೆಂಬುದನ್ನು ತಿಳಿಯಬಹುದಾಗಿದೆ. 'ಲೇಣಿ' ಪದ ಬಳಕೆ ಕಡಿಮೆ ಎಂದೇ ಹೇಳಬಹುದು. 'ಅಸೆಟ್' ಮತ್ತು 'ಆಸ್ತಿ' ಎಂಬ ಪದಗಳನ್ನು ಅಧಿಕವಾಗಿ ಬಳಸಲಾಗಿದೆ. 'ಸೊತ್ತು' ಎಂಬ ಪದ ಬಳಕೆಯಾಗುತ್ತಿದ್ದರೂ ಅದು 'ಆಸ್ತಿ' ಪದ ಬಳಕೆಗಿಂತ ಕಡಿಮೆ.

**Agriculture ಕೃಷಿ, ವ್ಯವಸಾಯ, ಬೇಸಾಯ, ಒಕ್ಕಲುತನ :** ಈ ಪದಗಳನ್ನು ಸಮನಾರ್ಥವಾಗಿ ಬಳಸಲಾಗುತ್ತಿದೆ. ಗ್ರಾಂಥಿಕವಾಗಿ ಮತ್ತು ಅರ್ಥಶಾಸ್ತ್ರದ ಪಠ್ಯಗಳಲ್ಲಿ 'ಕೃಷಿ' ಎಂಬ ಪದವನ್ನು ಉಪಯೋಗಿಸಲಾಗುತ್ತಿದೆ. ಅಲ್ಲದೆ ಕೇಂದ್ರ ಮತ್ತು ರಾಜ್ಯ ಸರಕಾರಗಳು 'ಕೃಷಿ ಮಂತ್ರಾಲಯ' ಹೊಂದಿವೆ. ಅಂದರೆ ಕೃಷಿಗೆ ಸಂಬಂಧಿಸಿದಂತೆ ಅನೇಕ ವಿಭಾಗಗಳನ್ನೊಳಗೊಂಡ ಒಂದು ದೊಡ್ಡ ಇಲಾಖೆಯೇ ಇದೆ. ಆದರೆ ಸಾಮಾನ್ಯವಾಗಿ ಜನರ ಬಾಯಲ್ಲಿ ಬರುವ ಪದವೆಂದರೆ 'ಬೇಸಾಯ' ಇಲ್ಲವೆ 'ಒಕ್ಕಲುತನ'. ಅವರು 'ಒಕ್ಕಲುತನ' ಎಂಬುದಾಗಿಯೂ ಹೇಳುವುದಿಲ್ಲ. 'ವ್ಯವಸಾಯ'

ಎಂಬ ಪದ ಬಳಕೆಯೂ ಕಡಿಮೆ ಎಂದೇ ಹೇಳಬೇಕು. ಪಠ್ಯಸಾಮಗ್ರಿಗಳನ್ನು ರೂಪಿಸುವ ಸಂದರ್ಭದಲ್ಲಿ ಅನುವಾದಕರು ತಮ್ಮ ಪ್ರಾದೇಶಿಕತೆಯನ್ನು ಅವರಿಗೆ ಗೊತ್ತಿದ್ದೋ, ಗೊತ್ತಿಲ್ಲದೆಯೋ ಕಾಣುವಂತೆ ಮಾಡಿದ್ದಾರೆ. ಅನೇಕ ಸಂದರ್ಭಗಳಲ್ಲಿ ಇವು ಪರಸ್ಪರ ಬೇರೆ ಬೇರೆ ಪದಗಳಿರಬೇಕೆಂಬ ಅನುಮಾನ ಮೂಡುವ ಸಾಧ್ಯತೆಗಳಿವೆ. ಇದನ್ನು ತಪ್ಪಿಸಲು ಆವರಣದಲ್ಲಿ ಇಂಗ್ಲಿಷ ಪದ ನೀಡುವುದು ಉತ್ತಮವೆನಿಸುತ್ತದೆ.

**Credit ನಂಬಿಕೆ ಸಾಲ, ಸಾಲ** : ವಾಣಿಜ್ಯ ಬ್ಯಾಂಕುಗಳ ಕಾರ್ಯಗಳಲ್ಲಿ ಈ ಪದವನ್ನು ಬಳಸಲಾಗುತ್ತದೆ. ವಾಣಿಜ್ಯ ಬ್ಯಾಂಕುಗಳು ತನ್ನ ಗ್ರಾಹಕರಿಗೆ ಅಗತ್ಯ ದಾಖಲೆ ಮತ್ತು ಮಾಹಿತಿಗಳನ್ನು ಪಡೆದುಕೊಂಡು ಸಾಲ ನೀಡುತ್ತದೆ. ಅಂಥ ಸಾಲಗಳಲ್ಲಿ ಬೇರೆ ಬೇರೆ ವಿಧಗಳಿವೆ. ಅವುಗಳಲ್ಲಿ 'ನಂಬಿಕೆ ಸಾಲ'ವು ಒಂದು. ತೊಂಬತ್ತರ ದಶಕದವರೆಗೂ ವಾಣಿಜ್ಯ ಬ್ಯಾಂಕುಗಳು ನೀಡುವ 'ಕ್ರೆಡಿಟ್'ಗೆ ಕನ್ನಡದ ಸಂದರ್ಭದಲ್ಲಿ ನಂಬಿಕೆ ಸಾಲ ಎಂಬುದಾಗಿ ಗುರುತಿಸಿಕೊಂಡಿರಬೇಕೆಂಬ ಅನುಮಾನವಿದೆ. ೧೯೯೧ರ ನತಂರ ಎಲ್‌ಪಿಜಿಯ ಪ್ರಭಾವದಿಂದ 'ಕ್ರೆಡಿಟ್'ಗೆ ಸಾಲ ಎಂಬುದಾಗಿ ಪರಿಷ್ಕೃತ ಪದ (ನಂಬಿಕೆ ಕಳಚಿ) ಬಳಸಿರಬೇಕು. ಇಲ್ಲವೇ ಈ ಎರಡು ಪದಗಳು ಸಮಾನ ಅರ್ಥದಲ್ಲಿ ಬಳಸಿರುವ ಸಾಧ್ಯತೆ ಇದೆ. ಆದರೆ ಇವುಗಳ ಕುರಿತಂತೆ ಸ್ಪಷ್ಟತೆ ಇರುವುದಿಲ್ಲ.

**Entre Preneur ಚಾಲಕ, ಸಂಚಾಲಕ, ಸಂಘಟಕ** : ಉತ್ಪಾದನಾಂಗಗಳಲ್ಲಿ ಇದು ನಾಲ್ಕನೆಯ ಅಂಗವಾಗಿದೆ. ಯಾವುದೇ ವಸ್ತುವಿನ ಉತ್ಪಾದನೆಗೆ ಬೇಕಾಗುವ ಭೂಮಿ, ಶ್ರಮ ಮತ್ತು ಬಂಡವಾಳ ಇವುಗಳನ್ನು ಯೋಗ್ಯ ಪ್ರಮಾಣಗಳಲ್ಲಿ ಸಂಯೋಜಿಸಿ ಉತ್ಪಾದನೆ ಕೈಗೊಳ್ಳುವವರಿಗೆ ಈ ಪದವನ್ನು ಬಳಸಲಾಗುತ್ತದೆ. ಚಾಲಕನನ್ನು ಉತ್ಪಾದನಾ ಘಟಕದ 'ನೇತಾರ' ಎಂಬುದಾಗಿಯೂ ಗುರುತಿಸುತ್ತಾರೆ. ಅವನು ಉತ್ಪಾದನಾ ಘಟಕವನ್ನು ಸಂಚಾಲಿಸುವ ನಾಯಕ. ಹೀಗಾಗಿ ನಾಯಕತ್ವದ ಗುಣ ಇವನಲ್ಲಿರಬೇಕಾಗುತ್ತದೆ. 'Organicer' ಎಂಬುದು ಇದೇ ಅರ್ಥವನ್ನು ನೀಡುವುದಾದರೂ ಭಿನ್ನ ಎಂಬುದನ್ನು ತಿಳಿಯಬೇಕು. ಉತ್ಪಾದನಾ ಪ್ರಕ್ರಿಯೆಯ ಘಟಕಗಳ ಸ್ಥಾಪಕ ಈ ಚಾಲಕ. ಆದ್ದರಿಂದ 'ಸಂಘಟಕ' ಪದವನ್ನು 'ಚಾಲಕ'ನ ಪಾತ್ರದಲ್ಲಿ ಗಮನಿಸಬೇಕು. 'ಚಾಲಕ' ಮತ್ತು 'ಸಂಚಾಲಕ' ಸಮಾನತೆ ಹೊಂದಿದಂತೆ 'ಸಂಘಟಕ' ಎಂಬ ಪದವೂ ಸಮಾನಾರ್ಥ ನೀಡುತ್ತದೆ. ಈಚಿನ ದಿನಗಳಲ್ಲಿ ಈ ಪದದ ಬಳಕೆ ಅಧಿಕವಾಗಿದೆ.

**Reward ಪ್ರತಿಫಲ, ಲಾಭ** : ಸಾಮಾನ್ಯವಾಗಿ ಇಂಗ್ಲಿಷಿನ ಈ ಪದದ ಅನುವಾದ ಬಹುಮಾನ ಕಾಣಿಕೆ ಎಂಬ ಅರ್ಥಗಳು ಬರುತ್ತವೆ. ಆದರೆ ಅರ್ಥಶಾಸ್ತ್ರದ ಸಂದರ್ಭದಲ್ಲಿ ಉತ್ಪಾದನಾ ಪ್ರಕ್ರಿಯೆಗೆ ಸಂಬಂಧಿಸಿದ ಅಧ್ಯಯನದಲ್ಲಿ ಈ ಪದ ಬಳಕೆಯಾಗುತ್ತದೆ. 'ಉತ್ಪಾದನಾ ವೆಚ್ಚ ಮತ್ತು ಪ್ರತಿಫಲಗಳು' ಎಂಬ ವ್ಯಾಪ್ತಿಯಲ್ಲಿ ಬರುವ ಅನೇಕ ಪದಗಳಲ್ಲಿ 'ರಿವಾರ್ಡ್' ಪದವೂ ಒಂದು. ಉತ್ಪಾದನಾ ವೆಚ್ಚದ ನಂತರ ಉತ್ಪಾದನಾಕಾರನಿಗೆ ಸಿಗುವ ಪ್ರತಿಫಲಗಳ ಇಲ್ಲವೇ ಲಾಭದ ಪ್ರಮಾಣವನ್ನು ಲೆಕ್ಕ ಹಾಕಲಾಗುತ್ತದೆ. ಈ ಎರಡು ಪದಗಳ ಬಳಕೆ ಸ್ವಲ್ಪ ಹೆಚ್ಚು ಕಡಿಮೆ ಸಮ ಪ್ರಮಾಣದಲ್ಲಿ ಬಳಕೆಯಾಗುತ್ತವೆ.

**Labour ಪರಿಶ್ರಮ, ಶ್ರಮ, ದುಡಿಮೆ, ಶ್ರಮಿಕ, ಕಾರ್ಮಿಕ, ಕೂಲಿಗಾಗಿ ನೇಮಿಸಿಕೊಂಡವ :** ಈ ಪದ ಉತ್ಪಾದನಾಂಗದ ಎರಡನೇ ಅಂಗವಾಗಿದೆ. ಆದಾಯಗಳಿಸುವ ಉದ್ದೇಶದಿಂದ ದೈಹಿಕ ಅಥವಾ ಮಾನಸಿಕ ದುಡಿತವೇ ಶ್ರಮ. ಆದ್ದರಿಂದ ಈ ಎಲ್ಲ ಪದಗಳನ್ನು ಕನ್ನಡದ ಸಂದರ್ಭದಲ್ಲಿ ಸಮನಾರ್ಥಕ ವಿಶೇಷ ಪದಗಳನ್ನಾಗಿ ಬಳಸಲಾಗುತ್ತದೆ. 'ಕಾರ್ಮಿಕ' ಎಂಬ ಪದವು ಹೆಚ್ಚು ಬಳಕೆಯಲ್ಲಿರುವ ಸಾಮಾನ್ಯ ಪದವಾಗಿದೆ. 'ಶ್ರಮ', 'ಪರಿಶ್ರಮ', ಮತ್ತು 'ಶ್ರಮಿಕ' ಎಂಬ ಪದಗಳನ್ನು ಪಠ್ಯಗಳಲ್ಲಿ ಮೇಲಿಂದ ಮೇಲೆ ಬಳಕೆಯಾದ ಪದಗಳಾಗಿವೆ. ಅರ್ಥಶಾಸ್ತ್ರದಲ್ಲಿನ ಸಾಮಾಜಿಕ ಭದ್ರತೆ ಕುರಿತು ಚರ್ಚಿಸುವ ಸಂದರ್ಭದಲ್ಲಿ, ಅಸ್ಥಿತ್ವದಲ್ಲಿರುವ 'ಕಾರ್ಮಿಕ' ಸಂಘಟನೆಗಳನ್ನು ಪ್ರಸ್ತಾಪಿಸಲಾಗುತ್ತದೆ. 'ಕಾರ್ಮಿಕ' ಸಂಘಗಳ ಅಗತ್ಯತೆ, ಜವಾಬ್ದಾರಿಗಳಂಥ ವಿಷಯದಲ್ಲಿ ಅದರ ಸದಸ್ಯರಿಗೆ ದೊರಕಬೇಕಾದ ವಿವಿಧ ಅನುಕೂಲ ಸೌಲಭ್ಯಗಳನ್ನು ಹೇಳಬೇಕಾಗುತ್ತದೆ. ಆಗ ಗ್ರಾಂಥಿಕವಾಗಿ 'ಕಾರ್ಮಿಕ'ಪದ ಬಳಕೆ ಮಹತ್ವ ಪಡೆಯುತ್ತದೆ.

**Commercial Bank ವ್ಯವಹಾರಿಕ ಬ್ಯಾಂಕು, ವಾಣಿಜ್ಯ ಬ್ಯಾಂಕು, ಕಮರ್ಸಿಯಲ್ ಬ್ಯಾಂಕು** : ಕನ್ನಡದಲ್ಲಿ ಇಂಗ್ಲಿಷಿನ ಕಮರ್ಸಿಯಲ್ ಬ್ಯಾಂಕ್‌ಗೆ 'ವ್ಯವಹಾರಿಕ ಬ್ಯಾಂಕು' ಎಂಬ ಪದವನ್ನು ಕಂಡುಕೊಳ್ಳಲಾಯಿತು. ಅದು ಹಣದ 'ಲೇವಾದೇವಿ' ಮಾಡುತ್ತದೆಂಬುದನ್ನು ಸೂಚಿಸುವ ಸಲುವಾಗಿಯೇ 'ವ್ಯವಹಾರಿಕ' ಪದ ಟಂಕಿಸಲಾಯಿತು. ನಂತರ ಈ ಬ್ಯಾಂಕು ಹಣದ ವ್ಯವಹಾರದ ಜೊತೆಗೆ ಇತರ ಕಾರ್ಯಗಳನ್ನು ನಿರ್ವಹಿಸುತ್ತದೆ. 'ವಾಣಿಜ್ಯ' ಪದದಲ್ಲಿ 'ವ್ಯಾಪಾರಿ' ಗುಣಗಳು ಇರುವುದನ್ನು ಗಮನಿಸಿ ಬದಲಾಯಿಸಲಾಗಿದೆ. ಈಗ 'ವಾಣಿಜ್ಯ ಬ್ಯಾಂಕು' ಚಲಾವಣೆಯಲ್ಲಿದೆ.

**Division of Labour ಶ್ರಮ ವಿಭಾಗ, ಶ್ರಮ ವಿಭಜನೆ** : ಭಾಷಾಂತರದ ಆರಂಭಿಕ ದಿನಗಳಲ್ಲಿ ಶ್ರಮ ವಿಭಾಗ ಎಂಬುದಾಗಿ ಬಳಸಲಾಗುತ್ತಿತ್ತು. ವೃತ್ತಿಯಲ್ಲಿ ಸಾಧಿಸಲಾದ ವಿಶೇಷ ಕೌಶಲ್ಯ ಗುರುತಿಸಿ ಕೆಲಸವನ್ನು ಹಂಚುವಿಕೆಯಾಗಿದೆ. ಅವರವರ ಕೌಶಲ್ಯಕ್ಕೆ ಸೂಕ್ತವಾದ ರೀತಿಯ ಕೆಲಸವಹಿಸಲಾಗುತ್ತದೆ. ಇದರಿಂದಾಗಿ ಉತ್ಪಾದನೆಯ ಪ್ರಮಾಣ ವೃದ್ಧಿಯಾಗಿ ಸಂಸ್ಥೆಯ ಆದಾಯ ಅಧಿಕವಾಗುತ್ತದೆ. 'ಶ್ರಮ'ವನ್ನು ವಿಭಾಗಿಸಿ ಅಥವಾ 'ವಿಭಜನೆ' ಮಾಡುವುದು 'ಶ್ರಮ ವಿಭಜನೆ'ಯೆಂಬ ಪದವು ಅತಿ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗುತ್ತದೆ.

**Deposit ಇಡಿಗಂಟು, ಠೇವಣಿ** : ಸುಶಿಕ್ಷಿತರು 'ಠೇವಣಿ' ಎನ್ನುವ ಪದವನ್ನು ಸಾಮಾನ್ಯವಾಗಿ ಬಳಸುತ್ತಾರೆ. ಆದರೆ ಜನಸಾಮಾನ್ಯರು 'ಇಡಿಗಂಡು' ಪದವನ್ನು ಬಳಸುವರು. ಪಠ್ಯ ಸಾಮಗ್ರಿಗಳಲ್ಲಿ ಈ ಎರಡೂ ಪದಗಳನ್ನು ಬಳಸಿರುತ್ತಾರೆ. ಇಚೀನ ಪಠ್ಯಗಳಲ್ಲಿ 'ಠೇವಣಿ' ಪದ ಬಳಕೆ ವಿಸ್ತೃತವಾಗಿರುವುದು.

**Land tax ತೀರ್ವೆ, ಕಂದಾಯ, ಗೇಣಿ** : ಐವತ್ತರ ದಶಕದಲ್ಲಿ 'ತೀರ್ವೆ' ಎಂಬ ಪದ ಬಳಕೆಗೆ ಬಂದಿರುತ್ತದೆ. ನಂತರ ಅದರ ಬಳಕೆ ಕಡಿಮೆಯಾಗಿದೆ. 'ಗೇಣಿ' ಪದವು ಕೆಲವು ಅರ್ಥಶಾಸ್ತ್ರಜ್ಞರ

ಸಿದ್ಧಾಂತಗಳಲ್ಲಿ ಬಳಸಿರುವುದನ್ನು ಜ್ಞಾಪಿಸುತ್ತದೆ. 'ಕಂದಾಯ' ಪದವು ವಾಸ್ತವವಾಗಿ ಜನರ ಪದವಾಗಿ ಚಲಾವಣೆಯಲ್ಲಿದೆ. ಇದಕ್ಕಾಗಿ ಸರಕಾರದ ಮಟ್ಟದಲ್ಲಿ ಒಂದು ಇಲಾಖೆಯೂ ಅಸ್ಥಿತ್ವದಲ್ಲಿದೆ. ಎಲ್ಲರೂ ಬಳಸುವ ಪದ 'ಕಂದಾಯ' ಎಂಬುದು ಲ್ಯಾಂಡ್ ಅಂದರೆ ಭೂಮಿ, ಟ್ಯಾಕ್ಸ್ ಎಂದರೆ ತೆರಿಗೆ. ಇದು ಕಂದಾಯ ಎಂಬ ಪದ ಹೇಗೆ ಸೃಷ್ಟಿಯಾಯಿತೆಂಬುದನ್ನು ಕುರಿತು ಅಧ್ಯಯನ ಕೈಗೊಳ್ಳುವ ಅಗತ್ಯತೆ ಕಂಡುಬರುತ್ತದೆ.

**ಸಮಾರೋಪ:** ಸಮನಾರ್ಥಕ ವಿಶೇಷ ಪದಗಳಿಂದ ಕಂಡುಕೊಂಡ ಫಲಿತಗಳೆಂದರೆ, ಇಂಗ್ಲಿಷ ಪದದ ಪರಿಭಾಷೆ ನೀಡುವ ಕನ್ನಡ ಪದ ಟಂಕಿಸಲಾಗಿದೆ. ಕನ್ನಡದ ಸಂದರ್ಭದಲ್ಲಿ ಒಂದು ಇಂಗ್ಲಿಷ ಪದಕ್ಕೆ ಒಂದಕ್ಕಿಂತ ಹೆಚ್ಚು ಪರ್ಯಾಯ ಪದಗಳು ರೂಪುಗೊಂಡಿವೆ. ಸ್ವರೂಪದಲ್ಲಿ ಭಿನ್ನವಾಗಿ ಗೋಚರಿಸಿದರೂ ಅರ್ಥ ನೀಡುವಲ್ಲಿ ಸಮಾನತೆ ಹೊಂದಿರುವವು. ಅರ್ಥಶಾಸ್ತ್ರ ಪಠ್ಯಗಳಲ್ಲಿ ಹೆಚ್ಚು ಹೆಚ್ಚು ಬಳಕೆಯಾಗುತ್ತಿರುವ ಎಷ್ಟೋ ಪದಗಳು ವಾಸ್ತವಿಕ ಜಗತ್ತಿನಲ್ಲಿ ಬಳಕೆಯಲ್ಲಿರದಿರುವುದನ್ನು ಗುರುತಿಸಲು ಅನುಕೂಲವಾಗಿದೆ. ಅರ್ಥಶಾಸ್ತ್ರದ ಪರಿಭಾಷೆಯಲ್ಲಿನ ಪದಗಳಿಗೂ ಸಾಮಾನ್ಯ ಪದಗಳಿಗೂ ಅಂತರವಿರುವುದನ್ನು ಗಮನಿಸಲು ಸಾಧ್ಯವಾಯಿತು. ಭಾಷಾಂತರಕಾರರು ಕನ್ನಡದಲ್ಲಿ ಇಲ್ಲದಿರುವ ಪದ ಶೋಧಿಸಲು ಪ್ರಯತ್ನಿಸಿದ್ದಾರೆ. ಪಾರಿಭಾಷಿಕ ಪದಗಳ ಸಂಗ್ರಹ ಅಧಿಕಗೊಂಡಿದೆ. ಇವುಗಳ ಯಾವ ಚಿಂತನೆಗಳಿಲ್ಲದೆ ಜನಸಾಮಾನ್ಯರು ತಮ್ಮ ಸಂವಹನಕ್ಕಾಗಿ ಕಂಡುಕೊಂಡ ಮಾರ್ಗಗಳು ಭಿನ್ನ ಎಂಬುದು ಈ ಸಂದರ್ಭದಲ್ಲಿ ತಿಳಿಯಿತು.

### ೫.೫ ವಿಸ್ತೃತ ಭಾಷಾಂತರ Expand Translation

ಪಾರಿಭಾಷಿಕ ಪದಕೋಶವನ್ನು ಗಮನಿಸಿದಾಗ ವಿಸ್ತೃತ ಭಾಷಾಂತರ ಗಮನ ಸೆಳೆಯುತ್ತದೆ. ಇಂಗ್ಲಿಷ್ ಭಾಷೆಯ ಮೂಲದ ಅರ್ಥಶಾಸ್ತ್ರವನ್ನು ಕನ್ನಡ ಭಾಷೆಗೆ ಭಾಷಾಂತರ ಪ್ರಕ್ರಿಯೆ ದೀರ್ಘಕಾಲದಿಂದ ನಡೆದಿದೆ. ಈ ಪ್ರಕ್ರಿಯೆಯ ಆರಂಭದ ಸಂದರ್ಭದಿಂದಲೂ ಪಾರಿಭಾಷಿಕ ಪದಗಳ ರಚನೆ ನಡೆದಿದೆ. ಇದರಿಂದ ಪಾರಿಭಾಷಿಕ ಪದಕೋಶ ಸಂಗ್ರಹವಾಗುತ್ತಲಿದೆ. ಇಂಗ್ಲಿಷಿನ ಅರ್ಥಶಾಸ್ತ್ರ ಪಠ್ಯಕ್ರಮವನ್ನು ನೇರವಾಗಿ 'ಪದ' ರೂಪದಿಂದ ಭಾಷಾಂತರಿಸಲಾಗುತ್ತದೆ. ಈ ರೀತಿ ಭಾಷಾಂತರಿಸುವ ಸಂದರ್ಭದಲ್ಲಿ ಕನ್ನಡಲ್ಲಿ ಹೊಸ ಪದಗಳ ಸೃಷ್ಟಿಯಾಗುತ್ತವೆ. ಈ ಪದಗಳು ಇಂಗ್ಲಿಷಿನ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ರೂಪುಗೊಂಡಿರುತ್ತವೆ. ಇದು ಒಂದು ಸಾಮಾನ್ಯ ಚಟುವಟಿಕೆ. ಭಾಷಾ ದೃಷ್ಟಿಯಿಂದ ಇಂಗ್ಲಿಷಿನ ಯಾವುದೋ ಒಂದು ಪದಕ್ಕೆ ನೇರ ಭಾಷಾಂತರ ಮಾಡಿದಾಗ ಹೊಸಪದ ಕನ್ನಡದಲ್ಲಿ ಸೃಷ್ಟಿಯಾಗುತ್ತವೆ. ಇಂಥ ಪದಗಳ ಸಂವಹನಕ್ಕೆ ಅಡೆತಡೆಯಂತೆ ಭಾಸವಾಗುತ್ತದೆ. ಈಗ ಕನ್ನಡದ ಪದಗಳಿಗೆ ವಿಭಕ್ತಿ ಪ್ರತ್ಯಯಗಳನ್ನೊಳಗೊಂಡಂತೆ ಹೆಚ್ಚಿನ 'ಅಕ್ಷರ' ಇಲ್ಲವೇ 'ಅಕ್ಷರಗಳು' ಸೇರಿಕೊಳ್ಳುತ್ತವೆ. ಇಂಥ ಪದಗಳಿಗೆ ವಿಸ್ತೃತ ಭಾಷಾಂತರವೆಂದು ಗುರುತಿಸ ಬಹುದಾಗಿದೆ. ಕನ್ನಡ ಅರ್ಥಶಾಸ್ತ್ರದ ಪದಕೋಶಗಳಲ್ಲಿ ಇಂಥ ಪದಗಳು ವ್ಯಾಪಕ ಪ್ರಮಾಣದಲ್ಲಿರುತ್ತವೆ.

ಇಲ್ಲಿ ಕೇವಲ ಔಪಚಾರಿಕವಾಗಿ ಅವುಗಳ ಗುರುತಿಸುವಿಕೆಗಾಗಿ ಕೆಲವೇ ಕೆಲವು ಪದಗಳನ್ನು ಉದಾಹರಣೆಗಾಗಿ ಗಮನಿಸುವ ಪ್ರಯತ್ನ ಮಾಡೋಣ.

**Money Market ಹಣದ ಪೇಟೆ :** ಇಂಗ್ಲಿಷ ಪದ 'Money'ಗೆ ಕನ್ನಡದಲ್ಲಿ 'ಹಣ'ವೆಂಬ ಪಾರಿಭಾಷಿಕ ಪದವಿದೆ. ಆದರೆ ಈ ಸಂದರ್ಭದಲ್ಲಿ ಕೇವಲ 'ಹಣ' ಪದ ಬಳಕೆಯಿಂದ ಹೇಳಬೇಕಾದ ಪರಿಭಾವನೆ ಅಪೂರ್ಣವಾಗುತ್ತದೆ. ಈ ಕಾರಣಕ್ಕಾಗಿ 'ದ' ಎಂಬ ಹೆಚ್ಚಿನ ಅಕ್ಷರವನ್ನು ಆ ಪದಕ್ಕೆ ಸೇರಿಸಲಾಗುತ್ತದೆ. ಅಂದರೆ 'Money' ಪದದ ಕನ್ನಡ ಅರ್ಥಕ್ಕೆ ದೊರೆಯುವ ಒಂದು ಅಕ್ಷರ 'ಅರ್ಥಪೂರ್ಣಗೊಳ್ಳಲು' ಸೂಕ್ತವಾದದ್ದನ್ನು ಜೋಡಿಸಲಾಗುತ್ತದೆ. ಈ ಸನ್ನಿವೇಶದಲ್ಲಿ ಅದು 'ಹಣದ' ಎಂಬುದಾಗಿ ರೂಪಗೊಳ್ಳುತ್ತದೆ. ಇದನ್ನು ಹಣದ ಪೇಟೆ, ಹಣದ ಮಾರುಕಟ್ಟೆ ಇತ್ಯಾದಿಯಾಗಿ ಕರೆಯಲಾಗುತ್ತದೆ.

**Crossed Cheque ಕ್ರಾಸ ಮಾಡಿದ ಚೆಕ್ಕು :** ಬ್ಯಾಂಕಿನ ವ್ಯವಹಾರದಲ್ಲಿ ಬಳಸುವ ಚೆಕ್ಕಿನ ಎಡ ಮೇಲ್ಭಾಗ ಮೂಲದಲ್ಲಿ ಎರಡು ವಕ್ರವಾಗಿ ಎಳೆಯಲಾದ ಗೆರೆಗಳಿಗೆ 'ಕ್ರಾಸ್' ಚೆಕ್ ಎಂದಾಗುತ್ತದೆ. ಇಂಗ್ಲಿಷಿನಲ್ಲಿ ಇದರ ಅರ್ಥ ಅಷ್ಟೆ. ಆದರೆ ಕನ್ನಡದಲ್ಲಿ ಬಳಸುವ ಪದ ವಿಸ್ತೃತ ರೂಪ ಪಡೆಯುತ್ತದೆ. ಇಂಗ್ಲಿಷ ಪರಿಭಾಷೆಯು ಕನ್ನಡದಲ್ಲಿ ಬರಬೇಕಾದರೆ ಕೆಲವು ಸಂದರ್ಭದ ಪದಗಳಿಗೆ ಈ ಮಾದರಿಯ ವಿಸ್ತೃತತೆ ಬೇಕೆಂಬುದನ್ನು ಭಾಷಾಂತರಕಾರರು ಸರಿಯಾಗಿಯೇ ಗುರುತಿಸಿದ್ದಾರೆ.

**Table ಕೋಷ್ಠಕ/ಕೋಷ್ಠಕೀಕರಣ :** ದತ್ತಾಂಶಗಳನ್ನು ಕ್ರಮಬದ್ಧವಾಗಿ ಅಡ್ಡಸಾಲುಗಳಲ್ಲಿ ಮತ್ತು ಕಂಬ ಸಾಲುಗಳಲ್ಲಿ ಜೋಡಿಸುವುದಕ್ಕೆ ಈ ಪದ ಬಳಸಲಾಗುತ್ತದೆ. ಇದು 'ಈಕರಣ' ಎಂಬ ಅಧಿಕವಾದ ಭಾಗವನ್ನು ಒಳಗೊಳ್ಳುವಂತೆ ಅನುವು ಮಾಡಿಕೊಡುತ್ತದೆ. ಇಂಗ್ಲಿಷ ಪದಕ್ಕೆ ಇರುವ ಅರ್ಥಕ್ಕೆ ಹೆಚ್ಚಿನ ಅಕ್ಷರಗಳು ಸೇರಿದ್ದರಿಂದ ಇದು ವಿಸ್ತೃತ ಭಾಷಾಂತರವಾಗಿದೆ.

**Credit Card** ಸಾಲದ ಕಾರ್ಡು : ಇದರಲ್ಲಿ 'ದ' ಎಂಬ ಅಕ್ಷರವು 'ಸಾಲ'ದ ಪದಕ್ಕೆ ಸೇರುವ ಮೂಲಕ ಅದನ್ನು ವಿಸ್ತರಿಸುತ್ತದೆ. ಕ್ರೆಡಿಟ್‌ಗೆ 'ಸಾಲ' ಎಂಬ ಪದ ಸೃಷ್ಟಿಯಾಗಿದೆ. ಕಾರ್ಡಿಗೆ ಅದೇ ಪದ ಉಳಿದಿದೆ. ಆದ್ದರಿಂದ 'ದ' ಅಕ್ಷರ ಇಲ್ಲಿ ಪೂರ್ಣ ಪರಿಕಲ್ಪನೆ ನೀಡುತ್ತದೆ. ಈ ಅಕ್ಷರ ಇರದೆ ಹೋದರೆ 'ಸಾಲ ಕಾರ್ಡು' ಎಂಬುದಾಗಿ ಸರಿಯಾದ ಅರ್ಥ ಬರಲು ಸಾಧ್ಯವಾಗದು. ಹೀಗೆ ವಿಸ್ತೃತ ಭಾಷಾಂತರ ನಡೆದು ಸಂವಹನ ಮತ್ತು ಅರ್ಥವಂತಿಕೆಗೆ ಮಹತ್ವ ಬಂದಿದೆ.

**Poverty Line ಬಡತನದ ರೇಖೆ :** ಬಡತನ ಸೂಚಿಸುವ Poverty ಪದವಿದೆ. ರೇಖೆ ಯಾವುದಕ್ಕಾಗಿ ಎಂಬುದನ್ನು ಸ್ಪಷ್ಟಪಡಿಸುವ ಉದ್ದೇಶದಿಂದ ಭಾಷಾಂತರಕಾರರು ಈ ರೀತಿಯ ಪದ ಸೃಷ್ಟಿ ಮಾಡಿರುವಂತಿದೆ. ಇಲ್ಲಿ ಬಡತನದ ಪ್ರಮಾಣವನ್ನು ಗುರುತಿಸುವ ಮಿತಿ ಸೂಚಿಸಿದ್ದಾರೆ. ಕೆಲವು ನಿರ್ಬಂಧಗಳಿಗೆ ಒಳಪಟ್ಟಿದೆ. ಹೀಗೆ ವಿಸ್ತೃತ ಭಾಷಾಂತರ ಮಹತ್ವ ಪಡೆದಿದೆ ಎನ್ನಬಹುದಾಗಿದೆ.

**Fair Price Shop ಯೋಗ್ಯ ದರದ ಅಂಗಡಿ :** ಈ ಪದ ಸಮುಚ್ಚಯದಲ್ಲಿ 'ದರದ' ಪದ ರೂಪುಗೊಂಡಿದೆ. ಇದು 'ಬೆಲೆಯ' ಪದಕ್ಕಿಂತಲೂ ಸರಾಗ ಸಂವಹನವಾಗುತ್ತದೆ. ಕನ್ನಡ ಪದಗಳಿಗೆ ಸಂಸ್ಕೃತ ಪದಗಳ ಸ್ವೀಕರಣ ಬಹಳ ಹಿಂದಿನಿಂದಲೂ ನಡೆದು, ಈಗ ಅವುಗಳಲ್ಲಿ ಶುದ್ಧ ಕನ್ನಡದ ಪದಗಳಾವವು ಹಾಗೂ ಸಂಸ್ಕೃತದ ಪದಗಳಾವವು ಎಂಬುದನ್ನು ಗುರುತಿಸಲಾಗದಷ್ಟು ದೂರ ಸಾಗಿದ್ದೇವೆ. 'ದರ' ಬದಲಿ 'ದರದ' ಪದ ವಿಸ್ತಾರಗೊಂಡು ಅರ್ಥಪೂರ್ಣ ಪದವೆನಿಸಿದೆ.

**Teachique ತಂತ್ರಗಾರಿಕೆ/ತಾಂತ್ರಿಕತೆ :** ಅರ್ಥಶಾಸ್ತ್ರದ ಉತ್ಪಾದನಾ ಘಟಕಗಳಲ್ಲಿ ಈ ಪದದ ಬಳಕೆಯಾಗುತ್ತದೆ. 'ಟೆಕ್ನಿಕ್' ಎಂಬುದು 'ತಂತ್ರ' ಪದದ ರೂಪಕ್ಕೆ ಸರಿಯಾಗಿದೆ. ಇದರ ಹೊರತಾದ ಅರ್ಥ ಬರುವಂತೆ ಈ ಪದ ಬಳಸಲಾಗುತ್ತದೆ. ಇಂಥ ಸಂದರ್ಭದಲ್ಲಿ ಆ ಪದವು ವಿಸ್ತಾರತೆ ಪಡೆಯುತ್ತದೆ.

**Wealth Definition ಸಂಪತ್ತಿನ ವ್ಯಾಖ್ಯಾನ :** 'ಸಂಪತ್ತು' ಎಂಬ ಪದದ ಸೃಷ್ಟಿಯು 'Wealth' ಪದಕ್ಕಾಗಿ ಇಲ್ಲಿ 'ಉ' ಕಾರವು 'ಇ' ಕಾರವಾಗಿ 'ನ' ಎಂಬ ಹೆಚ್ಚಿನ ಅಕ್ಷರದ ಜೊತೆಗೂಡಿದ 'ಸಂಪತ್ತಿನ' ಎಂಬ ಪದದ ಔಚಿತ್ಯವೇ ಬೇಕು. 'ಸಂಪತ್ತು ವ್ಯಾಖ್ಯಾನ' ಎಂಬುದು ಸಂವಹನಗೊಳ್ಳದು. ಅದು ಭಾಷಾ ದೃಷ್ಟಿಯಿಂದ ಸರಿಯಾಗಿ ಸಂಪರ್ಕ ಹೊಂದಲಾರದು. ಹೀಗಾಗಿ ಭಾಷಾಂತರಕಾರರು ಭಾಷೆಯನ್ನು ಶುದ್ಧಿಕರಣಗೊಳಿಸುವ ಉದ್ದೇಶ ಈ ವಿಧದಲ್ಲಿ ಭಾಷೆಯನ್ನು ಬಳಸಿಕೊಡುವುದಾಗಿ ತಿಳಿದುಬರುತ್ತದೆ.

### ೫.೬. ಸಾಮಾನ್ಯ ಪದಗಳು (Common Words)

ಅರ್ಥಶಾಸ್ತ್ರವನ್ನು ಕನ್ನಡಿಕರಿಸುವ ಕ್ರಿಯೆ ದೀರ್ಘಕಾಲದಿಂದ ನಡೆದುಕೊಂಡು ಬಂದಿರುತ್ತದೆ. ಅದು ಬೇರೆ ಬೇರೆ ಭಾಷೆಗಳನ್ನು ಬಳಸಿಕೊಂಡಿದೆ. ವಸಾಹತು ಸಂದರ್ಭದಿಂದ ಇಂಗ್ಲಿಷ ಭಾಷೆಯನ್ನು ಪ್ರಮುಖವಾಗಿ ಗಮನಿಸಿರುವುದಾಗಿ ತಿಳಿದುಬರುತ್ತದೆ. ಇದಕ್ಕೆ ಮುಖ್ಯ ಕಾರಣ ಪಾಶ್ಚಾತ್ಯ ಚಿಂತನೆಯ ಪಠ್ಯಸಾಮಗ್ರಿಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವುದೆಂದು ಭಾವಿಸಬಹುದಾಗಿದೆ. ಈ ಪಠ್ಯವು ಸ್ವಾತಂತ್ರ್ಯದ ನಂತರವೂ ಮುಂದುವರಿಯಿತು. ಆದರೆ ದೇಶಿಯ ಶಿಕ್ಷಣ ತಜ್ಞರು ಪ್ರಾದೇಶಿಕ ಭಾಷೆಯ ಮಹತ್ವವನ್ನು ಮನಗಂಡು ಪಠ್ಯಗಳನ್ನು ಭಾಷಾಂತರಿಸುವ ಪ್ರಕ್ರಿಯೆಗೆ ಉತ್ತೇಜನ ನೀಡಿದರು. ಅದು ಕನ್ನಡ ನಾಡನ್ನೂ ಒಳಗೊಂಡಿತ್ತು. ಇಂಗ್ಲಿಷ ಭಾಷೆಯಲ್ಲಿನ ಅನೇಕ ಪದಗಳ ಪರಿಭಾಷೆಯು ಭಾಷಾಂತರಕಾರರಿಂದ ಒಂದೇ ರೀತಿಯಲ್ಲಿ ಬಳಕೆಯಾಗುತ್ತಿವೆ. ಕೆಲವು ಪದಗಳಿಗೆ ಪರ್ಯಾಯ ಪದ ಬಳಕೆಯಾಗಿವೆ. ಆದರೆ ಕೆಲವಾರು ಪದಗಳ ಪರಿಕಲ್ಪನೆ ಸಮರ್ಪಕವೆನಿಸುವ ಕಾರಣದಿಂದ ಅವುಗಳಿಗೆ ಪರ್ಯಾಯ ಪದ ಬಳಕೆಯಾಗದೆ ಹಿಂದಿನ ಭಾಷಾಂತರಕಾರರು ಬಳಸಿದ ಪಾರಿಭಾಷಿಕ ಪದವನ್ನೆ ಬಳಸಿ ಪಠ್ಯಗಳನ್ನು ಕನ್ನಡದಲ್ಲಿ ಕಟ್ಟಿಕೊಡುವ ಕಾಯಕ ಮಾಡಿರುತ್ತಾರೆ. ಅಂಥ ಪದಗಳ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

Demand ಬೇಡಿಕೆ, Fund ನಿಧಿ, Interest ಬಡ್ಡಿ, Locker ಕಕ್ಷಗಳು, Land ಭೂಮಿ, Capital ಬಂಡವಾಳ, Sample Surve ಮಾದರಿ ಸಮೀಕ್ಷೆ, Census Surve ಗಣತಿ ಸಮೀಕ್ಷೆ, Foot note ಅಡಿಟಿಪ್ಪಣಿ, Liberalisation ಉದಾರೀಕರಣ, Privatisaion ಖಾಸಗೀಕರಣ, Globalisation ಜಾಗತೀಕರಣ, Poor ಬಡವರು, Poverty ಬಡತನ, Animal husbandry ಪಶುಸಂಗೋಪನೆ, Fishery ಮೀನುಗಾರಿಕೆ, Land lords ಭೂಮಾಲಿಕರು, Solar energy ಸೌರಶಕ್ತಿ, Double counting ದ್ವಿಗಣನೆ, Fluctuations ಏರಿಳಿತಗಳು, Monopoly ಏಕಸ್ವಾಮ್ಯ, Multiplier ಗುಣಕ, Utility ತುಷ್ಟಿಗುಣ, Labour ಶ್ರಮ, Concept ಪರಿಕಲ್ಪನೆ, Financial ಹಣಕಾಸು ನೀತಿ, Per capita income ತಲಾದಾಯ, Price policy ಬೆಲೆ ನೀತಿ, Profit ಲಾಭ, Save ಉಳಿತಾಯ, Scarcity ಕೊರತೆ, Social security ಸಾಮಾಜಿಕ ಭದ್ರತೆ, Support price ಬೆಂಬಲ ಬೆಲೆ, Value ಮೌಲ್ಯ, Value added tex ಮೌಲ್ಯವರ್ಧಿತ ತೆರೆಗೆ, Convex ನಿಮ್ನ, Equilibrium ಸಮತೋಲ, Production ಉತ್ಪಾದನೆ, Exchange ವಿನಿಮಯ, Medium ಮಾಧ್ಯಮ, Moey ಹಣ, Unemplyment ನಿರುದ್ಯೋಗ, Population ಜನಸಂಖ್ಯೆ, Rent ಗೇಣಿ, Law of Demand ಬೇಡಿಕೆಯ ನಿಯಮ, Average ಸರಾಸರಿ, Co-operative ಸಹಕಾರ, Insurance ವಿಮೆ, Income ಆದಾಯ, Glossary ಪಾರಿಭಾಷಿಕ ಪದಗಳು, Demand curve ಬೇಡಿಕೆ ರೇಖೆ ಇತ್ಯಾದಿಗಳು.

### ೫.೭ ಪರಿಕಲ್ಪನೆ(Concept)

ಅರ್ಥಶಾಸ್ತ್ರ ಪಠ್ಯ ಸಾಮಗ್ರಿಗಳು ಇಂಗ್ಲಿಷ ಭಾಷೆಯ ಮೂಲದವು. ಅವು ಕನ್ನಡದಲ್ಲಿ ರೂಪಿತವಾಗುವ ಸಂದರ್ಭದಲ್ಲಿ ಪಾರಿಭಾಷಿಕ ಪದಕೋಶಗಳು ಬೇಕಾಗುತ್ತವೆ. ಈ ಪದಕೋಶಗಳನ್ನು ಅಧ್ಯಯನದ ದೃಷ್ಟಿಯಿಂದ ಬೇರೆ ಬೇರೆಯಾಗಿ ಗುರುತಿಸಲು ಸವಕಾಶವಿದೆ. ಉದಾ: ಎರವಲು ಅಥವಾ ಸ್ವೀಕರಣ (Borrowing) ಇದರಲ್ಲಿ ಪದಗಳು: ಇಂಗ್ಲಿಷ ಭಾಷೆಯಲ್ಲಿ ಇರುವ ಪದವನ್ನೇ ಕನ್ನಡದಲ್ಲಿ ಬಳಸುವುದು. ಶಬ್ದಗಳ ಮಟ್ಟದಲ್ಲಿ ಸ್ವೀಕೃತ ಭಾಷೆಯು ಮೂಲ ಭಾಷೆಯೊಂದಿಗಿರುವ ಅಂತರವನ್ನು ತುಂಬಿಕೊಳ್ಳಲು ಹೀಗೆ ಮಾಡಲಾಗುತ್ತದೆ. ಇದರ ಬಗ್ಗೆ ವಿವರವಾಗಿ ಚರ್ಚಿಸಬಹುದು. ಅಲ್ಲಿ ಹೆಚ್ಚಿನ ಮಾಹಿತಿಗಾಗಿ ಅನುಬಂಧ ಒಂದನ್ನು ನೀಡಲಾಗಿದೆ ಅದನ್ನು ಗಮನಿಸಬಹುದಾಗಿದೆ. ಮಿಶ್ರ ಸ್ವೀಕರಣ (Loan blend): ಮೂಲ ಭಾಷೆಯ ವಸ್ತು, ವಿಚಾರ ಅಥವಾ ವ್ಯವಹಾರಗಳನ್ನು ಸ್ವೀಕರಿಸಬೇಕಾದಾಗ, ಶಬ್ದ ಸ್ವೀಕರಣ ಮತ್ತು ಸ್ಥಾನಾಂತರ ಸ್ವೀಕರಣ ಎರಡೂ ಪ್ರಕ್ರಿಯೆಗಳ ಮಿಶ್ರಣವಿರುವುದರಿಂದ ಇದನ್ನು ಮಿಶ್ರಣ ಸ್ವೀಕರಣವೆಂದು ಕರೆಯುತ್ತಾರೆ. ಪರಿಕಲ್ಪನೆಗಳು: ಪದಕೋಶಗಳಲ್ಲಿರುವ ಪದಗಳನ್ನು ಗಮನಿಸಿದಾಗ ಅಧ್ಯಯನಕಾರರಿಗೆ ತಿಳಿದುಬರುವ ಪ್ರಮುಖ ಅಂಶಗಳಲ್ಲಿ ಇದು ಒಂದು. ಕೆಲವು ಪದಗಳು ಸೂಚಿಸಬೇಕಾದುದನ್ನು ಒಂದೇ ಪದದ ಮೂಲಕ ತಿಳಿಸುತ್ತವೆ. ಅಧ್ಯಯನಕಾರರಿಗೆ ಅರ್ಥಮಾಡಿಸುತ್ತವೆ. ಆದರೆ ಇನ್ನೂ ಕೆಲವು ಪದಗಳಿಗೆ ವಿವರವಾದ ಮಾಹಿತಿ ಬೇಕಾಗುತ್ತದೆ. ವಿವರ ನೀಡದಿದ್ದರೆ ಆ ಪದದ ರಚನೆ ತನ್ನ ಅರ್ಥವನ್ನು

ಕಳೆದುಕೊಂಡಂತಾಗುತ್ತದೆ. ಅಂಥ ಪದಗಳನ್ನು ಪರಿಕಲ್ಪನೆಯ (Concept) ಪದಗಳೆಂದು ಗುರುತಿಸಲು ಅವಕಾಶವಿದೆ. ಉದಾ: ಬೇಡಿಕೆ Demand, ಪೂರೈಕೆ Supply, ತುಷ್ಟಿಗುಣ Utility, ಅನುಭೋಗ Consumption, ಮುಂಗಡ ಪತ್ರ Budget, ಅತಿ ಪ್ರಸರಣ, Inflation ಅನಪ್ರಸರಣ Depreciation, ತೆರಿಗೆ Tax. ಇವುಗಳನ್ನು ಕುರಿತು ವಿವರವಾಗಿ ತಿಳಿಯಲು ಪ್ರಯತ್ನಿಸೋಣ.

**Consumption ಅನುಭೋಗ** : ಮಾನವನು ತನ್ನ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳಲು ಸರಕು ಮತ್ತು ಸೇವೆಗಳನ್ನು ಉಪಯೋಗಿಸುವ ಅಥವಾ ಬಳಸಿಕೊಳ್ಳುವ ಕ್ರಿಯೆಗೆ ಅನುಭೋಗ ಎನ್ನುತ್ತಾರೆ" ಪದಕೋಶದಲ್ಲಿ ಬಳಸುವ ಒಂದು ಪದವು ಏನನ್ನು ಹೇಳಬೇಕಾಗಿರುತ್ತದೆಯೋ ಅದೇಲ್ಲವನ್ನೂ ಅದೊಂದೆ ಪೂರೈಸಲು ಆಗುವುದಿಲ್ಲ. ಅದಕ್ಕೆ ಈ ರೀತಿಯಲ್ಲಿ ವಿವರಣೆ ಬೇಕೆನಿಸುತ್ತದೆ. ಇಂಥ ಪರಿಕಲ್ಪನೆಯುಳ್ಳ ಪದಗಳು ಅರ್ಥಶಾಸ್ತ್ರದ ಸಂದರ್ಭದಲ್ಲಿ ಹಲವಾರು ಬರುತ್ತವೆ/ಸಿಗುತ್ತವೆ. ಅವುಗಳನ್ನು ಪ್ರತ್ಯೇಕಿಸಿ ಅಧ್ಯಯನಕ್ಕೆ ಒಳಪಡಿಸಲು ಅವಕಾಶಗಳು ಸಿಗಬಹುದು. ಈಗ ಇನ್ನಷ್ಟು ಅಂಥ ಪದಗಳನ್ನು ಗಮನಿಸೋಣ.

**Utility ತುಷ್ಟಿಗುಣ** : ಮಾನವನ ಬಯಕೆಗಳನ್ನು ತೃಪ್ತಿಪಡಿಸುವ ಸರಕು ಮತ್ತು ಸೇವೆಗಳಲ್ಲಿರುವ ಒಂದು ಗುಣ ಅಥವಾ ಶಕ್ತಿಗೆ ತುಷ್ಟಿಗುಣ ಎನ್ನುವರು ಅಂದರೆ ಮಾನವನ ಬಯಕೆಯನ್ನು ತೃಪ್ತಿಪಡಿಸುವ ಗುಣ ಸರಕಿನಲ್ಲಿ ಇರಬಹುದು ಇಲ್ಲವೆ ಸೇವೆಯಲ್ಲಿ ಇರಬಹುದು. ತುಷ್ಟಿಗುಣವು ಸರಕು ಇಲ್ಲವೆ ಸೇವೆಯಲ್ಲಿರುವುದು ಬಯಕೆಯನ್ನು ಅವಲಂಬಿಸಿರುತ್ತದೆ.

**Demand ಬೇಡಿಕೆ:** ಅನುಭೋಗಿಯಲ್ಲಿ ಸರಕಿನ ಬಗ್ಗೆ ಬಯಕೆ ಇದ್ದು ಅದನ್ನು ಕೊಂಡು ಕೊಳ್ಳುವ ಸಾಮರ್ಥ್ಯವಿದ್ದು ಆ ಸರಕನ್ನು ಕೊಳ್ಳುವ ಮನಸ್ಸಿರಬೇಕು. ಈ ಮೂರರಲ್ಲಿ ಯಾವುದೇ ಒಂದು ಅಂಶ ಇಲ್ಲದಿದ್ದರೂ ಅದು ಬೇಡಿಕೆಗೆ ಅವಕಾಶ ಕೊಡುವುದಿಲ್ಲ. ಈ ಹಿನ್ನೆಲೆಯಲ್ಲಿ ಅನುಭೋಗಿಯು ಒಂದು ನಿರ್ದಿಷ್ಟ ಸಮಯದಲ್ಲಿ ಒಂದು ನಿಗಧಿತ ಬೆಲೆಯಲ್ಲಿ ವಸ್ತುವನ್ನು ಕೊಂಡುಕೊಳ್ಳುವ ಪ್ರಮಾಣಕ್ಕೆ ಬೇಡಿಕೆ ಎನ್ನುತ್ತಾರೆ.

**Supply ಪೂರೈಕೆ** : ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಮತ್ತು ಒಂದು ಗೊತ್ತಾದ ಬೆಲೆಯಲ್ಲಿ ಮಾರಾಟ ಮಾಡಲು ಮಾರುಕಟ್ಟೆಗೆ ಸಾಗಿಸಲ್ಪಟ್ಟ ಸರಕುಗಳ ಪ್ರಮಾಣಕ್ಕೆ ಪೂರೈಕೆ ಎನ್ನುವರು"

**Production ಉತ್ಪಾದನೆ** : ವಸ್ತುವಿನ ಸ್ವರೂಪವನ್ನು ಮಾರ್ಪಡಿಸಿ ಅಥವಾ ಬದಲಾಯಿಸಿ, ಅದರ ತುಷ್ಟಿಗುಣವನ್ನು ಹೆಚ್ಚಿಸುವ ಮೂಲಕ ಅದರ ಮೌಲ್ಯವನ್ನು ಹೆಚ್ಚಿಸುವ ಪ್ರಕ್ರಿಯೆಗೆ ಉತ್ಪಾದನೆ ಎನ್ನುವರು ಉದಾ: ಹತ್ತಿಯಿಂದ ಬಟ್ಟೆ ತಯಾರಿಸುವುದು, ಮರದ ದಿಮ್ಮಿನಿಂದ ಟೇಬಲ್-ಖುರ್ಚಿ ಇತ್ಯಾದಿಗಳನ್ನು ತಯಾರಿಸುವುದು.

**Land ಭೂಮಿ** : ಉತ್ಪಾದನೆಗೆ ನೆರವಾಗುವ ಮತ್ತು ನಿಸರ್ಗದತ್ತವಾಗಿ ಉಚಿತವಾಗಿ ಲಭ್ಯವಿರುವ ಎಲ್ಲ ಸಜೀವ ಮತ್ತು ನಿರ್ಜೀವ ಅಂಶಗಳನ್ನು ಅರ್ಥಶಾಸ್ತ್ರದಲ್ಲಿ ಭೂಮಿ ಎಂದು ಕರೆಯುತ್ತಾರೆ.

ಉದಾ: ಸೂರ್ಯನ ಬೆಳಕು, ನದಿ-ಸರೋವರಗಳು, ಅರಣ್ಯಗಳು, ಪರ್ವತ ಶ್ರೇಣಿಗಳು, ನೀರು, ಉಷ್ಣತೆ, ಖನಿಜಗಳು, ಬೆಟ್ಟ-ಗುಡ್ಡಗಳು, ಕಾ.ಡು ಪ್ರಾಣಿಗಳು, ಸಾಗರಗಳು, ಹವಾಮಾನ, ಗಾಳಿ, ಮಳೆ, ಮಣ್ಣು ಇತ್ಯಾದಿ.

**Rent ಗೇಣಿ :** ಭೂಮಾಲಿಕನ ಭೂಮಿಯನ್ನು ಬಳಸಿಕೊಂಡಿದ್ದಕ್ಕೆ ಗೇಣಿದಾರನು ಪಾವತಿಸುವ ಮೊತ್ತಕ್ಕೆ ಗೇಣಿಯನ್ನುತ್ತಾರೆ.

**Labour ಶ್ರಮ :** ಆದಾಯವನ್ನು ಗಳಿಸುವ ಉದ್ದೇಶದಿಂದ ಒಬ್ಬ ವ್ಯಕ್ತಿಯು ಮಾಡುವ ದೈಹಿಕ ಅಥವಾ ಮಾನಸಿಕ ಕೆಲಸಕ್ಕೆ ಅರ್ಥಶಾಸ್ತ್ರದಲ್ಲಿ ಶ್ರಮ ಎನ್ನುವರು.

**Wages ಕೂಲಿ :** ಉತ್ಪಾದನಾ ಉದ್ದೇಶಗಳಿಗೆ ನೇಮಿಸಿಕೊಳ್ಳಲಾದ ಕಾರ್ಮಿಕರಿಗೆ ಸಂಘಟನಾಕಾರ ಕೊಡುವ ಬೆಲೆ ಅಥವಾ ಪ್ರತಿಫಲಕ್ಕೆ ಕೂಲಿ/ವೇತನ/ಪಗಾರ/ಬಟವಡೆ ಎಂದು ಕರೆಯಲಾಗುತ್ತದೆ.

**Capital ಬಂಡವಾಳ :** ಉತ್ಪಾದನಾ ಪ್ರಕ್ರಿಯೆಯಲ್ಲಿ ಬಳಸಲಾಗುವ ಎಲ್ಲ ಮಾನವ ನಿರ್ಮಿತ ಸರಕುಗಳನ್ನು ಬಂಡವಾಳ ಎಂದು ಕರೆಯಲಾಗುತ್ತದೆ.

**Savings ಉಳಿತಾಯ :** ಅನುಭೋಗಕ್ಕಾಗಿ ವೆಚ್ಚ ಮಾಡದೇ ಇರುವ/ಉಳಿಸಿರುವ ಆದಾಯದ ಒಂದು ಭಾಗಕ್ಕೆ ಉಳಿತಾಯ ಎನ್ನುವರು.

**Savings Gap ಉಳಿತಾಯ ಅಂತರ :** ವ್ಯಕ್ತಿಯ ಆದಾಯವು ಅವನ ಅನುಭೋಗಿ ವೆಚ್ಚಕ್ಕೆ ಸಮನಾದಾಗ ಉಳಿತಾಯವು ಶೂನ್ಯವಾಗುವುದಕ್ಕೆ ಉಳಿತಾಯ ಅಂತರ ಎನ್ನುತ್ತಾರೆ.

**Interest ಬಡ್ಡಿ :** ಉತ್ಪಾದನೆಯಲ್ಲಿ ಬಂಡವಾಳವನ್ನು ಬಳಸಿಕೊಂಡಿದ್ದಕ್ಕಾಗಿ ಅದರ ಮಾಲಿಕನಿಗೆ ಕೊಡಲಾಗುವ ಪ್ರತಿಫಲವೇ ಅರ್ಥಶಾಸ್ತ್ರದಲ್ಲಿ ಬಡ್ಡಿ ಎಂದು ಕರೆಯಿಸಿಕೊಳ್ಳುತ್ತದೆ.

**Net Interest ನಿವ್ವಳ ಬಡ್ಡಿ :** ಕೇವಲ ಬಂಡವಾಳದ ಉಪಯೋಗಕ್ಕಾಗಿ ನೀಡುವ ಪ್ರತಿಫಲಕ್ಕೆ ನಿವ್ವಳ ಬಡ್ಡಿ ಎನ್ನುವರು.

**Gross Interest ಒಟ್ಟು ಬಡ್ಡಿ :** ಬಂಡವಾಳವನ್ನು ಸಾಲ ನೀಡಿದ ಕಾರಣಕ್ಕಾಗಿ ಅದರ ಮಾಲಿಕನಿಗೆ ದೊರೆಯುವ ಸಮಗ್ರ ಪ್ರತಿಫಲಕ್ಕೆ ಒಟ್ಟು ಬಡ್ಡಿ ಎನ್ನುತ್ತಾರೆ.

**Organisation ಸಂಘಟನೆ :** ಭೂಮಿ, ಶ್ರಮ ಮತ್ತು ಬಂಡವಾಳಗಳನ್ನು ಒಂದೆಡೆ ಕ್ರಮಬದ್ಧವಾಗಿ ಸಂಘಟಿಸಿ, ಉತ್ಪಾದನಾ ಪ್ರಕ್ರಿಯೆ ನಡೆಯುವಂತೆ ಮಾಡುವ ಕ್ರಿಯೆಯನ್ನು ಸಂಘಟನೆ ಎನ್ನುತ್ತಾರೆ.

**Profit ಲಾಭ :** ಸಂಘಟನಾಕಾರನು ಉತ್ಪಾದನೆಯಲ್ಲಿ ನಿರ್ವಹಿಸಿದ ಸಂಘಟನಾ ಕಾರ್ಯಕ್ಕೆ ದೊರೆಯುವ ಪ್ರತಿಫಲಕ್ಕೆ ಲಾಭ/ಮುನಾಫೆ ಎಂದು ಕರೆಯುತ್ತಾರೆ.

**Cost ವೆಚ್ಚ :** ಒಂದು ಸರಕು/ವಸ್ತುವಿನ ಉತ್ಪಾದನೆಗಾಗಿ ಮಾಡಿದ ಎಲ್ಲ ಪ್ರಕಾರದ ಖರ್ಚುಗಳಿಗೆ ವೆಚ್ಚ ಎನ್ನುತ್ತಾರೆ.

**Fixed Cost ಸ್ಥಿರ ವೆಚ್ಚ :** ಉತ್ಪಾದನೆಯಿಂದ ಸ್ವತಂತ್ರವಾಗಿರುವ ವೆಚ್ಚಗಳಿಗೆ ಸ್ಥಿರ ವೆಚ್ಚ ಎಂದು ಕರೆಯಲಾಗುತ್ತದೆ. ಇದರ ಅರ್ಥ ಉತ್ಪಾದನೆಯೊಂದಿಗೆ ಬದಲಾಗದಿರುವ ಅಥವಾ ಏರಿಳಿತಕ್ಕೆ ಒಳಗಾಗದಿರುವ ವೆಚ್ಚಕ್ಕೆ ಸ್ಥಿರ ವೆಚ್ಚವೆಂದು ಕರೆಯುತ್ತಾರೆ.

**Variable Cost ಬದಲಾಗುವ ವೆಚ್ಚ :** ಉತ್ಪಾದನೆಯ ಏರಿಳಿತಗಳೊಂದಿಗೆ ಏರಿಳಿತಕ್ಕೆ ಒಳಗಾಗುವ ವೆಚ್ಚಕ್ಕೆ ಬದಲಾಗುವ ವೆಚ್ಚ ಎನ್ನುವರು.

**Opportunity Cost ಅವಕಾಶ ವೆಚ್ಚ :** ಅವಕಾಶ ವೆಚ್ಚ ಎಂದರೆ ಒಂದು ಸರಕಿನ ಉತ್ಪಾದನೆಯಲ್ಲಿ ತ್ಯಾಗ ಮಾಡಲಾಗುವ ಇನ್ನೊಂದು ಅತ್ಯಂತ ಆಕರ್ಷಿಣಿಯ ಅಥವಾ ಅತ್ಯುತ್ತಮ ಆಯ್ಕೆಯಾಗಿದೆ.

**Total Cost ಒಟ್ಟು ವೆಚ್ಚ :** ಒಂದು ಉದ್ಯಮವು ಉತ್ಪಾದಿಸುವ ಒಂದು ವಸ್ತುವಿನ ಎಲ್ಲ ಘಟಕಗಳ ಉತ್ಪಾದನಾ ವೆಚ್ಚಕ್ಕೆ ಒಟ್ಟು ವೆಚ್ಚ ಎಂದು ಕರೆಯಲಾಗುತ್ತದೆ.

**Marginal Cost ಸೀಮಾಂತ ವೆಚ್ಚ :** ಉತ್ಪಾದನೆಯಲ್ಲಿ ವಸ್ತುವಿನ ಒಂದು ಹೆಚ್ಚುವರಿ ಘಟಕವನ್ನು ಉತ್ಪಾದಿಸಲು ತಗಲುವ ವೆಚ್ಚಕ್ಕೆ ಸೀಮಾಂತ ವೆಚ್ಚ ಎನ್ನುತ್ತಾರೆ.

**Average Cost ಸರಾಸರಿ ವೆಚ್ಚ :** ವಸ್ತುವಿನ ಪ್ರತಿ ಘಟಕದ ಉತ್ಪಾದನೆಗೆ ತಗಲುವ ವೆಚ್ಚಕ್ಕೆ ಸರಾಸರಿ ವೆಚ್ಚ ಎನ್ನುತ್ತೇವೆ. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ಒಂದು ನಿರ್ದಿಷ್ಟ ಪ್ರಮಾಣದ ಒಟ್ಟು ಉತ್ಪಾದನೆಯಲ್ಲಿ ವಸ್ತುವಿನ ಪ್ರತಿಯೊಂದು ಘಟಕದ ಉತ್ಪಾದನೆಗೆ ತಗಲುವ ವೆಚ್ಚವು ಸರಾಸರಿ ವೆಚ್ಚವಾಗುತ್ತದೆ ಒಟ್ಟು ಉತ್ಪಾದನಾ ವೆಚ್ಚವನ್ನು ಉತ್ಪಾದಿಸಿದ ಒಟ್ಟು ವಸ್ತುಗಳ ಪ್ರಮಾಣದಿಂದ ಭಾಗಿಸಿದಾಗ ಸರಾಸರಿ ವೆಚ್ಚ ಲಭಿಸುತ್ತದೆ.

**Incom ಆದಾಯ :** ಒಂದು ಉದ್ಯಮ ಸಂಸ್ಥೆಯು ತನ್ನ ಉತ್ಪನ್ನ/ಸರಕು/ವಸ್ತುವನ್ನು ಮಾರಾಟ ಮಾಡಿದಾಗ ಲಭಿಸುವ ಮಾರಾಟದ ಹಣಕ್ಕೆ ಆದಾಯ/ವರಮಾನವೆಂದು ಕರೆಯಲಾಗುತ್ತದೆ.

**Total Incom ಒಟ್ಟು ಆದಾಯ :** ಒಂದು ಉದ್ಯಮಸಂಸ್ಥೆಯು ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದಿಸಿದ ಎಲ್ಲ ಘಟಕಗಳನ್ನು ಒಂದು ನಿರ್ದಿಷ್ಟ ಬೆಲೆಯಲ್ಲಿ ಮಾರಾಟ ಮಾಡಿದಾಗ ಲಭ್ಯವಾಗುವ ಹಣ/ವರಮಾನಕ್ಕೆ ಒಟ್ಟು ಆದಾಯ ಎನ್ನುವರು.

**Average Incom ಸರಾಸರಿ ಆದಾಯ :** ವಸ್ತುವಿನ/ಉತ್ಪನ್ನದ ಪ್ರತಿ ಘಟಕದಿಂದ ಗಳಿಸುವ ಹಣ/ವರಮಾನಕ್ಕೆ ಸರಾಸರಿ ಆದಾಯವೆಂದು ಕರೆಯುವರು.

**Marginal Incom ಸೀಮಾಂತ ಆದಾಯ** : ವಸ್ತುವಿನ ಒಂದು ಹೆಚ್ಚುವರಿ ಘಟಕವನ್ನು ಮಾರಾಟ ಮಾಡುವ ಮೂಲಕ ಒಟ್ಟು ಆದಾಯಕ್ಕೆ ಮಾಡಲಾಗುವ ನಿವ್ವಳ ಸೇರ್ಪಡೆಗೆ ಸೀಮಾಂತ ಆದಾಯ ಎಂದು ಕರೆಯುವರು.

**Merket ಮಾರುಕಟ್ಟೆ** : ಮಾರಾಟ ಮಾಡುವವರು ಮತ್ತು ಕೊಂಡುಕೊಳ್ಳುವವರು ಸುಲಭವಾಗಿ ಸಂಪರ್ಕವನ್ನು ಹೊಂದಿರುವ ಯಾವುದೇ ವ್ಯಾಪಾರ ಕ್ಷೇತ್ರಕ್ಕೆ ಮಾರುಕಟ್ಟೆ ಎಂದು ಕರೆಯಲಾಗುತ್ತದೆ.

**Perfectly Competitive Merket ಪರಿಪೂರ್ಣ ಪೈಪೋಟಿ ಮಾರುಕಟ್ಟೆ**: ಮಾರುಕಟ್ಟೆಯಲ್ಲಿ ಒಂದೇ ರೀತಿಯ ವಸ್ತುವನ್ನು ಮಾರುವವರು ಮತ್ತು ಕೊಂಡುಕೊಳ್ಳುವವರು ಅಧಿಕ ಸಂಖ್ಯೆಯಲ್ಲಿದ್ದು, ವಸ್ತುವಿನ ಬೆಲೆಯು ಅದರ ಬೇಡಿಕೆ ಮತ್ತು ಪೂರೈಕೆಯ ಆಧಾರದ ಮೇಲೆ ನಿರ್ಧಾರವಾಗುವಂತಿದ್ದರೆ ಅಂತಹ ಮಾರುಕಟ್ಟೆಯನ್ನು ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎನ್ನುತ್ತೇವೆ.

**Monopoly Merket ಏಕಸ್ವಾಮ್ಯ ಮಾರುಕಟ್ಟೆ** : ಮಾರುಕಟ್ಟೆಯಲ್ಲಿ ಒಂದು ವಸ್ತುವಿನ ಮಾರಾಟಗಾರ ಒಬ್ಬನೇ ಇದ್ದು, ಅವನೇ ಸಂಪೂರ್ಣವಾಗಿ ವಸ್ತುವಿನ ಪೂರೈಕೆಯನ್ನು ನಿಯಂತ್ರಿಸುವ ಮೂಲಕ ಬೆಲೆಯನ್ನು ನಿರ್ಧರಿಸುವಂತಿದ್ದರೆ ಅಂತಹ ಮಾರುಕಟ್ಟೆಗೆ ಏಕಸ್ವಾಮ್ಯ ಮಾರುಕಟ್ಟೆ ಎನ್ನುತ್ತೇವೆ.

**Oligopoly ಕೆಲಜನ ಸ್ವಾಮ್ಯ** : ಒಂದು ಮಾರುಕಟ್ಟೆಯಲ್ಲಿ ಕೆಲವೇ ಜನ ಮಾರಾಟಗಾರರಿದ್ದು ಅವರೇ ವಸ್ತುವಿನ ಪೂರೈಕೆಯ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುವ ಮಾರುಕಟ್ಟೆಗೆ ಕೆಲ ಜನ ಸ್ವಾಮ್ಯ ಮಾರುಕಟ್ಟೆ ಎಂದು ಕರೆಯುತ್ತಾರೆ.

**Duopoly ದ್ವಿಜನ ಸ್ವಾಮ್ಯ ಮಾರುಕಟ್ಟೆ** : ಒಂದು ಮಾರುಕಟ್ಟೆಯಲ್ಲಿ ಒಂದು ವಸ್ತುವನ್ನು ಕೊಂಡುಕೊಳ್ಳುವವರು ಅಧಿಕ ಸಂಖ್ಯೆಯಲ್ಲಿದ್ದು, ಮಾರಾಟ ಮಾಡುವವರು ಕೇವಲ ಇಬ್ಬರು ಮಾತ್ರ ಇರುವ ಮಾರುಕಟ್ಟೆಗೆ ದ್ವಿಸ್ವಾಮ್ಯ/ದ್ವಿಜನ ಸ್ವಾಮ್ಯ ಮಾರುಕಟ್ಟೆ ಎಂದು ಕರೆಯುತ್ತಾರೆ.

**Monopsony ಏಕಗ್ರಾಹಕ ಮಾರುಕಟ್ಟೆ**: ಮಾರುಕಟ್ಟೆಯಲ್ಲಿ ಒಂದು ವಸ್ತುವನ್ನು ಕೊಂಡು ಕೊಳ್ಳುವವರು ಒಬ್ಬರೇ ಇರುವ ಮಾರುಕಟ್ಟೆಗೆ ಏಕಗ್ರಾಹಕ ಮಾರುಕಟ್ಟೆ ಎನ್ನುತ್ತೇವೆ.

**Duopsony ದ್ವಿಗ್ರಾಹಕ ಮಾರುಕಟ್ಟೆ**: ಮಾರುಕಟ್ಟೆಯಲ್ಲಿ ಒಂದು ವಸ್ತುವನ್ನು ಕೊಂಡು ಕೊಳ್ಳುವವರು ಇಬ್ಬರು ಮಾತ್ರ ಇದ್ದರೆ ಅಂತಹ ಮಾರುಕಟ್ಟೆಗೆ ದ್ವಿಗ್ರಾಹಕ ಮಾರುಕಟ್ಟೆ ಎನ್ನುತ್ತೇವೆ.

**Oligopsony ಕೆಲಜನ ಗ್ರಾಹಕ ಮಾರುಕಟ್ಟೆ** : ಒಂದು ಮಾರುಕಟ್ಟೆಯಲ್ಲಿ ಒಂದು ವಸ್ತುವನ್ನು ಕೊಂಡುಕೊಳ್ಳುವವರು ಕೆಲವೇ ಜನರಿದ್ದರೆ ಅಂಥ ಮಾರುಕಟ್ಟೆಗೆ ಕೆಲಜನ/ಅಲ್ಪಜನ ಗ್ರಾಹಕ ಮಾರುಕಟ್ಟೆ ಎಂದು ಕರೆಯುತ್ತಾರೆ.

**Economic Welfare ಆರ್ಥಿಕ ಕಲ್ಯಾಣ** : ಮಾನವನು ಸರಕು ಸೇವೆಗಳನ್ನು ಹೆಚ್ಚು ಹೆಚ್ಚಾಗಿ ಅನುಭೋಗಿಸುವುದರ ಮೂಲಕ ತನ್ನ ಆರ್ಥಿಕ ಜೀವನದಲ್ಲಿ ಸುಖ ಪಡೆಯುವುದನ್ನು ಆರ್ಥಿಕ ಕಲ್ಯಾಣ ಎನ್ನುತ್ತೇವೆ.

**Free trade ಮುಕ್ತ ವ್ಯಾಪಾರ** : ಒಂದು ದೇಶ ಮತ್ತೊಂದು ದೇಶದೊಡನೆ ಹಾಗೆಯೇ ಎಲ್ಲ ದೇಶಗಳೂ ಪರಸ್ಪರ ನಡೆಸಬುದಾದ ಅನಿರ್ಬಂಧಿತ ಕೊಡುವ ಕೊಳ್ಳುವ ವ್ಯವಹಾರಕ್ಕೆ ಫ್ರೀ ಟ್ರೇಡ್ ಇಲ್ಲವೇ ಮುಕ್ತ ವ್ಯಾಪಾರ ಎನ್ನುವರು.

**Inventory theory ತಪಶೀಲು ಸಿದ್ಧಾಂತ** : ಕೈಗಾರಿಕೋದ್ಯಮಗಳಲ್ಲಿ ಮುಂದಿನ ಉಪಯೋಗಕ್ಕಾಗಿ ಈಗ ಕೂಡಿಡಬೇಕಾಗಿರುವ ವಸ್ತುಗಳ ಕ್ರಮಬದ್ಧ ದಾಸ್ತಾನು, ರಕ್ಷಣೆ, ವಿನಿಯೋಗ ಮುಂತಾದವನ್ನು ಕುರಿತು ಶಾಸ್ತ್ರೀಯ ಅಧ್ಯಯನಕ್ಕೆ ತಪಶೀಲು ಸಿದ್ಧಾಂತ ಅಥವಾ ಇನ್ವೆಂಟರಿ ಥಿಯರಿ ಎಂದು ಕರೆಯುತ್ತಾರೆ.

**Sociolism ಸಮಾಜವಾದ** : ಸಮಾಜದಲ್ಲಿ ವ್ಯಕ್ತಿಗಳ ಆರ್ಥಿಕ ಸಮಾನತೆ ಹಾಗೂ ಸರ್ವ ಸಮಾನತೆಯನ್ನು ಪ್ರತಿಪಾದಿಸುವ ಒಂದು ಚಿಂತನ ಕ್ರಮಕ್ಕೆ ಹಾಗೂ ವಾದಕ್ಕೆ ಸಮಾಜವಾದ/ ಸೋಷಿಯಲಿಸಂ ಎಂದು ಕರೆಯುತ್ತಾರೆ.

**Unemployment ನಿರುದ್ಯೋಗ** : ಉತ್ಪಾದನಾಂಗವೊಂದನ್ನು ಯಾವುದೇ ಸಂಸ್ಥೆ ಅಥವಾ ಸರಕಾರ ಬಳಸಿಕೊಳ್ಳದೆ ಇರುವ, ಉತ್ಪಾದನೆಯಲ್ಲಿ ಬಳಕೆಗೆ ಒದಗಿಬರುವಂತಿದ್ದೂ ವಾಸ್ತವವಾಗಿ ಬಳಸಿಕೊಳ್ಳದಿರುವ ಸ್ಥಿತಿಗೆ ನಿರುದ್ಯೋಗ ಎನ್ನುವರು. ದುಡಿಯುವ ಶಕ್ತಿ/ಸಾಮರ್ಥ್ಯ ಹೊಂದಿದ್ದು, ದುಡಿಯುವ ಮನಸ್ಸಿರುವ ವ್ಯಕ್ತಿಗೆ ಯಾವುದೇ ಆದಾಯ ಗಳಿಸುವ ಉದ್ಯೋಗ ದೊರೆಯದಿರುವ ಸ್ಥಿತಿಗೆ ನಿರುದ್ಯೋಗ ಎನ್ನುವರು

**Cost of living ಜೀವನ ವೆಚ್ಚ** : ಒಂದು ನಿರ್ದಿಷ್ಟ ಸ್ಥಳ ಅಥವಾ ಪ್ರದೇಶದಲ್ಲಿ ಅನುಭೋಗಿಗಳು ತಾವು ಬಳಸುವ ಸರಕುಗಳ ಮತ್ತು ಸೇವೆಗಳ ಸಮಷ್ಟಿಯನ್ನು ಕೊಳ್ಳಲು ಪ್ರಚಲಿತ ಬೆಲೆಗಳಲ್ಲಿ ಮಾಡಬೇಕಾಗುವ ವೆಚ್ಚವು ಜೀವನ ವೆಚ್ಚವಾಗುತ್ತದೆ.

**ಕೊರತೆ ಹಣಕಾಸು (Deficit financing)** : ಸರಕಾರ ತನ್ನ ಆದಾಯಕ್ಕಿಂತ ವ್ಯಯ ಅಧಿಕವಾಗಿರುವಂತೆ ಆಯವ್ಯಯದಲ್ಲಿ/ಮುಂಗಡ ಪತ್ರದಲ್ಲಿ ಕೊರತೆ ಏರ್ಪಡುವಂತೆ/ಉಂಟಾಗುವಂತೆ ಬುದ್ಧಿಪೂರ್ವಕವಾಗಿ/ಉದ್ದೇಶಪೂರ್ವಕವಾಗಿ ಕೈಗೊಂಡ ಕ್ರಮಕ್ಕೆ ಕೊರತೆ ಹಣಕಾಸು ಎಂದು ಕರೆಯುತ್ತಾರೆ.

**Living wage ಜೀವನ ಕೂಲಿ** : ಒಂದು ಸಾಮಾನ್ಯ ಕಾರ್ಮಿಕ ಸಂಸಾರದ ಜೀವನ ನಿರ್ವಹಣೆಗೆ ಅಗತ್ಯವಾಗಿ ಕಾರ್ಮಿಕನಿಗೆ ಸಲ್ಲಬೇಕಾದ ಕೂಲಿಯೇ ಜೀವನ ನಿರ್ವಾಹ ಕೂಲಿ ಅಥವಾ ಲಿವಿಂಗ್ ವೇಜ್.

**Central Bank ಕೇಂದ್ರೀಯ ಬ್ಯಾಂಕು :** ಒಂದು ದೇಶದ ಬ್ಯಾಂಕಿಗ್ ವ್ಯವಸ್ಥೆಯಲ್ಲಿ ಕೇಂದ್ರ ಸ್ಥಾನದಲ್ಲಿರುವ ಅಂದರೆ ಸರಕಾರಕ್ಕೂ ಇತರ ಬ್ಯಾಂಕುಗಳಿಗೂ ಬ್ಯಾಂಕಾಗಿರುವ, ದೇಶದ ನಾಣ್ಯ ಚಲಾವಣೆ ಮತ್ತು ಉದ್ದರಿ ನೀತಿಯನ್ನು ನಿರ್ವಹಿಸುವ, ಹಣ ಮತ್ತು ಅಮೂಲ್ಯ ಲೋಹಗಳ ಆಯಾತ ನಿರ್ಯಾತಗಳನ್ನು ನಿಯಂತ್ರಿಸುವ ಕಾರ್ಯಭಾರ ಪ್ರವೃತ್ತವಾದ ಬ್ಯಾಂಕು ಕೇಂದ್ರ ಅಥವಾ ಸೆಂಟ್ರಲ್ ಬ್ಯಾಂಕಾಗಿರುತ್ತದೆ.

**Monometallism ಏಕಲೋಹ ನಾಣ್ಯ ಪದ್ಧತಿ :** ಒಂದು ದೇಶದ ಪ್ರಧಾನ ನಾಣ್ಯಗಳನ್ನು ತಯಾರಿಸಲು ಅಲ್ಲಿನ ಸರಕಾರವು ಒಂದೇ ಲೋಹವನ್ನು ಉಪಯೋಗಿಸಿದಾಗ ಅಂಥ ನಾಣ್ಯ ಪದ್ಧತಿಗೆ ಏಕಲೋಹ ನಾಣ್ಯ ಪದ್ಧತಿ ಎಂದು ಕರೆಯುತ್ತಾರೆ. ಉದಾ: ಚಿನ್ನವನ್ನು ಉಪಯೋಗಿಸಿದಾಗ ಅದಕ್ಕೆ 'ಸುವರ್ಣ ಪ್ರಮಿತ' ಅಥವಾ 'ಚಿನ್ನ ಪ್ರಮಿತ' ಎಂದೂ ಬೆಳ್ಳಿಯನ್ನು ಉಪಯೋಗಿಸಿದಾಗ ಅದಕ್ಕೆ 'ಬೆಳ್ಳಿ ಪ್ರಮಿತ' ಎಂದು ಕರೆಯುತ್ತಾರೆ.

**Bimetallism ದ್ವಿಲೋಹ ನಾಣ್ಯ ಪದ್ಧತಿ :** ದ್ವಿಲೋಹ ನಾಣ್ಯ ಪದ್ಧತಿಯಲ್ಲಿ ಚಿನ್ನ ಮತ್ತು ಬೆಳ್ಳಿ ಈ ಎರಡೂ ಲೋಹಗಳ ನಾಣ್ಯಗಳು ಏಕಕಾಲಕ್ಕೆ ಚಲಾವಣೆಯಲ್ಲಿರುತ್ತವೆ. ಚಿನ್ನದ ನಾಣ್ಯಗಳಿಗೂ ಬೆಳ್ಳಿಯ ನಾಣ್ಯಗಳಿಗೂ ಒಂದು ನಿರ್ದಿಷ್ಟ ಸಂಬಂಧವಿರುತ್ತದೆ. ಅಂದರೆ ಒಂದು ಚಿನ್ನದ ನಾಣ್ಯಕ್ಕೆ ಇಂತಿಷ್ಟು ಬೆಳ್ಳಿಯ ನಾಣ್ಯಗಳೆಂದು ನಿಗದಿ ಮಾಡಲಾಗಿರುತ್ತದೆ. ಈ ದರದ ಪ್ರಕಾರ ಚಿನ್ನದ ನಾಣ್ಯಗಳನ್ನು ಬೆಳ್ಳಿಯ ನಾಣ್ಯಗಳಿಗೂ, ಇಲ್ಲವೆ ಬೆಳ್ಳಿಯ ನಾಣ್ಯಗಳನ್ನು ಚಿನ್ನದ ನಾಣ್ಯಗಳಿಗೂ ಪರಿವರ್ತಿಸಲಾಗುತ್ತದೆ. ಇವೆರಡೂ ನಾಣ್ಯಗಳಿಗೆ ಅಮಿತ ಗೌರವದ ಸಲ್ಲಿಕೆ ಇರುತ್ತದೆ.

**Inflation ಹಣದುಬ್ಬರ :** ಬೆಲೆಗಳು ಒಂದೇ ಸವನೆ ಏರುವ ಪರಿಸ್ಥಿತಿಗೆ 'ಹಣದುಬ್ಬರ' ಅಥವಾ 'ಅತಿ ಪ್ರಸರಣ'ವೆಂದು ಕರೆಯುತ್ತಾರೆ. ಅಂದರೆ ಸರಕು–ಸೇವೆಗಳ ಬೆಲೆಗಳು ಸತತವಾಗಿ ಏರುತ್ತಿದ್ದು ಹಣದ ಮೌಲ್ಯವು ಇಳಿಯುತ್ತಿರುವ ಸನ್ನಿವೇಶವು ಹಣದುಬ್ಬರದ ಸನ್ನಿವೇಶವಾಗಿದೆ.

**Deflation ಹಣ ಕುಗ್ಗುಪ್ರಸರಣ :** ಅವಶ್ಯಕತೆಗಿಂತ ಕಡಿಮೆ ಹಣ ಚಲಾವಣೆಯಲ್ಲಿದ್ದರೆ ಹಣ ಕುಗ್ಗುವವಿಕೆಯ ಸನ್ನಿವೇಶ ತಲೆದೊರುತ್ತದೆ. ಬೆಲೆಗಳು ಸತತವಾಗಿ ಇಳಿಯುವಾಗ ಉತ್ಪಾದನೆ, ವರಮಾನ, ಉದ್ಯೋಗಾವಕಾಶಗಳು ಕಡಿಮೆಯಾಗುತ್ತವೆ. ಬೆಲೆಗಳು ಇಳಿಯುತ್ತಿರುವುದರಿಂದ ಉತ್ಪಾದನೆ ಮತ್ತೆ ಕಡಿಮೆಯಾಗುತ್ತದೆ. ಆಗ ವರಮಾನ/ಆದಾಯ ಕಡಿಮೆಯಾಗಿ ನಿರುದ್ಯೋಗ ಹೆಚ್ಚಾಗುತ್ತದೆ. ಇಂತಹ ಸನ್ನಿವೇಶಕ್ಕೆ 'ಹಣ ಕುಗ್ಗುವಿಕೆ' ಅಥವಾ 'ಕುಗ್ಗುಪ್ರಸರಣ' ಇಲ್ಲವೆ 'ಅನಪ್ರಸರಣ' ಎಂದು ಕರೆಯುತ್ತಾರೆ.

**Money Market ಹಣದ ಮಾರುಕಟ್ಟೆ :** ಅಲ್ಪಾವಧಿಗಾಗಿ ಸಾಲ ಕೊಡುವ ಮತ್ತು ಸಾಲ ತೆಗೆದುಕೊಳ್ಳುವ ವ್ಯವಹಾರಗಳು ನಡೆಯುವ ಮಾರುಕಟ್ಟೆಗೆ ಹಣದ ಪೇಟೆ ಅಥವಾ ಹಣದ ಮಾರುಕಟ್ಟೆ ಎಂದು ಕರೆಯುತ್ತಾರೆ. ನಿಜ ಹೇಳಬೇಕೆಂದರೆ ಹಣದ ಮಾರುಕಟ್ಟೆಯಲ್ಲಿ ಪ್ರತ್ಯಕ್ಷವಾಗಿ

ನಗದು ಹಣವನ್ನು ಸಾಲವಾಗಿ ಕೊಡುವುದು, ತೆಗೆದುಕೊಳ್ಳುವುದು ನಡೆಯುವುದಿಲ್ಲ. ಆದರೆ ಹಣಕ್ಕೆ ಪರಿವರ್ತಿಸಬಹುದಾದ ಹುಂಡಿಗಳು, ವಾಗ್ದಾನ ಪತ್ರಗಳು, ಸರಕಾರಿ ಸಾಲ ಪತ್ರಗಳು ಮುಂತಾದವುಗಳ ಮೂಲಕ ನಡೆಯುತ್ತದೆ.

**Monetary Policy ಹಣಕಾಸಿನ ನೀತಿ :** ರಾಷ್ಟ್ರದಲ್ಲಿ ಚಲಾವಣೆಯಲ್ಲಿರುವ ಹಣದ ಗಾತ್ರವನ್ನು ನಿರ್ಧರಿಸುವ ಮತ್ತು ಅದನ್ನು ಕಾಯ್ದುಕೊಳ್ಳುವ ನೀತಿಗೆ 'ಹಣಕಾಸಿನ ನೀತಿ' ಎಂದು ಕರೆಯುತ್ತಾರೆ. ಕೆಲವೊಂದು ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಮತ್ತು ಆರ್ಥಿಕ ಚಟುವಟಿಕೆಗಳಲ್ಲಿ ಸ್ಥಿರತೆಯನ್ನು ಕಾಯ್ದುಕೊಳ್ಳಲು ಕೇಂದ್ರ ಬ್ಯಾಂಕು ರಾಷ್ಟ್ರದಲ್ಲಿನ ಚಲಾವಣೆಯಲ್ಲಿರುವ ಕರೆನ್ಸಿ ನೋಟುಗಳ ಮತ್ತು ಬ್ಯಾಂಕು ಸಾಲದ ಪ್ರಮಾಣವನ್ನು ನಿಯಂತ್ರಿಸುವ ದಿಸೆಯಲ್ಲಿ ಅನುಸರಿಸುವ ನೀತಿಗೆ "ಕೇಂದ್ರ ಬ್ಯಾಂಕಿನ ನೀತಿ" ಅಥವಾ "ಹಣಕಾಸಿನ ನೀತಿ" ಎಂದು ಕರೆಯುತ್ತಾರೆ.

**Free trade Policy ಮುಕ್ತ ವ್ಯಾಪಾರ ನೀತಿ :** ಪರರಾಷ್ಟ್ರಗಳೊಂದಿಗೆ ನಡೆಯುವ ವ್ಯಾಪಾರದ ಮೇಲೆ ಯಾವ ನಿರ್ಬಂಧಗಳನ್ನು ವಿಧಿಸದಿರುವ ನೀತಿಗೆ "ಮುಕ್ತ ವ್ಯಾಪಾರ ನೀತಿ" ಎಂದು ಕರೆಯುತ್ತಾರೆ.

**Protection trade policy ರಕ್ಷಣಾ ವ್ಯಾಪಾರ ನೀತಿ :** ಪರರಾಷ್ಟ್ರಗಳ ಪೈಪೋಟಿಯಿಂದ ಸ್ವದೇಶದ ಕೈಗಾರಿಕೆಗಳನ್ನು ರಕ್ಷಿಸಲು ಮತ್ತು ಇತರ ಉದ್ದೇಶಗಳನ್ನು ಸಾಧಿಸಲು, ಆಮದು ಮಾಡಿಕೊಳ್ಳುವ ವಸ್ತುಗಳ ಮೇಲೆ ಅನೇಕ ನಿರ್ಬಂಧನೆಗಳನ್ನು ಹೇರುವ ನೀತಿಗೆ 'ರಕ್ಷಣಾ ವ್ಯಾಪಾರ ನೀತಿ' ಎಂದು ಕರೆಯುತ್ತಾರೆ.

**Quota ಕೋಟಾ (ದೇಯಾಂಶ) ಪದ್ಧತಿ :** ಒಂದು ನಿರ್ದಿಷ್ಟ ಅವಧಿಯಲ್ಲಿ ಇಂತಿಷ್ಟೆ/ ನಿರ್ದಿಷ್ಟ ಪ್ರಮಾಣದಲ್ಲಿ ವಸ್ತುಗಳನ್ನು ಆಮದು ಮಾಡಿಕೊಳ್ಳಬೇಕೆಂದು ಸರಕಾರವು ನಿರ್ಣಯ ಕೈಗೊಳ್ಳುತ್ತದೆ. ಆ ಅವಧಿ ಮುಗಿರುವವರೆಗೆ ಈ ಪ್ರಮಾಕ್ಕಿಂತ ಹೆಚ್ಚು ಆಮದು ಮಾಡಿಕೊಳ್ಳಲು ಅನುಮತಿ ನೀಡಲಾಗುವುದಿಲ್ಲ. ಯಾವ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳಬೇಕಾಗಿದೆಯೋ ಆ ರಾಷ್ಟ್ರಗಳಿಗೆ ಅವುಗಳ ಕೋಟಾ ಪ್ರಮಾಣವನ್ನು ತಿಳಿಸಲಾಗುತ್ತದೆ. ಆಯಾತದಾರರು ಈ ರಾಷ್ಟ್ರಗಳಿಂದ ನಿಗದಿಪಡಿಸಿದ ಪ್ರಮಾಣಕ್ಕಿಂತ ಹೆಚ್ಚು ಆಮದುಗಳನ್ನು ಮಾಡಿಕೊಳ್ಳಲಾರರು.

**Devaluation ಹಣದ ಅಪಮೌಲ್ಯ :** ಯಾವುದೇ ಒಂದು ದೇಶವು ವಿದೇಶಿ ಹಣದ ಎದುರು ತನ್ನ ದೇಶದ ಹಣದ ಮೌಲ್ಯವನ್ನು ಉದ್ದೇಶಪೂರ್ವಕವಾಗಿಯೇ ಕಡಿಮೆ ಮಾಡುವುದಕ್ಕೆ 'ಹಣದ ಅಪಮೌಲ್ಯ' ಅಥವಾ 'ಹಣದ ಮೌಲ್ಯ ವಿಚ್ಛೇದನ' ಎಂದು ಕರೆಯಲಾಗುತ್ತದೆ. ಇದನ್ನು ಸಾಮಾನ್ಯವಾಗಿ ಸಂದಾಯ ಬಾಕಿ ಕೊರತೆಯನ್ನು ಸರಿದೂಗಿಸುವ ಸಂದರ್ಭದಲ್ಲಿ ಅನುಸರಿಸಲಾಗುತ್ತದೆ.

**Balance of Payment ಸಂದಾಯ ಬಾಕಿ :** ಒಂದು ರಾಷ್ಟ್ರವು ಒಂದು ನಿರ್ದಿಷ್ಟ ಅವಧಿಯಲ್ಲಿ ಇತರ ರಾಷ್ಟ್ರಗಳಿಂದ ಆಮದು ಮಾಡಿಕೊಂಡ ಸರಕ-ಸೇವೆಗಳ ಮೌಲ್ಯ ಮತ್ತು ತಾನು ಇತರ ರಾಷ್ಟ್ರಗಳಿಗೆ ರಫ್ತು ಮಾಡಿದ ಸರಕು-ಸೇವೆಗಳ ಮೌಲ್ಯಗಳನ್ನು ತೋರಿಸುವ ಪಟ್ಟಿಗೆ ಸಂದಾಯ

ಬಾಕಿ ಎಂದು ಕರೆಯುತ್ತಾರೆ.

**Balance of Trade ವ್ಯಾಪಾರ ಬಾಕಿ :** ಒಂದು ರಾಷ್ಟ್ರವು ನಿರ್ದಿಷ್ಟ ಅವಧಿಯಲ್ಲಿ ಇತರ ರಾಷ್ಟ್ರಗಳಿಂದ ಆಮದು ಮಾಡಿಕೊಂಡ ಸರಕುಗಳ ಮೌಲ್ಯ ಮತ್ತು ತಾನು ಇತರ ರಾಷ್ಟ್ರಗಳಿಗೆ ರಫ್ತು ಮಾಡಿದ ಸರಕುಗಳ ಮೌಲ್ಯಗಳನ್ನು ತೋರಿಸುವ ಪಟ್ಟಿಗೆ ವ್ಯಾಪಾರ ಬಾಕಿ ಎಂದು ಕರೆಯುತ್ತಾರೆ. ಇದು ಸಂದಾಯ ಬಾಕಿಯ ಒಂದು ಭಾಗವಾಗಿರುತ್ತದೆ.

**Foreign Exchange ವಿದೇಶಿ ವಿನಿಮಯ :** ಒಂದು ದೇಶದ ಹಣವನ್ನು ಇನ್ನೊಂದು ದೇಶದ ಹಣಕ್ಕೆ ಪರಿವರ್ತಿಸುವ/ಬದಲಾಯಿಸುವ ಕ್ರಿಯೆಗೆ ವಿದೇಶಿ ವಿನಿಮಯ ಎನ್ನುವರು.

**Hedging ಬೇಲೀಕರಣ :** ವಿದೇಶಿ ವಿನಿಮಯ ದರದಲ್ಲಿನ ವ್ಯತ್ಯಾಸಗಳಿಂದ ಆಯಾತ-ನಿರ್ಯಾತದಾರರಿಗೆ ನಷ್ಟವಾಗದಂತೆ ಬ್ಯಾಂಕುಗಳು ವ್ಯವಸ್ಥೆ ಮಾಡುತ್ತವೆ. ಈ ನಷ್ಟನಿವಾರಕ ವ್ಯವಹಾರಗಳಿಗೆ 'ಬೇಲೀಕರಣ' ವ್ಯವಹಾರಗಳೆಂದು ಕರೆಯುತ್ತಾರೆ.

**Business Cycles ಆರ್ಥಿಕ ಆವರ್ತಗಳು:** ಆರ್ಥಿಕ ಕ್ಷೇತ್ರದಲ್ಲಿ ಏರಿಕೆ ಮತ್ತು ಇಳಿಕೆಗಳು ನಿಯತಕಾಲಿಕವಾಗಿ ಕ್ರಮಬದ್ಧವಾಗಿ ಪುನರಾವೃತ್ತಿಯಾಗುತ್ತಿರುತ್ತವೆ. ತೇಜಿ-ಮಂದಿ, ಲಾಭ-ಹಾನಿ, ಉದ್ಯೋಗ-ನಿರುದ್ಯೋಗ, ಉತ್ಸಾಹ-ನಿರುತ್ಸಾಹ, ಅಭ್ಯುದಯ-ಮುಗ್ಗಟ್ಟು, ಸುಭಿಕ್ಷ-ದುರ್ಭಿಕ್ಷೆ ಇವು ಒಂದಾದ ನಂತರ ಒಂದರಂತೆ ಅನುಸರಿಸಿ ಬರುತ್ತವೆ. ಆರ್ಥಿಕ ವಲಯದಲ್ಲಿ ಸಂಭವಿಸುವ ಇಂತಹ ನಿಯತಕಾಲಿಕ ಏರಿಳಿತಗಳಿಗೆ 'ಆರ್ಥಿಕ ಆವರ್ತ'ಗಳೆಂದು ಕರೆಯುತ್ತಾರೆ. ಇವುಗಳಿಗೆ 'ವ್ಯಾಪಾರ ಚಕ್ರ'ಗಳೆಂದೂ **(Trade Cycles)** ಅಥವಾ 'ವ್ಯವಹಾರ ಚಕ್ರ'ಗಳೆಂದೂ ಕರೆಯುತ್ತಾರೆ.

**ತೆರಿಗೆ (Tax):** ಸಾರ್ವಜನಿಕ ಹಿತರಕ್ಷಣೆಗಾಗಿ ಸರಕಾರವು ಕೈಗೊಳ್ಳುವ ವೆಚ್ಚವನ್ನು ತೂಗಿಸಲು ವ್ಯಕ್ತಿ ಇಲ್ಲವೆ ವ್ಯಕ್ತಿಗಳ ಸಮೂಹ ತನ್ನ ಆದಾಯದ ಕೆಲ/ಸ್ವಲ್ಪ ಭಾಗವನ್ನು ಯಾವುದೇ ಪ್ರತಿಫಲವನ್ನಪೇಕ್ಷಿಸದೆ ಸರಕಾರಕ್ಕೆ ಕೊಡಬೇಕಾದ ಕಡ್ಡಾಯದ ಕೊಡುಗೆಗೆ ತೆರಿಗೆ ಎಂದು ಕರೆಯುವರು.

**ಸಮಾರೋಪ:** ಪಾರಿಭಾಷಿಕ ಪದಗಳು ಹೊಸದಾಗಿ ಸೃಷ್ಟಿಸಬೇಕಾದ ಅನಿವಾರ್ಯತೆ ಬರುವುದು, ಮೂಲ ಭಾಷೆಯ ಪದಕ್ಕೆ ಸಂವಾದಿಯಾಗಿ ಲಕ್ಷ್ಯ ಭಾಷೆಯಲ್ಲಿ ಪದ ಇಲ್ಲದಿರುವಾಗ ಆಗ ಹೊಸ ಪದಗಳನ್ನು ಸೃಷ್ಟಿಸಬೇಕಾಗುತ್ತದೆ. ಆದರೆ ಭಾಷಾಂತರಕಾರರು ತಮಗೆ ತೋಚಿದಂತೆ ಪಾರಿಭಾಷಿಕ ಪದಗಳನ್ನು ರೂಪಿಸುತ್ತಾ ಹೋಗುವುದಿಲ್ಲ. ಆಕರ ಭಾಷೆಯ ಪದವನ್ನು ಲಕ್ಷ್ಯ ಭಾಷೆಯಲ್ಲಿ ಸಂವಹನಗೊಳಿಸುವ ಸಲುವಾಗಿ ಶ್ರಮಪೂರ್ವಕವಾಗಿ ರೂಪಿಸಿದ ಪದವೇ ಆ ಸಂದರ್ಭಕ್ಕೆ ಹೊಂದಾಣಿಕೆಯಾಗುತ್ತದೆ. ಇಂಥ ಪ್ರಮುಖ 'ಪದ'ವನ್ನು ವಿವರಣಾತ್ಮಕ ಭಾಷಾಂತರ'ದಲ್ಲಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಈ ಸಂದರ್ಭದಲ್ಲಿ ಆಕರ ಭಾಷೆಯಲ್ಲಿರುವ ಪದಗಳನ್ನು ಶಬ್ದಶಃ ಭಾಷಾಂತರ ಮಾಡಿದ್ದಾರೆ. ಅದು ಪೂರ್ಣಪ್ರಮಾಣದ ಅರ್ಥ ಕಲ್ಪಿಸಲಾರದು. ಅಲ್ಲದೆ ಅದು ಸಂವಹನ ಕ್ರಿಯೆಗೆ ಸಹಕರಿಸದು. ಆದ್ದರಿಂದ ಭಾಷಾಂತರಕಾರರು ಕೇವಲ ಎರಡು ಭಾಷೆಗಳ

ಜ್ಞಾನವಂತರಾದರೆ ಸಾಲದು. ಸಾಂಸ್ಕೃತಿಕ ಸಂವೇನೆಯುಳ್ಳವರೂ, ಭಾಷಾ ಸೂಕ್ಷ್ಮತೆಯನ್ನು ಗಮನಿಸುವವರಾಗಿರಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಆಕರ ಭಾಷೆಯ ಪದಗಳು ಜೊತೆಯಲ್ಲಿ ವಿಭಕ್ತಿ ಪ್ರತ್ಯಯಗಳಂಥ ಬೇರೆ ಬೇರೆ ಅಕ್ಷರಗಳೂ ಇವುಗಳೊಟ್ಟಿಗೆ ಸೇರಿಕೊಳ್ಳುತ್ತವೆ. ಈ ಅಕ್ಷರಗಳು ಆ ಪದಗಳ ಅರ್ಥವಂತಿಕೆಯನ್ನು, ಪರಿಭಾವನೆಯನ್ನು ಹೆಚ್ಚಿಸುತ್ತವೆಂಬಂಥ ವಿಚಾರಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಕನ್ನಡ ಅರ್ಥಶಾಸ್ತ್ರ ಭಾಷಾಂತರ ಪ್ರಕ್ರಿಯೆ ಆರಂಭಗೊಂಡಾಗ ಸೃಷ್ಟಿಸಲಾದ ಕೆಲವು ಪಾರಿಭಾಷಿಕ ಪದಗಳನ್ನು ಇಂದಿಗೂ ಬಳಸಲಾಗುತ್ತಿದೆ. ಅಂಥ ಪದಗಳಿಗೆ ಪರ್ಯಾಯ ಪದಗಳು ರಚನೆಯಾಗಿರುವುದಿಲ್ಲ. ಈ ಪದಗಳು ಇಂಗ್ಲಿಷ್ ಭಾಷೆಯಲ್ಲಿನ ಪದದ ಪರಿಕಲ್ಪನೆಯನ್ನು ಪರಿಣಾಮಕಾರಿಯಾಗಿ ಅರ್ಥೈಸುತ್ತವೆ. ಇದು ಕನ್ನಡ ಭಾಷಾ ವ್ಯಾಪ್ತಿಗೆ ಸಮ್ಮತವೆನಿಸಿದೆ. ಹೀಗಾಗಿ ಪ್ರಾದೇಶಿಕತೆಯ ಮಿತಿಗೆ ಒಳಪಟ್ಟಿಲ್ಲವೆಂಬುದನ್ನು ದೃಢಪಡಿಸುತ್ತದೆ. ಇಂಥ ಪದಗಳನ್ನು ಪದಕೋಶದಲ್ಲಿ 'ಸಾಮಾನ್ಯ ಪದಗಳು'ಎಂಬುದಾಗಿ ಗುರುತಿಸುವ ಪ್ರಯತ್ನವಿದು. ಹಾಗೆಯೇ ಆಕರ ಭಾಷೆಯ ಪದಕ್ಕೆ ಕನ್ನಡದಲ್ಲಿ ಸೃಷ್ಟಿಸಲ್ಪಟ್ಟ ಸಂವಾದಿ ಪದಗಳು ಒಂದಕ್ಕಿಂತ ಹೆಚ್ಚಾಗಿರುವ ಪದಗಳನ್ನು ಗಮನಿಸಲಾಗಿದೆ. ಹೀಗೆ ಈ ಪದಗಳ ಸೃಷ್ಟಿಗೆ ಪ್ರಾದೇಶಿಕತೆ ಅನುಭವ, ತಂತ್ರಜ್ಞಾನ, ಅಧ್ಯಯನಶೀಲತೆ, ಭಾಷಾ ಬೆಳವಣಿಗೆ ಈ ಮೊದಲಾದ ಅಂಶಗಳ ಪ್ರಭಾವವನ್ನು ಪರಿಗಣಿಸುವಂತಿವೆ. ಬೇರೆ ಬೇರೆ ಭಾಷಾಂತರಕಾರರು ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಬಳಸಿದರೂ ಅವುಗಳನ್ನು ಒಟ್ಟಾಗಿ ಪರಿಶೀಲಿಸಿದಾಗ ಪರ್ಯಾಯ ಪದಗಳಾಗಿ ಕಂಡುಬರುತ್ತವೆ. ಇದು ಒಂದು ಭಾಷೆಯ ಬೆಳವಣಿಗೆಯನ್ನು ಸೂಚಿಸುತ್ತದೆ. ಈ ವಿಧದ ಪದಗಳನ್ನು ಸಮನಾರ್ಥಕ ವಿಶೇಷ ಪದಗಳು ಅಥವಾ ಪರ್ಯಾಯ ಪದಗಳು ಎಂಬ ಅಂಶದಡಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಭಾಷಾಂತರದಿಂದ ಸೃಷ್ಟಿಯಾದ 'ಪಾರಿಭಾಷಿಕ ಪದ'ಗಳನ್ನು ವಿವಿಧ ಮಗ್ಗಲುಗಳ ಮೂಲಕ ಗಮನಿಸುವ ಅಗತ್ಯತೆ ಇದೆ. ಪರಿಕಲ್ಪನೆಗಳನ್ನು ಹೊಂದಿರುವ ಪದಗಳಿವೆ. ಪಾರಿಭಾಷಿಕ ಪದಗಳ ಪರಿಶೀಲನೆಯಿಂದ ಇದು ಬೆಳಕು ಕಂಡಿತೆನ್ನಬಹುದು. ಪಾರಿಭಾಷಿಕ ಪದಗಳಲ್ಲಿ ಕೆಲವು ಪದಗಳು ಮೂಲದಲ್ಲಿರುವ ಪದಗಳಿಗೆ ಸಂವಾದಿಗಳಾಗಿದ್ದರೂ ಅವು ಸಂಕ್ಷಿಪ್ತ ರೂಪದಲ್ಲಿ ಅರ್ಥಸೂಚಿಸುತ್ತವೆ. ಇಷ್ಟಕ್ಕೆ ಆ ಪದವು ಸೀಮಿತವಾಗುವುದಿಲ್ಲ. ಅವು ಪರಿಪೂರ್ಣ ಪರಿಭಾವನೆಯನ್ನು ಒಳಗೊಂಡಿರುವುದಿಲ್ಲ. ಅವುಗಳಿಗೆ ವಿವರವಾದ ಮಾಹಿತಿ ಬೇಕಾಗುತ್ತದೆ. ಆ ಪಾರಿಭಾಷಿಕ ಪದವು 'ಅಂದರೇನು?' ಎಂಬಂತಹ ಪ್ರಶ್ನೆಗೆ ಉತ್ತರಿಸುವ ವಿವರಣೆ ನೀಡುತ್ತದೆ. ಈ ಮಾದರಿಯ ಪದಗಳನ್ನು ಪಾರಿಭಾಷಿಕ ಪದಗಳಲ್ಲಿ ಪರಿಶೀಲಿಸಿ 'ಪರಿಕಲ್ಪನೆ'ಯ ಪದಗಳೆಂದು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹೀಗೆ ಪದಕೋಶಗಳನ್ನು ಪರಿಶೀಲಿಸುವ ಪ್ರಯತ್ನ ಇಲ್ಲಿಗೆ ಪೂರ್ಣವಾಗುವುದಿಲ್ಲ. ಇನ್ನೂ ಬೇರೆ ಬೇರೆ ವಿಚಾರಕ್ಕೆ ಆಸ್ಪದವಾಗಲೂಬಹುದು. ಅಂಥ ವಿಚಾರಗಳಿಗೆ ಇದೊಂದು ಸುಳಿವು ನೀಡಿತು.

# ಅಧ್ಯಾಯ ಆರು

## ಸಮಾರೋಪ

'ಕನ್ನಡದಲ್ಲಿ ಅರ್ಥಶಾಸ್ತ್ರ ಅಧ್ಯಯನದ ಪಠ್ಯಸಾಮಗ್ರಿಗಳು' ಎಂಬ ಮಹಾಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಮೊದಲನೆಯ ಅಧ್ಯಾಯವು ಪ್ರವೇಶ ಎಂದಿದ್ದು ಇದು ಐದು ಅಂಶಗಳನ್ನು ಒಳಗೊಂಡಿರುತ್ತದೆ. ಒಂದನೆಯ ಅಂಶವು ಅಧ್ಯಯನದ ಉದ್ದೇಶಗಳನ್ನು ತಿಳಿಸುತ್ತದೆ. ಎರಡನೆಯ ಅಂಶದಲ್ಲಿ ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಅಧ್ಯಯನದ ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಮೂರನೆಯ ಅಂಶವು ಅಧ್ಯಯನದ ವಿಧಾನವನ್ನು ಕುರಿತು ತಿಳಿಸಲಾಗಿದೆ. ಅಧ್ಯಯನಗಳ ವಿನ್ಯಾಸವು ನಾಲ್ಕನೆಯ ಅಂಶದಲ್ಲಿದೆ. ಕೊನೆಯ ಅಂಶದಲ್ಲಿ ಅಧ್ಯಯನದ ಮಿತಿಗಳನ್ನು ಹೇಳಲಾಗಿದೆ.

ಅಧ್ಯಾಯ ಎರಡರಲ್ಲಿ ಪಠ್ಯಬರಹಗಳ ಸ್ವರೂಪ ಮತ್ತು ಬೆಳವಣಿಗೆ ಎಂದಿರುತ್ತದೆ. ಇದರಲ್ಲಿ ಮೂರು ಅಂಶಗಳನ್ನು ಚರ್ಚಿಸಲಾಗಿದೆ. ಪಠ್ಯದ ಇತಿಹಾಸವನ್ನು ಮೊದಲನೆಯ ಅಂಶದಲ್ಲಿ ವಿವರಿಸಲಾಗಿದೆ. ಎರಡನೆಯ ಅಂಶದಲ್ಲಿ ಅರ್ಥಶಾಸ್ತ್ರವನ್ನು ಕನ್ನಡದಲ್ಲಿ ಬೋಧನೆ ಆರಂಭ ಮಾಡಿದ ಇತಿಹಾಸ ಕುರಿತು ಪರಿಶೀಲಿಸಲಾಗಿದೆ. ಮೂರನೆಯ ಮತ್ತು ಕೊನೆಯ ಅಂಶವಾಗಿ ಪಠ್ಯಬರಹಗಳ ಸ್ವರೂಪ ಮತ್ತು ಬೆಳವಣಿಗೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯ ಪಠ್ಯ ಸಾಮಗ್ರಿಗಳ ತೌಲನಿಕ ವಿಶ್ಲೇಷಣೆ ಎಂದಿದ್ದು ಇದರಲ್ಲಿ ಒಂಬತ್ತು ಅಂಶಗಳನ್ನು ಚರ್ಚಿಸಲಾಗಿದೆ. ಒಂದನೆಯ ಅಂಶದಲ್ಲಿ ಬಯಕೆಯನ್ನು ಕುರಿತು ವಿವೇಚಸಲಾಗಿದೆ. ಎರಡನೆಯ ಅಂಶ ಅನುಭೋಗ ಕುರಿತದ್ದಾಗಿದೆ. ಬೇಡಿಕೆಯನ್ನು ನಾಲ್ಕನೆಯ ಅಂಶವಾಗಿ ವಿಶ್ಲೇಷಣೆ ಮಾಡಲಾಗಿದೆ. ಐದನೆಯದಾಗಿ ಪೂರೈಕೆಯನ್ನು ವಿವರಿಸಲಾಗಿದೆ. ಹಣವನ್ನು ಕುರಿತಂತೆ ಆರನೆಯ ಅಂಶದಲ್ಲಿ ಕೃಷಿಯ ವಿವರಣೆ ಚರ್ಚಿಸಿದ್ದಿದೆ. ಏಳನೆಯ ಅಂಶದಲ್ಲಿ ಕೈಗಾರಿಕೆಯ ಕುರಿತಂತೆ ಪರಿಶೀಲಿಸಲಾಗಿದೆ. ಬ್ಯಾಂಕಿನ ಬಗ್ಗೆ ಪರಿಶೀಲನೆ ಎಂಟನೆಯ ಅಂಶದಲ್ಲಿದೆ. ಕೊನೆಯ ಅಂಶದಲ್ಲಿ ವಿದೇಶಿ ವ್ಯಾಪಾರವನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯ ಪಠ್ಯ ಸಾಮಗ್ರಿಗಳು ಭಾಷೆ ಎಂಬುದಾಗಿದೆ. ಇದು ನಾಲ್ಕು ಅಂಶಗಳನ್ನು ಒಳಗೊಂಡಿರುತ್ತದೆ. ವಿಶಿಷ್ಟ ಪದಗಳನ್ನು ಕುರಿತು ಮೊದಲನೆಯದಾಗಿ ಚರ್ಚಿಸಲಾಗಿದೆ. ಎರಡನೆಯದಾಗಿ ಆಡು ಭಾಷೆಯ ಪದಗಳನ್ನು ಪರಿಶೀಲಿಸಲಾಗಿದೆ. ನಿರೂಪಣೆ ಮತ್ತು ವಿಶ್ಲೇಷಣೆ ಕುರಿತಂತೆ ಮೂರನೆಯ ಅಂಶದಲ್ಲಿ ಚರ್ಚಿಸು ಪ್ರಯತ್ನ ಮಾಡಲಾಗಿದೆ. ನಾಲ್ಕನೆಯದಾಗಿ ವಾಕ್ಯಗಳ ರಚನೆಯನ್ನು ಕುರಿತು ಪರಿಶೀಲಿಸಲಾಗಿದೆ.

ಐದನೆಯ ಅಧ್ಯಾಯ ಪಾರಿಭಾಷಿಕ ಪದಗಳ ವಿಶ್ಲೇಷಣೆ ಎಂಬುದಾಗಿದೆ. ಇದು ಏಳು ವಿವಿಧ ಅಂಶಗಳನ್ನು ಒಳಗೊಂಡಿರುತ್ತದೆ. ಸ್ವೀಕರಣ ಎಂಬುದು ಮೊದಲ ಅಂಶ. ಎರಡನೆಯದಾಗಿ ಸ್ಥಾನಾಂತರ ಭಾಷಾಂತರದ ವಿಶ್ಲೇಷಣೆ ಮಾಡಲಾಗಿದೆ. ಮಿಶ್ರ ಸ್ವೀಕರಣವು ಮೂರನೆಯದಾಗಿದೆ. ನಾಲ್ಕನೆಯ ಅಂಶದಲ್ಲಿ ಸಮನಾರ್ಥಕ ಅಥವಾ ಪರ್ಯಾಯ ಪದಗಳನ್ನು ವಿವರಿಸಲಾಗಿದೆ. ವಿವರಣಾತ್ಮಕ ಭಾಷಾಂತರವನ್ನು ಐದನೆಯ ಅಂಶವಾಗಿ ಚರ್ಚಿಸಲಾಗಿದೆ. ಸಾಮಾನ್ಯ ಪದಗಳನ್ನು ಆರನೆಯದರಲ್ಲಿ ವಿವರಿಸಿದೆ. ಏಳನೆಯ ಮತ್ತು ಕೊನೆಯದಾಗಿ ಪರಿಕಲ್ಪನೆಗಳನ್ನು ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯ ಉಪಸಂಹಾರಗಳೆಂಬುದಾಗಿದೆ. ಮೊದಲನೆಯ ಅಂಶವು ಫಲಿತ ಇದು ಅಧ್ಯಯನದ ವಿವಿಧ ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಗಳನ್ನು ಒಳಗೊಂಡಿರುತ್ತದೆ. ಅನುಬಂಧದಲ್ಲಿ ಮೂರು ಅಂಶಗಳಿರುತ್ತವೆ. ಮೊದಲನೆಯದಾಗಿ ಅರ್ಥಶಾಸ್ತ್ರ ಪಾರಿಭಾಷಿಕ ಪದಕೋಶ, ಎರಡರಲ್ಲಿ ಪಿಯುಸಿ ಮತ್ತು ಪದವಿ ತರಗತಿಯ ಪಠ್ಯಕ್ರಮ ನೀಡಲಾಗಿದೆ. ಕೊನೆಯದಾಗಿ ಅಧ್ಯಯನದಲ್ಲಿ ಬಳಸಿದ ಗ್ರಂಥಗಳ ಪಟ್ಟಿಯನ್ನು ಗ್ರಂಥಋಣದಲ್ಲಿ ಹೇಳಲಾಗಿದೆ.

**ಪಠ್ಯಬರಹಗಳ ಸ್ವರೂಪ ಮತ್ತು ಬೆಳವಣಿಗೆ**

ಪ್ರತಿಯೊಂದು ವಿಷಯವೂ ತನ್ನದೆ ಇತಿಹಾಸ ಪರಂಪರೆಯನ್ನು ಹೊಂದಿರುತ್ತದೆ. ವಸಾಹತು ಸಂದರ್ಭದಲ್ಲಿ ಶಿಕ್ಷಣ ಪಡೆಯುವುದು ಎಲ್ಲ ಭಾರತೀಯರಿಗೂ ಸಾಧ್ಯವಾಗುತ್ತಿರಲಿಲ್ಲ. ಸಮಾಜದ ಉನ್ನತ ವರ್ಗದವರು ಮತ್ತು ಉನ್ನತ ಮಧ್ಯಮ ವರ್ಗದವರಿಗೆ ಇದು ಸಾಧ್ಯವಾಯಿತು. ಶಿಕ್ಷಣ ಪಡೆದ ಉನ್ನತ ಮಧ್ಯಮ ವರ್ಗದವರು ತಮ್ಮ ದೇಶದ ಭಾಷೆಯಲ್ಲಿ ಪಠ್ಯಗಳ್ನು ಭಾಷಾಂತರಿಸಲು ಆರಂಭಿಸಿದರು. ಕನ್ನಡ ಅರ್ಥಶಾಸ್ತ್ರದ ಪಠ್ಯಗಳೂ ಇದೆ ಸಂದರ್ಭದಲ್ಲಿ ರೂಪುಗೊಂಡವು. ಈ ಭಾಷಾಂತರಕಾರರು ತಮ್ಮ ಪ್ರದೇಶದಲ್ಲಿ ಈಗಾಗಲೇ ಬಳಕೆಯಲ್ಲಿದ್ದ ಪದಗಳನ್ನು ಇಂಗ್ಲಿಷ್ ಪಠ್ಯದಲ್ಲಿನ ಪದಗಳಿಗೆ ಸಂವಾದಿಯಾಗಿ ಬಳಸಿಕೊಂಡು ಪಠ್ಯ ಸಾಮಗ್ರಿಗಳನ್ನು ರಚಿಸಿದ್ದಾರೆ. ಲಭ್ಯವಾದ ದಾಖಲೆಯ ಆಧಾರದಲ್ಲಿ ಈ ಪ್ರಕ್ರಿಯೆ ಐವತ್ತರ ದಶಕದಲ್ಲಿ ನಡೆದಿದೆಂದು ತಿಳಿದುಬರುತ್ತದೆ. ಅನಂತರ ಭಾಷಾಂತರ ಚಟುವಟಿಕೆಗಳು ಚುರುಕುಗೊಂಡಿವೆ. ಆಯಾ ಪ್ರಾಂತೀಯ ಭಾಷೆಯ ಮೂಲಕ ಶಿಕ್ಷಣ ದೊರಕಿದರೆ ಅದು ಪರಿಣಾಮಕಾರಿಯಾಗಿರುತ್ತದೆ ಎಂಬ ಶಿಕ್ಷಣ

ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಆಗ ಸ್ವತಂತ್ರ ಭಾರತದ ಸರಕಾರ ಅಧಿಕೃತ ಆದೇಶ ನೀಡಿದೆ. ಅಂದಿನ ವಿಶ್ವವಿದ್ಯಾಲಯಗಳು ಭಾಷಾಂತರ ಪ್ರಕ್ರಿಯೆಯು ತನ್ನ ಕಾರ್ಯದ ಒಂದು ಭಾಗವೆಂದು ಭಾವಿಸಿ ಬಹಳ ಶ್ರದ್ಧೆಯಿಂದ ಮತ್ತು ಹೊಣೆಗಾರಿಕೆಯಿಂದ ನಿಭಾಯಿಸಿದವು. ತನ್ನ ಸಿಬ್ಬಂದಿಯಿಂದ ಭಾಷಾಂತರಿಸಿ ಪಠ್ಯಪುಸ್ತಕಗಳು ಮತ್ತು ಸಂದರ್ಭ ಗ್ರಂಥಗಳನ್ನು ಪ್ರಕಟಿಸಿ ಪೂರೈಸಿದವು. ನಂತರ ಈ ಕಾರ್ಯ ಸ್ಥಗಿತಗೊಂಡು ಖಾಸಗಿ ಪ್ರಕಾಶಕರ ಮೂಲಕ ಚಾಲನೆ ಪಡೆಯಿತು. ಇದು ಎಂಬತ್ತರ ದಶಕದಿಂದ ವಿಸ್ತಾರವಾಗುತ್ತ ಇಂದು ವೈವಿಧ್ಯತೆಯ ಪ್ರಮಾಣದಲ್ಲಿ ಪಠ್ಯಗಳು ಮಾರುಕಟ್ಟೆ ಪ್ರವೇಶಿಸಿವೆ. ಭಾಷೆಗೆ ಸಂಬಂಧಿಸಿದ ಪಠ್ಯಗಳನ್ನು ವಿಶ್ವವಿದ್ಯಾಲಯಗಳು ರೂಪಿಸಿ ಪ್ರಕಟಿಸುತ್ತಿವೆ. ಉಳಿದಂತೆ ಪಠ್ಯಕ್ರಮ ಮಾತ್ರ ರೂಪುಗೊಳ್ಳುತ್ತಿವೆ. ಪದವಿಪೂರ್ವ ಶಿಕ್ಷಣ ಇಲಾಖೆಯೂ ಇದೆ ಮಾದರಿಯನ್ನು ಅನುಸರಿಸುತ್ತಿದೆಯಾದರೂ ೨೦೧೩ರಿಂದ ಎಲ್ಲ ಪಠ್ಯಗಳನ್ನು ಪ್ರಕಟಿಸಲು ಆರಂಭಿಸಿದೆ.

ಶಿಕ್ಷಣ ರಂಗದಲ್ಲಿ ಬೋಧನೆಯು ಪ್ರಮುಖ ಪಾತ್ರವಹಿಸುತ್ತದೆ. ಬ್ರಿಟಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ಆರ್ಥಿಕ ಚಿಂತನೆಗಳ ಅಧ್ಯಯನ ಆರಂಭವಾಯಿತು. ಆಗ ಇಂಗ್ಲಿಷ್ ಭಾಷೆಯನ್ನು ಅರಗಿಸಿಕೊಳ್ಳುವ ಸಮುದಾಯ ಶಿಕ್ಷಣ ಪಡೆಯಲು ಸಾಧ್ಯವಾಗಿತ್ತು. ಭಾರತವು ಸ್ವತಂತ್ರ ಪಡೆದ ಬಳಿಕವೂ ಬೋಧನೆ ಇಂಗ್ಲಿಷ್ ಮಾಧ್ಯಮದ ಮೂಲಕ ಸಾಗಿತ್ತು. ಜನಸಾಮಾನ್ಯರೂ ಈ ವೇಳೆಗೆ ಶಿಕ್ಷಣ ಪಡೆಯುವ ಬಯಕೆ ಹೊಂದಿದ್ದರು. ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುವವರ ಮತ್ತು ಬೋಧಿಸಬೇಕೆನ್ನುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಾ ಸಾಗಿದರೂ ಅಧಿಕೃತವಾಗಿರಲಿಲ್ಲ. ಎಪ್ಪತ್ತರ ದಶಕದಲ್ಲಿ ಅನುಮಾನದಿಂದ ವಿಶ್ವವಿದ್ಯಾಲಯಗಳು ಕನ್ನಡದಲ್ಲಿ ಬೋಧನೆಗೆ ಅವಕಾಶ ಕಲ್ಪಿಸಿತು. ದಶಕದ ನಂತರ ಎಲ್ಲ ಹಂತಗಳಲ್ಲಿ ಅಧಿಕೃತವಾಗಿ ಬೋಧನಾ ಪ್ರಕ್ರಿಯೆ ಆರಂಭವಾಯಿತು. ಆದರೂ ಸಹಿತ ಇಂದಿಗೂ ಇಂಗ್ಲಿಷ್ ಮಾಧ್ಯಮದ ಪ್ರಭಾವ ಕಡಿಮೆಯಾಗಿಲ್ಲ. ಅರ್ಥಶಾಸ್ತ್ರವು ವಿಶ್ವಮಾದರಿಯ ವಿಷಯವಸ್ತುಗಳನ್ನು ಹೊಂದಿರುವುದರಿಂದ ಕನ್ನಡದಲ್ಲಿ ಬೋಧನೆ ಮತ್ತು ಕಲಿಕೆಯಲ್ಲಿ ತೊಡಕುಗಳಿವೆ. ಬೋಧನೆ ಸರಾಗವಾಗಿ ಸಾಗಬೇಕೆಂದರೆ ಪಠ್ಯವು ಹೊಂದಿರುವ ವಿಷಯದ ಪಾರಿಭಾಷಿಕ ಪದಗಳು ಸಂವಹನಕ್ಕೆ ಸೂಕ್ತವಾಗಿರಬೇಕಾಗುತ್ತದೆ. ಪಾಶ್ಚಾತ್ಯ ಆರ್ಥಿಕ ಚಿಂತನೆಗಳು ಭಾರತೀಯ ಪರಿಸರದ ಪರಿಭಾವನೆಯನ್ನು ಬೆಸೆಯುವ ಕನ್ನಡ ಪಠ್ಯಸಾಮಗ್ರಿಗಳ ಪೂರೈಕೆಯ ಅಗತ್ಯತೆ ಪ್ರಮುಖವಾದದ್ದು. ಎಪ್ಪತ್ತರ ದಶಕದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಅಧಿಕೃತವಾಗಿ ಬೋಧನೆ ಮತ್ತು ಕಲಿಕೆಯನ್ನು ಕನ್ನಡದಲ್ಲಿ ಐಚ್ಛಿಕವಾಗಿರಿಸಿತು. ಉಳಿದ ವಿಶ್ವವಿದ್ಯಾಲಯಗಳು ಈ ಮಾದರಿಯಲ್ಲಿ ಇದ್ದವು. ಕನ್ನಡದಲ್ಲಿ ಬೋಧಿಸುವುದು ಕೆಲವರಿಗೆ ಆಸಕ್ತಿ ಇದ್ದಂತೆ ನಿರಾಸಕ್ತಿಯೂ ಆರಂಭದಲ್ಲಿ ಕಂಡುಬಂದಿತು.

ಕಾಲಮಾಗಿದಂತೆ ಇದು ಬದಲಾಗಿದೆ. ಇಂದು ಕನ್ನಡದಲ್ಲಿ ಬೋಧನೆ ನಿರ್ಗಳವಾಗಿ ಎನ್ನದಿದ್ದರೂ ಸರಳವಾಗಿ ನಡೆಯುತ್ತವೆ. ಇದರ ಬೇಡಿಕೆಯು ಇದೆ.

ಕನ್ನಡದಲ್ಲಿನ ಅರ್ಥಶಾಸ್ತ್ರದ ಬರಹಗಳ ಆರಂಭದ ಸ್ವರೂಪಕ್ಕೂ ಇಂದಿನ ಸ್ವರೂಪಕ್ಕೂ ತುಂಬ ಅಂತರ ಕಂಡುಬರುತ್ತದೆ. ಐವತ್ತರ ದಶಕದಲ್ಲಿ ಭಾಷಾಂತರ ಪ್ರಕ್ರಿಯೆ ಆರಂಭವಾದಾಗ ಸಾಧ್ಯವಾದಷ್ಟು ಎಲ್ಲವನ್ನೂ ಕನ್ನಡೀಕರಿಸಬೇಕೆಂಬ ಹಂಬಲ ಹವ್ಯಾಸಿ ಅನುವಾದಕರಲ್ಲಿ ಇತ್ತು. ಪಠ್ಯಗಳಲ್ಲಿ ಬಳಸಬೇಕಾದ ಕೋಷ್ಟಕಗಳ ಸಂಖ್ಯೆ ಮತ್ತು ಅದರಲ್ಲಿನ ಅಂಕಿ-ಸಂಖ್ಯೆಗಳನ್ನು ಕನ್ನಡೀಕರಿಸಿದ್ದಾರೆ. ರೇಖಾ ಚಿತ್ರಗಳಲ್ಲಿ ಬಳಸುವ ಸಂಕೇತಾಕ್ಷರಗಳೂ ಕನ್ನಡದಲ್ಲಿವೆ. ಇಡೀ ಪಠ್ಯವನ್ನು ಕನ್ನಡಮಯವಾಗಿ ರೂಪಿಸಲಾಗಿದೆ. ಆಗ ಬಳಕೆಯಲ್ಲಿದ್ದ ಕನ್ನಡ ಪದಗಳನ್ನು ಇಂಗ್ಲಿಷ್ ಪದಗಳಿಗೆ ಸಂವಾದಿಯಾಗಿ ಬಳಸಲಾಗಿದೆ. ಪಠ್ಯಕ್ಕಾಗಿ ಹೊಸ ಹೊಸ ಪದಗಳನ್ನು ಸೃಷ್ಟಿಸಲಾಗಿದೆ. ಹೊಸ ಪದಗಳು ನಿಲುಕದ ಸಂದರ್ಭದಲ್ಲಿ ಇಂಗ್ಲಿಷ್ ಪದವನ್ನೇ ಕನ್ನಡದ ರೂಪಕೊಟ್ಟು ಉಪಭೋಗಿಸಿರುವುದನ್ನು ದಾಖಲೆಗಳು ಹೇಳುತ್ತವೆ. ಕಾಲ ಪಲ್ಲಟಗೊಂಡಂತೆ ಬರಹಗಳ ಸ್ವರೂಪವೂ ಬದಲಾಗಿದೆ. ಅನೇಕ ಪದಗಳು ಪರ್ಯಾಯವಾಗಿ ಬಳಕೆಗೆ ಬಂದಿವೆ. ಪಾರಿಭಾಷಿಕ ಸಂದರ್ಭದಲ್ಲಿ ಆ ಪದದ ಮುಂದೆ ಆವರಣದಲ್ಲಿ ಇಂಗ್ಲಿಷ್ ಪದ ಬಳಕೆಯಾಗುತ್ತದೆ. ಕನ್ನಡದ ಪದ ಸರಿಯಾಗಿ ಗ್ರಹಿಸಲು ಸಾಧ್ಯವಾಗದಿದ್ದಾಗ ಇಂಗ್ಲಿಷ್ ಪದ ಈ ಕೊರತೆಯನ್ನು ತಕ್ಷಣ ನಿಗಿಸುತ್ತದೆ. ವಿಭಿನ್ನವಾದ ದೃಷ್ಟಾಂತಗಳು, ಉದಾಹರಣೆಗಳನ್ನು ವಾಸ್ತವಕ್ಕೆ ಹತ್ತಿರವಾದ ವಿಚಾರಗಳೊಂದಿಗೆ ವಿಶ್ಲೇಷಿಸಲಾಗುತ್ತಿದೆ. ಪಠ್ಯ ಸಾಮಗ್ರಿಗಳ ಬೆಳವಣಿಗೆ ಸಾಕಷ್ಟು ವಿಸ್ತಾರವಾಗಿದೆ.

**ಪಠ್ಯಸಾಮಗ್ರಿಗಳ ತೌಲನಿಕ ವಿಶ್ಲೇಷಣೆ :** ಕನ್ನಡ ಭಾಷಾಂತರ ಪರಂರಂಪರೆಯು ಜಗತ್ತಿನ ಯಾವುದೇ ಭಾಷೆಗೆ ಸರಿಗಟ್ಟಬಲ್ಲ ಶ್ರೀಮಂತ ಪರ ಪರೆಯಾಘಿ ಬೆಳೆದು ಬಂದಿದೆಂಬ ವಿಚಾರವನ್ನು ಅರ್ಥಶಾಸ್ತ್ರದ ಸಂದರ್ಭದಲ್ಲಿ ಗುರುತಿಸಲು ಅವಕಾಶವಿದೆ. ಎಪ್ಪತ್ತರ ದಶಕದವರೆಗೆ ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳು ಕನ್ನಡದಲ್ಲಿ ಕಡಿಮೆ ಪ್ರಮಾಣದಲ್ಲಿದ್ದವು. ಆಗ ಭಾಷಾಂತರಕಾರರು ಬೆರಳೆಣಿಕೆಯಲ್ಲಿದ್ದರು. ಪಠ್ಯಗಳು ಅವರ ಭಾಷಾ ಮಿತಿಯಲ್ಲಿರುತ್ತಿದ್ದವು. ಪಠ್ಯಗಳ ಸಂಖ್ಯೆ ತೀರಾ ಕಡಿಮೆ ಇರುವಾಗ ಅವುಗಳ ತೌಲನಿಕ ವಿಶ್ಲೇಷಣೆಯ ಅಗತ್ಯವಿರುತ್ತಿರಲಿಲ್ಲ. ಅಲ್ಲದೇ ಅರ್ಥಶಾಸ್ತ್ರದ ಕೆಲವು ಪಠ್ಯಗಳನ್ನು ಒಬ್ಬಬ್ಬರು ಮಾತ್ರ ರೂಪಿಸಲಾಗುತ್ತಿತ್ತು. ಇದರಿಂದ ಅರ್ಥಶಾಸ್ತ್ರವನ್ನು ಅಧ್ಯಯನ ಕೈಗೊಂಡ ವಿದ್ಯಾರ್ಥಿಗಳು ಌಅನಿವಾರ್ಯ'ವೆಂಬಂತೆ ಅವುಗಳನ್ನು ಬಳಸಬೇಕಾಗಿತ್ತು. ಅವುಗಳಲ್ಲಿ ಬಳಸಿದ ಭಾಷೆ, ವಿಷಯ, ನಿರೂಪಣೆ ಮತ್ತು ವಿಶ್ಲೇಷಣೆ ಹೇಗೆ ಇದ್ದರೂ ಅವು ಒಪ್ಪಿತವಾಗಿರುತ್ತಿದ್ದವು. ಈಗ ಇಂಥ ವಿಚಾರಗಳಿಗೆ ಅವಕಾಶವಿಲ್ಲವೆನ್ನಬಹುದು.

ಈ ಅಧ್ಯಾಯದಲ್ಲಿ ಅರ್ಥಶಾಸ್ತ್ರದ ವಿದ್ಯಾರ್ಥಿ ತಿಳಿದಿರಲೇಬೇಕಾದ ಅನೇಕ ವಿಷಯವಸ್ತುಗಳಲ್ಲಿ ಪ್ರಮುಖವೆನಿಸುವ ಕೆಲವನ್ನು ಮಾದರಿಗಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಆಯ್ಕೆ ಮಾಡಿಕೊಂಡ

ವಿಷಯವಸ್ತುವನ್ನು ಕುರಿತು ಬೇರೆ ಬೇರೆ ಭಾಷಾಂತರಕಾರರು ರೂಪಿಸಿರುತ್ತಾರೆ. ರೂಪಿತ ಪಠ್ಯಗಳ ವಿದ್ಯಾರ್ಥಿಗಳ ದೃಷ್ಟಿಯಿಂದ ಹೇಗೆ ರೂಪಿಸಲ್ಪಟ್ಟಿವೆ ಎಂಬುದನು ಪರಿಶೀಲಿಸಲಾಗಿದೆ. ಅದರಂತೆ ಬೋಧಕರ ಮತ್ತು ಇತರ ಅಧ್ಯಯನಕಾರರಿಗೆ ಯಾವ ವಿಧದಲ್ಲಿ ಬಳಕೆಯಾಗುತ್ತವೆಂಬುದನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಇಲ್ಲಿ ಒಂಭತ್ತು ವಿಷಯವಸ್ತುಗಳನ್ನು ಗುರುತಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮೊದಲನೆಯದಾಗಿ 'ಹಣ'ವನ್ನು ಕುರಿತು ಭಾಷಾಂತರಿಸಿದ ಪಠ್ಯಸಾಮಗ್ರಿಗಳಲ್ಲಿ ಹಣದ ಪರಿಕಲ್ಪನೆಗಾಗಿ ಬಳಸಿದ ಭಾಷೆ ಸರಳವಾಗಿದೆ. ಹಣವನ್ನು ಕುರಿತು ವಾಖ್ಯೆಗಳನ್ನು ಭಾಷಾಂತರಿಸುವಾಗ ಕೆಲವು ಪರಿಭಾಷೆಗಳು ಭಿನ್ನವಾಗಿರುವಂತೆ ಸಾಮ್ಯತೆ ಹೊಂದಿರುವುವೂ ಇವೆ. ಕನ್ನಡ ಪದಗಳೊಂದಿಗೆ ಸಂಸ್ಕೃತದ ಪದಗಳಿವೆ. ಉದಾ: ರಾಜಸ್ವ, ಸೊತ್ತು, ಗ್ರಾಹ್ಯತೆ, ಅವಿನಾಶಿ, ವಿಭಾಜ್ಯತೆ, ಮುಂದುಡಲ್ಪಟ್ಟ ಸಂದಾಯದ ಅಳತೆಗೋಲು ಇತ್ಯಾದಿಗಳು ಭಾಷಾಂತರಕಾರರು ಹಣದ ಸಿದ್ಧಾಂತವನ್ನು ನಿರೂಪಿಸಲು ಬಳಸಿದ ಭಾಷೆ ಸರಳವಾಗಿದೆ. ವಿಷಯ ವಿಶ್ಲೇಷಣೆಯು ಅಧ್ಯಾಯನಕಾರರಿಗೆ ಉಪಯುಕ್ತವಾಗುವಂತೆ ಭಾಷಾಂತರಿಸುತ್ತಾರೆ. ಅರ್ಥಶಾಸ್ತ್ರದ ಕೇಂದ್ರ ಬಿಂದುವೆನಿಸಿದ ಬಯಕೆಯನ್ನು ಕುರಿತಾದ ಭಾಷಾಂತರ ಪಠ್ಯಗಳನ್ನು ಅನುವಾದಕರು ಸೊಗಸಾಗಿ ಭಾಷಾಂತರಿಸುತ್ತಾರೆ. ಈ ಪಠ್ಯಗಳು ಬೇರೆ ಬೇರೆ ಪ್ರಾದೇಶಿಕ ಭಾಷೆ ಬಳಕೆ ಮಾಡಿದ ಭಾಷಾಂತರವೆಂದು ಸುಲಭವಾಗಿ ಗುರುತಿಸುವಂತಿವೆ. ಇವುಗಳಲ್ಲಿನ ದೃಷ್ಟಾಂತಗಳು ವಿಶಿಷ್ಟ ಪದ ಬಳಕೆಗೆ ಒಳಪಟ್ಟಿದೆ. ವಿಶೇಷವಾಗಿ ಬಯಕೆಯ ಪರಿಕಲ್ಪನೆಯನ್ನು ಕಟ್ಟಿಕೊಡುವಲ್ಲಿ ಭಾಷೆ 'ಐಡೆಂಟಿ' ಎನಿಸುವಂತೆ ಕೆಲವರ ಭಾಷಾಂತರದಲ್ಲಿ ಕಂಡುಬರುತ್ತದೆ. ಈ ಪಠ್ಯಗಳು ಭಾಷಾಂತರದವು ಆಗಿದ್ದರೂ, ಹಾಗೆ ಅನಿಸುವುದಿಲ್ಲ. ಇಂಗ್ಲಿಷ ಪಠ್ಯಗಳನ್ನು ಕನ್ನಡಿಕರಿಸುವಾಗ ಸೃಜನಶೀಲತೆಯ ಬಳಕೆ ಕಂಡುಬರುತ್ತದೆ. ವಿದ್ಯಾರ್ಥಿಗಳಿಗೆ ಉಪಯುಕ್ತವೆನಿಸುತ್ತವೆ. ಕೆಲವು ಸಂಕ್ಷಿಪ್ತವಾಗಿವೆ.

ಆರ್ಥಿಕ ಚಟುವಟಿಕೆಗೆ 'ಅನುಭೋಗ'ವೇ ಪ್ರಧಾನ. ಅನುಭೋಗವಿಲ್ಲದಿದ್ದರೆ ಏನೂ ಇಲ್ಲ ಎಂಬುದನ್ನು ತಿಳಿಸುವ ಈ ಪಠ್ಯ ಭಾಗದ ಭಾಷಾಂತರ ಆಕರ್ಷಕ ಉದಾಹರಣೆಗಳಿಂದ ಕೂಡಿದೆ. ಅನುಭೋಗದ ಪರಿಕಲ್ಪನೆಯಲ್ಲಿ ಬಳಸಿದ ಕೆಲವು ಪುಟಗಳು ಭಿನ್ನವಾಗಿವೆ. ಹೆಚ್ಚಿನ ಪಠ್ಯಗಳು ಉಪಯುಕ್ತವಾಗಿವೆ. ಅನುಭೋಗದ ವಿಧಗಳನು ಪರಿಚಯ ಮಾಡುವ ಭಾಷಾಂತರವು ಕೆಲವು ಕಡೆಗೆ ಗೊಂದಲ ಬರುವಂತೆ ಮಾಡಿವೆ. ಎರಡು ವಿಧ ಮತ್ತು ಮೂರು ವಿಧ ಎಂಬುದಾಗಿವೆ. ಇವುಗಳಲ್ಲಿ ಯಾವುದು ಸರಿ, ಏಕೆ? ಎಂಬುದರ ಕುರಿತು ವಿವರಗಳಿಲ್ಲ. ಮತ್ತೆ ಕೆಲವು ಭಾಷಾಂತರಕಾರರು ಸ್ಪಷ್ಟತೆ ನೀಡಿದ ಭಾಷಾಂತರಗಳಿವೆ. ಅವರ ಪ್ರಕಾರ ಪ್ರತ್ಯಕ್ಷ ಅನುಭೋಗ ಮತ್ತು ಪರೋಕ್ಷ ಅನುಭೋಗಗಳನ್ನು ಹೇಳಿದ್ದಾರೆ. ಮೂರನೇ ವಿಧದ ಅನುಭೋಗ ಇರುವುದಿಲ್ಲ. ಆದರೆ ಅನುಭೋಗಿಸದೇ ಬೇರೆ ಬೇರೆ ಕಾರಣಗಳಿಂದ ನಷ್ಟವಾಗುವ ತುಷ್ಟಿಗುಣವು ನಿರರ್ಥಕವಾಗುತ್ತದೆ. ಅನುಭೋಗದಲ್ಲಿ ನಷ್ಟವಾಗುವುದಕ್ಕೂ, ಈ ರೀತಿಯಲ್ಲಿ ನಷ್ಟವಾಗುವುದಕ್ಕೂ ಅಂತರ ಗುರುತಿಸಿ

ವಿವರಣೆಯ ಭಾಷಾಂತರ ನೀಡುತ್ತಾರೆ. ಇಂಥ ಪಠ್ಯಗಳು ಅಧ್ಯಯನಕಾರರ ಸಂಶಯಗಳನ್ನು ನಿವಾರಣೆ ಮಾಡುತ್ತವೆ. ಆದ್ದರಿಂದ ಭಾಷಾಂತರದ ಪಠ್ಯಗಳು ಅಗತ್ಯವಾದರೂ ಅವು ಸಮಸ್ಯೆಗಳನ್ನು ಹುಟ್ಟುಹಾಕುವಂತಿರಬಾರದು. 'ಬೇಡಿಕೆ'ಯ ಪರಿಭಾಷೆಗಳಲ್ಲಿ ಕೆಲವು 'ಬಯಕೆ'ಯ ಪರಿಕಲ್ಪನೆಯನ್ನೇ ಕಟ್ಟಿಕೊಡುವಂತಿವೆ. ಇಂಥ ಭಾಷಾಂತರಗಳು ಅಧ್ಯಯನದಲ್ಲಿ ತೊಡಗಿರುವವರಿಗೆ ಗೊಂದಲವಾಗುವುದಿದೆ. ಬೇಡಿಕೆಯ ವಿಧಗಳ, ಬೇಡಿಕೆಯ ಸ್ಥಿತಿಸ್ಥಾಪಕತ್ವದ ವಿಧಗಳೆಂದು ಬಿಂಬಿಸುವ ಭಾಷಾಂತರಿತ ಪಠ್ಯಗಳಿವೆ. ಭಾಷಾಂತರದ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯ ಬಳಕೆ ಅಗತ್ಯವೆಂಬುದು ನಿಜ. ಅದು ಸ್ಥಳೀಯ ಓದುಗರ ಆಶೋತ್ತರಗಳನ್ನು ಇಡೇರಿಸಬೇಕಾದ ಜರೂರು ಹೌದು. ಆದರೆ ಈ ಪಠ್ಯಗಳು ಪ್ರಾದೇಶಿಕ ಮಿತಿಯಲ್ಲಿ ನಿಲ್ಲಬಾರದು. ಈ ವಿಚಾರವನ್ನು ಇನ್ನೂ ಕೆಲವು ಅನುವಾದಕರು ಬಳಸಿಕೊಂಡಿದ್ದಾರೆ. ತೀರಾ ಪ್ರಾದೇಶಿಕವಲ್ಲದ ಹಾಗೂ ತೀರಾ ಸ್ಟ್ಯಾಂಡರ್ಡ್ ಅಲ್ಲದಿರುವ ಭಾಷೆಯನ್ನು ಬಳಸಿ ಭಾಷಾಂತರಿಸಿದ ಪಠ್ಯಸಾಮಗ್ರಿಗಳೂ ಇವೆ. ಈ ಪಠ್ಯಗಳಲ್ಲಿ ಬಳಸಿದ ಸಾಂದರ್ಭಿಕ ರೇಖಾಚಿತ್ರಗಳು ಮಹತ್ವ ಪಡೆಯುತ್ತವೆ. ಬೇಡಿಕೆ ಮತ್ತು ಪೂರೈಕೆಗಳ ಪರಿಭಾಷೆ ಬೇರೆ ಬೇರೆ ಸಂದರ್ಭಗಳಲ್ಲಿ ಸಾಮ್ಯತೆ ಮತ್ತು ವೈಶಿಷ್ಟತೆ ಹೊಂದಿರುತ್ತವೆ. ಭಾಷಾಂತರಕಾರರು ಈ ಸಂದರ್ಭಗಳನ್ನು ಸರಿಯಾಗಿ ಬಳಸಿಕೊಂಡಿದ್ದು ಕಂಡುಬರುತ್ತದೆ. ಭಾಷಾಂತರಕಾರರು ಈ ಎರಡು ಅಧ್ಯಾಯಗಳನ್ನು ಅದೇ ಮಾದರಿಯಲ್ಲಿ ರೂಪಿಸಿರುತ್ತಾರೆ. ಇದು ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ಸಾಧ್ಯತೆಗಳೇ ಹೆಚ್ಚು. ಇಂಥ ಅಂಶಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

'ಕೃಷಿ'ಯ ಕುರಿತಾದ ಭಾಷಾಂತರಗಳ ಪರಿಭಾಷೆ ಸರಳವಾಗಿವೆ. ಸಾಮಾನ್ಯವಾಗಿ ಕೃಷಿ ಮೂಲ ಕುಟುಂಬಗಳಿಂದ ಬಂದ ವಿದ್ಯಾರ್ಥಿಗಳೇ ಅಧಿಕವಾಗಿರುವುದರಿಂದ ಪಠ್ಯಗಳಿಗಿಂತ ಕುಟುಂಬದ ಅನುಭವ ಬಳಸಿದವರೇ ಹೆಚ್ಚು. ಭಾಷಾಂತರಕಾರರು ಈ ಪಠ್ಯಭಾಗವನು ತಮ್ಮ ಪರಿಸರದ ಸನ್ನಿವೇಶ ಬಳಸಿ ಭಾಷಾಂತರಿಸಿದ್ದನ್ನು ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ. ಅರ್ಥಶಾಸ್ತ್ರದ ಪಠ್ಯಗಳಲ್ಲಿಯೇ ಅತ್ಯಂತ ಸುಲಭವೆನಿಸುವ ಇದನ್ನು ವಿಭಿನ್ನವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಭಾಷಾಂತರಿತ ಪಠ್ಯಗಳಲ್ಲಿ ಸಾಮ್ಯತೆ ನಿರೂಪಣೆಯಲ್ಲಿದೆ. ವಿಶ್ಲೇಷಣೆಯಲ್ಲಿ ಭಿನ್ನ ದೃಷ್ಟಾಂತಗಳಿರುವುದನು ಗುರುತಿಸಿ ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಕೈಗಾರಿಕೆ ಪಠ್ಯಸಾಮಗ್ರಿಗಳಲ್ಲಿ ಪಾರಿಭಾಷಿಕ ಪದಗಳಲ್ಲಿ ವ್ಯತ್ಯಾಸಗಳಿವೆ. ಕೈಗಾರಿಕೆಗಳ ಮಹತ್ವದಲ್ಲಿ ಬಳಸಿದ ವಿಚಾರಗಳಲ್ಲಿ ಸಾಮ್ಯತೆಗಳಿವೆ. ಸರಳ ಭಾಷೆಯ ಮೂಲಕ ನಿರೂಪಿಸಿರುವ ಪಠ್ಯಗಳೇ ಹೆಚ್ಚು, ಅಲ್ಲಲ್ಲಿ ಭಿನ್ನ ವಿಚಾರಗಳಿವೆ. ಈ ಮೊದಲಾದ ಅಂಶಗಳನ್ನು ತೌಲನಿಕವಾಗಿ ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಭಾರತದಲ್ಲಿ ಸ್ಥಾಪಿತವಾದ ಬ್ಯಾಂಕಿಂಗ್ ಪದ್ಧತಿ ಹೇಗೆ ಇತರ ದೇಶಗಳ ಬ್ಯಾಂಕಿನ ವ್ಯವಸ್ಥೆ ಹೊಲುತ್ತವೆ ಮತ್ತು ಬ್ಯಾಂಕು ಮಾಡುವ ಕಾರ್ಯಗಳನ್ನು ಭಾಷಾಂತರಕಾರರು ಸರಳವಾಗಿ ವಿವರಿಸುವ ಪ್ರಯತ್ನ ಮಾಡಿರುತ್ತಾರೆ. ಕೇಂದ್ರ ಬ್ಯಾಂಕು ಮತ್ತು ವಾಣಿಜ್ಯ ಬ್ಯಾಂಕಿನ ಕಾರ್ಯಗಳನ್ನು ತೌಲನಿಕವಾಗಿ

ಪರಿಶೀಲಿಸಲಾಗಿ, ಕೆಲವು ಭಾಷಾಂತರಕಾರರು ಕಾರ್ಯಗಳ ವಿಧಗಳನು ವಿಭಿನ್ನ ಪಾರಿಭಾಷಿಕ ಪದಗಳಿಂದ ವಿವರಿಸಿರುತ್ತಾರೆ. ಪತ್ತು ನಿಯಂತ್ರಣದ ಸಿದ್ಧಾಂತಗಳು ಸರಳ ಭಾಷೆಯಲ್ಲಿ ವಿಶ್ಲೇಷಿಸಲ್ಪಟ್ಟಿವೆ. ಪತ್ತು ನಿರ್ಮಾಣದ ಸಂದರ್ಭಗಳನ್ನು ಬಹಳಷ್ಟು ಅನುವಾದಕರು ಆಕರ್ಷಕ ರೀತಿಯ ಉದಾಹರಣೆ ಬಳಸಿರುವುದನ್ನು ಗುರುತಿಸಲಾಗಿದೆ. ಈ ಭಾಗದಲ್ಲಿ ಬ್ಯಾಂಕಿನಲ್ಲಿ ಬಳಕೆಯಾಗುವ ಅನೇಕ ಪದಗಳು ಸಮಾನಾರ್ಥಕವಾಗಿವೆ. ಆದರೆ ಓದುಗರಿಗೆ ಅವು ಪರ್ಯಾಯ ಪದಗಳೆನಿಸಲಾರದೇ ಭಿನ್ನ ಪದಗಳೆಂದು ಭಾವಿಸುವಂತಹ ಅವಕಾಶವಿದೆ. ಕಾರಣ ಅಲ್ಲಿ, ಇಂಗ್ಲಿಷಗಳನ್ನು ಅವುಗಳ ಜೊತೆಯಲ್ಲಿ ನೀಡದಿರುವುದು ಇಂಥ ಅನೇಕ ವಿಚಾರಗಳನ್ನು ಗುರುತಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ವಿದೇಶಿ ವ್ಯಾಪಾರದ ಜೊತೆಯಲ್ಲಿ ವ್ಯಾಪಾರ, ದೇಶಿಯ ವ್ಯಾಪಾರಗಳ ಪರಿಕಲ್ಪನೆಗಳನ್ನು ಕೆಲವು ಭಾಷಾಂತರಕಾರರು ನೀಡಿರುತ್ತಾರೆ. ಇಂಥ ಭಾಷಾಂತರದಿಂದ ಅರ್ತಶಾಸ್ತ್ರದ ಅಧ್ಯಯನವು ಆಸಕ್ತಿದಾಯಕವಾಗುವಂತೆ ಮಾಡಿದ್ದಾರೆ.

ಪಠ್ಯಕ್ರಮಗಳು ಶೈಕ್ಷಣಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅಧ್ಯಯನದ ಪಠ್ಯಸಾಮಗ್ರಿಗಳು ಇವುಗಳ ನೆಲೆಯಲ್ಲಿ ರೂಪಿಸಲ್ಪಡುತ್ತವೆ. ಕನ್ನಡ ಅರ್ಥಶಾಸ್ತ್ರ ಪಠ್ಯಗಳ ಅಧ್ಯಯನದಲ್ಲಿ ಭಾಷೆಯು ಗಮನಸೆಳೆಯುತ್ತದೆ. ವಿವಿಧ ಭಾಷಾಂತರಕಾರರು ರೂಪಿಸಿದ ಪಠ್ಯಸಾಮಗ್ರಿಗಳು ಭಾಷೆಯಲ್ಲಿ ವೈವಿಧ್ಯತೆಯನ್ನು ಹೊಂದಿವೆ. ಇವುಗಳನ್ನು ಮೂರು ವಿಧದಲ್ಲಿ ವರ್ಗೀಕರಿಸಿ ವಿಶ್ಲೇಷಣೆ ಮಾಡಲಾಗಿದೆ. ಮೊದಲ ಅಂಶದಲ್ಲಿ ಪಠ್ಯ ಸಾಮಗ್ರಿಗಳಲ್ಲಿ ಬಳಕೆಯಾದ ವಿಶೀಷ್ಟ ಅಂಶಗಳನ್ನು ಗುರುತಿಸಿರುವುದನ್ನು 'ವಿಶೀಷ್ಟ ಪದಗಳಲ್ಲಿ' ಪರಿಶೀಲಿಸಲಾಗಿದೆ. ಅರ್ಥಶಾಸ್ತ್ರದ ಮೂಲ ಸಾಮಗ್ರಿಗಳು ಇಂಗ್ಲೀಷ್ ಭಾಷೆಲ್ಲಿದ್ದವುಗಳನ್ನು ಕನ್ನಡಕ್ಕೆ ತರುವಾಗ ಕೆಲವು ವಿಚಾರಗಳನ್ನು ಕನ್ನಡದ ಪರಿಸರಕ್ಕೆ ಹೊಂದಿಕೆಯಾಗುವ ಪರಿಭಾಷೆ ಬಳಸಲಾಗಿದೆ. ಈ ಸಂದರ್ಭದಲ್ಲಿ ಭಾಷಾಂತರಕಾರರು ತಾವು ನೆಲೆಸಿದ ಪರಿಸರದಲ್ಲಿ ಬಳಕೆಗೆ ಇರುವ ದೃಷ್ಟಾಂತ ಮತ್ತು ಉದಾಹರಣೆಗಳನ್ನು ಉಪಯೊಗಿಸಿರುತ್ತಾರೆ. ಈ ಮಾದರಿಯನ್ನು ಇತರ ಭಾಷಾಂತರಕಾರರು ರೂಪಿಸಿದ ಪಠ್ಯಕ್ರಮಗಳಲ್ಲಿ ಗುರುತಿಸಬಹುದು. ಆದರೆ ಅವು ತಮ್ಮ ತಮ್ಮ ಪರಿಸರಕ್ಕೆ ಪೂರಕವಾಗಿರುತ್ತವೆ. ಇವು ಪ್ರಾದೇಶಿಕ ನೆಲೆಯಲ್ಲಿ ರೂಪಿಸಲ್ಪಟ್ಟಿವೆ. ಕಾರಣ ಕನ್ನಡದ ಇನ್ನೊಂದು ಪರಿಸರಕ್ಕೆ ಭಿನ್ನವೆನಿಸುತ್ತವೆ. ಕೆಲವಮ್ಮೆ ಅವು ಬೇರೆ ಪರಿಸರಕ್ಕೆ ಹೊಂದಿಕೊಳ್ಳದೇ ಪ್ರತ್ಯೇಕತೆಯನ್ನು ಗುರುತಿಸಿಕೋಳ್ಳುತ್ತವೆ. ಉದಾಹರಣೆಗಾಗಿ ಹೇಳುವುದಾದರೆ ಅಡುಗೆಗೆ ಕೋಬ್ಬರಿ ಎಣ್ಣೆ ಬಳಸುವ ವಿಚಾರ, ಬೆಲೆಯನ್ನು ಕಾಂತಮಂಗಲ (ಜಲಾಶಯ) ಅಕ್ಕಿ, ರಾಗಿ, ಜೋಳ, ಕಡಲೆಕಾಯಿ ಇತ್ಯಾದಿಗಳು. ಇಂತಹ ವಿಶಿಷ್ಟ ಪದಗಳ ಬಳಕೆಯಿಂದ ಆಯಾ ಪರಿಸರದ ಅರ್ಥಶಾಸ್ತ್ರ ಅಧ್ಯಯನ ಮಾಡುವವರಿಗೆ ಸುಲಭವಾಗಿ ವಿಷಯವನ್ನು ಗ್ರಹಿಸಲು ಅನೂಕೂಲವಾಗುತ್ತದೆ. ಭಾಷಾಂತರಕಾರರ ಮೂಲ ಉದ್ದೇಶವು ಇದುವೆ ಆಗಿದೆ. ಆದರೆ ಇಂಥ ಪಠ್ಯಗಳು ಕನ್ನಡದ ಎಲ್ಲ ಪ್ರದೇಶಗಳಲ್ಲಿ ಸಮರ್ಪಕವಾಗಿ ಬಳಕೆಯಾಗುವಲ್ಲಿ ಅಡಚಣೆ ಉಂಟಾಗ

ಬಹುದಾದರೂ, ಕನ್ನಡ ಭಾಷಾ ಬೆಳವಣಿಗೆಗೆ ಹಾಗೂ ಭಾಷಾಂತರಕಾರರ ಸಂಖ್ಯೆಯನ್ನು ಹೆಚ್ಚಿಸುವಲ್ಲಿ ಪೂರಕವಾಗಿರುತ್ತದೆ.

ಎರಡನೆಯ ಅಂಶ 'ಆಡುಭಾಷೆಯ ಪದಗಳೆ'ಂದು ಗುರುತಿಸಲಾಗಿದೆ. ಪಠ್ಯಪುಸ್ತಕಗಳು ಸಾಮಾನ್ಯವಾಗಿ ಗ್ರಂಥಸ್ಥ ಭಾಷೆಯಲ್ಲಿರುತ್ತವೆ. ಅರ್ಥಶಾಸ್ತ್ರದ ಪಠ್ಯಸಾಮಗ್ರಿಗಳಲ್ಲಿ ಬಳಸಿದ ಭಾಷೆಯು ಗ್ರಾಂಥಿಕ ಭಾಷೆಯ ಜೊತೆಯಲ್ಲಿ ಸಂಶೋಧನಾ ಭಾಷೆ, ಸಂಸ್ಕೃತದ ಕೆಲವು ಕ್ಲಿಷ್ಟ ಪದಗಳ ಬಳಕೆಯಾಗಿರುವದನ್ನು ಗಮನಿಸಬಹುದಾಗಿದೆ. ಈ ಆಡುಭಾಷೆ ವಿವಿಧ ಪ್ರದೇಶವನ್ನು ಪ್ರತಿನಿಧಿಸುತ್ತವೆ. ಪ್ರತಿಯೊಬ್ಬ ಭಾಷಾಂತರಕಾರರು ತಮ್ಮ ಪರಿಸರದ ವಿದ್ಯಾರ್ಥಿಗಳಿಗೆ ಅನೂಕೂಲವಾಗಲೆಂಬ ಉದ್ದೇಶದಿಂದ ಪಠ್ಯವನ್ನು ಭಾಷಾಂತರಿಸಿರುತ್ತಾರೆ. ಅದು ಇತರ ಪ್ರದೇಶದವರಿಗೂ ಉಪಯೋಗಕ್ಕೆ ಬರುವಂತಾಗಲೆಂಬ ಬಯಕೆಯೂ ಇರುತ್ತದೆ. ಕಾರಣ ಅವರು ಸೊಗಸಾಗಿ ಭಾಷಾಂತರ ಚಟುವಟಿಕೆ ಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಭಾಷಾಂತರದ ಸಂದರ್ಭದಲ್ಲಿ ಇಂಗ್ಲೀಷ್ ಪದಕ್ಕೆ ಸಂವಾದಿಯಾಗಿ ಕನ್ನಡಪದಗಳನ್ನು ಬಳಸುವಾಗ ಈಗಾಗಲೆ ಬಳಕೆಯಲ್ಲಿದ್ದ ಪದಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ಈ ಪದಗಳು ಪ್ರಾದೇಶಿಕವಾಗಿರುತ್ತವೆ. ಇದು ಅಲ್ಲದೆ ಇಂಗ್ಲೀಷ್ ಪಠ್ಯ ಓದಿ ಅದರ ಸಾರಾಂಶವನ್ನು ವಿಷಯವಸ್ತುವಿಗೆ ಪೂರಕವಾಗಿ ವಿವರಿಸುವ, ವಿಶ್ಲೇಷಿಸುವ ಸಂದರ್ಭದಲ್ಲಿ ಆಡು ಭಾಷೆಯ ಪದಗಳು ಬಳಕೆಯಾಗಿರುವ ಸಾಧ್ಯತೆಯೂ ಇದೆ. ಇದಕ್ಕೆ ಇನ್ನೊಂದು ಮುಖ್ಯ ಕಾರಣವೆಂದರೆ, ಅರ್ಥಶಾಸ್ತ್ರ ಪಠ್ಯಸಾಮಗ್ರಿಗಳನ್ನು ರೂಪಿಸಿದ ಭಾಷಾಂತರಕಾರರಲ್ಲಿ ಯಾರೂ ವೃತ್ತಿಪರ ಭಾಷಾಂತರಕಾರರಲ್ಲ ಇವರೆಲ್ಲ ಹವ್ಯಾಸಿ ಭಾಷಾಂತರಕಾರರಾಗಿದ್ದಾರೆ. ಹವ್ಯಾಸಿ ಭಾಷಾಂತರಕಾರರು ನಿರ್ದಿಷ್ಟ ಪಾರಿಭಾಷಿಕ ಪದಕೋಶಗಳನ್ನು ರೂಪಿಸಿಕೊಂಡಿರುವುದಿಲ್ಲ. ಈಗಾಗಲೇ ಸೃಷ್ಟಿಯಾಗಿರುವ ಪದಗಳನ್ನು ಬಳಸಿಕೊಂಡರೂ ಅವುಗಳಲ್ಲಿ ಯಾವ ಪದಗಳು ತಮ್ಮ ಪರಿಸರದ ಭಾಷೆಯಲ್ಲಿ ಸಂವಹನಗೊಳ್ಳುವುದಿಲ್ಲವೋ, ಅಂಥ ಪದಗಳಿಗೆ ಸಂವಾದಿಯಾಗಿ ಪರ್ಯಾಯ ಪದಗಳನ್ನು ರೂಪಿಸಿರುವುದನ್ನು ಗಮನಿಸಬಹುದಾಗಿದೆ. ಈ ಭಾಷಾಂತರಕಾರರು ಇಂಗ್ಲೀಷದಲ್ಲಿ ಇರುವ ಪಠ್ಯವಸ್ತುವನ್ನು ಯಥಾವತ್ತಾಗಿ ಭಾಷಾಂತರ ಮಾಡಿರುವುದಿಲ್ಲ. ಪ್ರಮುಖ ವಿಚಾರಗಳನ್ನು ಮಾತ್ರ ಪರಿಗಣಿಸಿ ಉಳಿದಂತೆ ವಿಷಯವನ್ನು ಅರ್ಥೈಸಲು, ವಿವರಿಸಲು, ವಿಶ್ಲೇಷಿಸಲು ತಮ್ಮದೇ ಆದ ಪರಿಭಾಷೆಯ ಪದಗಳಲ್ಲಿ ಮನವರಿಕೆ ಮಾಡಿಕೊಡುವ ಪ್ರಯತ್ನ ಮಾಡಿರುವುದನ್ನು ಗುರುತಿಸಲಾಗಿದೆ. ಈ ಕಾರಣಗಳಿಂದ ಭಾಷಾಂತರಕಾರರ ಭಾಷೆಯ ಬಳಕೆಯಲ್ಲಿ ವ್ಯತ್ಯಾಸವಿರಬೇಕೆಂದು ಭಾವಿಸಲು ಅಡ್ಡಿಯಿಲ್ಲ. ಮಾತೃ ಭಾಷೆ ಕನ್ನಡವಾದ್ದರಿಂದ ವಿಷಯ ನಿರೂಪಣೆಯಲ್ಲಿ ಗ್ರಾಂಥಿಕ ಭಾಷೆ ಬಳಸುವ ಮಧ್ಯದಲ್ಲಿ ಪರಿಸರದ ಆಡುಭಾಷೆ ಸಹಜವಾಗಿ ನುಸುಳುತ್ತದೆ. ಎಷ್ಟೇ ಬಲವಂತದ ಉದ್ದೇಶವಿದ್ದರೂ, ಭಾಷಾಂತರ ಪ್ರಕ್ರಿಯೆಯ ನಡುನಡುವೆ ಅವರ ಗಮನಕ್ಕೆ ಬಾರದೆ ಆಡುಭಾಷೆ ಬಳಕೆಯಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ ಎಂಬ ಅಂಶವನ್ನು ಪರಿಗಣಿಸಬೇಕಾಗುತ್ತದೆ. ಮತ್ತೊಂದು ವಿಚಾರವೆಂದರೆ, ಭಾಷಾಂತರಕಾರರು 'ತಾವು ಇತರ ಭಾಷಾಂತರಕಾರರು ರೂಪಿಸಿದ ಪಠ್ಯಗಳಿಗಿಂತ

ಉತ್ತಮ ಗುಣಮಟ್ಟದ ಪಠ್ಯಗಳನ್ನು ರೂಪಿಸಬೇಕು, ಈಗಾಗಲೇ ರಚಿತ ಪಠ್ಯಸಾಮಗ್ರಿಗಳಲ್ಲಿನ ಕೊರತೆಯನ್ನು ತಮ್ಮ ಪಠ್ಯ ನಿಗಿಸಬೇಕೆಂಬ ಹಂಬಲದಿಂದಲೂ ಸಾಗುವ ಭಾಷಾಂತರದಲ್ಲಿ ಇಂಥ ಪದಗಳ ಬಳಕೆಯಾಗಿರುವ ಸಾಧ್ಯತೆಗಳನ್ನು ಪರಿಗಣಿಸಲಾಗಿದೆ. ವಿದ್ಯಾರ್ಥಿಗಳು ಅಧ್ಯಾಪಕರುಗಳು ಗ್ರಾಂಥಿಕ ಭಾಷೆಗಿಂತ ಆಡುಭಾಷೆಯ ಪಠ್ಯಗಳು ಬೇಗನೆ ವಿಷಯವನ್ನು ಅರ್ಥೈಸಿಕೊಳ್ಳಲು ಸಹಾಯಕ್ಕೆ ಬರುತ್ತವೆಂಬ ಅಭಿಪ್ರಾಯದ ಮೇಲೆ ರೂಪಿದ ಪಠ್ಯಗಳಲ್ಲಿ ಇಂಥ ಪದ ಬಳಕೆಯಾಗಿರಬೇಕೆಂಬ ಅನುಮಾನವಿದೆ. ಆದರೆ ಇಚೀನ ಪಠ್ಯಗಳಲ್ಲಿ ಆಡುಭಾಷೆಯ ಪದಗಳ ಬಳಕೆ ತುಂಬಾ ಕಡಿಮೆ ಪ್ರಮಾಣದಲ್ಲಿರುತ್ತವೆ. ಎಂಭತ್ತರ ದಶಕದಿಂದ ಖಾಸಗಿ ಪ್ರಕಾಶಕ ಸಂಖ್ಯೆ ಹೆಚ್ಚುತ್ತಾ ಈಗ ಗಣನೀಯವಾಗಿದೆ. ಹಿಗಾಗಿ ಇವರು ಕನ್ನಡ ನಾಡಿನಾದ್ಯಾಂತ ತಮ್ಮ ತಮ್ಮ ಪಠ್ಯಗಳನ್ನು ಮಾರಾಟ ಮಾಡುವ ಮೂಲಕ ಭಾಷಾಂತರಕಾರರು 'ಸ್ಟ್ಯಾಂಡರ್ಡ ಕನ್ನಡ' ಬಳಸುವಂತೆ ಮಾಡಿರುವ ಸಾಧ್ಯತೆ ಇದೆ. ಈಗ ಎಲ್ಲ ಪ್ರದೇಶಗಳ ಪಠ್ಯಗಳು ಎಲ್ಲಾ ಕಡೆಗೂ ಲಭ್ಯವಾಗುತ್ತಿರುವುದು ಆಡು ಭಾಷೆಯ ಪದಗಳ ಬಳಕೆ ಕಡಿಮೆಯಾಗಲು ಒಂದು ಕಾರಣವೆಂದು ತಿಳಿಯಲಾಗಿದೆ. ಬಳಕೆಯಾಗಿರುವ ಆಡುಭಾಷೆಯ ಪದಗಳ ಪರಿಶೀಲನೆಯ ಪದಗಳನ್ನು ಉದಾಹರಣೆಯಾಗಿ ಗಮನಿಸುವುದಾದರೆ ತುಟಾಗ್ರತೆ, ಆರಿಸುವಿಕೆ, ಕಾಳುಕಡಿ, ಇತ್ತಿತ್ತಲಾಗಿ, ತಾಕಲಾಟ, ದುಡ್ಡು, ನುರಿತ, ಹವಣಿಸು, ಕಾರ್ಮಿಕತೆ, ನಿರ್ಣಿತ, ಕಿಮ್ಮತ್ತಿನ, ದುರಸ್ತು, ವಿಪರೀತ, ಎಂತು, ಮುಂಧೋರಣೆ, ಬೆಡಗು-ಬಿನ್ನಾಣ, ವಾಡಿಕೆ, ಗೊತ್ತುಹಿಡಿ, ಅಗ್ಗವಾದ, ತಕ್ಕೊಂಡರೆ, ಕ್ರಯವಿಲ್ಲದೆ, ಅದಲುಬದಲು, ಪಳಗು, ಸಾಗಾಟ, ನಿಪುಣತೆ, ಬೇಡುವ, ಗಿರಾಕಿ, ಕುಳ, ಬಗೆಯೋಣ, ಯಾಕಂದರೆ ಇತ್ಯಾದಿಗಳು ಇವುಗಳ ಬಳಕೆ ಎಪ್ಪತ್ತರ ದಶಕದವರೆಗೂ ಅಧಿಕ ಪ್ರಮಾಣದಲ್ಲಿರುತ್ತವೆ. ಆಗ ಪಿಯುಸಿ ಮತ್ತು ಪದವಿ ತರಗತಿಗಳ ಪಠ್ಯಗಳನ್ನು ಆಯಾ ವ್ಯಾಪ್ತಿಯ ವಿಶ್ವವಿದ್ಯಾಲಯಳೇ ರೂಪಿಸುತ್ತಿದ್ದವು. ಈ ಮಾದರಿಯ ಪಠ್ಯಗಳಲ್ಲಿ ವಿಶಿಷ್ಟ ಪದಗಳ ಬಳಕೆ ಮತ್ತು ಆಡುಭಾಷೆಯ ಬಳಕೆ ಸಹಜವಾಗಿತ್ತೆಂದು ಗುರುತಿಸಲಾಗಿದೆ. ಹೀಗೆ ಆಡುಭಾಷೆಯ ಪದಗಳ ಬಳಕೆ ಕುರಿತಂತೆ ಅಧ್ಯಯನದಿಂದ ಪರಿಶೀಲಿಸಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಮೂರನೆಯದಾಗಿ ಅರ್ಥಶಾಸ್ತ್ರವು ಭಾಷಾಂತರ ಪಠ್ಯಸಾಮಗ್ರಿಗಳಲ್ಲಿ ಹೇಗೆ ನಿರೂಪಣೆ ಮತ್ತು ವಿಶ್ಲೇಷಣೆ ಮಾಡಲಾಗಿದೆಂಬುದನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಪದವಿ ಪೂರ್ವ ಪಠ್ಯಸಾಮಗ್ರಿಗಳಲ್ಲಿ ವಿಷಯವಸ್ತು ಸಂಕ್ಷಿಪ್ತ ರೂಪದಲ್ಲಿ ವಿವರಿಸಲ್ಪಟ್ಟಿವೆ. ಪದವಿ ಹಂತದಲ್ಲಿ ವಿಸ್ತಾರವಾಗುವ ಅಂಶಗಳಲ್ಲಿ ಕೆಲವನ್ನು ಮಾತ್ರ ಪಿಯುಸಿಯಲ್ಲಿ ಪರಿಚಯಿಸಲಾಗಿದೆ. ಪರಿಕಲ್ಪನೆಗಳಿಗೆ ಸಂಬಂಧಿಸಿದ ವಿವರಣೆ ಎರಡೂ ಹಂತಗಳಲ್ಲಿ ಒಂದೇ ಪ್ರಮಾಣದಲ್ಲಿದ್ದರೂ, ಪದವಿ ಹಂತದಲ್ಲಿ ವ್ಯಾಖ್ಯೆಗಳ ಬಳಕೆಯೊಂದಿಗೆ ವಿಶ್ಲೇಷಣೆ ಮಾಡಿರುವುದನ್ನು ಗುರತಿಸಲಾಗಿದೆ. ಆರ್ಥಿಕ ಸಿದ್ಧಾಂತಗಳ ಭಾಷಾಂತರದಲ್ಲಿ ಕೆಲವು ಭಾಷಾಂತರಕಾರರು ಸ್ಥಳಿಯತೆಯ ದೃಷ್ಟಾಂತ ಬಳಸಿದರೆ, ಮತ್ತೆ ಕೆಲವರು ಮೂಲದಲ್ಲಿರುವಂತೆ ಭಾಷಾಂತರ ಮಾಡಿರುತ್ತಾರೆ. ಅಧ್ಯಯನಕಾರರಿಗೆ ವಿಷಯ ಗ್ರಹಿಕೆಯಾಗುವ

ಸರಳ ಭಾಷೆಯಲ್ಲಿ ವಿವರಣೆ ನೀಡಿದ್ದು ಸಾಮಾನ್ಯ. ಹೆಚ್ಚಿನ ಪಠ್ಯಸಾಮಗ್ರಿಗಳಲ್ಲಿ ವಿಷಯವನ್ನು ವಿಶ್ಲೇಷಣೆ ಮಾಡುವಲ್ಲಿ ಉದಾಹರಣೆ ಬಳಸಿದ್ದರಿಂದ ಅವುಗಳನ್ನು ಅರ್ಥೈಸಿಕೊಳ್ಳಲು ಸಾಧ್ಯವಿಲ್ಲವೆಂಬುದನ್ನು ಗುರುತಿಸಲಾಗಿದೆ. ಜನಸಂಖ್ಯಾ ಸಿದ್ಧಾಂತ, ಹಣದ ಸಿದ್ಧಾಂತಗಳು, ಬೇಡಿಕೆ, ಪೂರೈಕೆ, ಉತ್ಪಾದನಾ ಸಿದ್ಧಾಂತಗಳು, ಬಡ್ಡಿ ಸಿದ್ಧಾಂತಗಳು, ಗೇಣಿ ಸಿದ್ಧಾಂತಗಳು, ಬೆಲೆಯ ಸಿದ್ಧಾಂತಗಳು, ಈ ಮೊದಲಾದವುಗಳ ಪರಿಭಾಷೆಗಳು ಸಮಗ್ರವಾಗಿ ವಿಶ್ಲೇಷಿಲ್ಪಟ್ಟವೆ ಹಾಗೂ ನಿರೂಪಸಲ್ಪಡುವ ಸಂದರ್ಭದಲ್ಲಿ ಬಳಸಿದ ಭಾಷೆಯು ಸಂವಹನಕ್ಕೆ ಯುಕ್ತವಾದದ್ದಾಗಿದೆ. ಪ್ರತಿಯೊಂದು ಅಂಶವೂ ವಿರಳ ವಿರಳವಾಗಿ ವಿವರಿಸಲ್ಪಟ್ಟಿರುವುದನ್ನು ಗಮನಿಸಬಹುದು. ಉದಾ: ತುಷ್ಟಿಗುಣದ ಪರಿಭಾಷೆಯನ್ನು ಅವುಗಳ ಪರಿಕಲ್ಪನೆಯಲ್ಲಿ ವಿಸ್ತಾರವಾಗಿ ವಿಶ್ಲೇಷಿಲ್ಪಟ್ಟವೆ. ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮವನ್ನು ಬೇರೆ ಬೇರೆ ಭಾಷಾಂತರಕಾರರು ಬೇರೆಯದಾದ ಅನುಭೋಗದ ಸರಕನ್ನು ಬಳಸಿ ನಿರೂಪಿಸಿದ್ದಾರೆ. ಇಂಥ ವಿಚಾರಗಳನ್ನು ಇತರ ಸಂದರ್ಭಗಳಲ್ಲಿಯೂ ವಿಶ್ಲೇಷಿಸಿರು ವುದನ್ನು ಗುರುತಿಸಲಾಗಿದೆ. ಪರಿಭಾಷೆಯ ನಿರೂಪಣೆಯು ವಿಷಯ ಗ್ರಹಿಕೆ ಸುಲಭವಾಗುವಂಥ ದೃಷ್ಟಾಂತ/ಉದಾಹರಣೆಗೆ ಬಳಸಿರುತ್ತಾರೆ. ಸಂವಹನಕ್ಕೆ ಸರಳವೆನಿಸುವ ವಾಕ್ಯಗಳ ರಚನೆಗಳನ್ನು ಪರಿಶೀಲಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

**ಪಾರಿಭಾಷಿಕ ಪದಗಳ ವಿಶ್ಲೇಷಣೆ(Glossory Analysis)**

ಭಾರತೀಯ ಭಾಷೆಗಳಲ್ಲಿ ಮೊದಲಿನಿಂದಲೂ ಸಾಮಾಜಿಕ ಶಾಸ್ತ್ರಗಳ ಅಧ್ಯಯನವಿಲ್ಲ. ಸಾಮಾಜಿಕ ಶಾಸ್ತ್ರಗಳ ಅಧ್ಯಯನ ಪಾಶ್ಚಾತ್ಯರ ಕೊಡುಗೆ. ಇಂಥ ಸಾಮಾಜಿಕ ಶಾಸ್ತ್ರಗಳ ಅಭ್ಯಾಸವು ಇಂದು ಅನಿವಾರ್ಯವಾಗಿದೆ. ಈ ಸಾಮಾಜಿಕ ಶಾಸ್ತ್ರ ಕೃತಿಗಳ ಅನುವಾದಿಂದಲೇ ಈ ಕ್ಷೇತ್ರವನ್ನು ಬಲಪಡಿಸುತ್ತಾ ಬರಲಾಗಿದೆ. ಅನುವಾದ ಮಾಡಬೇಕಾದಾಗ ಪರಿಭಾಷಿಕ ಪದಗಳ ನಿರ್ಮಾಣ ಹೊಸದಾಗಿಯೇ ನಡೆಯಬೇಕಾಗುತ್ತದೆ, ನಡೆಯುತ್ತಲೂ ಇದೆ. ಕಾರಣ ಭಾಷಾಂತರ ಕೃತಿಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಪಾರಿಭಾಷಿಕ ಪದಗಳು ಸಹಾಯಕ್ಕೆ ಬರುತ್ತವೆ. ಆದ್ದರಿಂದ ಮೂಲ ಪಾರಿಭಾಷಿಕ ಪದಗಳಿಗೆ ಸಂವಾದಿಯಾಗಿ ಹೊಸ ಪದಗಳನ್ನು ಸೃಷ್ಟಿ ಮಾಡಿ ಕಾರ್ಯ ನಡೆಸಬೇಕಾಗುತ್ತದೆ. ಅರ್ಥಶಾಸ್ತ್ರವು ಸಾಮಾಜಿಕ ಶಾಸ್ತ್ರಗಳಲ್ಲಿ ಒಂದು. ಈ ಮೇಲಿನ ಹಿನ್ನೆಲೆಯಲ್ಲಿ ಅರ್ಥಶಾಸ್ತ್ರವನ್ನು ಪರಿಗಣಿಸಿ ನೋಡಬೇಕಾಗುತ್ತದೆ. ಅರ್ಥಶಾಸ್ತ್ರವು ಪಾಶ್ಚಾತ್ಯರ ಕೊಡುಗೆಯಾಗಿ ಪಡೆದಿರುವುದು ಈಗ ಇತಿಹಾಸ. ಅದನ್ನು ಪಡೆದ ಬಗೆಯಲ್ಲಿ ಪಾರಿಭಾಷಿಕ ಪದಗಳ ಪಾತ್ರವು ಮಹತ್ವ ಪಡೆಯುತ್ತದೆ. ಅರ್ಥಶಾಸ್ತ್ರವನ್ನು ಕನ್ನಡೀಕರಿಸುವ ಹೊಸತರಲ್ಲಿ ಹೊಸ ಪದಗಳ ಸೃಷ್ಟಿಗೊಂಡಿವೆ. ಅವು ಸಂವಹನವಾಗುವುದರ ಜೊತೆಗೆ ಅವುಗಳ ಪರಿಭಾಷೆಯೇ ಮುಖ್ಯವೆಂದು ಭಾವಿಸಲಾಗಿದೆ. ಹೊಸ ಪದಗಳ ರಚನೆಗೆ ಸಾಧ್ಯವಾಗದ ಸಂದರ್ಭಗಳು ಬಂದಿವೆ. ಇಂಗ್ಲಿಷ್ ಪದಕ್ಕೆ ಸಂವಾದಿ ಎನಿಸದ ಪದದ ಹುಡುಕಾಟ ನಡೆದು 'ಶಬ್ದ ಸ್ವೀಕರಣ' ಮಾಡಿರುವುದನ್ನು ಗಮನಿಸಬಹುದಾಗಿದೆ. 'ಎರವಲು ಶಬ್ದ'ದಿಂದ ಗ್ರಹಿಸಬೇಕಾದ

ಪರಿಕಲ್ಪನೆ ನಿಲುಕಿದೆ. ಪದಕೋಶಗಳಲ್ಲಿ ಈ ಮಾದರಿಯ ಪದಗಳನ್ನು ಗುರುತಿಸಲಾಗಿದೆ. ಯಾವುದೇ ಒಂದು ಭಾಷೆ ಇನ್ನೊಂದು ಭಾಷೆಗೆ ಬಳಕೆಯಾಗದೇ ಇರದು. ಅದು ತನ್ನದೆ ಆದ ಪದಗಳನ್ನು ನಿರ್ದಿಷ್ಟ ಅರ್ಥಕೊಡುವಂತೆ, ಪರಿಭಾವನೆ ಮೂಡಿಸುವಂತೆ ಇರುತ್ತದೆ. ಅದು ಆ ಸಂದರ್ಭಕ್ಕೆ ಉಪಯೋಗಕ್ಕೆ ಬರುತ್ತದೆ. ಅಂಥ ಭಾಷಾಂತರ ಪ್ರಕ್ರಿಯೆಯು 'ಸ್ಥಾನಾಂತರ ಭಾಷಾಂತರ'ದ ಮೂಲಕ ಕನ್ನಡ ಅರ್ಥಶಾಸ್ತ್ರದಲ್ಲಿ ದೃಢವಾಗಿಸಿದೆ. ಪದಕೋಶಗಳಲ್ಲಿ ಮೂಲ ಭಾಷೆ ಮತ್ತು ಲಕ್ಷ್ಯ ಭಾಷೆಯ ಅರ್ಥ ಪದಗಳು ಏಕಕಾಲಕ್ಕೆ ಬಳಕೆಯಾಗಿರುವುದನ್ನು ಗುರುತಿಸಲಾಗಿದೆ. ಇಂಗ್ಲಿಷ್ ಮತ್ತು ಕನ್ನಡ ಪದಗಳೆರಡೂ ಉಪಯೋಗಿಸಲ್ಪಟ್ಟಿವೆ. ಇದನ್ನು 'ಮಿಶ್ರ ಸ್ವೀಕರಣ' ವೆಂದು ಹೆಸರಿಸಲಾಗಿದೆ. ಇಂಗ್ಲಿಷ್ ಪದಕ್ಕೆ ಕನ್ನಡದ ಅರ್ಥ ಪದವನ್ನು ಸೃಷ್ಟಿಸಲಾಗಿದೆ. ಅದರ ಇನ್ನರ್ಧ ಪದ ಕನ್ನಡದಲ್ಲಿ ಟಂಕಿಸಲ್ಪಟ್ಟರೂ ಅದು ಸಂವಹನವಾಗುವ ಕ್ರಿಯೆ ಸರಿಯಾಗಿ ಕಾರ್ಯ ನಿರ್ವಹಿಸಿದಂತಿಲ್ಲ. ಈ ಕಾರಣಕ್ಕಾಗಿ ಉಳಿದ ಅರ್ಧ ಪದದ ಅರ್ಥವನ್ನು ಇಂಗ್ಲಿಷ್ ಪದದಿಂದ ಸ್ವೀಕರಿಸಿ ಭಾಷಾಂತರ ಪ್ರಕ್ರಿಯೆ ಮುಂದುವರಿಸಿರುವುದು ಕಂಡುಬರುತ್ತದೆ.

ಪಾರಿಭಾಷಿಕ ಪದಗಳು ಹೊಸದಾಗಿ ಸೃಷ್ಟಿಸಬೇಕಾದ ಅನಿವಾರ್ಯತೆ ಬರುವುದು, ಮೂಲ ಭಾಷೆಯ ಪದಕ್ಕೆ ಸಂವಾದಿಯಾಗಿ ಲಕ್ಷ್ಯ ಭಾಷೆಯಲ್ಲಿ ಪದ ಇಲ್ಲದಿರುವಾಗ ಆಗ ಹೊಸ ಪದಗಳನ್ನು ಸೃಷ್ಟಿಸಬೇಕಾಗುತ್ತದೆ. ಆದರೆ ಭಾಷಾಂತರಕಾರರು ತಮಗೆ ತೋಚಿದಂತೆ ಪಾರಿಭಾಷಿಕ ಪದಗಳನ್ನು ರೂಪಿಸುತ್ತಾ ಹೋಗುವುದಿಲ್ಲ. ಆಕರ ಭಾಷೆಯ ಪದವನ್ನು ಲಕ್ಷ್ಯ ಭಾಷೆಯಲ್ಲಿ ಸಂವಹನಗೊಳಿಸುವ ಸಲುವಾಗಿ ಶ್ರಮಪೂರ್ವಕವಾಗಿ ರೂಪಿಸಿದ ಪದವೇ ಆ ಸಂದರ್ಭಕ್ಕೆ ಹೊಂದಾಣಿಕೆಯಾಗುತ್ತದೆ. ಇಂಥ ಪ್ರಮುಖ 'ಪದ'ವನ್ನು ವಿವರಣಾತ್ಮಕ ಭಾಷಾಂತರ'ದಲ್ಲಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಈ ಸಂದರ್ಭದಲ್ಲಿ ಆಕರ ಭಾಷೆಯಲ್ಲಿರುವ ಪದಗಳನ್ನು ಶಬ್ದಶಃ ಭಾಷಾಂತರ ಮಾಡಿದ್ದಾರೆ. ಅದು ಪೂರ್ಣಪ್ರಮಾಣದ ಅರ್ಥ ಕಲ್ಪಿಸಲಾರದು. ಅಲ್ಲದೆ ಅದು ಸಂವಹನ ಕ್ರಿಯೆಗೆ ಸಹಕರಿಸದು. ಆದ್ದರಿಂದ ಭಾಷಾಂತರಕಾರರು ಕೇವಲ ಎರಡು ಭಾಷೆಗಳ ಜ್ಞಾನವಂತರಾದರೆ ಸಾಲದು. ಸಾಂಸ್ಕೃತಿಕ ಸಂವೇನೆಯುಳ್ಳವರೂ, ಭಾಷಾ ಸೂಕ್ಷ್ಮತೆಯನ್ನು ಗಮನಿಸುವವರಾಗಿರಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಆಕರ ಭಾಷೆಯ ಪದಗಳು ಜೊತೆಯಲ್ಲಿ ವಿಭಕ್ತಿ ಪ್ರತ್ಯಯಗಳಂಥ ಬೇರೆ ಬೇರೆ ಅಕ್ಷರಗಳೂ ಇವುಗಳೊಟ್ಟಿಗೆ ಸೇರಿಕೊಳ್ಳುತ್ತವೆ. ಈ ಅಕ್ಷರಗಳು ಆ ಪದಗಳ ಅರ್ಥವಂತಿಕೆಯನ್ನು, ಪರಿಭಾವನೆಯನ್ನು ಹೆಚ್ಚಿಸುತ್ತವೆಂಬಂಥ ವಿಚಾರಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಕನ್ನಡ ಅರ್ಥಶಾಸ್ತ್ರ ಭಾಷಾಂತರ ಪ್ರಕ್ರಿಯೆ ಆರಂಭಗೊಂಡಾಗ ಸೃಷ್ಟಿಸಲಾದ ಕೆಲವು ಪಾರಿಭಾಷಿಕ ಪದಗಳನ್ನು ಇಂದಿಗೂ ಬಳಸಲಾಗುತ್ತಿದೆ. ಅಂಥ ಪದಗಳಿಗೆ ಪರ್ಯಾಯ ಪದಗಳು ರಚನೆಯಾಗಿರುವುದಿಲ್ಲ. ಈ ಪದಗಳು ಇಂಗ್ಲಿಷ್ ಭಾಷೆಯಲ್ಲಿನ ಪದದ ಪರಿಕಲ್ಪನೆಯನ್ನು

ಪರಿಣಾಮಕಾರಿಯಾಗಿ ಆರ್ಥೈಸುತ್ತದೆ. ಇದು ಕನ್ನಡ ಭಾಷಾ ವ್ಯಾಪ್ತಿಗೆ ಸಮ್ಮತವೆನಿಸಿದೆ. ಹೀಗಾಗಿ ಪ್ರಾದೇಶಿಕತೆಯ ಮಿತಿಗೆ ಒಳಪಟ್ಟಿಲ್ಲವೆಂಬುದನ್ನು ದೃಢಪಡಿಸುತ್ತದೆ. ಇಂಥ ಪದಗಳನ್ನು ಪದಕೋಶದಲ್ಲಿ 'ಸಾಮಾನ್ಯ ಪದಗಳು'ಎಂಬುದಾಗಿ ಗುರುತಿಸುವ ಪ್ರಯತ್ನವಿದು. ಹಾಗೆಯೇ ಆಕರ ಭಾಷೆಯ ಪದಕ್ಕೆ ಕನ್ನಡದಲ್ಲಿ ಸೃಷ್ಟಿಸಲ್ಪಟ್ಟ ಸಂವಾದಿ ಪದಗಳು ಒಂದಕ್ಕಿಂತ ಹೆಚ್ಚಾಗಿರುವ ಪದಗಳನ್ನು ಗಮನಿಸಲಾಗಿದೆ. ಹೀಗೆ ಈ ಪದಗಳ ಸೃಷ್ಟಿಗೆ ಪ್ರಾದೇಶಿಕತೆ ಅನುಭವ, ತಂತ್ರಜ್ಞಾನ, ಅಧ್ಯಯನಶೀಲತೆ, ಭಾಷಾ ಬೆಳವಣಿಗೆ ಈ ಮೊದಲಾದ ಅಂಶಗಳ ಪ್ರಭಾವವನ್ನು ಪರಿಗಣಿಸು ವಂತಿವೆ. ಬೇರೆ ಬೇರೆ ಭಾಷಾಂತರಕಾರರು ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಬಳಸಿದರೂ ಅವುಗಳನ್ನು ಒಟ್ಟಾಗಿ ಪರಿಶೀಲಿಸಿದಾಗ ಪರ್ಯಾಯ ಪದಗಳಾಗಿ ಕಾಣಸಿಗುತ್ತವೆ. ಇದು ಒಂದು ಭಾಷೆಯ ಬೆಳವಣಿಗೆಯನ್ನು ಸೂಚಿಸುತ್ತದೆ. ಈ ವಿಧದ ಪದಗಳನ್ನು ಸಮನಾರ್ಥಕ ವಿಶೇಷ ಪದಗಳು ಅಥವಾ ಪರ್ಯಾಯ ಪದಗಳು ಎಂಬ ಅಂಶದಡಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ. ಭಾಷಾಂತರದಿಂದ ಸೃಷ್ಟಿಯಾದ 'ಪಾರಿಭಾಷಿಕ ಪದ'ಗಳನ್ನು ವಿವಿಧ ಮಗ್ಗಲುಗಳ ಮೂಲಕ ಗಮನಿಸುವ ಅಗತ್ಯತೆ ಇದೆ. ಪರಿಕಲ್ಪನೆಗಳನ್ನು ಹೊಂದಿರುವ ಪದಗಳಿವೆ. ಪಾರಿಭಾಷಿಕ ಪದಗಳ ಪರಿಶೀಲನೆಯಿಂದ ಇದು ಬೆಳಕು ಕಂಡಿತೆನ್ನಬಹುದು. ಪಾರಿಭಾಷಿಕ ಪದಗಳಲ್ಲಿ ಕೆಲವು ಪದಗಳು ಮೂಲದಲ್ಲಿರುವ ಪದಗಳಿಗೆ ಸಂವಾದಿಗಳಾಗಿದ್ದರೂ ಅವು ಸಂಕ್ಷಿಪ್ತ ರೂಪದಲ್ಲಿ ಅರ್ಥಸೂಚಿಸುತ್ತವೆ. ಇಷ್ಟಕ್ಕೆ ಆ ಪದವು ಸೀಮಿತವಾಗುವುದಿಲ್ಲ. ಅವು ಪರಿಪೂರ್ಣ ಪರಿಭಾವನೆಯನ್ನು ಒಳಗೊಂಡಿರುವುದಿಲ್ಲ. ಅವುಗಳಿಗೆ ವಿವರವಾದ ಮಾಹಿತಿ ಬೇಕಾಗುತ್ತದೆ. ಆ ಪಾರಿಭಾಷಿಕ ಪದವು 'ಅಂದರೇನು?' ಎಂಬಂತಹ ಪ್ರಶ್ನೆಗೆ ಉತ್ತರಿಸುವ ವಿವರಣೆ ನೀಡುತ್ತವೆ. ಈ ಮಾದರಿಯ ಪದಗಳನು ಪಾರಿಭಾಷಿಕ ಪದಗಳಲ್ಲಿ ಪರಿಶೀಲಿಸಿ 'ಪರಿಕಲ್ಪನೆ'ಯ ಪದಗಳೆಂದು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹೀಗೆ ಪದಕೋಶಗಳನ್ನು ಪರಿಶೀಲಿಸುವ ಪ್ರಯತ್ನ ಇಲ್ಲಿಗೆ ಪೂರ್ಣವಾಗುವುದಿಲ್ಲ. ಇನ್ನೂ ಬೇರೆ ಬೇರೆ ವಿಚಾರಕ್ಕೆ ಆಸ್ಪದವಾಗಲೂಬಹುದು. ಅಂಥ ವಿಚಾರಗಳಿಗೆ ಇದೊಂದು ಸುಳಿವು ನೀಡಿತು.

# ಅನುಬಂಧಗಳು

೧. ಪಾರಿಭಾಷಿಕ ಪದಗಳು

೨. ಪಠ್ಯಕ್ರಮಗಳು

೩. ಗ್ರಂಥ ಋಣ

ಅನುಬಂಧ ಒಂದು

# ಪಾರಿಭಾಷಿಕ ಪದಕೋಶ

Ability approach ಸಾಮರ್ಥ್ಯ ತತ್ವ

Ability to pay principle ಪಾವತಿ ಸಾಮರ್ಥ್ಯ ತತ್ವ

Abortive Take off ನಿಷ್ಫಲ ನೆಗೆತ

Absolute advantage theory ನಿರಪೇಕ್ಷ ಪ್ರಯೋಜನ ತತ್ವ

Absolute cost ನಿರಪೇಕ್ಷ ವೆಚ್ಚ

Abstinence theory ನಿರಸನ ತತ್ವ

Abstract Method ಅಸ್ಪಷ್ಟ ವಿಧಾನ

Accelerator ವೇಗೋತ್ಕರ್ಷ

Accumulated Capital ಸಂಚಯಿತ ಬಂಡವಾಳ

Accumulation of capital ಬಂಡವಾಳ ಶೇಖರಣೆ

Active balance ಕ್ರಿಯಾಶೀಲ ಶಿಲ್ಕು(ಹಣ)

Additional emoluments ಹೆಚ್ಚುವರಿ ವರಮಾನಗಳು

Administered prices ಆಡಳಿತಾತ್ಮಕ ಬೆಲೆಗಳು

Administrative costs ಆಡಳಿತಾತ್ಮಕ ವೆಚ್ಚಗಳು

Administrative receipts ಆಡಳಿತಾತ್ಮಕ ಸ್ವೀಕೃತಿಗಳು

Advalorem duties ಮೌಲ್ಯಾಧಾರಿತ ಸುಂಕಗಳು

Adverse balance of payments ಪ್ರತಿಕೂಲಕರ ಪಾವತಿಶೇಷ

Aggregate demand ಸಮಗ್ರ ಬೇಡಿಕೆ

Aggregate ಒಟ್ಟು, ಸಮಗ್ರ

Aggregate supply ಸಮಗ್ರ ಪೂರೈಕೆ

Agio theory of interest ಬಡ್ಡಿಯ ವಟ್ಟ ತತ್ವ

Agricultral Development ಕೃಷಿ ಅಭಿವೃದ್ಧಿ

Agricultural economics ಕೃಷಿ ಅರ್ಥಶಾಸ್ತ್ರ

Agricultural Revolution ಕೃಷಿ ಕ್ರಾಂತಿ

Agriculture ಕೃಷಿ, ಒಕ್ಕಲುತನ

Aid requirements ನೆರವಿನ ಅಗತ್ಯಗಳು

Air Transport ವಾಯು ಸಾರಿಗೆ

Allocation of resources ಸಂಪನ್ಮೂಲಗಳ ನಿಯುಕ್ತಿ

Alternative uses ವಿವಿಧ ಉಪಯೋಗಗಳು

Alternatives ಪರ್ಯಾಯಗಳು, ಬದಲಿ ವಸ್ತುಗಳು

Analysis of variance ವ್ಯತ್ಯಾಸಾತ್ಮಕತೆಯ ವಿಶ್ಲೇಷಣೆ

Analytical function ವಿಶ್ಲೇಷಣಾತ್ಮಕ ಕಾರ್ಯ

Analytical geometry ಬೀಜ ರೇಖಾಗಣಿತ

Analytical method ವಿಶ್ಲೇಷಣಾತ್ಮಕ ವಿಧಾನ

Anarchism ಅನಾಯಕವಾದ(ಅರಾಜಕತಾವಾದ)

Ancient economic thought ಪ್ರಾಚೀನ ಆರ್ಥಿಕ ಚಿಂತನೆ

Animal behavior ಪಶುಪ್ರವೃತ್ತಿ/ಮೃಗೀಯ ವರ್ತನೆ

Anticpated satisfaction ನಿರೀಕ್ಷಿತ ತೃಪ್ತಿ

Anti-thesis ಪ್ರತಿ ವ್ಯವಸ್ಥೆ/ವಿರೋಧ ವ್ಯವಸ್ಥೆ(ಉತ್ತರ-ಪಕ್ಷ)

Applied economics ಕಾರ್ಯರೂಪಿ ಅರ್ಥಶಾಸ್ತ್ರ

Appreciation ಉನ್ನತಿ, ಹೆಚ್ಚಳ, ಏರಿಸುವಿಕೆ

Appreciation ಮೌಲ್ಯೋನ್ನತಿ

Arbitrary action ಸ್ವೇಚ್ಛಾಕ್ರಿಯೆ

Arithmetic Ratio ಅಂಕಗಣಿತದ ಪ್ರಮಾಣ

Assessment of taxes ತೆರಿಗೆಗಳ ನಿರ್ಧಾರ/ತೆರಿಗೆ ನಿರ್ಣಯ

Assets ಸೊತ್ತುಗಳು

Assumption ಪೂರ್ವಗ್ರಹಿಕೆ

Asymptotical ಅಸಂಪಾತೀಯ

Automatic mechanism ಸ್ವಯಂ ನಿರ್ವಹಣಾ ವ್ಯವಸ್ಥೆ ಕ್ರಮ

Automatic stabilizer ಸ್ವಯಂಚಾಲಿತ ಸಮಸ್ಥಿತಿ ಸ್ಥಾಪಕ

Autonomous demand ಸ್ವಾಯತ್ತ ಬೇಡಿಕೆ

Autonomous expenditure ಸ್ವಾಯತ್ತ ವೆಚ್ಚ/ಸ್ವತಂತ್ರ ಖರ್ಚು

Autonomous Investment ಸ್ವಾಯತ್ತ ಹೂಡಿಕೆ/ಸ್ವತಂತ್ರ ಹೂಡಿಕೆ

Autonomous payments ಸ್ವಾಯತ್ತ ಪಾವತಿಗಳು

Auxiliary capital ಪೂರಕ ಬಂಡಾವಳ

Auxiliary capital ಸಹಾಯಕ ಬಂಡವಾಳ

Average cost ಸರಾಸರಿ ಬೆಲೆ

Average propensity to consume ಸರಾಸರಿ ಅನುಭೋಗ ಪ್ರವೃತ್ತಿ

Average propensity to save ಸರಾಸರಿ ಉಳಿತಾಯ ಪ್ರವೃತ್ತಿ

Average revenue ಸರಾಸರಿ ಆದಾಯ

Average variable cost ಸರಾಸರಿ ವ್ಯತ್ಯಾಸಾತ್ಮಕ ವೆಚ್ಚ

Backward linkages ಹಿಮ್ಮುಖ ಸಂಪರ್ಕಗಳು

Backward tax shifting ತೆರಿಗೆಯ ಹಿಮ್ಮುಖ ವರ್ಗಾವಣೆ

Backwash effect ಹಿಮ್ಮುಖ ಸಂಚಾಲನ ಪರಿಣಾಮ

Balance ಶಿಲ್ಕು, ಶೇಷ, ಸಂತುಲನ

Balanced development ಸಂತುಲಿತ ಅಭಿವೃದ್ಧಿ

Balance of payments ಸಂದಾಯ ಬಾಕಿ/ಆಯ-ವ್ಯಯ ಸಮತೋಲನ/ಪಾವತಿಶೇಷ

Balance of power ಶಕ್ತಿ ಸಮತೋಲನ

Balance of trade ವ್ಯಾಪಾರಶೇಷ

Balance of trade ವ್ಯಾಪಾರದ ಸಮತೋಲ/ವ್ಯಾಪಾರ ಶೇಷ

Balanced Budget ಸಂತುಲಿತ ಮುಂಗಡಪತ್ರ/ಸಮತೋಲ ಮುಂಗಡಪತ್ರ

Balanced growth ಸಂತುಲಿತ ಬೆಳವಣಿಗೆ

Balanced budget ಸಮತೋಲ ಮುಂಗಡಪತ್ರ

Bank rate ಬ್ಯಾಂಕ ದರ

Bank rate policy ಬ್ಯಾಂಕು ದರ ನೀತಿ

Banking System ಬ್ಯಾಂಕಿಂಗ್ ಪದ್ಧತಿ

Barter system ವಸ್ತು ವಿನಿಮಯ ವ್ಯವಸ್ಥೆ: ಸಾಟಿ ಪದ್ಧತಿ

Basic Infrastructure ಮೂಲ ಸೌಕರ್ಯ, ಮೂಲ ಸವಲತ್ತು

Bastard golden age ಕೃತಕ ಸುವರ್ಣಯುಗ

Beneficial diversion ಪ್ರಯೋಜನಕರ ಗತಿ ಬದಲಾವಣೆ

Benefit principle of taxation ತೆರಿಗೆಯ ಪ್ರಯೋಜನ ತತ್ವ

Betterment levy ಅಭಿವೃದ್ಧಿ ತೆರಿಗೆ

Bi Lateral trade agreements ದ್ವಿಪಕ್ಷೀಯ ವ್ಯಾಪಾರ ಒಪ್ಪಂದಗಳು

Big push theory ಬೃಹತ್ ತಳ್ಳಿಕೆ ತತ್ವ

Bilateral Agreements ದ್ವಿಪಕ್ಷೀಯ ಒಪ್ಪಂದಗಳು

Bilateral monopoly ದ್ವಿಪಕ್ಷೀಯ ಏಕಸ್ವಾಮ್ಯ

Bilateral Trade ದ್ವಿಪಕ್ಷೀಯ ವ್ಯಾಪಾರ

Bimetalism ದ್ವಿಲೋಹ ನಾಣ್ಯ ಪದ್ಧತಿ

Black market ಕಾಳಸಂತೆ

Black money ಕಪ್ಪು ಹಣ

Bolshevik Party ಬೋಲ್‌ಷೆವಿಕ್ ಪಕ್ಷ

Bond ಸಾಲಪತ್ರ

Bonus ಲಾಭಾಂಶ(ಬೋನಸ್)

Boom ಉತ್ಕರ್ಷ, ಶೃಂಗ, ಊರ್ಜಿತ ಸ್ಥಿತಿ

Bounties ಸಹಾಯ ಧನಗಳು

Bourgeoisie ಭೂರ್ಜ್ವಾ, ಭೂರ್ಜ್ವಾಸೀ, ಶೋಷಕರು, ಬಂಡವಾಳಶಾಹಿಗಳು

Bread labour concept ಕಾಯಕ–ಅನ್ನ ಪರಿಕಲ್ಪನೆ

Budget ಬಜೆಟ್ಟು, ಮುಂಗಡಪತ್ರ, ಆಯ–ವ್ಯಯ ಪತ್ರ

Budget balanced ಸಮತೋಲಿತ ಮುಂಗಡಪತ್ರ

Budget deficit ಕೊರತೆ ಮುಂಗಡಪತ್ರ

Budget surplus ಮಿಗುತೆ ಮುಂಗಡಪತ್ರ

Budgetory policy ಆಯವ್ಯಯ ನೀತಿ; ಮುಂಡ ಪತ್ರ ನೀತಿ

Built in flexibility ಸ್ವಯಂ ಹೊಂದಾಣಿಕೆಯ ಗುಣ

Bureaucratic centralization ಅಧಿಕಾರಿಶಾಹಿ ಕೇಂದ್ರೀಕರಣ

Business culture ವ್ಯಾಪಾರ ಸಂಸ್ಕೃತಿ

Business cycles ಉದ್ಯಮ ಆವರ್ತಗಳು

Business firms ವ್ಯವಹಾರ ಸಂಸ್ಥೆಗಳು

Buyer's market ಕೊಳ್ಳುವವರ ಮಾರುಕಟ್ಟೆ

Callable debt ಅಪೂರ್ಣಾವಧಿ ಸಾಲ; ಕರೆ ಋಣ

Canon of ability ಸಾಮರ್ಥ್ಯದ ಸೂತ್ರ

Canon of benefit ಪ್ರಯೋಜನದ ಸೂತ್ರ

Canon of certainty ನಿಶ್ಚಿತತೆಯ ಸೂತ್ರ

Canon of convenience ಅನುಕೂಲತೆಯ ಸೂತ್ರ

Canon of coordination ಹೊಂದಾಣಿಕೆಯ ಸೂತ್ರ

Canon of Diversity ವೈವಿಧ್ಯತಾ ಸೂತ್ರ

Canon of Economy ಮಿತವ್ಯಯದ ಸೂತ್ರ

Canon of Elasticity ಸ್ಥಿತಿಸ್ಥಾಪಕತೆಯ ಸೂತ್ರ

Canon of equality ಸಮಾನತೆಯ ಸೂತ್ರ

Canon of equitable distribution ಸಮಾನ ವಿತರಣಾ ಸೂತ್ರ

Canon of equity ನ್ಯಾಯಪರತೆಯ ಸೂತ್ರ

Canon of expediency ಔಚಿತ್ಯತೆಯ ಸೂತ್ರ

Canon of productivity ಉತ್ಪಾದಕತೆಯ ಸೂತ್ರ

Canon of public expenditure ಸಾರ್ವಜನಿಕ ವೆಚ್ಚದ ಸೂತ್ರ

Canon of sanction ಸಮ್ಮತಿಯ ಸೂತ್ರ

Canon of simplicity ಸರಳತೆಯ ಸೂತ್ರ

Canon of surplus ಮಿಗುತೆಯ ಸೂತ್ರ

Cannons of taxation ತೆರಿಗೆ ವ್ಯವಸ್ಥೆಯ ಸೂತ್ರಗಳು/ ತೆರಿಗೆಗಳ ವಿಧೇಯಕಗಳು

Canons ಸೂತ್ರಗಳು

Canons of taxation ತೆರಿಗೆಯ ಸೂತ್ರಗಳು

Capacity ಶಕ್ತಿ

Capital ಬಂಡವಾಳ, ಮೂಲಧನ

Capital gains tax ಬಂಡವಾಳದ ಮೇಲಿನ ಕರ

Capitalism ಬಂಡವಾಳಶಾಹಿತ್ವ

Cash balance approach ನಗದು ಹಣ ಅಭಿಲಾಷೆಯ ಸಿದ್ಧಾಂತ

Capital accumulation ಬಂಡವಾಳ ಸಂಚಯನ

Capital assets ಬಂಡವಾಳ ಸೊತ್ತುಗಳು

Capital expenditure ಬಂಡವಾಳ ವೆಚ್ಚ

Capital formation ಬಂಡವಾಳ ಸಂಗ್ರಹಣೆ

Capital funds ಬಂಡವಾಳ ನಿಧಿಗಳು

Capital intensive technology ಬಂಡವಾಳ ಬಾಹುಳ್ಯ ತಾಂತ್ರಿಕತೆ

Capital levy ಬಂಡವಾಳ ತೆರಿಗೆ

Capital market ಬಂಡವಾಳ ಮಾರುಕಟ್ಟೆ

Capital output ratio ಬಂಡವಾಳ–ಉತ್ಪನ್ನ ಪ್ರಮಾಣ

Capital receipts ಬಂಡವಾಳ ಸ್ವೀಕೃತಿಗಳು

Capital sector ಬಂಡವಾಳ ವಲಯ

Capitalism ಬಂಡವಾಳಶಾಹಿ ಪದ್ಧತಿ

Capitation fee ವಂತಿಗೆ ಶುಲ್ಕ

Cardinal utility ಸಂಖ್ಯಾದರ್ಶಕ ತುಷ್ಟಿಗುಣ

Cash-credit system ಕೈ–ಸಾಲ ಪದ್ಧತಿ

Central bank ಕೇಂದ್ರ ಬ್ಯಾಂಕ್

Chemical fertilisers ರಾಸಾಯನಿಕ ಗೊಬ್ಬರ

Classical school ಶಾಸ್ತ್ರೀಯ ಪಂಥ

Compulsory loan ಕಡ್ಡಾಯ ಸಾಲ

Commercial bank ವಾಣಿಜ್ಯ ಬ್ಯಾಂಕ್

Commodity tax ವಸ್ತುಗಳ ಮಾರಾಟದ ಕರ

Catechism ಪ್ರಶ್ನೋತ್ತರವಾದ(ರಾಬರ್ಟ್ ಓವೆನ್)

Ceiling on income ಆದಾಯದ ಮೇಲಣ ಮಿತಿ

Ceiling on property ಆಸ್ತಿಯ ಮೇಲಣ ಮಿತಿ

Central Excise Duties ಕೇಂದ್ರ ಅಬಕಾರಿ ಸುಂಕಗಳು

Central Finance ಕೇಂದ್ರ ಸರಕಾರದ ಹಣಕಾಸು

Central plans ಕೇಂದ್ರೀಯ ಯೋಜನೆಗಳು

Centralised planning ಕೇಂದ್ರೀಕೃತ ಯೋಜನಾಕ್ರಮ

Centralization ಕೇಂದ್ರೀಕರಣ

Centrifugal expansion ಕೇಂದ್ರಾಪಗಾಮಿ ವಿಸ್ತರಣೆ

Ceteris paribus ಕೆಲವು ವಿಷಯಗಳಲ್ಲಿ ಸ್ಥಿರತೆ

Cheap money policy ಅಗ್ಗ ವಿತ್ತನೀತಿ

Cheap Money Policy ಅಗ್ಗದ ವಿತ್ತ ನೀತಿ/ಅಗ್ಗದ ಹಣದ ನೀತಿ

Chronical approach ಕಾಲಾಧಾರಿತ ವಿಶ್ಲೇಷಣೆ

Circular flow of income ಆದಾಯದ ವರ್ತುಲ ಪ್ರವಾಹ

Circulating capital ಚರ ಬಂಡವಾಳ

Circulation of wealth ಸಂಪತ್ತಿನ ಚಲಾವಣೆ

Cirular flow ವರ್ತುಲ ಪ್ರವಾಹ

Civil expenditure ನಾಗರಿಕ(ಪೌರ) ವೆಚ್ಚ

Civil war ಅಂತರ್ಯುದ್ಧ

Class conflict ವರ್ಗ ಸಂಘರ್ಷ

Class struggle ವರ್ಗ ಕಲಹ

Class war ವರ್ಗ ಸಮರ

Classical deductive approach ಸಾಂಪ್ರದಾಯಿಕ ನಿಗಮನ ವಿಧಾನ

Classical marginalists ಸಾಂಪ್ರದಾಯಿಕ ಸೀಮಾಂತವಾದಿಗಳು

Classical school ಸಂಪ್ರದಾಯ ಪಂಥ

Classical thought ಸಾಂಪ್ರದಾಯಿಕ ಚಿಂತನೆ

Classicism ಸಂಪ್ರದಾಯವಾದ

Classless society ವರ್ಗರಹಿತ ಸಮಾಜ

Clearing unions ನಿರಭ್ರತಾ ಸಂಘಗಳು

Climatic theory ವಾಯುಗುಣ ತತ್ವ/ಹವಾಮಾನ ತತ್ವ

Closed economy ಮುಚ್ಚಿದ ಅರ್ಥವ್ಯವಸ್ಥೆ/ ವಿದೇಶೀ ವ್ಯಾಪಾರ ರಹಿತ ಆರ್ಥಿಕತೆ

Co effect ಅವಕಲನ ಗುಣಾಂಕ

Collective bargaining ಸಾಮೂಹಿಕ ಚೌಕಾಶಿ

Collectivism ಸಮಷ್ಟಿವಾದ

Colonialism ವಸಾಹತುವಾದ

Commercial policy ವಾಣಿಜ್ಯ ನೀತಿ

Commodity taxation ಸರಕು ತೆರಿಗೆ

Communism ಸಮತಾವಾದ

Comparative cost theory ತುಲನಾತ್ಮಕ ವೆಚ್ಚ ತತ್ವ

Compensatory expenditure ಪರಿಹಾರಾತ್ಮಕ ಖರ್ಚು

Competition ಪೈಪೋಟಿ, ಸ್ಪರ್ಧೆ, ಮೇಲಾಟ

Competitive capitalism ಪೈಪೋಟಿಯುತ ಬಂಡವಾಳಶಾಹಿತ್ವ

Concepts ಪರಿಕಲ್ಪನೆಗಳು

Conceptual approach ಪರಿಕಲ್ಪನೆಯಾಧರಿತ ವಿಶ್ಲೇಷಣೆ

Concession curve ರಿಯಾಯಿತಿ ರೇಖೆ(ಹಿಕ್ಸ್)

Constant returns ಸ್ಥಿರ ಪ್ರತಿಫಲ

Consumer's surplus ಗ್ರಾಹಕನ ಉಳಿತಾಯ

Consumption ಉಪಭೋಗ, ಅನುಭೋಗ

Conversion ರೂಪಾಂತರ

Co-operative bank ಸಹಕಾರಿ ಬ್ಯಾಂಕ್

Credit creation ಪತ್ತಿನ ಸೃಷ್ಟಿ

Custom ಸಂಪ್ರದಾಯ

Customs ಅಬಕಾರಿ ಸುಂಕ

Customs Cyclical unemployment Death duty ಸಂಘರ್ಷಣಾತ್ಮಕ ನಿರುದ್ಯೋಗ

Consumer ಅನುಭೋಗಿ

Consumer's sovereignty ಅನುಭೋಗಿಯ ಸಾರ್ವಭೌಮತೆ

Consumer's surplus ಅನುಭೋಗಿಯ ಮಿಗುತೆ

Consumption function ಅನುಭೋಗ ಪ್ರವೃತ್ತಿ

Contraction phase ಕುಗ್ಗುವಿಕೆಯ ಹಂತ

Convergent investment ಏಕಮುಖ ಹೂಡಿಕೆ

Co-operative Sector ಸಹಕಾರಿ ಕ್ಷೇತ್ರ

Corporate income tax ಸಾಂಸ್ಥಿಕ ಆದಾಯ ತೆರಿಗೆ

Corporation tax ಕಾರ್ಪೋರೇಷನಿನ್ನ ತೆರಿಗೆ

Cost of service principle ಸೇವಾ ವೆಚ್ಚದ ಸಿದ್ಧಾಂತ

Craftsman ಕುಶಲಕರ್ಮಿ

Credit control ಉದ್ದರಿ(ಸಾಲ) ನಿಯಂತ್ರಣ

Credit control measures ಸಾಲ ನಿಯಂತ್ರಣ ಕ್ರಮಗಳು

Critical minimum effort ಕನಿಷ್ಠ ಸಂದಿಗ್ಧ ಪ್ರಯತ್ನ

Cross elasticity ಛೇದಕ ಸ್ಥಿತಿಸ್ಥಾಪಕತ್ವ

Cumulative process ಸಂಚಿತ ಪ್ರಕ್ರಿಯೆ

Cyclical unemployment ಆವರ್ತನೀಯ ನಿರುದ್ಯೋಗ/ಸಂಘರ್ಷಣಾತ್ಮಕ ನಿರುದ್ಯೋಗ

Data ದತ್ತಾಂಶ, ದತ್ತಕ

Dear money Policy ತುಟ್ಟಿ ವಿತ್ತ ನೀತಿ

Death duty ಮೃತ್ಯು ತೆರಿಗೆ; ಮರಣೋತ್ತರ ತೆರಿಗೆ/ ಸಾವಿನ ಕರ

Debt ಸಾಲ; ಋಣ

Debt burdent ಸಾಲದ ಹೊರೆ

Debt conversion ಸಾಲ ಪರಿವರ್ತನೆ

Dead weight debt ಹೆಣಭಾರ ಋಣ; ಅನುತ್ಪಾದಕ ಸಾಲ

Debt redemption ಸಾಲ ವಿಮೋಚನೆ

Debt relief ಋಣ ಪರಿಹಾರ

Debt repudiation ಸಾಲ ನಿರಾಕರಣೆ

Decentralisation of finance ಹಣಕಾಸಿನ ವಿಕೇಂದ್ರೀಕರಣ

Decentralisation of Industries ಕೈಗಾರಿಕೆಗಳ ವಿಕೇಂದ್ರೀಕರಣ

Decentralization ವಿಕೇಂದ್ರೀಕರಣ

Decentralised plans ವಿಕೇಂದ್ರೀಕೃತ ಯೋಜನೆಗಳು

Decreasing cost ಇಳಿಮುಖ ವೆಚ್ಚ

Deficit ಕೊರತೆ/ಕಡಿಮೆ

Deductive method ನಿಗಮನ ವಿಧಾನ

Defense expenditure ರಕ್ಷಣಾ ವೆಚ್ಚ

Deficit budget ಕೊರತೆ ಮುಂಗಡ ಪತ್ರ

Deficit financing ಕೊರತೆಯ ಧನ ನಿರ್ಮಾಣ/ ಕೊರತೆ ಧನವಿನಿಯೋಗ

Defferred payment ಮುಂದೂಡಿದ ಪಾವತಿ

Defference expenditure ಸಂರಕ್ಷಣೆಯ ವೆಚ್ಚ

Demand ಬೇಡಿಕೆ

Deflation ಅನಪ್ರಸರಣ

Deflationary gap ಅನಪ್ರಸರಣ ಅಂತರ(ಅವಕಾಶ)

Demand ಬೇಡಿಕೆ

Demand Based Production ಬೇಡಿಕೆಯಾಧರಿತ ಉತ್ಪಾದನೆ

Demand deposit ಬೇಡಿಕೆಯ ಠೇವು

Demand theory ಬೇಡಿಕೆ ಸಿದ್ಧಾಂತ

Deposit ಠೇವಣಿ

Deposit creation ಠೇವಣಿ ನಿರ್ಮಿಸುವುದು Depression ಆರ್ಥಿಕ ಕುಸಿತ/ಮುಗ್ಗಟ್ಟು

Devaluation ಮೌಲ್ಯ ವಿಚ್ಛೇದನೆ

Development bank ಅಭಿವೃದ್ಧಿ ಬ್ಯಾಂಕ್

Development expenditure ಅಭಿವೃದ್ಧಿ ವೆಚ್ಚ

Development tax ಅಭಿವೃದ್ಧಿ ಸುಂಕ

Direct consumption ಪ್ರತ್ಯಕ್ಷ ಉಪಭೋಗ

Direct cost ನೇರ ವೆಚ್ಚ

Demographic Transition ಜನಾಂಗಿಕ ಪರಿವರ್ತನೆ

Demonetization ಅನಾಣ್ಯೀಕರಣ

Depreciation allowances ಸವಕಳಿ ಭತ್ಯೆಗಳು

Depreciation ಇಳಿಸುವಿಕೆ; ಕುಗ್ಗಿಸುವಿಕೆ; ಸವಕಳಿ

Depreciation fund ಸವಕಳಿ ನಿಧಿ

Derivative deposits ಉತ್ಪನ್ನ ಠೇವಣಿಗಳು

Desired growth rate ಇಚ್ಛಿತ ಬೆಳವಣಿಗೆ ದರ

Devaluation ಮೌಲ್ಯಚ್ಛೇದನ, ಅಪಮೌಲ್ಯ

Development Planning ಅಭಿವೃದ್ಧಿ ಯೋಜನಾ ವ್ಯವಸ್ಥೆ

Devolution of revenue ಆದಾಯದ ವರ್ಗಾವಣೆ

Dialectical materialism ದ್ವಂದ್ವಮಾನ ಭೌತಿಕವಾದ

Diamond-water paradox ವಜ್ರ–ನೀರಿನ ವಿರೋಧಾಭಾಸ

Dictatorship ಸರ್ವಾಧಿಕಾರ

Differential surplus ವ್ಯತ್ಯಾಸಾತ್ಮಕ ಮಿಗುತೆ

Diffusion theory ಹರಡುವಿಕೆಯ ತತ್ವ

Digressive taxes ಮಂದಗಾಮಿ ತೆರಿಗೆಗಳು

Direct quid pro quo ಪ್ರತ್ಯಕ್ಷ ಪ್ರಯೋಜನ

Direct tax ಪ್ರತ್ಯಕ್ಷ ತೆರಿಗೆ, ನೇರ ತೆರಿಗೆ

Distribution ವಿತರಣೆ

Distribution of income ಆದಾಯದ ಹಂಚಿಕೆ

Division of labour ಕಾರ್ಮಿಕತೆಯ ವಿಭಜನೆ, ಶ್ರಮ ವಿಭಜನೆ

Dynamic ಗತಿಶೀಲ

Directive plans ನಿರ್ದೇಶಿತ ಯೋಜನೆಗಳು

Directly productive capital ನೇರ ಉತ್ಪನ್ನ ದಾಯಕ ಬಂಡವಾಳ

Discriminating duty ತಾರತಮ್ಯದ ಸುಂಕ

Discriminating monopoly ತಾರತಮ್ಯದ ಏಕಸ್ವಾಮ್ಯ

Discriminatory tax policy ತಾರತಮ್ಯದ ತೆರಿಗೆ ನೀತಿ

Diseconomies ಅಪವ್ಯಯಗಳು(ಅಮಿತ ವ್ಯಯಗಳು)

Disequilibrium ಅಸಮತೋಲನ

Disguised unemployment ಪ್ರಚ್ಛನ್ನ ನಿರುದ್ಯೋಗ/ ಅರೆ ಉದ್ಯೋಗ

Disinvestment ಹೂಡಿಕೆ ಹಿಂದೆಗೆತ/ಹೂಡಿಕೆ ರಾಹಿತ್ಯ

Disposable income ವಿನಿಯೋಗಿಸಬಹುದಾದ ಆದಾಯ

Distributive justice ವಿತರಣಾ ನ್ಯಾಯ

Disutility ಅಸಂತುಷ್ಟಿಗುಣ/ತುಷ್ಟಿಗುಣ ಹೀನತೆ

Divergent investment ಬಹುಮುಖ ಬೇಡಿಕೆ

Domestic System ಗೃಹ ವ್ಯವಸ್ಥೆ

Double counting ದ್ವಿಗಣನೆ

Downward cumulative process ಕೆಳಮುಖ ಸಂಚಿತ ಪ್ರಕ್ರಿಯೆ

Drain theory ಇಂಗುವಿಕೆ ತತ್ವ(ನವರೋಜಿ)

Dual theory ದ್ವಯಾತ್ಮಕ ತತ್ವ

Duopoly ದ್ವಿ–ವ್ಯಾಪಾರಿಗಳು, ದ್ವಿ–ಜನಸ್ವಾಮ್ಯ ಮಾರುಕಟ್ಟೆ

Duopsony ದ್ವಿ–ಗ್ರಾಹಕ ಮಾರುಕಟ್ಟೆ

Dynamic changes ಚಲನಶೀಲ ಬದಲಾವಣೆಗಳು

Dynamic equilibrium ಗತಿಶೀಲ ಸಮತೋಲನ

Economic Analysis ಆರ್ಥಿಕ ವಿಶ್ಲೇಷಣೆ

Economic cycles ಆರ್ಥಿಕ ಆವರ್ತಗಳು

Economic Depression ಆರ್ಥಿಕ ಮುಗ್ಗಟ್ಟು, ಆರ್ಥಿಕ ಬಿಕ್ಕಟ್ಟು

Economic Development ಆರ್ಥಿಕ ಅಭಿವೃದ್ಧಿ

Economic equality ಆರ್ಥಿಕ ಸಮಾನತೆ

Economic man ಆರ್ಥಿಕ ಮನುಷ್ಯ

Economy ಆರ್ಥಿಕ ವ್ಯವಸ್ಥೆ

Economic Dynamics ಆರ್ಥಿಕ ಚಲನಾತ್ಮಕತೆಗಳು

Economic Enquiry ಆರ್ಥಿಕ ವಿಚಾರಣೆ

Economic expenditure ಆರ್ಥಿಕ ವೆಚ್ಚ

Economic fluctuations ಆರ್ಥಿಕ ಏರಿಳಿತಗಳು

Economic goods ಆರ್ಥಿಕ ಸರಕುಗಳು

Economic growth ಆರ್ಥಿಕ ಬೆಳವಣಿಗೆ

Economic history ಆರ್ಥಿಕ ಚರಿತ್ರೆ

Economic inequality ಆರ್ಥಿಕ ಅಸಮಾನತೆ

Economic infratructure ಆರ್ಥಿಕ ಸವಲತ್ತು

Economic maturity ಆರ್ಥಿಕ ಪಕ್ವತೆ

Economic Planning ಆರ್ಥಿಕ ಯೋಜನೆಗಳು

Economic rent ಆರ್ಥಿಕ ಗೇಣಿ

Economic restoration ಆರ್ಥಿಕ ಪುನರುದಯ

Economic Stability ಆರ್ಥಿಕ ಸ್ಥಿರತೆ

Economic stagnation ಆರ್ಥಿಕ ಸ್ಥಾಗಿತ್ಯ

Economic statics ಆರ್ಥಿಕ ಸ್ಥಿರಾತ್ಮಕತೆ

Economic Supramacy ಆರ್ಥಿಕ ಪರಮಾಧಿಕಾರ

Economic system ಆರ್ಥಿಕ ವ್ಯವಸ್ಥೆ

Economic table ಆರ್ಥಿಕ ಕೋಷ್ಟಕ(ಕ್ವೆನೆ)

Economic theory ಆರ್ಥಿಕ ತತ್ವ

Economic thought ಆರ್ಥಿಕ ಚಿಂತನೆ

Economic welfare ಆರ್ಥಿಕ ಕಲ್ಯಾಣ

Economies of scale ಮಿತವ್ಯಯ ಪ್ರಮಾಣ

Economising ಮಿತವ್ಯಯ ಮಾಡುವುದು

Effective demand ಪರಿಣಾಮಕಾರಿ ಬೇಡಿಕೆ

Efficiency ದಕ್ಷತೆ

Effective demand ಪರಿಣಾಮಕಾರಿ ಬೇಡಿಕೆ (ಕೇನ್ಸ್)

Effectual demand ಫಲಕಾರಿ ಬೇಡಿಕೆ(ಮಾಲ್ತಸ್)

Elasticity of demand ಬೇಡಿಕೆಯ ಸ್ಥಿತಿಸ್ಥಾಪಕತ್ವ

Elasticity of finance ಹಣಕಾಸಿನ ಸ್ಥಿತಿಸ್ಥಾಪಕತೆ

Elasticity of supply ಪೂರೈಕೆಯ ಸ್ಥಿತಿಸ್ಥಾಪಕತ್ವ

Endogeneous factor ಆಂತರಿಕ ಉತ್ಪಾದನಾಂಗ

Entertainment tax ಮನೋರಂಜನಾ ತೆರಿಗೆ

Entrepreneur ಉದ್ಯಮಿ, ಉದ್ಯಮಸಾಹಸಿ

Equilibrium economics ಸಮತೋಲನ ಅರ್ಥಶಾಸ್ತ್ರ

Equilibrium of firm ಉದ್ಯಮ ಸಂಸ್ಥೆಯ ಸಮತೋಲ

Equitable distribution ಸಮಾನ ವಿತರಣೆ, ನ್ಯಾಯಯುತ ವಿತರಣೆ

Esentia1 ಅವಶ್ಯಕತೆಗಳು

Establishment cost ಸಂಸ್ಥಾಪನಾ ವೆಚ್ಚ

Estate duty ಆಸ್ತಿ ತೆರಿಗೆ

Ex-ante savings ನಿರೀಕ್ಷಿತ ಉಳಿತಾಯಗಳು

Excess profit ಹೆಚ್ಚುವರಿ ಲಾಭ

Exchange ವಿನಿಮಯ

Exchange bank ವಿನಿಮಯ ಬ್ಯಾಂಕ್

Exchange control ವಿನಿಮಯ ನಿಯಂತ್ರಣ

Exchange economy ಹಣ ವಿನಿಮಯದ ವ್ಯವಸ್ಥೆ

Excise duty ಅಬಕಾರಿ ಸುಂಕ

Exogenous factors ಬಾಹ್ಯ ಉತ್ಪಾದನಾಂಗಗಳು

Expansion phase ವಿಸ್ತರಣಾ ಹಂತ

Expenditure ವೆಚ್ಚ

Expenditure cost ಹಣರೂಪದ ವೆಚ್ಚ

Expenditure tax ಖರ್ಚಿನ ಮೇಲಿನ ಕರ

Explicit cost ವ್ಯಕ್ತ ವೆಚ್ಚ

Exploitation of labour ಶ್ರಮದ ಶೋಷಣೆ

Exploitation theory ಶೋಷಣೆಯ ತತ್ವ

Export ರಫ್ತು

Export development ನಿರ್ಯಾತ ಅಭಿವೃದ್ಧಿ

Export promotion ನಿರ್ಯಾತ ವಿಸ್ತರಣೆ

Expost savings ನೈಜ ಉಳಿತಾಯಗಳು

External balance ಬಾಹ್ಯ ಶೇಷ

External debt ವಿದೇಶಿ ಸಾಲ, ಬಾಹ್ಯ ಋಣ

External deficit ಬಾಹ್ಯ ಕೊರತೆ

External economies ಬಾಹ್ಯ ಮಿತವ್ಯಯಗಳು

External grant ಬಾಹ್ಯ ಅನುದಾನ

External trade ವಿದೇಶಿ ವ್ಯಾಪಾರ, ಬಾಹ್ಯ ವ್ಯಾಪಾರ

Externality ಬಾಹ್ಯರೂಪತೆ; ಬಾಹ್ಯ ಪರಿಣಾಮಗಳು

Factor cost ಉತ್ಪಾದನಾಂಗ ವೆಚ್ಚ

Factor Market ಉತ್ಪಾದನಾಂಗ ಮಾರುಕಟ್ಟೆ

Factor Pricing ಉತ್ಪಾದನಾಂಗಗಳ ಬೆಲೆ ನಿರ್ಣಯ

Factors of production ಉತ್ಪಾದನಾಂಗಗಳು

Federal Finance ಒಕ್ಕೂಟ ಹಣಕಾಸು

Fertility Rate ಪ್ರಜನನ ದರ

Feudal system ಊಳಿಗಮಾನ್ಯ ಪದ್ಧತಿ, ಜಹಗೀರು ಪದ್ಧತಿ

Final degree of utility ಅಂತಿಮ ಶ್ರೇಣಿಯ ತುಷ್ಟಿಗುಣ(ಜೆವೊನ್ಸ್)

Final goods ಅಂತಿಮ ಸರಕುಗಳು

Finance institution ಹಣಕಾಸಿನ ಸಂಸ್ಥೆ

Financial balance ಹಣಕಾಸಿನ ಶೇಷಗಳು

Financial burden ಹಣಕಾಸಿನ ಹೊರೆ

Financial capitalism ಹಣಕಾಸು ಬಂಡವಾಳಶಾಹಿತ್ವ

Financial grants ಹಣಕಾಸು ಅನುದಾನಗಳು

Financial plans ಹಣಕಾಸಿನ ಯೋಜನೆಗಳು

Financial policy ಹಣಕಾಸಿನ ನೀತಿ

Financial reforms ಹಣಕಾಸು ಸುಧಾರಣೆಗಳು

Financial stabilization ಹಣಕಾಸಿನ ಸ್ಥಿರತೆ

Financial system ಹಣಕಾಸಿನ ವ್ಯವಸ್ಥೆ

Fixed deposit ನಿಶ್ಚಿತಾವಧಿಯ ಠೇವು

Fixed income group ನಿರ್ಣೀತ ಆದಾಯದ ಗುಂಪು

Fines ಜುಲ್ಮಾನೆ; ದಂಡ

Fiscal expenditure ರಾಜ್ಯಕೋಶೀಯ ವೆಚ್ಚ

Fiscal measures ರಾಜ್ಯ ಕೋಶ ಕ್ರಮಗಳು

Fiscal policy ಖಜಾನೆ ನೀತಿ; ರಾಜ್ಯಕೋಶ ನೀತಿ

Five year plans ಪಂಚವಾರ್ಷಿಕ ಯೋಜನೆಗಳು

Fixed capital ಸ್ಥಿರ ಬಂಡವಾಳ

Fixed cost ಸ್ಥಿರ ವೆಚ್ಚ

Fixed Exchange Rate ಸ್ಥಿರ ವಿನಿಮಯ ದರ

Fixed inputs ಸ್ಥಿರ ಉತ್ಪಾದನಾಂಗಗಳು

Fixing import quotas ಆಯಾತ ನಿಯಂತ್ರಣ

Flood control ಮಹಾಪೂರ ನಿಯಂತ್ರಣ

Foreign aid ವಿದೇಶಗಳಿಂದ ದೊರೆತ ಸಾಲ

Flexibility of prices ಬದಲಾಗುವ ಬೆಲೆಗಳು

Flexible Exchange Rate ಬದಲಾಗುವ ವಿನಿಮಯ ದರ

Flexible wage system ಬದಲಾವಣೆಗೊಳಪಡುವ ಕೂಲಿ ವ್ಯವಸ್ಥೆ

Floating Capital ತೇಲು ಬಂಡವಾಳ, ವಿವಿಧೋದ್ದೇಶ ಬಂಡವಾಳ

Floating Exchange rate ತೇಲುವ ವಿನಿಮಯ ದರ

Flow ಪ್ರವಾಹ

Flow funds Analysis ಪ್ರವಾಹ ನಿಧಿ ವಿಶ್ಲೇಷಣೆ

Forced savings ಬಲಾತ್ಕಾರದ ಉಳಿತಾಯಗಳು/ ಬಲವಂತದ ಉಳಿತಾಯಗಳು

Forced savings ಬಲವಂತದ ಉಳಿತಾಯಗಳು

Foreign aid ವಿದೇಶಿ ನೆರವು

Foreign Capital ವಿದೇಶಿ ಬಂಡವಾಳ

Foreign Exchange ವಿದೇಶಿ ವಿನಿಮಯ

Foreign Technology ವಿದೇಶಿ ತಾಂತ್ರಿಕತೆ

Foreign trade ವಿದೇಶಿ ವ್ಯಾಪಾರ

Forfeiture ಮುಟ್ಟುಗೋಲು

Forward tax system ಮುಮ್ಮುಖ ತೆರಿಗೆ ವರ್ಗಾವಣೆ

Free convertibility ಮುಕ್ತ ಪರಿವರ್ತನೀಯತೆ

Free economy ಮುಕ್ತ ಆರ್ಥಿಕತೆ

Free Enterprise ಮುಕ್ತ ಉದ್ಯಮ

Free Market ಮುಕ್ತ ಮಾರುಕಟ್ಟೆ

Free Trade ಮುಕ್ತ ವ್ಯಾಪಾರ

Freight Rates ಸರಕು ಸಾಗಾಣಿಕೆ ದರಗಳು

Friedman Savage Hypothesis ಫ್ರೀಡ್‌ಮನ್ ಸ್ಯಾವೇಜ್ ಪೂರ್ವಕಲ್ಪನೆ

Full Empolyment ಪೂರ್ಣೋದ್ಯೋಗ

Full production ಪೂರ್ಣ ಉತ್ಪಾದನೆ

Functional Finance ಕಾರ್ಯಕಾರಿ ಹಣಕಾಸು

Functional Relationship ಕಾರ್ಯಕಾರಿ (ಅವಲಂಬಿ) ಸಂಬಂಧ

Fund character ನಿಧಿಗುಣ

Fundamental equations ಮೂಲಭೂತ ಸೂತ್ರಗಳು

Funded debt ನಿರ್ದಿಷ್ಟ(ದೀರ್ಘಕಾಲಿಕ)ಸಾಲ

Funding ನಿಧೀಕರಣ

Funds ನಿಧಿಗಳು

General equilibrium ಸಾರ್ವತ್ರಿಕ ಸಮತೋಲನ

General tariff ಸಾರ್ವತ್ರಿಕ ಸುಂಕ

General theory of distribution ಹಂಚಿಕೆಯ ಮಹಾಸಿದ್ಧಾಂತ

Geometric ratio ರೇಖಾ ಗಣಿತದ ಪ್ರಮಾಣ

Gift tax ದಾನದ ಮೇಲಿನ ಕರ, ಉಡುಗೊರೆ ತೆರಿಗೆ

Geographical factors ಭೌಗೋಳಿಕ ಅಂಶಗಳು

Gestation period ಗರ್ಭಾವಧಿ

Gibson paradox ಗಿಬ್ಬನ್ ವೈರುಧ್ಯ

Gini coefficient ಗಿನಿ ಸಹಕಾರಕ

Globalization ಜಾಗತೀಕರಣ

Gold bullion standard ಚಿನ್ನದ ಗಟ್ಟಿಯ ಪ್ರಮಿತಿ

Gold exchange standard ಸುವರ್ಣ ವಿನಿಮಯ ಪ್ರಮಿತಿ

Gold Standard ಚಿನ್ನದ ಪ್ರಮಿತಿ

Golden age ಸುವರ್ಣಯುಗ(ಜೋನ ರಾಬಿನ್‌ಸನ್)

Good character ಸರಕು ಲಕ್ಷಣ

Governed economy ನಿರ್ದೇಶಿತ ಅರ್ಥವ್ಯವಸ್ಥೆ

Government bond ಸರಕಾರದ ಸಾಲಪತ್ರ, ಸರಕಾರಿ ಬಾಂಡು

Government expenditure ಸರಕಾರಿ ವೆಚ್ಚ

Growth ಅಭಿವೃದ್ಧಿ

Government budget ಸರಕಾರಿ ಮುಂಗಡಪತ್ರ

Government sector ಸರಕಾರಿ ವಲಯ

Grants-in-aid ಸಹಾಯಕ ಅನುದಾನ

Great depression ಮಹಾ ಆರ್ಥಿಕ ಮುಗ್ಗಟ್ಟು

Greeck economic thought ಗ್ರೀಕರ ಆರ್ಥಿಕ ಚಿಂತನೆ

Gross domestic product ಒಟ್ಟು ದೇಶೀಯ ಉತ್ಪನ್ನ

Gross National Expenditure ಒಟ್ಟು ರಾಷ್ಟ್ರೀಯ ವೆಚ್ಚ

Gross National product ಒಟ್ಟು ರಾಷ್ಟ್ರೀಯ ಉತ್ಪನ್ನ

Gross Private Domestic Investment ಒಟ್ಟು ಖಾಸಗಿ ದೇಶೀಯ ಹೂಟಿ

Gross profits ಒಟ್ಟು ಲಾಭಗಳು

Group equilibrium ಗುಂಪು ಸಮತೋಲನ

Growth model ಬೆಳವಣಿಗೆಯ ಮಾದರಿ

Growth with stability ಸ್ಥಿರತೆಯೊಡನೆ ಬೆಳವಣಿಗೆ

Hard Currency ಕಾಠಿಣ್ಯದ ಕರೆನ್ಸಿ, ಕೊರತೆಯಲ್ಲಿರುವ ಹಣ

Harmony of interests ಹಿತಾಸಕ್ತಿಗಳ ಸೌಹಾರ್ದತೆ

Have-note ಇಲ್ಲದವರು, ಕಾರ್ಮಿಕರು, ಬಡವರು

Haves ಉಳ್ಳವರು, ಬಂಡವಾಳಶಾಹಿಗಳು, ಶ್ರೀಮಂತರು

Hedging Functions ಬೇಲೀಕರಣ ಕಾರ್ಯಗಳು

Hegelian principle ಹೆಗೆಲಿಯನ್ ಸಿದ್ಧಾಂತ

Heterogeneous products ವೈವಿಧ್ಯಮಯ ಉತ್ಪನ್ನಗಳು

Historical method ಐತಿಹಾಸಿಕ ವಿಧಾನ

Historical school ಐತಿಹಾಸಿಕ ಪಂಥ(ಜರ್ಮನಿ)

History of economic thought ಆರ್ಥಿಕ ಚಿಂತನೆಯ ಇತಿಹಾಸ

History of economics ಅರ್ಥಶಾಸ್ತ್ರದ ಇತಿಹಾಸ

History of errors ತಪ್ಪುಗಳ ಚರಿತ್ರೆ

Holding ಹಿಡುವಳಿ

Holding company ಶೇರುಗಳನ್ನು ಹೊಂದಿರುವ ಸಂಸ್ಥೆ

Homogeneous products ಏಕರೂಪದ ಉತ್ಪನ್ನಗಳು

Horizontal Amalgamation ಸಮಾನಾಂತರ ಕ್ರೋಢೀಕರಣ

Horizontal integration ಸಮಾನಾಂತರ ಸಮಗ್ರತೆ

Hot money ಕಾದ ಹಣ, ಬಹುಬೇಡಿಕೆಯ ಹಣ

Household sector ಗೃಹಸಂಬಂಧೀ ಕ್ಷೇತ್ರ

Human Capital ಮಾನವ ಬಂಡವಾಳ

Human Development ಮಾನವ ಅಭಿವೃದ್ಧಿ

Human Development index ಮಾನವ ಅಭಿವೃದ್ಧಿ ಸೂಚಿ

Human resources ಮಾನವ ಸಂಪನ್ಮೂಲಗಳು

Human Resources Development ಮಾನವ ಸಂಪನ್ಮೂಲಗಳ ಅಭಿವೃದ್ಧಿ

Human Touch ಮಾನವೀಯ ಸ್ಪರ್ಶ

Human welfare ಮಾನವನ ಕಲ್ಯಾಣ

Hundi ಹುಂಡಿ

Hyper Inflation ನಾಗಾಲೋಟದ ಅತಿಪ್ರಸರಣ

Hypothetical deduction ಪೂರ್ವಕಲ್ಪಿತ ನಿಗಮನ

Idle balance ಜಡಶಿಲ್ಕು, ನಿಷ್ಕ್ರಿಯ ಹಣ

Idle money ನಿಷ್ಕ್ರಿಯ ಹಣ

Imbalance ಅಸಮಾನತೆ

Imperfect competition ಅಪರಿಪೂರ್ಣ ಪೈಪೋಟಿ

Import ಆಮದು

Import substitution ಆಮದು ಪರ್ಯಾಯತೆ

Import duty ಆಯಾತ ಸುಂಕ

Impact of tax ತೆರಿಗೆಯ ತಕ್ಷಣದ ಹೊರೆ(ನೆಲೆ)

Impact of Taxes ತೆರಿಗೆಗಳ ತಕ್ಷಣದ ಪರಿಣಾಮ

Imperfect competition ಅಪರಿಪೂರ್ಣ ಪೈಪೋಟಿ

Imperfect competition ಅಪರಿಪೂರ್ಣ ಮಾರುಕಟ್ಟೆ

Imperfect oligopoly ಅಪರಿಪೂರ್ಣ ಕೆಲವರ ಸ್ವಾಮ್ಯ

Implicit cost ಅವ್ಯಕ್ತ ವೆಚ್ಚ

Import substitution ಆಮದು ಪರ್ಯಾಯತೆ

Imputation theory ಆರೋಪ ತತ್ವ(ಮೆಂಜರ್)

Income effect ಆದಾಯ ಪರಿಣಾಮ

Income tax ಆದಾಯ ಕರ/ತೆರಿಗೆ

Increasing returns ಏರಿಕೆಯ ಪ್ರತಿಫಲ

Index of output ಉತ್ಪಾದನಾ ಸೂಚಿ

Index of population ಜನಸಂಖ್ಯಾ ಸೂಚಿ

Indirect consumption ಅಪ್ರತ್ಯಕ್ಷ ಉಪಭೋಗ

Indirect tax ಅಪ್ರತ್ಯಕ್ಷ ತೆರಿಗೆ

Indirect profit ಅಪ್ರತ್ಯಕ್ಷ ಲಾಭ

Inflation ಅತಿಪ್ರಸರಣ, ಹಣದುಬ್ಬರ

Insurance ವಿಮೆ

Interest ಬಡ್ಡಿ

Internal sources ಆಂತರಿಕ ಸಂಪನ್ಮೂಲಗಳು

Intenational ಅಂತಾರಾಷ್ಟ್ರೀಯ

International trade ಅಂತಾರಾಷ್ಟ್ರೀಯ ವ್ಯಾಪಾರ

Invention ಸಂಶೋಧನೆ

Invisible ಅಗೋಚರ

Industrial bank ಔದ್ಯೋಗಿಕ ಬ್ಯಾಂಕ್

Industrial Finance Corporation ಔದ್ಯೋಗಿಕ ಹಣಕಾಸಿನ ಸಂಸ್ಥೆ

Industrial location ಉದ್ದಿಮೆಗಳ ಸ್ಥಾನೀಕರಣ

Incidence of taxes ತೆರಿಗೆಗಳ ಅಂತಿಮ ನೆಲೆ

Income effect ಆದಾಯದ ಪರಿಣಾಮ

Income method ಆದಾಯದ ವಿಧಾನ

Inconvertible money ಅಪರಿವರ್ತನೀಯ ಹಣ

Incremental cost ಏರಿಕೆ(ಹೆಚ್ಚುವರಿ)ವೆಚ್ಚ

Indemnity bond ಪರಿಹಾರ ಪತ್ರ

Index ಸೂಚಿ; ಸೂಚ್ಯಂಕ, ಸೂಚಿಸಂಖ್ಯೆ

Index number ಸೂಚ್ಯಂಕ

Indifference curve analysis ಔದಾಸೀನ್ಯ ರೇಖಾ ಮೀಮಾಂಸೆ

Indifference curves ಔದಾಸೀನ್ಯ ರೇಖೆಗಳು

Indirect tax ಪರೋಕ್ಷ ತೆರಿಗೆ

Individualism ವ್ಯಕ್ತಿವಾದ

Individualist socialist programme ವ್ಯಕ್ತಿವಾದೀಯ ಸಮಾಜವಾದಿ ಕಾರ್ಯಕ್ರಮ (ಮಿಲ್)

Indivisibility ಅವಿಭಾಜ್ಯತೆ

Induced investment ಪ್ರೇರಿತ(ಉತ್ತೇಜಿತ)ಹೂಡಿಕೆ

Inductive method ಅನುಗಮನ ವಿಧಾನ

Industrial combinations ಕೈಗಾರಿಕಾ ಸಂಯೋಜನೆಗಳು

Industrial Development ಕೈಗಾರಿಕಾಭಿವೃದ್ಧಿ

Industrial finance ಕೈಗಾರಿಕಾ ಹಣಕಾಸು

Industrial goods ಕೈಗಾರಿಕಾ ವಸ್ತುಗಳು

Industrial Origin ಕೈಗಾರಿಕಾ ಮೂಲ

Industrial Policy ಕೈಗಾರಿಕಾ ನೀತಿ

Industrial production ಕೈಗಾರಿಕಾ ಉತ್ಪಾದನೆ

Industrial reserve army ಕೈಗಾರಿಕಾ ಮೀಸಲು ಸೇನೆ

Industrial Reserve Army ಕೈಗಾರಿಕಾ ಮೀಸಲು ಪಡೆ

Industrial revolution ಕೈಗಾರಿಕಾ ಕ್ರಾಂತಿ

Industrialisation ಔದ್ಯಮಿಕತೆ, ಕೈಗಾರೀಕರಣ

Industry ಉದ್ದಿಮೆ

Inflation ಅತಿಪ್ರಸರಣ, ಹಣದುಬ್ಬರ

Infrationary bias ಅತಿಪ್ರಸರಣ ಭೇದ

Inflationary gap ಅತಿಪ್ರಸರಣ ಅಂತರ(ಅವಕಾಶ)

Infrastructure ಸೌಕಾರ್ಯಗಳು

Ingredients ಅವಯವಗಳು, ಅಂಗಾಂಶಗಳು

Innovations ಅವಿಷ್ಕಾರಗಳು

Input-Output Analysis ಉತ್ಪಾದನಾಂಗ ಉತ್ಪನ್ನ ವಿಶ್ಲೇಷಣೆ

Inputs ಉತ್ಪಾದನಾಂಗಗಳು, ಆದಾನಗಳು

Institutional approach ಸಾಂಸ್ಥಿಕ ವಿಶ್ಲೇಷಣೆ

Institutional barriers ಸಾಂಸ್ಥಿಕ ತಡೆಗಳು

Institutional Economics ಸಾಂಸ್ಥಿಕ ಅರ್ಥಶಾಸ್ತ್ರ

Institutional school ಸಾಂಸ್ಥಿಕ ಪಂಥ

Intended Investment ನಿರೀಕ್ಷಿತ ಹೂಡಿಕೆ

Intended savings ನಿರೀಕ್ಷಿತ ಉಳಿತಾಯಗಳು

Inter mediate products ಮಧ್ಯವರ್ತಿ ಉತ್ಪನ್ನಗಳು

Interacting units ಅಂತರ ಕ್ರಿಯಾತ್ಮಕ ಅಂಶಗಳು

Interest payments ಬಡ್ಡಿ ಪಾವತಿಗಳು

Interest Rate ಬಡ್ಡಿಯ ದರ

Interest receipts ಬಡ್ಡಿ ಸ್ವೀಕೃತಿಗಳು

Inter-governmental loans ಅಂತರ್ ಸರ್ಕಾರಿ ಸಾಲ

Intermediate goods ಮಧ್ಯವರ್ತಿಯ ಸರಕುಗಳು

Intermediate Technology ಮಧ್ಯಮ ತಾಂತ್ರಿಕತೆ

Internal debt ಆಂತರಿಕ ಸಾಲ

Internal Economies ಆಂತರಿಕ ಮಿತವ್ಯಯಗಳು

Internal Trade ಅಂತರಿಕ ವ್ಯಾಪಾರ

International debt ಅಂತರರಾಷ್ಟ್ರೀಯ ಸಾಲ

International finance ಅಂತರಾಷ್ಟ್ರೀಯ ಹಣಕಾಸು

International trade ಅಂತರರಾಷ್ಟ್ರೀಯ ವ್ಯಾಪಾರ

Interent instability ಅಂತರ್ಗತ ಅಸ್ಥಿರತೆ

Investment criteria ಹೂಡಿಕೆಯ ಮಾನದಂಡಗಳು

Investment multiplier ಹೂಟಿಯ ಗುಣಕ

Investment ಹೂಡಿಕೆ

Invisible hand ಕಾಣದ ಕೈ, ಅದೃಶ್ಯ ಹಸ್ತ

Iron law of wages ಕಬ್ಬಿಣದ ಕೂಲಿ ನಿಯಮ (ರಿಕಾರ್ಡೋ)

Irredeemable debt ಮರುಪಾವತಿಯಾಗದ ಸಾಲ

Iso cost curves ಸಮಾನವೆಚ್ಚದ ರೇಖೆಗಳು

Iso quants ಸಮಾನ ಉತ್ಪನ್ನ ರೇಖೆಗಳು

Iso revenue curves ಸಮಾನ ಆದಾಯದ ರೇಖೆಗಳು

Jetison ಎಸೆತ

Joint demand ಜಂಟಿ ಬೇಡಿಕೆ

Joint sector ಸಂಯುಕ್ತ ರಂಗ/ಕ್ಷೇತ್ರ/ಜಂಟಿ ವಲಯ

Joint stock companies ಕೂಡು ಬಂಡವಾಳ ಸಂಸ್ಥೆ

Joint supply ಜಂಟಿ ಪೂರೈಕೆ

Joint-Stock Company ಸಂಯುಕ್ತ ಬಂಡವಾಳದ ಸಂಘ

Judgement debtor ತೀರ್ಮಾನಿತ ಸಾಲಗಾರ

Juglar cycles ಜುಗ್ಲಾರ್ ಆವರ್ತಗಳು

Keynesian Economics ಕೆನೀಶಿಯನ್ ಅರ್ಥಶಾಸ್ತ್ರ

Keynesian revolution ಕೆನೀಶಿಯನ್ ಕ್ರಾಂತಿ

Keynesian school ಕೆನೀಶಿಯನ್ ಪಂಥ

Kinky demand curve ಡೊಂಕು ಬೇಡಿಕೆ ರೇಖೆ

Kondratief cycles ಕೋಂಡ್ರಾಟೀಫ್ ಆವರ್ತಗಳು

Labour ಶ್ರಮ

Labour act ಶ್ರಮಿಕ ಕಾಯಿದೆ

Labour efficiency ಕಾರ್ಯಾದಕ್ಷತೆ

Labour exploitation ಶ್ರಮಿಕರ ಶೋಷಣೆ

Labour Absorption ಶ್ರಮಲೀನತೆ, ಶ್ರಮ ಹೀರಿಕೆ

Labour abstract ಅಮೂರ್ತ ಶ್ರಮ

Labour class ಕಾರ್ಮಿಕ ವರ್ಗ

Labour command ಶ್ರಮಧಾರಣ

Labour intensive technology ಶ್ರಮ ಬಾಹುಳ್ಯ ತಾಂತ್ರಿಕತೆ

Labour Legistations ಕಾರ್ಮಿಕ ಕಾನೂನುಗಳು

Labour Market ಶ್ರಮದ ಮಾರುಕಟ್ಟೆ

Labour Party ಕಾರ್ಮಿಕ ಪಕ್ಷ

Labour power ಶ್ರಮಶಕ್ತಿ

Labour problems ಕಾರ್ಮಿಕ ಸಮಸ್ಯೆ

Laissez faire economy ಲೇಸೆಫೇರ್ ಆರ್ಥಿಕ ನೀತಿ

Land ಭೂಮಿ

Land rent ಭೂಮಿ ಗೇಣಿ

Labour productive ಉತ್ಪಾದಕ ಶ್ರಮ

Labour Productivity ಶ್ರಮದ ಉತ್ಪಾದಕತೆ

Labour socially necessary ಸಾಮಾಜಿಕಾಗತ್ಯ ಶ್ರಮ

Labour theory of value ಶ್ರಮ ಮೌಲ್ಯತತ್ವ

Labour unions ಕಾರ್ಮಿಕ ಸಂಘಟನೆಗಳು (ಸಂಘಗಳು)

Labour unproductive ಅನುತ್ಪಾದಕ ಶ್ರಮ

Labour useful ಉಪಯೋಗಿ ಶ್ರಮ

Labourer ಶ್ರಮಿಕ, ಕಾರ್ಮಿಕ

Land reforms ಭೂ ಸುಧಾರಣೆಗಳು

Land revenue ಭೂ ಕಂದಾಯ

Land tax ಭೂ ತೆರಿಗೆ

Landless Labourers ಭೂರಹಿತ ಕಾರ್ಮಿಕರು

Large scale production ಬೃಹತ್ ಪ್ರಮಾಣದ ಉತ್ಪಾದನೆ

Lausanne School ಫ್ರಾನ್ಸಿನ ಲಾಸನ್ನೆ ಪಂಥ

Law of Demand ಬೇಡಿಕೆಯ ನಿಯಮ

Law of Diminishing marginal utility ಇಳಿಮುಖ ಸೀಮಾಂತ ತುಷ್ಟಿಗುಣ ನಿಯಮ

Law of diminishing returns ಸೀಮಾಂತ ತುಷ್ಟಿಗುಣ ಕುಗ್ಗುವ ನಿಯಮ

Law of substitution ಬದಲಿ ವಸ್ತುವಿನ ನಿಯಮ, ಇಳಿಕೆಯ ಪ್ರತಿಫಲ ನಿಯಮ

Law of Equi-marginal utility ಸಮಸೀಮಾಂತ ತುಷ್ಟಿಗುಣ ನಿಯಮ

Law of nature ನಿಸರ್ಗ ನಿಯಮ/ನೈಸರ್ಗಿಕ ನಿಯಮ

Law of supply ಪೂರೈಕೆಯ ನಿಯಮ

Law of tides ತೆರೆಗಳ ನಿಯಮ(ಉಬ್ಬರವಿಳಿತ ನಿಯಮ)

Law of variable proportions ವ್ಯತ್ಯಾಸಾತ್ಮಕ ಪ್ರಮಾಣಗಳ ನಿಯಮ

Liberalism ಉದಾರವಾದ

Licence fee ಪರವಾನಗಿ ಶುಲ್ಕ

Limping golden age ಸತ್ವರಹಿತ ಸುವರ್ಣಯುಗ

Linear programming ಸರಳ ರೇಖಾ ಬಿಂಬಕ ಕಾರ್ಯಕ್ರಮ

Liquidity preference ದ್ರವ್ಯದ ಒಲವು, ದ್ರವ್ಯತೆಯೊಲವು

Living wage ಜೀವನಾವಶ್ಯಕ ವೇತನ

Loanable Funds ಸಾಲ ನಿಧಿಗಳು

Local finance ಸ್ಥಳೀಯ ಹಣಕಾಸು

Localisation ಸ್ಥಾನೀಕರಣ

Long term ದೀರ್ಘಾವಧಿ

Long term equilibrium ದೀರ್ಘಾವದಿ ಸಮತೋಲ

Long term debt ದೀರ್ಘವಧಿ ಸಾಲ

Loose money policy ಸಡಿಲು ವಿತ್ತನೀತಿ/ಸಡಿಲ ವಿತ್ತ ನೀತಿ

Low level of unemployment ಕೆಳಮಟ್ಟದ ಉದ್ಯೋಗ ಪ್ರಮಾಣ

Marginal tax rate ಸೀಮಾಂತ ತೆರಿಗೆ ದರ

Macro Economics ಸಮಷ್ಟಿ ಅರ್ಥಶಾಸ್ತ್ರ

Major and Medium irrigation ಭಾರಿ ಮತ್ತು ಮಧ್ಯಮ ಪ್ರಮಾಣದ ನೀರಾವರಿ

Man-days ಮಾನವ ದಿನಗಳು

Margin ಸೀಮೆ, ಅಂಚು, ಸೀಮಾಂತ

Margin school ಸೀಮಾಂತ ಪಂಥ

Margin utility ಸೀಮಾಂತ ತುಷ್ಟಿಗುಣ

Marginal propensity to save ಉಳಿತಾಯದ ಸೀಮಾಂತ ಪ್ರವೃತ್ತಿ

Marginal Buyer ಸೀಮಾಂತ ಗ್ರಾಹಕ

Marginal cost ಸೀಮಾಂತ ವೆಚ್ಚ

Marginal income ಅಂಚಿನಲ್ಲಿಯ, ಸೀಮಾಂತ ಆದಾಯ

Marginal cost pricing ಸೀಮಾಂತ ವೆಚ್ಚ ಬೆಲೆ ನಿರ್ಣಯ

Marginal efficiency of capital ಬಂಡವಾಳದ ಸೀಮಾಂತ ದಕ್ಷತೆ

Marginal firm ಸೀಮಾಂತ ಕಾರ್ಖಾನೆ

Marginal land ಸೀಮಾಂತ ಭೂಮಿ

Marginal producer ಸೀಮಾಂತ ಉತ್ಪಾದಕ

Marginal product ಸೀಮಂತ ಉತ್ಪನ್ನ

Marginal productivity theory of distribution ಅಂಚು ಉತ್ಪಾದನಾ ಯೋಗ್ಯತೆ ಸಿದ್ಧಾಂತ

Market ಮಾರುಕಟ್ಟೆ

Market price ಮಾರುಕಟ್ಟೆಯ ಬೆಲೆ

Measure of value ವಿನಿಮಯದ ಸಾಮಾನ್ಯ ಮಾನ ದಂಡ

Mechanisation ಯಾಂತ್ರೀಕರಣ

Medium of exchange ವಿನಿಮಯದ ಮಾಧ್ಯಮ

Medium term ಮಧ್ಯಮಾವಧಿ

Minerals ಖನಿಜಗಳು

Minimum capacity ಪರಮೋತ್ಪಾದಕ ಶಕ್ತಿ

Minimum note issue system ಪರಮಾವಧಿ ಅರ್ಥಪತ್ರಗಳನ್ನು ಹೊರಡಿಸುವ ಪದ್ಧತಿ

Minimum reserve system ಕನಿಷ್ಠ ಸಂಚಿತ ಪದ್ಧತಿ

Marginal propensity to consume ಅನುಭೋಗದ ಸೀಮಾಂತ ಪ್ರವೃತ್ತಿ

Marginal purchase ಸೀಮಾಂತ ಖರೀದಿ

Marginal rate of substitution ಪರ್ಯಾಯತೆಯ ಸೀಮಾಂತ ದರ

Marginal Revenue ಸೀಮಾಂತ ಆದಾಯ

Marginal Revenue product ಸೀಮಾಂತ ಆದಾಯ ಉತ್ಪನ್ನ

Market Economy ಮಾರುಕಟ್ಟೆ ಅರ್ಥವ್ಯವಸ್ಥೆ

Market glut ಮಾರುಕಟ್ಟೆ ಮಹಾಪೂರ

Market gluts ಮಾರುಕಟ್ಟೆಯ ಮಹಾಪೂರ(ಮಾಲ್ತಸ್)

Market Mechanism ಮಾರುಕಟ್ಟೆ ವ್ಯವಸ್ಥೆ

Market value ಮಾರುಕಟ್ಟೆ ಮೌಲ್ಯ

Marketing Board ಮಾರುಕಟ್ಟೆ ಮಂಡಲಿ

Material welfare ಭೌತಿಕ ಕಲ್ಯಾಣ

Materialistic interpretation ಭೌತವಾದಿ ನಿರೂಪಣೆ(ಸ್ಮಿತ್)

Maternity benefits ಹೆರಿಗೆ ಸೌಲಭ್ಯಗಳು

Matrix form ಮಾತೃಕೆಗಳ ರೂಪ

Mature economy ಪ್ರೌಢ ಅರ್ಥವ್ಯವಸ್ಥೆ

Maximum taxable capacity ಗರಿಷ್ಠ ತೆರಿಗೆ ಸಾಮರ್ಥ್ಯ

Means ಸಾಧನಗಳು

Medical facilities ವೈದ್ಯಕೀಯ ಸೌಲಭ್ಯಗಳು

Meiji ಮೈಜೀ ಯುಗ

Meiji reforms ಮೈಜೀ ಸುಧಾರಣೆಗಳು

Mercantalism ವಾಣಿಜ್ಯವಾದ, ವ್ಯಾಪಾರವಾದ

Mercantilistic ವಾಣಿಜ್ಯ ಪಂಥ

Micro Economics ವ್ಯಷ್ಟಿ ಅರ್ಥಶಾಸ್ತ್ರ

Minimum alternative tax ಕನಿಷ್ಠ ಬದಲಿ ತೆರಿಗೆ

Minimum taxation ಕನಿಷ್ಠ ತೆರಿಗೆ ವ್ಯವಸ್ಥೆ

Modern Economists ಆಧುನಿಕ ಅರ್ಥಶಾಸ್ತ್ರಜ್ಞರು

Modified capitalism ಸುಧಾರಿತ ಬಂಡವಾಳ ಶಾಹಿತ್ವ(ಪಿಗೋ)

Monetary grant ಹಣ ಸಹಾಯ

Monetary Policy ಹಣಕಾಸಿನ ನೀತಿ/ಹಣಕಾಸಿನ ಧೋರಣೆ/ವಿತ್ತೀಯ ನೀತಿ

Money ಹಣ

Monopoly ಏಕಸ್ವಾಮ್ಯತ್ವ, ಗುತ್ತಿಗೆ

Monopoly and price determination ಏಕಸ್ವಾಮ್ಯತ್ವ ಮತ್ತು ಬೆಲೆ ನಿರ್ಧಾರ

Monopoly of note issue ನೋಟು ಮುದ್ರಣದ ಏಕಸ್ವಾಮ್ಯತ್ವ

Monetary theories ವಿತ್ತ ಸಂಬಂಧಿ ತತ್ವಗಳು

Money burden of tax ತೆರಿಗೆಯ ಹಣರೂಪಿ ಹೊರೆ

Money cost ಹಣರೂಪಿ ವೆಚ್ಚ

Money Illusion ಹಣ ಭ್ರಮೆ

Money Income ಹಣರೂಪಿ ಆದಾಯ

Money Market ಹಣದ ಮಾರುಕಟ್ಟೆ

Money supply ಹಣ ಪೂರೈಕೆ

Monopolistic competition ಸ್ವಾಮ್ಯಯುತ ಪೈಪೋಟಿ

Monopolistic practices ಏಕಸ್ವಾಮ್ಯದ ನಡಾವಳಿಗಳು

Monopoly ಏಕಸ್ವಾಮ್ಯ

Monopsony ಏಕಗ್ರಾಹಕ ಮಾರುಕಟ್ಟೆ

Mortality Rate ಮರಣ ದರ

Mosaic laws ಮೋಸೆಸ್ ಮಾಡಿದ ಕಾನೂನುಗಳು (ಹೀಬ್ರೂ)

Multiple equilibrium ಬಹುಸಮತೋಲನ

Multiplier effect ಗುಣಕ ಪರಿಣಾಮ

Multiplier ಗುಣಕ(ಕೇನ್ಸ್)

Multi-target programme ಬಹುಗುರಿಗಳ ಕಾರ್ಯಕ್ರಮ

National budget ರಾಷ್ಟ್ರೀಯ ಮುಂಗಡ ಪತ್ರ

Nationalisation ರಾಷ್ಟ್ರೀಕರಣ

National incomc ರಾಷ್ಟ್ರೀಯ ಆದಾಯ

Nationalization ರಾಷ್ಟ್ರೀಕರಣ

Natural order ಸಹಜ ವ್ಯವಸ್ಥೆ, ನಿಸರ್ಗ ನಿಯಮಕತೆ

Natural value ಸಹಜ ಮೌಲ್ಯ

Near money ಸಾಮೀಪ್ಯ ಹಣ

Neo-classical school ನವಸಂಪ್ರದಾಯ ಪಂಥ

Neo-classicism ನವಸಾಂಪ್ರದಾಯಿಕವಾದ

Net product ನಿವ್ವಳ ಉತ್ಪನ್ನ

Net profit ನಿವ್ವಳ ಆದಾಯ

No rent land ಗೇಣಿ ರಹಿತ ಭೂಮಿ

Normal price ಮಾಮೂಲ ಬೆಲೆ

Notes in circulation ಚಲಾವಣೆಯಲ್ಲಿರುವ ಹಣದ ಪರಿಮಾಣ

Neutral money policy ತಟಸ್ಥ ಹಣ ನೀತಿ

Neutral tax policy ತಟಸ್ಥ ತೆರಿಗೆ ನೀತಿ

New Economic policy ಹೊಸ ಆರ್ಥಿಕ ನೀತಿ

Non-aligned movement ಅಲಿಪ್ತ ಚಳವಳಿ

Non-developmental expenditure ಅಭಿವೃದ್ಧಿಯೇತರ ವೆಚ್ಚ

Non-plan expenditure ಯೋಜನೇತರ ವೆಚ್ಚ

Non-price competition ಬೆಲೆ ರಹಿತ ಪೈಪೋಟಿ

Normative theory of public expenditure ಸಾರ್ವಜನಿಕ ವೆಚ್ಚದ ನೈತಿಕ ತತ್ವ

Objectives ಉದ್ದೇಶಗಳು

Obligatory expenditure ಮಾಡಬೇಕಾದ ವೆಚ್ಚ

Oligarchy ಕೆಲವರ ಅಧಿಪತ್ಯ

Oligopoly ಕೆಲವರ ಸ್ವಾಮ್ಯ

Oligopsony ಕೆಲಗ್ರಾಹಕ ಮಾರುಕಟ್ಟೆ

Open Market Operation ಮುಕ್ತ ಮಾರುಕಟ್ಟೆಯ ಕಾರ್ಯಾಚರಣೆ

Opportunity cost ಸದವಕಾಶ ವೆಚ್ಚ

Optimism ಆಶಾವಾದ

Optimum production ಸಮಂಜಸ ಉತ್ಪಾದನೆ

Optimum taxable capacity ಆದರ್ಶ ತೆರಿಗೆ ಸಾಮರ್ಥ್ಯ

Optimum taxation ಆದರ್ಶ ತೆರಿಗೆ ವ್ಯವಸ್ಥೆ

Optimum ಗರಿಷ್ಠ ಹಂತ

Optimum population ಮಾದರಿ ಜನಸಂಖ್ಯೆ

Order naturale ನಿಸರ್ಗ ನಿರ್ಮಿತ ವ್ಯವಸ್ಥೆ

Order positif ಮಾನವ ನಿರ್ಮಿತ ವ್ಯವಸ್ಥೆ

Ordinal utility ಸ್ಥಾನದರ್ಶಕ ತುಷ್ಟಿಗುಣ

Organisation ಸಂಘಟನೆ

Over draft facility ಹೆಚ್ಚಿಗೆ ಹಣ ತೆಗೆಯುವ (ಬಳಸುವ)ಸೌಲಭ್ಯ

Ottava Agreement ಒಟ್ಟಾವ ಕರಾರು

Over investment ಅತಿಹೂಡಿಕೆ

Overhead costs ಮೇಲಾಡಳಿತ ವೆಚ್ಚಗಳು

Parabola ಪರವಲಯ

Parameters ಪರಾಮಿತಿಗಳು, ನಿಯತಾಂಕಗಳು

Paretian Optimality ಪೆರೆಟೋನ ಸಮತೋಲನ ಸ್ಥಿತಿ

Partial equilibrium ಭಾಗಶಃ(ಪಾರ್ಶ್ವ) ಸಮತೋಲನ

Patent right ಸ್ವಾಮ್ಯಸನದು

Peak ತುಟ್ಟ ತುದಿ, ತುತ್ತ ತುದಿ

Per capita Income ತಲಾ ಆದಾಯ

Per capita real income ತಲಾ ನಿಜ ಆದಾಯ

Perfect competition ಪರಿಪೂರ್ಣ ಪೈಪೋಟಿ

Perfect monopoly ಪೂರ್ಣ ಏಕಸ್ವಾಮ್ಯ

Permanent Income ಶಾಶ್ವತ ಆದಾಯ

Pension ನಿವೃತ್ತಿ ವೇತನ, ಪಿಂಚಣಿ

Physical labour ದೈಹಿಕ ಶ್ರಮ

Place utility ಸ್ಥಾನ ತುಷ್ಟಿಗುಣ

Permanent income hypothesis ಶಾಶ್ವತ ಆದಾಯ ಪೂರ್ವಕಲ್ಪನೆ

Personal income ವೈಯಕ್ತಿಕ ವರಮಾನ

Perspective plans ದೂರದೃಷ್ಟಿಯ ಯೋಜನೆಗಳು

Pessimism ನಿರಾಶಾವಾದ

Physical plans ಭೌತಿಕ ಯೋಜನೆಗಳು

Physical quality of life index ಜೀವನದ ಭೌತಿಕ ಗುಣಮಟ್ಟ ಸೂಚಿ

Physiocracy ಕೃಷಿಪಂಥ, ವ್ಯವಸಾಯ ಪಂಥ

Pigou effect ಪಿಗೋ ಪರಿಣಾಮ

Plan expenditure ಯೋಜನಾ ವೆಚ್ಚ

Planned Economy ಯೋಜಿತ ಅರ್ಥವ್ಯವಸ್ಥೆ

Planning ಯೋಜನೆ

Population ಜನಸಂಖ್ಯೆ

Positive checks ನೈಸರ್ಗಿಕ ಉಪಾಯಗಳು

Political economy ರಾಜಕೀಯ ಅರ್ಥಶಾಸ್ತ್ರ

Population theory ಜನಸಂಖ್ಯಾ ತತ್ವ

Portfolio investment ವಿಭಾಗೀಯ ಹೂಡಿಕೆ

Positive Science ವಾಸ್ತವಿಕ ವಿಜ್ಞಾನ

Possible growth rate ಸಾಧ್ಯತಾ ಬೆಳವಣಿಗೆಯ ದರ

Posteriori method ಬಳಿಕಿನ ವಿಧಾನ/ಅಂತಿಮ ವಿಧಾನ

Potable water ಕುಡಿಯುವ ನೀರು

Pound Sterling ಇಂಗ್ಲೆಂಡ್ ದೇಶದ ಹಣ

Poverty and Economic Inequality ಬಡತನ ಮತ್ತು ಆರ್ಥಿಕ ಅಸಮಾನತೆ

Precautionary motive ಮುನ್ನೆಚ್ಚರಿಕೆಯ ಉದ್ದೇಶ

Precipitate income ತಲಾದಾಯ

Preventive checks ಪ್ರತಿಬಂಧಕ ಉಪಾಯಗಳು

Price control ಬೆಲೆ ನಿಯಂತ್ರಣ

Price determination ಮೌಲ್ಯ ನಿರ್ಧಾರ

Price Discrimination ಬೆಲೆಯ ತಾರತಮ್ಯ

Price fixation ಮೌಲ್ಯ ನಿಗದಿ

Price fluctuations ಬೆಲೆಗಳ ಏರಿಳಿತಗಳು

Price mechanism ಬೆಲೆ ಯಂತ್ರ

Price policy ಬೆಲೆ ನೀತಿ

Price Rigidity ಬೆಲೆಯ ಕಾಠಿಣ್ಯ

Price theory ಬೆಲೆಯ ತತ್ವ

Primary burden of tax ತೆರಿಕೆಯ ಪ್ರಾಥಮಿಕ ಹೊರೆ

Primary deposits ಮೂಲ ಠೇವಣಿ

Prime cost ಮುಖ್ಯ ವೆಚ್ಚ, ಬದಲಾಗುವ ವೆಚ್ಚ

Principle of benefit ಪ್ರಯೋಜನ ಸಿದ್ಧಾಂತ

Principle of sacrifice ತ್ಯಾಗದ ಸಿದ್ಧಾಂತ

Principle of sound finance ಸುರಕ್ಷಿತ ಹಣಕಾಸಿನ ಸಿದ್ಧಾಂತ

Principles of Economics ಅರ್ಥಶಾಸ್ತ್ರದ ತತ್ವಗಳು

Priori method ಆದ್ಯ ವಿಧಾನ

Private capital ಖಾಸಗಿ ಬಂಡವಾಳ

Private goods ಖಾಸಗಿ ಸರಕುಗಳು

Private marginal net product ಖಾಸಗಿ ಸೀಮಾಂತ ನಿವ್ವಳ ಉತ್ಪನ್ನ

Private Monopoly ಖಾಸಗಿ ಏಕಸ್ವಾಮ್ಯ

Private ownership ಖಾಸಗಿ ಒಡೆತನ

Private property ಖಾಸಗಿ ಆಸ್ತಿ

Private sector ಖಾಸಗಿ ರಂಗ

Private trade ಖಾಸಗಿ ವ್ಯಾಪಾರ

Privatization ಖಾಸಗೀಕರಣ

Probability ಸಂಭವನೆ

Product differentiation ವಸ್ತು/ಸರಕು ಭೇದ

Product method ಉತ್ಪನ್ನ ವಿಧಾನ

Production function ಉತ್ಪಾದನಾ ಬಿಂಬಕ

Production ಉತ್ಪಾದನೆ

Production cost ಉತ್ಪಾದನೆಯ ವೆಚ್ಚ

Productive loan ಉತ್ಪಾದಕ ಸಾಲ

Productive debt ಉತ್ಪಾದಕ ಸಾಲ

Productive labour ಉತ್ಪಾದಕ ಶ್ರಮ

Productive power ಉತ್ಪಾದನಾ ಸಾಮರ್ಥ್ಯ

Professional tax ವೃತ್ತಿ ತೆರಿಗೆ

Profit ಲಾಭ

Progressive taxation ಪ್ರಗತಿದಾಯಕ ಕರ

Proportional reserve system ಅನುಪಾತ ಸಂಚಿತ ಪದ್ಧತಿ

Progressive taxes ಪ್ರಗತಿಪರ ತೆರಿಗೆಗಳು

Progressive utilitarian theory ಪ್ರಗತಿಪರ ಉಪಯುಕ್ತತಾ ತತ್ವ(ರವಿಬಾತ್ರಾ)

Project Evaluation ಯೋಜನೆಯ ಪರಾಮರ್ಶೆ

Project Tied Aid ಯೋಜನಾ ಬಂಧಿತ ನೆರವು

Proletariat ದುಡಿಯುವ ವರ್ಗ, ಕಾರ್ಮಿಕರು

Propensity to consume ಅನುಭೋಗ ಪ್ರವೃತ್ತಿ

Propensity to save ಉಳಿತಾಯ ಪ್ರವೃತ್ತಿ

Proportional taxes ಪ್ರಮಾಣಾನುಗುಣ ತೆರಿಗೆಗಳು

Protectionist ರಕ್ಷಣಾವಾದಿಗಳು

Protective tax ರಕ್ಷಣಾತ್ಮಕ ತೆರಿಗೆ

Provident fund ಕ್ಷೇಮ(ಭವಿಷ್ಯ)ನಿಧಿ

Psychological law of consumption ಅನುಭೋಗದ ಮಾನಸಿಕ ನಿಯಮ

Psychological theory ಮಾನಸಿಕ ತತ್ವ

Public utilities ಸಾರ್ವಜನಿಕ ಉಪಯುಕ್ತತೆಗಳು

Public borrowing ಸಾರ್ವಜನಿಕ ಸಾಲ ಪಡೆಯುವುದು

Public debt ಸಾರ್ವಜನಿಕ ಸಾಲ

Public debt management ಸಾರ್ವಜನಿಕ ಸಾಲ ನಿರ್ವಹಣೆ

Public Economics ಸಾರ್ವಜನಿಕ ಅರ್ಥಶಾಸ್ತ್ರ

Public expenditure ಸಾರ್ವಜನಿಕ ವೆಚ್ಚ

Public finance ಸಾರ್ವಜನಿಕ ಹಣಕಾಸು

Public loan ಸಾರ್ವಜನಿಕ ಸಾಲ

Public opinion ಸಾರ್ವತ್ರಿಕ ಒಪ್ಪಿಗೆ

Public ownership ಸರಕಾರಿ ಒಡೆತನ

Purchasing power ಕೊಳ್ಳುವ ಶಕ್ತಿ

Public revenue ಸಾರ್ವಜನಿಕ ಆದಾಯ

Public Sector ಸಾರ್ವಜನಿಕ ಸರಕಾರಿ ರಂಗ/ಕ್ಷೇತ್ರ

Public utilities ಸಾರ್ವಜನಿಕ ಉಪಯುಕ್ತತೆಗಳು

Pump priming ಮುಗ್ಗಟ್ಟು ನಿವಾರಣೆಗೆ ಬೃಹತ್ ಸ್ವಾಯತ್ತ ಹೂಡಿಕೆ

Purchasing power ಕೊಳ್ಳುವ ಸಾಮರ್ಥ್ಯ

Purely monetary theory ಶುದ್ಧಾಂಗ ವಿತ್ತೀಯ ತತ್ವ

Purusharthas ಪುರುಷಾರ್ಥಗಳು

Quadrants ಪಾದಗಳು

Quadratic function ವರ್ಗ ಉತ್ಪನ್ನ ಫಲ

Qualitative control ಗುಣಾತ್ಮಕ ನಿಯಂತ್ರಣ

Quality of Labour ಶ್ರಮದ ಗುಣಮಟ್ಟ

Quantitative control ಪರಿಮಾಣಾತ್ಮಕ ನಿಯಂತ್ರಣ

Quantity theory of money ಹಣದ ಪರಿಮಾಣ ತತ್ವ/ಹಣದ ಪರಿಮಾಣ ಸಿದ್ಧಾಂತ

Quasi-rent ಅರೆ-ಗೇಣಿ(ಮಾರ್ಷಲ್)

Quesnay's economic table ಕ್ವೆನೆಯ ಆರ್ಥಿಕ ಕೋಷ್ಟಕ

Quit India Movement ಭಾರತ ಬಿಟ್ಟು ತೊಲಗಿ ಚಳವಳಿ

Rarety ಸೀಮಾಂತ ತುಷ್ಟಿಗುಣ(ವಾಲ್ರಾ)

Rate of exchange ವಿನಿಮಯ ದರ

Rational ತುಲನಾತ್ಮಕ

Real wages ನೈಜ ವೇತನ

Rationale ಔಚಿತ್ಯ, ಯುಕ್ತಾಯುಕ್ತತೆ

Rationality ವಿವೇಚನಾಶೀಲತೆ

Rationalization ಆಧುನೀಕರಣ, ವೈಜ್ಞಾನೀಕರಣ

Rationing ಪಡಿತರ

Raw materials ಕಚ್ಚಾ ಸರಕುಗಳು

Reactionary ಪ್ರತಿಕ್ರಿಯಾವಾದಿ

Real burden of tax ತೆರಿಗೆಯ ನೈಜ ಹೊರೆ

Real balance effect ನೈಜ ಶಿಲ್ಕು ಪರಿಣಾಮ (ಪಿಗೋ)

Real capital stock ನೈಜ ಬಂಡವಾಳ ದಾಸ್ತಾನು

Real income effect ನೈಜಾದಾಯ ಪರಿಣಾಮ

Real National Income ನೈಜ ರಾಷ್ಟ್ರಿಯ ಆದಾಯ

Reasoning ವಿಚಾರ ಪ್ರಜ್ಞೆ, ವೈಚಾರಿಕತೆ

Recession ಹಿಂಜರಿತ, ಅಪಕರ್ಷ

Reciprocal demand ಪ್ರತಿಕ್ರಿಯಾತ್ಮಕ ಬೇಡಿಕೆ

Recovery ಚೇತರಿಕೆ, ಪುನಶ್ಚೇತನ

Redeemable debt ಮರು ಪಾವತಿಸಲಿರುವ ಸಾಲ

Redistribution of income ಆದಾಯದ ಮರು ವಿತರಣೆ

Reflation ಮರುಪ್ರಸರಣ, ಬೆಲೆ ಏರಿಕೆ

Refuge capital ಕೊರತೆ ಬಂಡವಾಳ

Refunding ಮರು ನಿಧೀಕರಣ, ಮರು ಪಾವತಿ

Regional Finance ಪ್ರಾದೇಶಿಕ ಹಣಕಾಸು

Regional imbalance ಪ್ರಾದೇಶಿಕ ಅಸಮಾನತೆ

Registration fee ನೋಂದಾಯಿಸಲು ಶುಲ್ಕ

Regional Plans ಪ್ರಾದೇಶಿಕ ಯೋಜನೆಗಳು

Regression analysis ಅಪಸರ್ಪಣ ವಿಶ್ಲೇಷಣೆ

Regressive tax ಪ್ರತಿಗಾಮಿ ತೆರಿಗೆ

Removal of unemployment ನಿರುದ್ಯೋಗ ನಿರ್ಮೂಲನೆ

Reserve bank ಕೇಂದ್ರ ಬ್ಯಾಂಕ್

Resources ಸಂಪನ್ಮೂಲಗಳು

Revolutionary measures ಕ್ರಾಂತಿಕಾರಿ ವಿಧಾನಗಳು

Remunerative capital ಪ್ರತಿಫಲಾತ್ಮಕ ಬಂಡವಾಳ

Renaissance ಪುನರುಜ್ಜೀವನ

Rental income ಗೇಣಿ(ಬಾಡಿಗೆ)ರೂಪದ ಆದಾಯ

Rentier class ಗೇಣಿದಾರರ ವರ್ಗ

Repayment of debt ಸಾಲ ಮರುಪಾವತಿ

Repudiation of debt ಸಾಲ ಪಾವತಿ ನಿರಾಕರಣೆ

Reserve fund ಮೀಸಲು ನಿಧಿ

Reserve price ಮೀಸಲು ಬೆಲೆ

Resistance curve ಪ್ರತಿರೋಧ ರೇಖೆ(ಹಿಕ್ಸ್)

Restricted golden age ನಿಯಂತ್ರಿತ ಸುವರ್ಣ ಯುಗ(ರಾಬಿನ್‌ಸನ್)

Revenue budget ಕಂದಾಯ ಮುಂಗಡಪತ್ರ

Revenue expenditure ಕಂದಾಯ ವೆಚ್ಚ

Revenue tariff ಕಂದಾಯ ಸುಂಕ

Revival ಚೇತರಿಕೆ; ಪುನರುದಯ

Revolution ಕ್ರಾಂತಿ

Roman economic thought ರೋಮನ್ನರ ಆರ್ಥಿಕ ಚಿಂತನೆ

Rouble ರಷ್ಯಾ ದೇಶದ ಹಣ

Rule of nature ಪ್ರಕೃತಿಯ ಆಳ್ವಿಕೆ, ನಿಸರ್ಗ ನಿಯಮ

Run away inflation ನಾಗಲೋಟದ ಅತಿಪ್ರಸರಣ

Running expenditure ಕಾರ್ಯಕಾರಿ ವೆಚ್ಚ

Rural development ಗ್ರಾಮೀಣ ಅಭಿವೃದ್ಧಿ

Russian Revoluation ರಷ್ಯಾ ಕ್ರಾಂತಿ

Sales tax ಮಾರಾಟಕರ/ಮಾರಾಟ ತೆರಿಗೆ

Scarcity ವಿರಳತೆ/ಕೊರತೆ

Sacrifice theory ತ್ಯಾಗ ತತ್ವ

Seasonal unemployment ನಿಯುತಕಾಲಿಕ ನಿರುದ್ಯೋಗ

Security ಸಾಲಪತ್ರ

Self_supporting ಸ್ವಾವಲಂಬಿತ

Selling cost ಮಾರಾಟ ವೆಚ್ಚ

Service competition ಸೇವೆಯ ಆಧಾರದ ಮೇಲಿನ ಪೈಪೋಟಿ

Services ಸೇವೆಗಳು

Share ಸಾಲಪತ್ರ

Saliant features ವಿಶಿಷ್ಟ ಲಕ್ಷಣಗಳು

Say's Law of market ಸೇಯ ಮಾರುಕಟ್ಟೆ

Scale of preference ಆಯ್ಕೆಯ ಪ್ರಮಾಣ

Scare means ಕೊರತೆಯ ಸಾಧನಗಳು

Science of material welfare ಭೌತಿಕ ಕಲ್ಯಾಣದ ವಿಜ್ಞಾನ

Scientific Cultivation ವೈಜ್ಞಾನಿಕ ಬೇಸಾಯ

Scissor crisis ಕತ್ತರಿ ಬಿಕ್ಕಟ್ಟು

Sea Transport ಸಮುದ್ರ ಸಾರಿಗೆ, ಜಲಸಾರಿಗೆ

Seasonal occupation ಋತು ಸಂಬಂಧಿ ವೃತ್ತಿ

Secondary changes ಅನುಷಂಗಿಕ ಬದಲಾವಣೆಗಳು

Sectoral Planning ಕ್ಷೇತ್ರಿಯ ಯೋಜನಾ ಕ್ರಮ

Secular Deterioration ಸುದೀರ್ಘ ಅಧಃಪತನ

Secular stagnation ಸುದೀರ್ಘ ಸ್ಥಾಗಿತ್ಯ

Secularism ಜಾತ್ಯಾತೀತವಾದ

Selective credit control ಗುಣಾತ್ಮಕ ಸಾಲ ನಿಯಂತ್ರಣ

Self-interest ಸ್ವ–ಹಿತ, ಸ್ವಂತ ಹಿತ

Seller's market ಮಾರಾಟಗಾರರ ಮಾರುಕಟ್ಟೆ

Semi variable cost ಅರೆ ವ್ಯತ್ಯಾಸಾತ್ಮಕ ವೆಚ್ಚ

Shifting equilibrium ವರ್ಗಾವಣೆಗೊಳ್ಳುವ ಸಮತೋಲನ

Short term debt ಅಲ್ಪಾವಧಿ ಸಾಲ

Short-term ಅಲ್ಪಾವಧಿ

Sickness insurance ಅನಾರೋಗ್ಯ ವಿಮೆ

Silk Industry ರೇಷ್ಮೆ ಕೈಗಾರಿಕೆ

Single tax ಏಕ ತೆರಿಗೆ

Sinking fund ಋಣ ವಿಮೋಚಕ ನಿಧಿ

Slicing method ತುಣುಕು ವಿಧಾನ

Slump ಕುಸಿತದ ಪರಮಾವಧಿ

Social accounting ಸಾಮಾಜಿಕ ಲೆಕ್ಕಾಚಾರ

Social Amenities ಸಾಮಾಜಿಕ ಸೌಲಭ್ಯಗಳು

Social Capital ಸಾಮಾಜಿಕ ಬಂಡವಾಳ

Social Causes ಸಾಮಾಜಿಕ ಕಾರಣಗಳು

Social Change ಸಾಮಾಜಿಕ ಬದಲಾವಣೆ

Social cost ಸಾಮಾಜಿಕ ವೆಚ್ಚ

Social Desirability ಸಾಮಾಜಿಕ ಅಪೇಕ್ಷಣೀಯತೆ

Social dividend ಸಾಮಾಜಿಕ ಭಾಜ್ಯಾಂಶ

Social economies ಸಾಮಾಜಿಕ ಅರ್ಥಶಾಸ್ತ್ರ

Social expenditure ಸಾಮಾಜಿಕ ವೆಚ್ಚ(ಖರ್ಚು)

Social goods ಸಾಮಾಜಿಕ ಸರಕುಗಳು

Social insurance ಸಾಮಾಜಿಕ ವಿಮೆ

Social marginal net product ಸಾಮಾಜಿಕ ಸೀಮಾಂತ ನಿವ್ವಳ ಉತ್ಪನ್ನ

Social marginality ಸಾಮಾಜಿಕ ಸೀಮಾಂತತೆ

Social optimum ಸಾಮಾಜಿಕ ಅತ್ಯಂತಾನುಕೂಲತೆ

Social overhead capital ಸಾಮಾಜಿಕ ಮೌಲ್ಯೋತ್ಪಾದಕ ಬಂಡವಾಳ

Social product ಸಾಮಾಜಿಕ ಉತ್ಪನ್ನ

Social security ಸಾಮಾಜಿಕ ಭದ್ರತೆ

Social Service ಸಾಮಾಜಿಕ ಸೇವೆ

Social welfare ಸಮಾಜ

Socialistic plans ಸಮಾಜವಾದಿ ಯೋಜನೆಗಳು

Socialization ಸಾಮಾಜೀಕರಣ

Soft curren ಮೃದು ಹಣ, ವಿಪುಲ ಲಭ್ಯತೆಯ ಹಣ

Soft loans ಮಿದು ಸಾಲಗಳು, ಸುಲಭ ಲಭ್ಯತೆಯ ಸಾಲಗಳು

Soft state ಮಿದುರಾಜ್ಯ

Sole proprietorship ಏಕ ಯಜಮಾನತ್ವ

Special assessment ವಿಶೇಷ ಮೌಲ್ಯಮಾಪನ (ಕಂದಾಯ)

Specialization ಪರಿಣತಿ ಸಾಧನೆ

Static ಜಡತೆ

Stamp fee ಅನುಮತಿ ಶುಲ್ಕ

Specific tax ನಿರ್ದಿಷ್ಟ ತೆರಿಗೆ

Speculative activities ಸಟ್ಟಾ ವ್ಯವಹಾರದ ಚಟುವಟಿಕೆಗಳು

Spread effects ಪ್ರಸರಣ ಪರಿಣಾಮಗಳು

Standard of living ಜೀವನ ಮಟ್ಟ

Store of value ಮೌಲ್ಯ ಸಂಗ್ರಹಣೆಯ ಸಾಧನ

Subjective ವ್ಯಕ್ತಿಗತ

Supply ಪೂರೈಕೆ

Supply theory ಪೂರೈಕೆ ಸಿದ್ಧಾಂತ

Standard of living ಜೀವನಮಟ್ಟ

Stateless society ರಾಜ್ಯರಹಿತ ಸಮಾಜ

Stationary state ಸ್ಥಿರಸ್ಥಿತಿ

Statistical method ಸಂಖ್ಯಾಶಾಸ್ತ್ರ ವಿಧಾನ

Steam ploughs ಉಗಿ ನೇಗಿಲುಗಳು

Structural unemployment ರಚನಾತ್ಮಕ ನಿರುದ್ಯೋಗ

Struggle for existence ಅಸ್ತಿತ್ವಕ್ಕಾಗಿ ಹೋರಾಟ

Subbath day ಸಬ್ಬತ್ ದಿನ, ಹೀಬ್ರೂಗಳ ರಜಾದಿನ

Subjective factors ವ್ಯಕ್ತಿನಿಷ್ಠ ಅಂಶಗಳು

Subsidy ಸಬ್ಸಿಡಿ, ಸಹಾಯಧನ

Subsistence level ಜೀವನಾಧಾರ ಹಂತ

Subsistence wage ಜೀವನಾಧಾರ ಕೂಲಿ

Sunk capital ಏಕೋದ್ದೇಶ(ಮುಳುಗಿದ) ಬಂಡವಾಳ

Supplementary cost ಪೂರಕವೆಚ್ಚ, ಸ್ಥಿರವೆಚ್ಚ

Supplementary finance ಪೂರಕ ಹಣಕಾಸು

Support price ಬೆಂಬಲ ಬೆಲೆ

Suppressed inflation ಅಮುಕಿ ಹಿಡಿದ ಅತಿಪ್ರಸರಣ

Surplus budget ಉಳಿತಾಯದ ಮುಂಗಡ ಪತ್ರ/ಮಿಗುತೆ ಮುಂಗಡಪತ್ರ

Synthesis ಸಮನ್ವಯ(ಸಂಶ್ಲೇಷಣೆ)

Target ಗುರಿ

Tariff policy ಸುಂಕನೀತಿ/ತೆರಿಗೆ ನೀತಿ

Tariff system ಸುಂಕ ವ್ಯವಸ್ಥೆ

Tax avoidance ತೆರಿಗೆ ತಪ್ಪಿಸುವಿಕೆ

Tax benefit ತೆರಿಗೆ ಪ್ರಯೋಜನ

Tax burden ತೆರಿಗೆಯ ಹೊರೆ/ಭಾರ

Tax concession ತೆರಿಗೆ ರಿಯಾಯಿತಿ/ತೆರಿಗೆ ವಿನಾಯಿತಿ

Tax on imports and exports ಆಮದು-ರಫ್ತುಗಳ ಮೇಲಿನ ಕರ

Tax evasion ತೆರಿಗೆ ಕಳ್ಳತನ

Tax exemption ತೆರಿಗೆ ವಿನಾಯಿತಿ

Tax Policy ತೆರಿಗೆ ನೀತಿ

Tax Revenue ತೆರಿಗೆ ರೂಪದ ಆದಾಯ

Tax ತೆರಿಗೆ

Taxable capacity ತೆರಿಗೆ ಸಾಮರ್ಥ್ಯ

Taxation theories ತೆರಿಗೆ ವ್ಯವಸ್ಥೆಯ ತತ್ವಗಳು

Teadon golden age ಜಡತೆಯ ಸುವರ್ಣಯುಗ (ರಾಬಿನ್‌ಸನ್)

Technical change ತಾಂತ್ರಿಕ ಬದಲಾವಣೆ

Technical economics ತಾಂತ್ರಿಕ ಅರ್ಥಶಾಸ್ತ್ರ

Technocracy ತಾಂತ್ರಿಕ ನಿಯಂತ್ರಣ

Technological advancement ತಾಂತ್ರಿಕ ಮುನ್ನಡೆ

Technological unemployment ತಾಂತ್ರಿಕ ನಿರುದ್ಯೋಗ

Theory ಸಿದ್ಧಾಂತ

Time preference theory ಕಾಲಾಭಿಲಾಷೆಯ ಬಡ್ಡಿ ಸಿದ್ಧಾಂತ

Technology transfer ತಂತ್ರಜ್ಞಾನ ವರ್ಗಾವಣೆ

Tenant ಗೇಣಿದಾರ

Terms of Trade ವ್ಯಾಪಾರದ ಕರಾರುಗಳು

Theory of divine origin ದೇವಮೂಲವಾದ (ಉಗಮದ ದೈವಿಕ ಸಿದ್ಧಾಂತ)

Theory of population ಜನಸಂಖ್ಯಾ ತತ್ವ

Thesis ವ್ಯವಸ್ಥೆ(ಪೂರ್ವಪಕ್ಷ)

Tied Aid ಬಂಧಿತ ನೆರವು

Tight money policy ಬಿಗು ವಿತ್ತ ನೀತಿ

Time element ಸಮಯದ ಅಂಶ

Time series data ಕಾಲಶ್ರೇಣಿಯ ದತ್ತಾಂಶಗಳು

Total cost ಒಟ್ಟು ವೆಚ್ಚ

Tokugava dynasty ಟೋಕುಗಾವಾ ಮನೆತನ

Trade ವ್ಯಾಪಾರ

Trade cycles ಆರ್ಥಿಕ ಆವರ್ತಗಳು

Trade policy ವ್ಯಾಪಾರದ ನೀತಿ

Trade Union ಕಾರ್ಮಿಕ ಸಂಘ

Transaction motive ದೈನಂದಿನ ವ್ಯವಹಾರದ ಉದ್ದೇಶ

Transfer earnings ವರ್ಗಾವಣೆ ಗಳಿಕೆಗಳು

Transfer moratorim ಸಾಲ ತೀರಿಕೆ ವರ್ಗಾವಣೆ

Transfer of funds ನಿಧಿಗಳ ವರ್ಗಾವಣೆ

Transformation curve ಪರಿವರ್ತನಾ ರೇಖೆ

Transitory income ನಶ್ವರ ಆದಾಯ

Transport ಸಾರಿಗೆ

Transport and communication ಸಾರಿಗೆ ಮತ್ತು ಸಂಪರ್ಕ

Transport cost ಸಾರಿಗೆ ವೆಚ್ಚ/ ಸಾಗಟ ವೆಚ್ಚ

Treasury bills ಖಜಾನೆ ಹುಂಡಿಗಳು

Trust property ನ್ಯಾಸ ವೃತ್ತಿ

Trustee service ವಿಶ್ವಸ್ಥರ ಸೇವೆ

Trusteeship doctrine ಧರ್ಮದರ್ಶಿತ್ವ ಸಿದ್ಧಾಂತ

Trustified capitalism ಸಾಂಸ್ಥಿಕ ಬಂಡವಾಳಶಾಹಿತ್ವ

Unbalanced budget ಅಸಂತುಲಿ ಮುಂಗಡಪತ್ರ

Unbalanced growth ಅಸಂತುಲಿತ ಬೆಳವಣಿಗೆ

Under –consumption ಅಪೂರ್ಣಾನುಭೋಗ

Under utilization ಅಪೂರ್ಣ ಬಳಕೆ

Under world ಭೂಗತ ಜಗತ್ತು

Underdeveloped country ಅಪೂರ್ಣಾಭಿವೃದ್ಧಿ ದೇಶ

Underdevelopment ಅಪೂರ್ಣಾಭಿವೃದ್ಧಿ

Underemployment ಅಪೂರ್ಣೋದ್ಯೋಗ

Uneamed Income ಗಳಿಸಿದ್ದಲ್ಲದ ಆದಾಯ, ಶ್ರಮ ರಹಿತ ಗಳಿಕೆ

Unemployment ನಿರುದ್ಯೋಗ

Uniform price ಸಮಾನ ಬೆಲೆ

Unproductive Loan ಅನುತ್ಪಾದಕ ಸಾಲ

Unemployment Insurance ನಿರುದ್ಯೋಗ ವಿಮೆ

Unfunded debt ಅನಿರ್ದಿಷ್ಟ(ಅಲ್ಪಕಾಲಿಕ)ಸಾಲ; ನಿಧಿ ರಹಿತ ಸಾಲ

Unilateral Decision ಏಕಪಕ್ಷೀಯ ನಿರ್ಧಾರ

Union excise duties ಕೇಂದ್ರ ಅಬಕಾರಿ ಸುಂಕಗಳು

United Aid ಅನಿರ್ಬಂಧಿತ ನೆರವು

Unproductive labour ಅನುತ್ಪಾದಕ ಶ್ರಮ

Untied Aid ಅನಿರ್ಬಂಧಿತ ನೆರವು

Urbanization process ನಗರೀಕರಣ ಪ್ರಕ್ರಿಯೆ

Use value ಉಪಯೋಗದ ಮೌಲ್ಯ

Utilitarianism ಉಪಯುಕ್ತತಾವಾದ

Utility analysis ತುಷ್ಟಿಗುಣ ವಿಶ್ಲೇಷಣೆ

Utility school ಉಪಯುಕ್ತತಾ ಪಂಥ

Value-in-use ಉಪಯೋಗ ಮೌಲ್ಯ

Village and small scale industries ಗ್ರಾಮ ಮತ್ತು ಸಣ್ಣ ಕೈಗಾರಿಕೆಗಳು

Value added Tax ಮೌಲ್ಯವರ್ಧಿತ ತೆರಿಗೆರ

Velocity of money ಗಣದ ಚಲಾವಣೆಯ ವೇಗ

Visible ಗೋಚರ

Voluntary Loan ಐಚ್ಛಿಕ ಸಾಲ

Voluntary unemployment ಐಚ್ಛಿಕ ನಿರುದ್ಯೋಗ

Value ಮೌಲ್ಯ, ಬೆಲೆ

Value absolute ನಿರಪೇಕ್ಷ ಮೌಲ್ಯ

Value in exchange ವಿನಿಮಯದ ಮೌಲ್ಯ

Value in use ಉಪಯೋಗದ ಮೌಲ್ಯ

Value judgment ಮೌಲ್ಯ ತೀರ್ಮಾನಗಳು

Value relative ಸಾಪೇಕ್ಷ ಮೌಲ್ಯ

Value theory ಮೌಲ್ಯ ತತ್ವ

Variable cost ವ್ಯತ್ಯಾಸಾತ್ಮಕ ವೆಚ್ಚ

Variable inputs ವ್ಯತ್ಯಾಸಾತ್ಮಕ ಉತ್ಪಾದನಾಂಗಗಳು

Variable proportion ವ್ಯತ್ಯಾಸಾತ್ಮಕ ಪ್ರಮಾಣಗಳು

Variable return ವ್ಯತ್ಯಾಸಾತ್ಮಕ ಪ್ರತಿಫಲಗಳು

Variables ಚಲಪರಿಣಾಮಗಳು

Vicious circle ವಿಷವೃತ್ತ, ವಿಷ ವರ್ತುಲ

Voluntary savings ಸ್ವಯಂಪ್ರೇರಿತ ಉಳಿತಾಯಗಳು

Wage ವೇತನ

Wage cut policy ಕೂಲಿ ಕಡಿತ ನೀತಿ

Wage freeze ಕೂಲಿ ಸ್ತಂಭನ

Wage Fund ಕೂಲಿ ನಿಧಿ

Wage fund theory ವೇತನ ನಿಧಿ ಸಿದ್ಧಾಂತ

Wage good model ಕೂಲಿ ಸರಕು ಮಾದರಿ

Wage goods ಕೂಲಿ ಸರಕುಗಳು

Wants ಅಪೇಕ್ಷೆಗಳು, ಬೇಕುಗಳು

Wealth ಸಂಪತ್ತು

Wealth tax ಸಂಪತ್ತಿನ ಮೇಲಿನ ಕರ

Welfare ಕಲ್ಯಾಣ

Welfare state ಕಲ್ಯಾಣ ರಾಷ್ಟ್ರ

Well being ಸುಖ ಜೀವನ

Wind-fall profits ಅನಿರೀಕ್ಷಿತ ಅತ್ಯಾಧಿಕ ಲಾಭ

War Communism ಕಮ್ಯೂನಿಸಂ ಸಮರ

Ware houses ಉಗ್ರಾಣಗಳು

Water transport ಜಲಸಾರಿಗೆ

Wealth tax ಸಂಪತ್ತು ತೆರಿಗೆ

Welfare economics ಕಲ್ಯಾಣ ಅರ್ಥಶಾಸ್ತ್ರ

Welfare Legislations ಕಲ್ಯಾಣ ಶಾಸನಗಳು

Welfare state ಕಲ್ಯಾಣ ರಾಜ್ಯ

Westward movement ಪಡುವಣ ಚಳುವಳಿ

Work force ಶ್ರಮಶಕ್ತಿ

Working capital ದುಡಿಯುವ ಬಂಡವಾಳ

World Market ವಿಶ್ವಮಾರುಕಟ್ಟೆ

Yen ಜಪಾನ್ ದೇಶದ ಹಣ

Yield ಉತ್ಪನ್ನ

Zero based budget ಶೂನ್ಯ ಆಧಾರಿತ ಮುಂಗಡ ಪತ್ರ

Zero income ಶೂನ್ಯ ಆದಾಯ

Zone ವಿಭಾಗ

Zones ವಲಯಗಳು

ಅನುಬಂಧ ಎರಡು

# ಪಠ್ಯಕ್ರಮ

ಲಭ್ಯವಾದ ಪಠ್ಯಕ್ರಮಗಳಲ್ಲಿ ೧೯೫೨ರಲ್ಲಿ ರೂಪಿಸಿದ ಪ್ರಥಮ ಪಿಯುಸಿ ಪಠ್ಯಕ್ರಮ ಶೀರ್ಷಿಕೆ 'ಅರ್ಥಶಾಸ್ತ್ರ'. ಇದರಲ್ಲಿ 'ಏನಿದು ಅರ್ಥಶಾಸ್ತ್ರ' ಎಂಬುದನ್ನು ಪರಿಚಯ/ಪೀಠಿಕೆಯಾಗಿ ಬಳಸಲಾಗಿದೆ. ೧. ಅರ್ಥಶಾಸ್ತ್ರದ ರೂಪುರೇಷೆ, ೨. ಸರಕು, ಪ್ರಾವೀಣ್ಯ, ವಿನಿಮಯ ೩. ಅನುಭೋಗ ೪. ಬೇಡಿಕೆ, ಪೂರೈಕೆ, ಧಾರಣೆ ೫. ಮೌಲ್ಯ ಮೀಮಾಂಸೆ ೬. ಉತ್ಪಾದನೆ ೭. ಅಪರಿಪೂರ್ಣ ಮೇಲಾಟ ೮. ಗೇಣಿ ೯. ಕೂಲಿ ೧೦. ಜನಸಂಖ್ಯೆ ೧೧. ಬಂಡವಾಳ ೧೨. ಬಡ್ಡಿ ೧೩. ನಿರುದ್ಯೋಗ ಮತ್ತು ಪೂರ್ಣೋದ್ಯೋಗ ೧೪. ಮುನಾಫೆ ೧೫. ಹಣ ಪ್ರಪಂಚ ೧೬. ಅಂತರರಾಷ್ಟ್ರೀಯ ವ್ಯಾಪಾರ ೧೭. ರಾಜಸ್ವ ೧೮. ಸಮಾಜವಾದಿ ಅರ್ಥಮಂಡಲ ೧೯. ಮುಂದೇನು? ಹೀಗೆ ಹತ್ತೊಂಭತ್ತು ಅಧ್ಯಾಯಗಳನ್ನು ಒಳಗೊಂಡಿದೆ.

೧೯೫೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ತನ್ನ ವ್ಯಾಪ್ತಿಯ ಪಿಯುಸಿ ತರಗತಿಗೆ ರಚಿಸಿದ ಪ್ರಥಮ ಪಿಯುಸಿ ಪಠ್ಯಕ್ರಮ. ಇದರ ಶೀರ್ಷಿಕೆ 'ಆರ್ಥಿಕ ರಚನೆ' ಎಂಬುದಾಗಿದೆ. (ಇದು ೧೯೬೦ರಲ್ಲಿ ಮರುಮುದ್ರಣ ಕಂಡಿದೆ.. ಇದರಲ್ಲಿ ಹದಿನಾರು ಅಧ್ಯಾಯಗಳಿವೆ. ಪೀಠಿಕೆ ೧. ಅರ್ಥಶಾಸ್ತ್ರ ಸ್ವರೂಪ ೨. ಆರ್ಥಿಕ ಜೀವನದ ವಿಕಾಸ ೩. ಮುಖ್ಯ ಆರ್ಥಿಕ ಭಾವನೆಗಳು ೪. ಉತ್ಪಾದನಾ ವಿಧಾನ–೧ ೫. ಉತ್ಪಾದನಾ ವಿಧಾನ–೨ ೬. ಉತ್ಪಾದನೆಯ ಅಂಗಗಳು–೧ ೭. ಉತ್ಪಾದನೆಯ ಅಂಗಳು–೨ ೮. ಉದ್ಯಮ ಸಂಸ್ಥೆಯ ಪ್ರಭೇದಗಳು ೯. ಆರ್ಥಿಕ ವ್ಯವಸ್ಥೆ ಕೃಷಿ ಮತ್ತು ಗಣಿ ೧೦. ಆರ್ಥಿಕ ವ್ಯವಸ್ಥೆ–ಕೈಗಾರಿಕೆಗಳು ೧೧. ಆರ್ಥಿಕ ವ್ಯವಸ್ಥೆ–ಸಾಗಣೆ ೧೨. ಆರ್ಥಿಕ ವ್ಯವಸ್ಥೆ–ಹಣ ಮತ್ತು ಬ್ಯಾಂಕು ೧೩. ಸರಕಾರ ಮತ್ತು ಜನರ ಆರ್ಥಿಕ ಜೀವನ ೧೪. ಸರಕಾರದ ಹಣಕಾಸು ೧೫. ಕಾರ್ಮಿಕ ಕಾನೂನುಗಳು ೧೬. ರಾಷ್ಟ್ರೀಯ ವರಮಾನ ಮತ್ತು ಆರ್ಥಿಕ ಯೋಜನೆ. ಇವು ಪ್ರಥಮ ಪಿಯುಸಿ ಹಂತಕ್ಕೆ ಅಧ್ಯಯನ ಪಠ್ಯಸಾಮಗ್ರಿಗಳಾಗಿ ರೂಪಿಸಲ್ಪಟ್ಟಿದ್ದವು.

೧೯೫೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರು ತಮ್ಮ ವ್ಯಾಪ್ತಿಯ ಪಿಯುಸಿ ತರಗತಿಗೆ ರೂಪಿಸಿದ ಪ್ರಥಮ ಪಿಯುಸಿ ತರಗತಿಯ ಪಠ್ಯಕ್ರಮವಾಗಿರುತ್ತದೆ. ೧೯೫೭ರಲ್ಲಿಯೇ ಅನುಷ್ಠಾನದಲ್ಲಿದ್ದುದ್ದಾಗಿ ತಿಳಿದು ಬರುತ್ತದೆ. ಇದರ ಶೀರ್ಷಿಕೆ 'ಅರ್ಥಶಾಸ್ತ್ರ'. ಇದು ಇಪ್ಪತ್ತುನಾಲ್ಕು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧. ಪೀಠಿಕೆಯಲ್ಲಿ ವ್ಯಾಖ್ಯೆ, ಸ್ವರೂಪ ಮತ್ತು ವ್ಯಾಪ್ತಿ ೨. ಅರ್ಥಶಾಸ್ತ್ರದ ಮೂಲಭೂತ ಕಲ್ಪನೆಗಳು ೩. ಉಪಭೋಗ-ಅಗತ್ಯಗಳ ತೃಪ್ತಿ ೪. ಬೇಡಿಕೆ ೫. ಉತ್ಪಾದನೆ ೬. ಉತ್ಪಾದನೆ-ಭೂಮಿ ೭. ಉತ್ಪಾದನೆ-ಶ್ರಮ ೮. ಉತ್ಪಾದನೆ-ಬಂಡವಾಳ ೯. ಉತ್ಪಾದನೆ-ವ್ಯವಸ್ಥೆ/ಸಂಘಟನೆ ೧೦. ವ್ಯವಹಾರ ವ್ಯವಸ್ಥೆಯ ಪದ್ಧತಿಗಳು ೧೧. ಮೇಲಾಟ ಮತ್ತು ಏಕಾಧಿಕಾರ ೧೨. ಉತ್ಪಾದನೆಯ ವೆಚ್ಚ ಮತ್ತು ಪ್ರತಿಫಲದ ಸಿದ್ಧಾಂತಗಳು ೧೩. ಪೂರೈಕೆ ೧೪. ವಿನಿಮಯ ೧೫. ವಿನಿಮಯ-ಮೌಲ್ಯದ/ಬೆಲೆಯ ಸಾಮಾನ್ಯ ಸಿದ್ಧಾಂತ ೧೬. ವಿನಿಮಯ-ಹಣ ೧೭. ಪತ್ತು ಹಣ ಸಂಸ್ಥೆಗಳ (ಬ್ಯಾಂಕು. ವ್ಯವಹಾರ ೧೮. ವಿನಿಮಯ-ಅಂತರರಾಷ್ಟ್ರೀಯ ವ್ಯಾಪಾರ ೧೯. ವಿತರಣ ೨೦. ವಿತರಣ-ಬಾಡಿಗೆ ೨೧. ವಿತರಣ-ವೇತನ ೨೨. ವಿತರಣ-ಬಡ್ಡಿ ೨೩. ವಿತರಣ-ಲಾಭ ೨೪. ಸರಕಾರದ ಅರ್ಥವ್ಯವಸ್ಥೆ.

೧೯೬೮ ರಲ್ಲಿ ಇದರ ಶೀರ್ಷಿಕೆ 'ಅರ್ಥಶಾಸ್ತ್ರ'. ಇದರಲ್ಲಿ ಇಪ್ಪತ್ತು ಅಧ್ಯಾಯಗಳಿರುತ್ತವೆ. ೧. ಅರ್ಥಶಾಸ್ತ್ರದ ಸ್ವರೂಪ ಮತ್ತು ನಿರೂಪಣೆ ೨. ಅರ್ಥಶಾಸ್ತ್ರದ ಮೂಲಭೂತ ಕಲ್ಪನೆಗಳು ೩. ಆರ್ಥಿಕ ಜೀವನದ ವಿಕಾಸ ೪. ಉತ್ಪಾದನಾ ಪದ್ಧತಿ ೫. ಉತ್ಪಾದಕ ಸಾಧನಗಳು-ಭೂಮಿ ೬. ಉತ್ಪಾದಕ ಸಾಧನ-ಶ್ರಮ ೭. ಉತ್ಪಾದಕ ಸಾಧನ-ಬಂಡವಾಳ ೮. ಉತ್ಪಾದಕ ಸಾಧನ-ಸಂಘಟನೆ ೯. ಆರ್ಥಿಕ ಸಂಘಟನೆ-ಸಾಗುವಳಿ ೧೦. ಆರ್ಥಿಕ ಸಂಘಟನೆ-ಖನಿಜೋತ್ಪಾದನೆ ೧೧. ಆರ್ಥಿಕ ಸಂಘಟನೆ-ಉದ್ದಿಮೆ ೧೨. ಆರ್ಥಿಕ ಸಂಘಟನೆ-ಸಾರಿಗೆ ೧೩. ಹಣ ೧೪. ಬ್ಯಾಂಕಿಂಗ್ ಸಂಸ್ಥೆಗಳು ೧೫. ವ್ಯವಹಾರಿಕ ಸಂಸ್ಥೆಗಳ ಸಂಘಟನೆ ೧೬. ಸಾರ್ವಜನಿಕ ಮತ್ತು ಖಾಸಗಿ ಆರ್ಥಿಕ ಕ್ಷೇತ್ರಗಳು ೧೭. ಸರಕಾರದ ಹಣಕಾಸಿನ ವ್ಯವಸ್ಥೆ ೧೮. ಕಾರ್ಮಿಕರ ಶಾಸನಗಳು ೧೯. ರಾಷ್ಟ್ರೀಯ ವರಮಾನ ೨೦. ಆರ್ಥಿಕ ಯೋಜನೆ ಮತ್ತು ಅಭಿವೃದ್ಧಿ.

ಈ ಪಠ್ಯಕ್ರಮಗಳು ಪದವಿಪೂರ್ವ ಪರೀಕ್ಷಾ ಮಂಡಳಿ ರಚನೆಯಾಗುವ ಪೂರ್ವದಲ್ಲಿ ಇದ್ದ ಪಠ್ಯಕ್ರಮಗಳಾಗಿವೆ. ಆಗ ಪಿಯುಸಿ ತರಗತಿ ಒಂದು ವರ್ಷದ ಕೋರ್ಸ್ ಇರುವುದಾಗಿ ತಿಳಿದು ಬರುತ್ತದೆ.

**ಪ್ರಥಮ ಪಿಯುಸಿ:** ೧೯೭೦-೭೧ ರಲ್ಲಿ ಪಿಯುಸಿ ತರಗತಿ ಎರಡು ವರ್ಷಗಳ ಅವಧಿಗೆ ಪರಿಷ್ಕರಿಸಲ್ಪಟ್ಟಿತು. ಪಠ್ಯಕ್ರಮ ಈ ರೀತಿ ರೂಪಿತವಾಯಿತು. 'ಅರ್ಥಶಾಸ್ತ್ರ' ಎಂಬ ಹೆಸರಿನ ಪಠ್ಯಕ್ರಮ ಎಂಟು ಅಧ್ಯಾಯಗಳನ್ನು ಒಳಗೊಂಡಿತ್ತು. ೧ನೇ ಅಧ್ಯಾಯ: ಅರ್ಥಶಾಸ್ತ್ರದ ಸ್ವರೂಪ ಮತ್ತು ಅದರ ವ್ಯಾಪ್ತಿ. ಇದರಲ್ಲಿ ಅರ್ಥಶಾಸ್ತ್ರದ ಅಭ್ಯಾಸವಸ್ತು, ಅರ್ಥಶಾಸ್ತ್ರದ ವ್ಯಾಖ್ಯೆಗಳು, ಅರ್ಥಶಾಸ್ತ್ರದ ವ್ಯಾಪ್ತಿ, ಅರ್ಥಶಾಸ್ತ್ರದ ಸಿದ್ಧಾಂತಗಳು, ಅರ್ಥಶಾಸ್ತ್ರ ಮತ್ತು ಇತರ ಶಾಸ್ತ್ರಗಳು ಅರ್ಥಶಾಸ್ತ್ರದ

ಅಭ್ಯಾಸದ ಪ್ರಯೋಜನಗಳು ಇರುತ್ತವೆ. ೨ನೇ ಅಧ್ಯಾಯ: ಅರ್ಥಶಾಸ್ತ್ರದ ಕೆಲವು ಮೂಲಭೂತ ಶಬ್ದಗಳು, ಇದರಲ್ಲಿ ಸಂಪತ್ತು, ಸಂಪತ್ತು ಮತ್ತು ಮಾನವ ಕಲ್ಯಾಣ, ಮೌಲ್ಯ ಮತ್ತು ಬೆಲೆ, ಪೇಟೆ, ಉಪಭೋಗ, ಮಾನವನ ಇಷ್ಟಗಳು, ಜೀವನಮಟ್ಟ, ತುಷ್ಟಗುಣದ ವಿಶ್ಲೇಷಣೇ, ಬೇಡಿಕೆ ಮತ್ತು ಬೇಡಿಕೆಯ ನಿಯಮ, ಪೂರೈಕೆ, ರಾಷ್ಟ್ರೀಯ ಆದಾಯ, ಭಾರತದಲ್ಲಿ ರಾಷ್ಟ್ರೀಯ ಆದಾಯದ ಗಣನೆ, ಆದಾಯದ ವಿಷಯ ಹಂಚಿಕೆ, ಉಳಿತಾಯ ಮತ್ತು ಬಂಡವಾಳ ತೊಡಗಿಸುವಿಕೆ ಇರುತ್ತವೆ. ೩ನೇ ಅಧ್ಯಾಯ: ಉತ್ಪಾದನೆ. ಇದರಲ್ಲಿ (ಅ) ಉತ್ಪಾದನೆಯ ಘಟಕಗಳು ಭೂಮಿ, ಶ್ರಮ, ಮಾಲ್ಥಸನ ಜನಸಂಖ್ಯಾ ಸಿದ್ಧಾಂತ, ಕಾರ್ಮಿಕರ ದಕ್ಷತೆ, ಬಂಡಳ, ಬಂಡವಾಳದ ಶೇಖರಣೆ, ಸಂಘಟನೆ. (ಬ) ಆಧುನಿಕ ಉತ್ಪಾದನೆಯ ವೈಶಿಷ್ಟ್ಯಗಳು–ಶ್ರಮವಿಭಜನೆ, ಯಂತ್ರಗಳು, ದೊಡ್ಡ ಪ್ರಮಾಣದ ಉತ್ಪಾದನೆ, ಸಣ್ಣ ಪ್ರಮಾಣದ ಉತ್ಪಾದನೆ ಉದ್ದಿಮೆಗಳ ಕೇಂದ್ರೀಕರಣ, ಪ್ರತಿಫಲದ ಸಿದ್ಧಾಂತಗಳು ಇರುತ್ತವೆ. ೪ನೇ ಅಧ್ಯಾಯ: ಉತ್ಪಾದನೆಯ ಕ್ರಮ. ಇದರಲ್ಲಿ ವಸ್ತುಗಳು, ವಸ್ತುಗಳಲ್ಲಿ ಪ್ರಕಾರಗಳು ಇರುತ್ತವೆ. ೫ನೇ ಅಧ್ಯಾಯ: ಆರ್ಥಿಕ ಜೀವನ ಸಂಘಟನೆ. ಇದರಲ್ಲಿ ಒಕ್ಕಲುತನ, ಗಣಿಕೆಲಸ, ಕೈಗಾರಿಕೆ, ಸಾರಿಗೆ, ವಾಣಿಜ್ಯ (ಏಕವ್ಯಕ್ತಿ ಸಂಸ್ಥೆ, ಪಾಲುಗಾರಿಕೆ ಮತ್ತು ಸಂಯುಕ್ತ ಬಂಡವಾಳ ಸಂಸ್ಥೆಗಳು). ೬ನೇ ಅಧ್ಯಾಯ: ಹಣ ಮತ್ತು ಬ್ಯಾಂಕು ವ್ಯವಹಾರ. ಇದರಲ್ಲಿ ವಸ್ತುಗಳ ವಿನಿಮಯ ಪದ್ಧತಿ, ಹಣದ ಹುಟ್ಟು ಮತ್ತು ಬೆಳವಣಿಗೆ, ಹಣದ ಕಾರ್ಯಗಳು, ಪ್ರಕಾರಗಳು, ನಾಣ್ಯ ಪದ್ಧತಿಗಳು, ಅತಿ ಪ್ರಸರಣ ಮತ್ತು ಅನಪ್ರಸರಣ, ಬ್ಯಾಂಕಿನ ವ್ಯವಹಾರ–ಬ್ಯಾಂಕುಗಳ ಪ್ರಕಾರಗಳು, ವಾಣಿಜ್ಯ ಬ್ಯಾಂಕುಗಳ ಕಾರ್ಯಗಳು, ಕೇಂದ್ರ ಬ್ಯಾಂಕು, ಭಾರತದ ರಿಝರ್ವ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ ಎಂಬ ಅಂಶಗಳು ಇರುತ್ತವೆ. ೭ನೇ ಅಧ್ಯಾಯ: ಆರ್ಥಿಕ ವ್ಯವಸ್ಥೆಗಳು. ಇದರಲ್ಲಿ ಬಂಡವಾಳ ಶಾಹಿ ಪದ್ಧತಿ, ಸಮಾಜವಾದ ಪದ್ಧತಿ, ಮಿಶ್ರ ಆರ್ಥಿಕ ವ್ಯವಸ್ಥೆ, ಸಹಕಾರಿ ಪದ್ಧತಿ ಇರುತ್ತವೆ. ೮ನೇ ಅಧ್ಯಾಯ ರಾಷ್ಟ್ರ ಮತ್ತು ಜನರ ಆರ್ಥಿಕ ಜೀವನ. ಇದರಲ್ಲಿ ಆಧುನಿಕ ರಾಷ್ಟ್ರದ ಕಾರ್ಯಗಳು, ಕಲ್ಯಾಣರಾಷ್ಟ್ರ, ಸಮಾಜಿಕ ಭದ್ರತೆ, ವೇತನ ನಿಯಂತ್ರಣ, ಉದ್ದಿಮೆಗಳಿಗೆ ಸಹಾಯ, ಆದಾಯ ಮತ್ತು ಆಸ್ತಿಗಳ ಪರಮಾವಧಿಮಿತಿ ಇರುತ್ತವೆ.

೧೯೭೪–೭೫ರಲ್ಲಿ ಪ್ರಥಮ ಪಿಯುಸಿ ಅರ್ಥಶಾಸ್ತ್ರವನ್ನು 'ಅರ್ಥಶಾಸ್ತ್ರ ಪರಿಚಯ'ವೆಂದು ಪರಿಷ್ಕರಣೆಗೆ ಒಳಪಡಿಸಲಾಯಿತು. ಹಿಂದಿನ ಪಠ್ಯಕ್ರಮಗಳಲ್ಲಿ 'ಯಾವ ಬದಲಾವಣೆಗಳಿಲ್ಲ' ಎನ್ನುವಷ್ಟರ ಮಟ್ಟಿಗೆ ಪರಿಷ್ಕರಿಸಿದ್ದಾರೆ. ಆದರೆ ಹಿಂದೆ ಇದ್ದ ಎಂಟು ಅಧ್ಯಾಯಗಳನ್ನು ಇಪ್ಪತ್ತು ಅಧ್ಯಾಯಗಳಾಗಿ ವಿಭಜಿಸಲಾಗಿದೆ. ಅಲ್ಲದೆ ಅವುಗಳನ್ನು ಏಳು ಪ್ರಮುಖ ಗುಂಪುಗಳಲ್ಲಿ ವಿಂಗಡಿಸಿದ್ದಾರೆ. ಇವುಗಳನ್ನೇ ಅಧ್ಯಾಯ ಎಂದು ಗುರುತಿಸುವುದಾದರೆ ಹಿಂದಿನ ಒಂದು ಮತ್ತು ಎರಡನೇ ಅಧ್ಯಾಯಗಳನ್ನು ಒಂದರಲ್ಲಿಯೇ ರೂಪಿಸಿದ್ದಾರೆ. ಮೂರನೆ ಅಧ್ಯಾಯ ಉತ್ಪಾದನೆಯನ್ನು ೨ನೇ ಅಧ್ಯಾಯ ಉತ್ಪಾದನೆಯ ಸಾಧನಗಳು ಎಂದು ಪರಿಷ್ಕರಿಸಿದ್ದಾರೆ. ೩ನೇ ಅಧ್ಯಾಯವನ್ನು ಉತ್ಪಾದನೆ ಎಂದು ಉತ್ಪಾದನೆಯ ಕ್ರಮವನ್ನು ಪರಿಷ್ಕರಿಸಿದ್ದಾರೆ. ೫ನೇ ಅಧ್ಯಾಯ ಆರ್ಥಿಕ ಜೀವನ ಸಂಘಟನೆಯನ್ನು ೪ನೇ ಅಧ್ಯಾಯ

ಆರ್ಥಿಕ ಸಂಘಟನೆ ಎಂಬುದಾಗಿ ಪರಿಷ್ಕರಿಸಿದ್ದಾರೆ. ೬ನೇ ಅಧ್ಯಾಯ ಹಣ ಮತ್ತು ಬ್ಯಾಂಕು ವ್ಯವಹಾರವನ್ನು ೫ನೇ ಅಧ್ಯಾಯ ಹಣ ಮತ್ತು ಬ್ಯಾಂಕು ಎಂಬುದಾಗಿ ಪರಿಷ್ಕರಿಸಿದ್ದಾರೆ. ೭ನೇ ಅಧ್ಯಾಯ ಆರ್ಥಿಕ ವ್ಯವಸ್ಥೆಗಳು ಎಂಬುದನ್ನು ಅರ್ಥಿಕ ವ್ಯವಸ್ಥೆ ಎಂಬುದಾಗಿ ಬದಲಾಯಿಸಿದ್ದಾರೆ. ಕೊನೆಯ ಅಧ್ಯಾಯ ರಾಷ್ಟ್ರ ಮತ್ತು ಜನರ ಆರ್ಥಿಕ ಜೀವನ ಎಂಬುದನ್ನು ಆರ್ಥಿಕ ಜೀವನ ಮತ್ತು ಸರಕಾರ ಎಂಬುದಾಗಿ ಪರಿಷ್ಕರಿಸಿರುತ್ತಾರೆ.

೧೯೮೧–೮೨ ರಲ್ಲಿ 'ಅರ್ಥಶಾಸ್ತ್ರ ಪರಿಚಯ'ವೆಂಬ ಪಠ್ಯಕ್ರಮವನ್ನು ಪರಿಷ್ಕರಣಕ್ಕೆ ಒಳಪಡಿಸಿದ್ದಾರೆ. ಇದು ಹಿಂದಿನ ೭ ಅಧ್ಯಾಯಗಳ ಬದಲಾಗಿ ೮ ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಹಿಂದಿನ ಅಂಶಗಳನ್ನೆ ಒಳಗೊಂಡು ಮುಂದುವರಿದಿದೆ. ೨ನೇ ಅಧ್ಯಾಯ ೧೯೭೧–೭೨ ರಲ್ಲಿ ಇದ್ದದ್ದನ್ನು ಈಗ ಪುನರ್‌ಬಳಕೆ ಮಾಡಲಾಗಿದೆ. ಅದು ಕೆಲವು ಮೂಲಭೂತ ಭಾವನೆಗಳು ಎಂಬುದಾಗಿದೆ. ೩ನೇ ಅಧ್ಯಾಯ ಉತ್ಪಾದನೆಯನ್ನು ಪರಿಷ್ಕರಿಸಿ ಉತ್ಪಾದನಾ ಘಟಕಗಳು ಮತ್ತು ಅವುಗಳ ಪ್ರತಿಫಲ ಎಂಬುದಾಗಿರುತ್ತದೆ. ೪ನೇ ಅಧ್ಯಾಯ ಹಣ, ಬ್ಯಾಂಕು ವ್ಯವಹಾರ ಮತ್ತು ವ್ಯಾಪಾರ ಎಂಬುದಾಗಿದೆ. ಈ ಹಿಂದೆ ಹಣ ಮತ್ತು ಬ್ಯಾಂಕು ಎಂಬುದಾಗಿತ್ತು. ಹಣ ಮತ್ತು ಬ್ಯಾಂಕಿಗೆ ಸಂಬಂಧಿಸಿದ ಎಲ್ಲಾ ಅಂಶಗಳನ್ನು ಮುಂದುವರಿಸಲಾಗಿದೆ. ವ್ಯಾಪಾರದಲ್ಲಿ ವಿದೇಶಿ ವ್ಯಾಪಾರ ಮತ್ತು ಆಂತರಿಕ ವ್ಯಾಪಾರ, ವಿದೇಶಿ ವಿನಿಮಯ, ವ್ಯಾಪಾರ ಬಾಕಿ ಮತ್ತು ಸಂದಾಯಬಾಕಿ ಎಂಬ ಅಂಶಗಳನ್ನು ಸೇರಿಸಲಾಗಿದೆ. ೫ನೇ ಅಧ್ಯಾಯ ಆರ್ಥಿಕ ವ್ಯವಸ್ಥೆ ಈ ಹಿಂದೆ ಇದ್ದ ೬ನೇ ಅಧ್ಯಾಯವನ್ನು ಮುಂದುವರಿಸಲಾಗಿದೆ. ಜೊತೆಗೆ ಆರ್ಥಿಕ ಯೋಜನೆಯನ್ನು ಸೇರಿಸಲಾಗಿದೆ. ೬ನೇ ಅಧ್ಯಾಯ ಆರ್ಥಿಕ ಜೀವನದ ಸಂಘಟನೆ. ಇದು ಹಿಂದಿನ ೭ನೇ ಅಧ್ಯಾಯದ ಒಂದು ಭಾಗವನ್ನು ಮುಂದುವರಿಸಿದ್ದಾರೆ. ೭ನೇ ಅಧ್ಯಾಯ ವ್ಯವಹಾರಿ ಸಂಘಟನೆಯ ಪ್ರಕಾರಗಳು. ಈ ಅಂಶಗಳೂ ಸಹ ಹಿಂದಿನ ಪಠ್ಯಕ್ರಮದ ಅಂಶಗಳಾಗಿರುತ್ತವೆ. ೮ನೇ ಅಧ್ಯಾಯ ಸಾರ್ವಜನಿಕ ಹಣಕಾಸು. ಇದರಲ್ಲಿ ಅರ್ಥವಿವರಣೆ ಮತ್ತು ವ್ಯಾಪ್ತಿ, ಸಾರ್ವಜನಿಕ ಹಣಕಾಸಿನ ಪ್ರಾಮುಖ್ಯತೆ, ಸಾರ್ವಜನಿಕ ಹಣಕಾಸು ಮತ್ತು ಖಾಸಗಿ ಹಣಕಾಸುಗಳಲ್ಲಿನ ವ್ಯತ್ಯಾಸ, ಸಾರ್ವಜನಿಕ ಆದಾಯ, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಸಾಲ, ಮುಂಗಡ ಪತ್ರ ಎಂಬ ಅಂಶಗಳನ್ನು ಒಳಗೊಂಡಿರುತ್ತದೆ.

೧೯೮೬–೮೭ ರಲ್ಲಿ ಪರಿಷ್ಕರಣೆಯಾಯಿತು. ಇದು ೧೦ ಅಧ್ಯಾಯಗಳನ್ನು ಒಳಗೊಂಡಿದೆ. ಈ ಹಿಂದಿನ ಪಠ್ಯಕ್ರಮ ೧ ರಿಂದ ೮ ಅಧ್ಯಾಯಗಳಲ್ಲಿನ ಅಂಶಗಳನ್ನು ಪರಿಷ್ಕರಿಸಿ ಮುಂದುವರಿಸಲಾಗಿದೆ. ಪರಿಷ್ಕರಣೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಬದಲಾವಣೆಗಳಾಗಿರುವುದು ಕಂಡು ಬರುತ್ತದೆ. ೧ನೇ ಅಧ್ಯಾಯ ಅರ್ಥಶಾಸ್ತ್ರದ ಸ್ವರೂಪ ಮತ್ತು ವ್ಯಾಪ್ತಿಯನ್ನು ಅರ್ಥಶಾಸ್ತ್ರದ ಸ್ವರೂಪ ಮತ್ತು ಅಭ್ಯಾಸವಸ್ತು (Nature and Subject Matter) ಎಂಬುದಾಗಿ ಪರಿಷ್ಕರಿಸಿದ್ದಾರೆ. ೨ನೇ ಅಧ್ಯಾಯ ಕೆಲವು ಮೂಲಭೂತ ಭಾವನೆಗಳು ಎನ್ನುವುದನ್ನು ಮೂಲಭೂತ ವಿಚಾರಗಳು (Fundamental Concepts) ಎಂಬುದಾಗಿದೆ. ೩ನೇ ಅಧ್ಯಾಯ ಉತ್ಪಾದನಾ ಘಟಕಗಳು ಮತ್ತು

ಅವುಗಳ ಸಂಭಾವನೆ (Factors of Production and their rewards) ಎಂಬುದು ಹಿಂದಿನಂತೆ ಮುಂದುವರಿದಿದೆ. ೪ನೇ ಅಧ್ಯಾಯ ಹಣ, ಬ್ಯಾಂಕು ಮತ್ತು ವ್ಯಾಪಾರ (Money, Banking and Trade) ಹಾಗೆಯೇ ಮುಂದುವರಿಸಲಾಗಿದೆ. ೫ನೇ ಅಧ್ಯಾಯ ಆರ್ಥಿಕ ವ್ಯವಸ್ಥೆಗಳು ಎಂಬುದನ್ನು ಆರ್ಥಿಕ ಪದ್ಧತಿಗಳು (Economy System) ಎಂಬುದೇ ಇರುತ್ತದೆ. ೬ನೇ ಅಧ್ಯಾಯ ಆರ್ಥಿಕ ಜೀವನದ ಸಂಘಟನೆಯನ್ನು ಆರ್ಥಿಕ ಸಂಘಟನೆ (Economic Organisation) ಎಂಬುದಾಗಿ ಪರಿಷ್ಕರಿಸಲಾಗಿದೆ. ೭ನೇ ಅಧ್ಯಾಯ ವ್ಯವಹಾರ ಸಂಘಟನೆಯ ಪ್ರಕಾರಗಳು ಎಂಬುದು ವ್ಯವಹಾರ ಸಂಘಟನೆಯ ಪ್ರಕಾರಣಗಳು (Forms of Business Organisation) ಎಂಬುದಾಗಿ ಹಾಗೆಯೇ ಮುಂದುವರಿಸಿದ್ದಾರೆ. ೮ನೇ ಅಧ್ಯಾಯ ಸಾರ್ವಜನಿಕ ಹಣಕಾಸು (Public Finance) ಯಥಾಸ್ಥಿತಿಯಲ್ಲಿ ಮುಂದುವರಿದಿದೆ. ೯ನೇ ಅಧ್ಯಾಯ ಅಂತರರಾಷ್ಟ್ರೀಯ ಆರ್ಥಿಕ ಸಂಸ್ಥೆಗಳು (International Economic Organisation) ಎಂಬುದನ್ನು ಸೇರ್ಪಡೆ ಮಾಡಿರುತ್ತಾರೆ. ಪೀಠಿಕೆ, IMF, ಅಂತರರಾಷ್ಟ್ರೀಯ ಪುನರ್‌ರಚನೆ ಮತ್ತು ಅಭಿವೃದ್ಧಿ ಬ್ಯಾಂಕು, ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ, WHO, ಜಾಗತಿಕ ಆಹಾರ ಮತ್ತು ಒಕ್ಕಲುತನ ಸಂಸ್ಥೆ, ವ್ಯಾಪಾರ ಮತ್ತು ಅಭಿವೃದ್ಧಿಗಾಗಿ ಸಂಯುಕ್ತ ರಾಷ್ಟ್ರ ಸಂಘದ ಸಮ್ಮೇಳನ, ಅಂತರರಾಷ್ಟ್ರೀಯ ಕಾರ್ಮಿಕ ಸಂಘ ಎಂಬ ಅಂಶಗಳಿರುತ್ತವೆ. ೧೦ನೇ ಅಧ್ಯಾಯ ನೋಬೆಲ್ ಪಾರಿತೋಷಿಕ ವಿಜೇತರ ಕೊಡುಗೆಗಳು (Contribution of Nobel Laureatter). ಇದರಲ್ಲಿ ಪಿ.ಎ. ಸಾಮ್ಯುಯಲ್‌ಸನ್, ಮಿಲ್ಟನ್ ಫ್ರಿಡ್‌ಮನ್, ಇರವಿಂಗ್ ಫಿಷರ್, ಸೈಮನ್‌ಕುಝ್ ನೆಟ್ಸ್, ಕೆನೆತ್ ಬೌಲ್ಡಿಂಗ್, ಜೆ.ಆರ್. ಹಿಕ್ಸ್ ಇವರ ಚಿಂತನೆಗಳನ್ನು ಸಂಕ್ಷಿಪ್ತವಾಗಿ ಅಧ್ಯಯನಕ್ಕಾಗಿ ಸೇರಿಸಿರುತ್ತಾರೆ.

೧೯೫೫–೯೬ ರಲ್ಲಿ ಪರಿಷ್ಕರಣೆಯಾದ ಪಠ್ಯಕ್ರಮ 'ಅರ್ಥಶಾಸ್ತ್ರದ ಮೂಲಾಂಶಗಳು'. ಇದರಲ್ಲಿ ೧೦ ಅಧ್ಯಾಯಗಳಿವೆ. ೧ನೇ ಅಧ್ಯಾಯ ಅರ್ಥಶಾಸ್ತ್ರದ ಸ್ವರೂಪ ಮತ್ತು ವ್ಯಾಪ್ತಿ. ಇದು ಹಿಂದಿನ ಪಠ್ಯದ ಅಂಶಗಳನ್ನು ಮುಂದುವರಿಸಲಾಗಿದೆ. ೨ನೇ ಅಧ್ಯಾಯ ಮೂಲಭೂತ ಕಲ್ಪನೆಗಳು. ಈ ಅಧ್ಯಾಯದಲ್ಲಿ ಹಿಂದಿನ ಹಲವಾರು ಅಂಶಗಳನ್ನು ಮುಂದುವರಿಸಲಾಗಿದೆ. ೩ನೇ ಅಧ್ಯಾಯ ಉತ್ಪಾದನೆಯ ಪ್ರತಿಫಲಗಳು ಎಂದಿರುತ್ತದೆ. ಇದರಲ್ಲಿ  ಉತ್ಪಾದನಾಂಗಗಳು ಮತ್ತು ಅವುಗಳಿಗೆ ಪ್ರತಿಫಲಗಳ ಕುರಿತಾದ ಅಂಶಗಳಿರುತ್ತವೆ. ೪ನೇ ಅಧ್ಯಾಯ ಆರ್ಥಿಕ ವ್ಯವಸ್ಥೆ. ಇದರಲ್ಲಿ ಬೇಸಾಯ, ಗಣಿಗಾರಿಕೆ, ಯಂತ್ರಗಳು, ಸಾರಿಗೆ ಅಂಶಗಳಿವೆ. ೫ನೇ ಅಧ್ಯಾಯ ವಿತರಣೆ. ಇಲ್ಲಿ ಉತ್ಪಾದನಾಂಗಗಳ ಪ್ರತಿಫಲನಗಳ ಕುರಿತು ವಿವರವಾದ ಅಂಶಗಳಿವೆ. ರಾಷ್ಟ್ರೀಯ ಆದಾಯ ಹಾಗೂ ಯೋಗಕ್ಷೇಮಕ್ಕೆ ಸಂಬಂಧಿಸಿದ ಅಂಶಗಳಿವೆ. ೬ನೇ ಅಧ್ಯಾಯ ವಿನಿಮಯ. ಇದರಲ್ಲಿ ಮಾರುಕಟ್ಟೆಯ ಬಗೆಗಳು ಇರುತ್ತವೆ. ೭ನೇ ಅಧ್ಯಾಯ ಹಣ, ಬ್ಯಾಂಕು, ವ್ಯಾಪಾರ ಹಾಗೂ ಸಾರ್ವಜನಿಕ ಹಣಕಾಸು. ಈ ಅಧ್ಯಾಯ ಹಿಂದಿನ ೪ ಮತ್ತು ೮ನೇ ಅಧ್ಯಾಯಗಳ ಸಂಯುಕ್ತವಾದ ಅಧ್ಯಾಯವಾಗಿದೆ. ೮ನೇ ಅಧ್ಯಾಯ ಆರ್ಥಿಕ ಯೋಜನೆ. ಈ ಅಧ್ಯಾಯದ ಅಂಶಗಳನ್ನು ಹೊಸದಾಗಿ ಸೇರಿಸಿದ್ದಾಗಿದೆ.

ಇದರಲ್ಲಿ ಆರ್ಥಿಕ ಯೋಜನೆಯ ಅರ್ಥ, ಉದ್ದೇಶಗಳು, ಅವಶ್ಯಕತೆ ಯೋಜನೆಯ ವಿಧಾನಗಳು ಎಂಬ ಅಂಶಗಳಿವೆ. ೯ನೇ ಅಧ್ಯಾಯ ಆರ್ಥಿಕ ವಿಚಾರಗಳು. ಇದರಲ್ಲಿ ರ್‍ಯಾಗನರ್ ನರ್ಕ್ಸ್, ಗುನ್ನಾರ ಮಿರ್ಡಾಲ, ಮಹಾತ್ಮ ಗಾಂಧಿ ಇವರ ವಿಚಾರಗಳನ್ನು ಪ್ರಥಮ ಬಾರಿಗೆ ಸೇರಿಸಲಾಗಿದೆ. ಹಿಂದಿನ ಅಂತರರಾಷ್ಟ್ರೀಯ ಆರ್ಥಿಕ ಸಂಸ್ಥೆಗಳು ಇತರ ಅಧ್ಯಾಯಗಳಲ್ಲಿ ಸೇರಿಸಲಾಗಿದೆ. ನೋಬೆಲ್ ಪಾರಿತೋಷಕ ವಿಜೇತರ ಕೊಡುಗೆಗಳು ಎಂಬ ಅಧ್ಯಾಯವನ್ನು ಕೈಬಿಡಲಾಗಿದೆ. ಈ ಸ್ಥಾನದಲ್ಲಿ ಆರ್ಥಿಕ ವಿಚಾರಗಳನ್ನು ಸೇರಿಸಲಾಗಿದೆ. ೧೦ನೇ ಅಧ್ಯಾಯ ಆಧುನಿಕ ಅರ್ಥಶಾಸ್ತ್ರದಲ್ಲಿ ಗಣಿತಶಾಸ್ತ್ರದ ಬಳಕೆ ಎಂಬುದಾಗಿದೆ.

೨೦೦೪-೦೫ರಲ್ಲಿನ ಪಠ್ಯಕ್ರಮ 'ಮೂಲ ಆರ್ಥಿಕ ಸಿದ್ಧಾಂತ' ಎಂದು ಪರಿಷ್ಕರಿಸಲ್ಪಟ್ಟಿತು. ಇದರಲ್ಲಿ ೮ ಅಧ್ಯಾಯಗಳಿವೆ. ೧ನೇ ಅಧ್ಯಾಯ ಪ್ರಸ್ತಾವನೆ. ಇದರಲ್ಲಿ ವ್ಯಾಖ್ಯೆಗಳು ಆರ್ಥಿಕತೆಯೊಂದರ ಮೂಲ ಸಮಸ್ಯೆಗಳು, ವಾಸ್ತವಿಕ ಮತ್ತು ಮಾದರಿ ಅರ್ಥಶಾಸ್ತ್ರಗಳನ್ನು ಮುಂದುವರಿಸಲಾಗಿದೆ. ಅರ್ಥಶಾಸ್ತ್ರ ಅಧ್ಯಯದ ಮಹತ್ವ, ಅರ್ಥಶಾಸ್ತ್ರ ಮತ್ತು ಇತರ ವಿಷಯಗಳೊಂದಿಗೆ ಸಂಬಂಧ ಎಂಬ ಅಂಶಗಳನ್ನು ಕೈಬಿಡಲಾಗಿದೆ. ಮೂಲ ಗಣಿತಾತ್ಮಕ ತಂತ್ರಗಳನ್ನು ಸೇರಿಸಲಾಗಿದೆ. ೨ನೇ ಅಧ್ಯಾಯ ಅನುಭೋಗ ಮತ್ತು ೩ನೇ ಅಧ್ಯಾಯ ಉತ್ಪಾದನೆ ಎಂಬ ಅಂಶಗಳನ್ನು ಹಾಗೆಯೇ ಮುಂದುವರಿಸಲಾಗಿದೆ. ೪ನೇ ಅಧ್ಯಾಯ ವೆಚ್ಚ, ವರಮಾನ ಮತ್ತು ಮಾರುಕಟ್ಟೆ ಸಂರಚನೆ ಎಂಬುದಾಗಿ ಪರಿಷ್ಕರಿಸಲಾಗಿದೆ. ಅದು ಈ ಹಿಂದೆ ಆರ್ಥಿಕ ವ್ಯವಸ್ಥೆ ಎಂಬುದಾಗಿತ್ತು. ಅದನ್ನು ಪರಿಷ್ಕರಿಸಿ ವೆಚ್ಚ ಮತ್ತು ವರಮಾನ ಎಂಬ ಹೊಸ ಅಂಶಗಳನ್ನು ಇದರಲ್ಲಿ ಸೇರಿಸಲಾಗಿದೆ. ೫ನೇ ಅಧ್ಯಾಯ ಕಲ್ಯಾಣ ಅರ್ಥಶಾಸ್ತ್ರದ ಮೂಲಾಂಶಗಳು. ಇದರಲ್ಲಿ ಆರ್ಥಿಕ ಕಲ್ಯಾಣ ಪರಿಕಲ್ಪನೆ ಈ ಹಿಂದೆ ಇದ್ದಿತು. ಪ್ರಮೇಯಗಳು ಎಂಬ ಅಂಶಗಳನ್ನು ಸೇರಿಸಲಾಗಿದೆ. ೬ನೇ ಅಧ್ಯಾಯ ರಾಷ್ಟ್ರೀಯ ಆದಾಯ. ಇದು ಹೊಸದಾಗಿ ಸೇರಿಸಲಾಗಿದೆ. ೭ನೇ ಅಧ್ಯಾಯ ಹಣದ ಸಿದ್ಧಾಂತ ಇದನ್ನೂ ಪರಿಷ್ಕರಿಸಿ ಹಣದ ಪ್ರಮುಖ ಲಕ್ಷಣಗಳನ್ನು ಕೈಬಿಡಲಾಗಿದೆ. ಹಣದ ಪೂರೈಕೆ ಮತ್ತು ಹಣದ ಬೇಡಿಕೆ, ಕ್ರೆಡಿಟ್ಟು ಕಾರ್ಡ್, ಎ.ಟಿ.ಎಂ. ಕಾರ್ಡ್, ಎಂಬಂಥ ಅಂಶಗಳನ್ನು ಸೇರಿಸಲಾಗಿದೆ. ಹಣದ ಬಗೆಗಿನ ಇತರ ಅಂಶಗಳನ್ನು ಮುಂದುವರಿಸಲಾಗಿದೆ. ೮ನೇ ಅಧ್ಯಾಯ ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು. ಇದರಲ್ಲಿರುವ ಎಲ್ಲ ಅಂಶಗಳು ಹಿಂದಿನ ಪಠ್ಯದಲ್ಲಿ ಇರುವಂತೆಯೆ ಮುಂದುವರಿಸಲಾಗಿದೆ. ಹಿಂದೆ ೭ನೇ ಅಧ್ಯಾಯದಲ್ಲಿನ ಹಣ, ವ್ಯಾಪಾರ ಅಂಶಗಳನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ಮುಂದುವರಿಸಲಾಗಿದೆ. ಈ ಅಧ್ಯಾಯದಲ್ಲಿ ಬ್ಯಾಂಕು ಮತ್ತು ಸಾರ್ವಜನಿಕ ಹಣಕಾಸು ಎಂಬಂಥ ಅಂಶಗಳನ್ನು ಕೈಬಿಡಲಾಗಿದೆ.

೨೦೧೩-೧೪ ರಲ್ಲಿ ಪ್ರಥಮ ಪಿಯುಸಿ ಪಠ್ಯಕ್ರಮ ಪರಿಷ್ಕರಣಗೊಂಡಿದೆ. ಇದು ಅರ್ಥಶಾಸ್ತ್ರ-೧ ಎಂದಿದ್ದು ಅರ್ಥಶಾಸ್ತ್ರಕ್ಕಾಗಿ ಸಂಖ್ಯಾಶಾಸ್ತ್ರ ಮತ್ತು ಭಾರತದ ಆರ್ಥಿಕ ಅಭಿವೃದ್ಧಿ ಎಂಬ ಶೀರ್ಷಿಕೆಯಲ್ಲಿ ರೂಪುಗೊಂಡಿದೆ. ಇದು ಒಟ್ಟು ೧೨ ಅಧ್ಯಾಯಗಳನ್ನು ಒಳಗೊಂಡಿದೆ. ಅದು

ಭಾಗ-ಎ ಅರ್ಥಶಾಸ್ತ್ರಕ್ಕಾಗಿ ಸಂಖ್ಯಾಶಾಸ್ತ್ರದಲ್ಲಿ ೫ ಅಧ್ಯಾಯಗಳನ್ನು ಭಾಗ-ಬಿ ಭಾರತದ ಆರ್ಥಿಕ ಅಭಿವೃದ್ಧಿ ೭ ಅಧ್ಯಾಯಗಳನ್ನು ಹೊಂದಿರುತ್ತದೆ. ೧ನೇ ಅಧ್ಯಾಯ ಪೀಠಿಕೆ. ಇದು ಅರ್ಥಶಾಸ್ತ್ರಕ್ಕೆ ಪೀಠಿಕೆ, ಅರ್ಥಶಾಸ್ತ್ರದಲ್ಲಿ ಸಂಖ್ಯಾಶಾಸ್ತ್ರ, ಸಂಖ್ಯಾಸ್ತ್ರದ ಅರ್ಥ, ಸಂಖ್ಯಾಶಾಸ್ತ್ರದ ಪ್ರಾಮುಖ್ಯತೆ ಎಂಬ ಅಂಶಗಳನ್ನು ಒಳಗೊಂಡಿದೆ. ೨ನೇ ಅಧ್ಯಾಯ ದತ್ತಾಂಶಗಳ ಸಂಗ್ರಹಣೆ ಮತ್ತು ಸಂಘಟನೆ. ಇದರಲ್ಲಿ ಪೀಠಿಕೆ, ದತ್ತಾಂಶದ ವಿಧಗಳು, ಸಮೀಕ್ಷೆ-ಜನಗಣತಿ ಮತ್ತು ಮಾದರಿ ಸಮೀಕ್ಷೆ, ಭಾರತದ ಜನಗಣತಿ, ದತ್ತಾಂಶಗಳ ಸಂಘಟನೆ-ಪೀಠಿಕೆ, ಕಚ್ಚಾ ದತ್ತಾಂಶಗಳು ಮತ್ತು ವರ್ಗೀಕೃತ ದತ್ತಾಂಶಗಳು, ದತ್ತಾಂಶಗಳ ವರ್ಗೀಕರಣ, ಚಲಗಳು, ಆವೃತ್ತಿ ಸಂಖ್ಯಾವಿತರಣೆ ಎಂಬ ಅಂಶಗಳಿವೆ. ೩ನೇ ಅಧ್ಯಾಯ ದತ್ತಾಂಶ ನಿರೂಪಣೆ. ಇದರಲ್ಲಿ ಪೀಠಿಕೆ, ವಾಕ್ಯಗಳ ರೂಪದಲ್ಲಿ ದತ್ತಾಂಶ ನಿರೂಪಣೆ, ದತ್ತಾಂಶಗಳ ಕೋಷ್ಟಕ ನಿರೂಪಣೆ, ದತ್ತಾಂಶಗಳ ಕೋಷ್ಟಕೀಕರಣ ಮತ್ತು ಕೋಷ್ಟಕದ ಭಾಗಗಳು, ದತ್ತಾಂಶಗಳ ರೇಖಾಚಿತ್ರ ಮತ್ತು ನಕ್ಷಾ ನಿರೂಪಣೆ ಎಂಬ ಅಂಶಗಳಿವೆ. ೪ನೇ ಅಧ್ಯಾಯ ಕೇಂದ್ರೀಯ ಪ್ರವೃತ್ತಿ ಮಾಪನಗಳು. ಇದು ಪೀಠಿಕೆ, ಅಂಕಗಣಿತ ಸರಾಸರಿ, ಮಧ್ಯಾಂಕ, ಬಹುಲಕ. ೫ನೇ ಅಧ್ಯಾಯ ಸೂಚ್ಯಾಂಕಗಳು. ಇದರಲ್ಲಿ ಪೀಠಿಕೆ, ಸೂಚ್ಯಂಕಗಳ ಅರ್ಥ ಮತ್ತು ಮಹತ್ವ, ಪ್ರಮುಖ ಸೂಚ್ಯಂಕಗಳು-ಗ್ರಾಹಕರ ಬೆಲೆ ಸೂಚ್ಯಂಕ, ಸಗಟು ವ್ಯಾಪಾರ ಬೆಲೆ ಸೂಚ್ಯಂಕ, ಸೆನ್‌ಸೆಕ್ಸ್ ಮತ್ತು ಮಾನವ ಅಭಿವೃದ್ಧಿ ಸೂಚ್ಯಂಕ. ೬ನೇ ಅಧ್ಯಾಯ ೧೯೯೧ರ ನಂತರ ಆರ್ಥಿಕ ಸುಧಾರಣೆಗಳು. ಇದರು ಪೀಠಿಕೆ, ಹಿನ್ನೆಲೆ, ಉದಾರೀಕರಣ, ಖಾಸಗೀಕರಣ, ಜಾಗತೀಕರಣ, ಸುಧಾರಣೆಗಳ ಕಾಲದಲ್ಲಿ ಭಾರತದ ಅರ್ಥವ್ಯವಸ್ಥೆ-ಒಂದು ಮೌಲ್ಯಮಾಪನ ಎಂಬ ಅಂಶಗಳಿರುತ್ತವೆ. ೭ನೇ ಅಧ್ಯಾಯ ಬಡತನ. ಇದರಲ್ಲಿ ಪೀಠಿಕೆ, ಬಡಜನರನ್ನು ಗುರುತಿಸುವುದು, ಭಾರತದಲ್ಲಿ ಬಡವರ ಸಂಖ್ಯೆ, ಬಡತನದ ಕಾರಣಗಳು, ಬಡತನ ಉಪಶಮನ ನೀತಿ ಮತ್ತು ಕಾರ್ಯಕ್ರಮಗಳು, ಬಡತನ ಉಪಶಮನಗೊಳಿಸುವ ಕಾರ್ಯಕ್ರಮಗಳು-ಒಂದು ವಿಮರ್ಶಾತ್ಮಕ ಮೌಲ್ಯಮಾಪನ ಎಂಬ ಅಂಶಗಳಿವೆ. ೮ನೇ ಅಧ್ಯಾಯ ಭಾರತದಲ್ಲಿ ಮಾನವ ಬಂಡವಾಳ ನಿರ್ಮಾಣ. ಇದರಲ್ಲಿ ಪೀಠಿಕೆ, ಮಾನವ ಬಂಡವಾಳ ನಿರ್ಮಾಣದ ಅರ್ಥ, ಮಾನವ ಬಂಡವಾಳ ನಿರ್ಮಾಣದ ಮೂಲಗಳು, ಮಾನವ ಬಂಡವಾಳ ಮತ್ತು ಆರ್ಥಿಕ ಬೆಳವಣಿಗೆ, ಭಾರತದಲ್ಲಿ ಮಾನವ ಬಂಡವಾಳದ ನಿರ್ಮಾಣದ ಸ್ಥಿತಿಗತಿ, ಭಾರತದಲ್ಲಿ ಶಿಕ್ಷಣ ವಲಯ, ಭವಿಷ್ಯದ ನಿರೀಕ್ಷೆಗಳು ಎಂಬ ಅಂಶಗಳಿವೆ. ೯ನೇ ಅಧ್ಯಾಯ ಗ್ರಾಮೀಣಾಭಿವೃದ್ಧಿ. ಇದರಲ್ಲಿ ಪೀಠಿಕೆ, ಗ್ರಾಮೀಣಾಭಿವೃದ್ಧಿಯ ಅರ್ಥ ಮತ್ತು ಅದರ ಮೂಲ ಸಂಗತಿಗಳು, ಗ್ರಾಮೀಣ ಸಾಲ, ಕೃಷಿ ಮಾರುಕಟ್ಟೆ ವ್ಯವಸ್ಥೆ, ಕೃಷಿ ವೈವಿಧ್ಯೀಕರಣ, ಸಾವಯವ ಕೃಷಿ ಅಂಶಗಳಿರುತ್ತವೆ. ೧೦ನೇ ಅಧ್ಯಾಯ ಉದ್ಯೋಗ-ಬೆಳವಣಿಗೆ ಮತ್ತು ಬದಲಾಗುತ್ತಿರುವ ರಚನೆ. ಇದು ಪೀಠಿಕೆ, ಕೆಲಸಗಾರರು ಮತ್ತು ಉದ್ಯೋಗ, ಶ್ರಮಶಕ್ತಿ ಮತ್ತು ಉದ್ಯೋಗ, ಉದ್ಯೋಗದ ಸ್ಥಿತಿಗತಿ, ವಲಯವಾರು ಉದ್ಯೋಗ, ಬೆಳವಣಿಗೆ ಮತ್ತು ಬದಲಾಗುತ್ತಿರುವ ಉದ್ಯೋಗ ರಚನೆ, ಉದ್ಯೋಗದ ಅನೌಪಚಾರೀಕರಣ, ನಿರುದ್ಯೋಗ-ಅರ್ಥ ಮತ್ತು ವಿಧಗಳು, ಸರಕಾರ ಮತ್ತು

ಉದ್ಯೋಗ ನಿರ್ಮಾಣ ಎಂಬ ಅಂಶಗಳಿವೆ. ೧೧ನೇ ಅಧ್ಯಾಯ ಮೂಲಸೌಕರ್ಯ. ಇದು ಪೀಠಿಕೆ, ಮೂಲ ಸೌಕರ್ಯದ ಅರ್ಥ ಮತ್ತು ವಿಧಗಳು, ಆರೋಗ್ಯ, ಇಂಧನ, ಭಾರತದಲ್ಲಿ ಮೂಲ ಸೌಕರ್ಯದ ಸ್ಥಿತಿ ಎಂಬ ಅಂಶಗಳಿವೆ. ೧೨ನೇ ಅಧ್ಯಾಯ ಪರಿಸರ ಮತ್ತು ಸುಸ್ಥಿರ ಅಭಿವೃದ್ಧಿ. ಇದು ಪೀಠಿಕೆ, ಪರಿಸರ-ಅರ್ಥ ಮತ್ತು ಕಾರ್ಯಗಳು. ಭಾರತದ ಪರಿಸರದ ಸ್ಥಿತಿ, ಸುಸ್ಥಿರ ಅಭಿವೃದ್ಧಿ, ಸುಸ್ಥಿರ ಅಭಿವೃದ್ಧಿಯ ತಂತ್ರಗಳು ಎಂಬ ಅಂಶಗಳಿವೆ.

**ದ್ವಿತೀಯ ಪಿಯುಸಿ:** ೧೯೭೧-೧೯೭೨ರಲ್ಲಿ ಪಿಯುಸಿ ಶಿಕ್ಷಣ ಮಂಡಳಿ, ಬೆಂಗಳೂರು ಇವರು ಪ್ರಥಮ ಬಾರಿಗೆ ಪಿಯುಸಿ ಕೋರ್ಸ್‌ನ್ನು ಎರಡು ವರ್ಷಗಳಿವೆ ವಿಸ್ತರಿಸಿದರು. ಆ ಪ್ರಯುಕ್ತ ದ್ವಿತೀಯ ಪಿಯುಸಿ ತರಗತಿಗಾಗಿ ಪಠ್ಯವನ್ನು ರೂಪಿಸಿ ಜಾರಿಗೆ ತಂದಿತು. ಈ ಪಠ್ಯಕ್ಕೆ 'ಭಾರತದ ಆರ್ಥಿಕ ವ್ಯವಸ್ಥೆ (Charactoristics of Inidan Economy)' ಎಂಬ ಹೆಸರನ್ನು ನೀಡಿರುತ್ತಾರೆ. ಇದರಲ್ಲಿ ೧೨ ಅಧ್ಯಾಯಗಳಿವೆ. ೧ನೇ ಅಧ್ಯಾಯ 'ಭಾರತದ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು' ಎಂದಿರುತ್ತದೆ. ಇದರಡಿಯಲ್ಲಿ ಪೀಠಿಕೆ, ಅಭಿವೃದ್ಧಿಹೊಂದಿದ ಮತ್ತು ಅಪೂರ್ಣಾಭಿವೃದ್ಧಿಹೊಂದಿದ ರಾಷ್ಟ್ರಗಳು, ಭಾರತದ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು, ಭಾರತವು ಆರ್ಥಿಕವಾಗಿ ಹಿಂದುಳಿಯಲು ಕಾರಣಗಳು, ಅಭಿವೃದ್ಧಿ ಹೊಂದುತ್ತಿರುವ ಭಾರತ ಎಂಬ ಅಂಶಗಳಿರುತ್ತವೆ. ೨ನೇ ಅಧ್ಯಾಯ 'ಭಾರತದ ನೈಸರ್ಗಿಕ ಸಂಪತ್ತು (Natural Resources of India)' ಎಂದಿರುತ್ತದೆ. ಇದರಲ್ಲಿ ಪೀಠಿಕೆ, ನೈಸರ್ಗಿಕ ಸಂಪತ್ತಿನ ಪ್ರಾಮುಖ್ಯತೆ, ಭಾರತದ ಭೂ ಸಂಪತ್ತು, ಭಾರತದ ಅರಣ್ಯ ಸಂಪತ್ತು, ಭಾರತದ ಖನಿಜ ಸಂಪತ್ತು, ಶಕ್ತಿಯನ್ನುತ್ಪಾದಿಸುವ ಸಂಪನ್ಮೂಲಗಳು, ಭಾರತದಲ್ಲಿ ಅಣುಶಕ್ತಿ ಎಂಬಂಥ ಅಂಶಗಳನ್ನು ಅಳವಡಿಸಲಾಗಿದೆ. ೩ನೇ ಅಧ್ಯಾಯವು 'ಭಾರತದ ಜನಸಂಖ್ಯೆ (Population of India)' ಎಂಬುದರಲ್ಲಿ ಭಾರತದಲ್ಲಿ ಜನಸಂಖ್ಯೆಯ ಬೆಳವಣಿಗೆ, ಜನಸಂಖ್ಯೆಯ ತೀವ್ರಗತಿಯ ಏರಿಕೆಗೆ ಕಾರಣಗಳು, ಮಿತಿಮೀರಿದ ಜನಸಂಖ್ಯೆಯಿಂದಾಗುವ ದುಷ್ಪರಿಣಾಮಗಳು, ಭಾರತದಲ್ಲಿ ಜನಸಂಖ್ಯಾ ಸ್ಫೋಟವೇ? ಜನಸಂಖ್ಯೆಯ ಏರಿಕೆಯನ್ನು ತಡೆಗಟ್ಟಲು ಪರಿಹಾರೋಪಾಯಗಳು, ಜನಸಾಂದ್ರತೆ. ೪ನೇ ಅಧ್ಯಾಯ ಭಾರತದಲ್ಲಿ ಆರ್ಥಿಕ ಯೋಜನೆ (Econamic Planning in India) ಎಂಬುದರಲ್ಲಿ ಪೀಠಿಕೆ, ಆರ್ಥಿಕ ಯೋಜನೆ ಎಂದರೇನು?. ಆರ್ಥಿಕ ಯೋಜನೆಯ ಉದ್ದೇಶಗಳು, ಭಾರತದಲ್ಲಿ ಆರ್ಥಿಕ ಯೋಜನೆಯ ಉದಯ, ಪ್ರಥಮ ಪಂಚವಾರ್ಷಿಕ ಯೋಜನೆ, ದ್ವಿತಿಯ ಪಂಚವಾರ್ಷಿಕ ಯೋಜನೆ, ತೃತೀಯ ಪಂಚವಾರ್ಷಿಕ ಯೋಜನೆ ಚತುರ್ಥ ಪಂಚವಾರ್ಷಿಕ ಯೋಜನೆಗಳಿವೆ. ಅಧ್ಯಾಯ ೫ರಲ್ಲಿ ಭಾರತದಲ್ಲಿ ಒಕ್ಕಲುತನ (Agriculture in India). ಇದರಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಒಕ್ಕಲುತನದ ಮಹತ್ವ ಭಾರತದಲ್ಲಿ ಒಕ್ಕಲುತನವು ಹಿಂದುಳಿದಿರಲು ಕಾರಣಗಳು, ಒಕ್ಕಲುತನವನ್ನು ಸುಧಾರಿಸಲು ಉಪಾಯಗಳು, ಭಾರತದಲ್ಲಿ ಬೆಳೆಯುವ ಮುಖ್ಯ ಬೆಳೆಗಳು, ಪಂಚವಾರ್ಷಿಕ ಯೋಜನೆಗಳಲ್ಲಿ ಒಕ್ಕಲುತನದ ಪ್ರಗತಿ ಎಂಬ ಅಂಶಗಳಿರುತ್ತವೆ. ೬ನೇ ಅಧ್ಯಾಯ ಭಾರತದಲ್ಲಿ ಕೈಗಾರಿಕೆಗಳ

ಅಭಿವೃದ್ಧಿ (Industrial Development in India): ಕೈಗಾರಿಕೆಗಳ ಅಭಿವೃದ್ಧಿಯ ಮಹತ್ವ, ಭಾರತದ ಕೈಗಾರಿಕೆಯ ಮುಖ್ಯ ಲಕ್ಷಣಗಳು, ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೈಗಾರಿಕೆಗಳ ಸ್ಥಾನ, ಒಕ್ಕಲುತನ ಮತ್ತು ಕೈಗಾರಿಕೆಗಳ ಅಭಿವೃದ್ಧಿ, ಸಾರ್ವಜನಿಕ ಕ್ಷೇತ್ರದಲ್ಲಿಯ ಕೈಗಾರಿಕೆಗಳು, ಖಾಸಗಿ ಕ್ಷೇತ್ರದಲ್ಲಿಯ ಉದ್ದಿಮೆಗಳು, ಗೃಹ ಕೈಗಾರಿಕೆ ಮತ್ತು ಚಿಕ್ಕ ಕೈಗಾರಿಕೆಗಳು ಎಂಬ ಅಂಶಗಳಿವೆ. ೭ನೇ ಅಧ್ಯಾಯ ಭಾರತದಲ್ಲಿ ಕೈಗಾರಿಕಾ ಕಾರ್ಮಿಕರ ಮುಖ್ಯ ಲಕ್ಷಣಗಳು, ಕೈಗಾರಿಕಾ ಕಾರ್ಮಿಕರ ದಕ್ಷತೆ, ಕಾರ್ಮಿಕರ ಶಾಸನಗಳು, ಸಾಮಾಜಿಕ ಭದ್ರತೆ, ಕಾರ್ಮಿಕ ಚಳುವಳಿ. ೮ನೇ ಅಧ್ಯಾಯ ಭಾರತದ ಸಾರಿಗೆ ವ್ಯವಸ್ಥೆ (Transport System in India): ಸಾರಿಗೆಯ ಪ್ರಾಮುಖ್ಯತೆ, ಭಾರತೀಯ ರೈಲು ಮಾರ್ಗಗಳು, ಭಾರತದ ರಸ್ತೆ ಸಾರಿಗೆ, ಭಾರತದಲ್ಲಿ ರಸ್ತೆಗಳ ಬೆಳವಣಿಗೆ, ರೈಲು ರಸ್ತೆ ಸಾರಿಗೆಗಳ ಸುಸಂಘಟನೆ, ರಸ್ತೆ ಸಾರಿಗೆಯ ರಾಷ್ಟ್ರೀಕರಣ, ಜಲ ಸಾರಿಗೆ, ವಾಯು ಸಾರಿಗೆ. ೯ನೇ ಅಧ್ಯಾಯ ಭಾರತದ ವಿದೇಶ ವ್ಯಾಪಾರ (Foreign Trade of India): ಭಾರತದ ವಿದೇಶಿ ವ್ಯಾಪಾರದ ಪ್ರಾಮುಖ್ಯತೆ, ಭಾರತದ ವಿದೇಶಿ ವ್ಯಾಪಾರದ ರಚನೆ, ಭಾರತದ ಆಮದು ವ್ಯಾಪಾರ, ಭಾರತದ ರಫ್ತು ವ್ಯಾಪಾರ ಮತ್ತು ಅದರ ಬೆಳವಣಿಗೆ, ಭಾರತದ ವಿದೇಶಿ ವ್ಯಾಪಾರದ ಮುಖ್ಯ ಲಕ್ಷಣಗಳು ಇರುತ್ತವೆ. ೧೦ನೇ ಅಧ್ಯಾಯ ಭಾರತದ ಬ್ಯಾಂಕಿಂಗ್ ಪದ್ಧತಿ (Indian Banking System): ಪೀಠಿಕೆ, ದೇಶಿಯ ಬ್ಯಾಂಕರರು ಮತ್ತು ಅವರ ಕಾರ್ಯಗಳು, ಭಾರತದ ವಾಣಿಜ್ಯ ಬ್ಯಾಂಕುಗಳು ಮತ್ತು ಅವುಗಳ ಕಾರ್ಯಗಳು, ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ, ಭಾರತದ ಸ್ಟೇಟ್ ಬ್ಯಾಂಕ್, ವಿದೇಶಿ ವಿನಿಮಯ ಬ್ಯಾಂಕುಗಳು, ಭಾರತದ ರಿಝುವರ್ ಬ್ಯಾಂಕು ಎಂಬ ಅಂಶಗಳಿವೆ. ೧೧ನೇ ಅಧ್ಯಾಯ ಸಾರ್ವಜನಿಕ (ಸರಕಾರದ) ಹಣಕಾಸು (Government Finance): ಪೀಠಿಕೆ, ಕೇಂದ್ರ ಸರಕಾರದ ಆದಾಯದ ಬಾಬುಗಳು, ಕೇಂದ್ರ ಸರಕಾರದ ವೆಚ್ಚದ ಬಾಬುಗಳು, ರಾಜ್ಯ ಸರಕಾರಗಳ ವೆಚ್ಚದ ಬಾಬುಗಳು, ರಾಜ್ಯ ಸರಕಾರಗಳ ಆದಾಯದ ಬಾಬುಗಳು, ಕೇಂದ್ರ ಸರಕಾರದ ಆಯ-ವ್ಯಯದ ಅಂದಾಜು ಪತ್ರಿಕೆ, ರಾಜ್ಯ ಸರಕಾರದ ಆಯ-ವ್ಯಯದ ಅಂದಾಜು ಪತ್ರಿಕೆ.

೧೯೭೫-೭೬ ರಲ್ಲಿ ದ್ವಿತೀಯ ಪಿಯುಸಿ ಪಠ್ಯವು ಪರಿಷ್ಕರಿಸಲ್ಪಟ್ಟಿತು. ಈ ಮೊದಲ ಇದ್ದ 'ಭಾರತದ ಆರ್ಥಿಕ ವ್ಯವಸ್ಥೆ' ಎಂಬ ಶಿರ್ಷಿಕೆಯನ್ನು ಪರಿಷ್ಕರಿಸಿ 'ಭಾರತದಲ್ಲಿ ಆರ್ಥಿಕ ವ್ಯವಸ್ಥೆ' ಎಂದು ಕರೆಯಲಾಯಿತು. ಇದರಲ್ಲಿ ೧೦ ಅಧ್ಯಾಯಗಳಿರುತ್ತವೆ. ೧ನೇ ಅಧ್ಯಾಯ 'ಭಾರತದ ಆರ್ಥಿಕ ವ್ಯವಸ್ಥೆ' ಎಂದಿದ್ದು ಇದರಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯ ವೈಶಿಷ್ಟ್ಯಗಳು, ಪೀಠಿಕೆ, ಹಿಂದುಳಿದ ರಾಷ್ಟ್ರಗಳ ಮುಖ್ಯ ಲಕ್ಷಣಗಳು, ಎರಡು ಅಂಶಗಳ ಜೊತೆಗೆ ಆರ್ಥಿಕ ಪ್ರಗತಿಯನ್ನು ನಿರ್ಧರಿಸುವ ಅಂಶಗಳು ಎಂಬುದನ್ನು ಸೇರಿಸಿದ್ದಾರೆ. ಅಭಿವೃದ್ಧಿ ಹೊಂದಿದ ಮತ್ತು ಅಪೂರ್ಣಾಭಿವೃದ್ಧಿ ಹೊಂದಿದ ರಾಷ್ಟ್ರಗಳು ಎಂಬ ಅಂಶವನ್ನು ಕೈಬಿಡಲಾಗಿದೆ. ೨ನೇ ಅಧ್ಯಾಯ ಜನಸಂಖ್ಯೆಯ ಸಮಸ್ಯೆ ಎಂದು (ಭಾರತದಲ್ಲಿ ಜನಸಂಖ್ಯೆ) ಪರಿಷ್ಕರಣೆಯಾಗಿರುತ್ತದೆ. ಈ ಮೊದಲು ೩ನೇ ಅಧ್ಯಾಯವಿದ್ದದ್ದು ಈಗ ೨ನೇ ಅಧ್ಯಾಯವಾಗಿದೆ. ಜನಸಂಖ್ಯಾ ಸ್ಫೋಟವೇ? ಎಂಬ ಅಂಶವನ್ನು

ಕೈಬಿಡಲಾಗಿದೆ ಮತ್ತು ಭಾರತದ ಜನಸಂಖ್ಯೆಯ ಪ್ರವೃತ್ತಿಗಳು ಹೊಸದಾಗಿ ಸೇರಿಸಲಾಗಿದೆ. ಉಳಿದ ಎಲ್ಲ ಅಂಶಗಳು ಹಾಗೆಯೇ ಮುಂದುವರಿದಿವೆ. ಈ ಮೊದಲು ೨ನೇ ಅಧ್ಯಾಯವಿದ್ದ ಭಾರತದಲ್ಲಿ ನೈಸರ್ಗಿಕ ಸಂಪನ್ಮೂಲಗಳು ಈಗ ೩ನೇ ಅಧ್ಯಾಯವಾಗಿದೆ. ಇದರಲ್ಲಿ ಮೊದಲಿನ ಎಲ್ಲಾ ಅಂಶಗಳು ಹಾಗೆ ಉಳಿದಿದ್ದು, ಹೊಸದಾಗಿ ಜಲಸಂಪತ್ತು ಮತ್ತು ಮೀನುಗಾರಿಕೆ ಎರಡು ಅಂಶಗಳನ್ನು ಸೇರಿಸಲಾಗಿದೆ. ೪ನೇ ಅಧ್ಯಾಯ ಭಾರತದಲ್ಲಿ ಆರ್ಥಿಕ ಯೋಜನೆ ಮುಂದುವರಿದಿದೆ. ಇದರಲ್ಲಿ ೫ನೇ ಪಂಚವಾರ್ಷಿಕ ಯೋಜನೆಯನ್ನು ಸೇರಿಸಲಾಗಿದೆ. ೫ನೇ ಅಧ್ಯಾಯ ಭಾರತದಲ್ಲಿ ಒಕ್ಕಲುತನ ಇದ್ದದ್ದನ್ನು ಭಾರತದಲ್ಲಿ ಕೃಷಿ ಪ್ರಗತಿ ಎಂದು ಪರಿಷ್ಕರಿಸಲಾಗಿದೆ. ಇದರಲ್ಲಿನ ಭಾರತದಲ್ಲಿ ಬೆಳೆಯುವ ಮುಖ್ಯ ಬೆಳೆಗಳು ಎಂಬುದನ್ನು ತೆಗೆದು ಹಾಕಲಾಗಿದೆ. ಉಳಿದ ಎಲ್ಲ ಅಂಶಗಳು ಮುಂದುವರಿದಿವೆ. ಜೋತೆಗೆ ಭೂ ಸುಧಾರಣೆ, ಆರ್ಥಿಕ ಹಿಡುವಳಿಯನ್ನು ನಿರ್ಧರಿಸುವ ಅಂಶಗಳು, ಭಾರತದಲ್ಲಿ ಹಿಡುವಳಿಯ ಮಾದರಿ, ಸಣ್ಣ ಹಿಡುವಳಿಯಾಗಲು ಮುಖ್ಯ ಕಾರಣಗಳು, ಪರಿಹಾರ ಕಾರ್ಯಕ್ರಮಗಳು, ಕೃಷಿ ಹಣಕಾಸು ಮತ್ತು ಹುಟ್ಟುವಳಿ ಮಾರಾಟದ ವ್ಯವಸ್ಥೆ, ಆಹಾರ ಸಮಸ್ಯೆ, ಆಹಾರ ಬೇಡಿಕೆಯನ್ನು ನಿರ್ಧರಿಸುವ ಅಂಶಗಳು, ಆಹಾರ ಪೂರೈಕೆಯನ್ನು ನಿರ್ಧರಿಸುವ ಅಂಶಗಳು, ಪರಿಹಾರೋಪಾಯ ಗಳು (ಹಸಿರು ಕ್ರಾಂತಿ ಇತ್ಯಾದಿ). ೬ನೇ ಅಧ್ಯಾಯ ಭಾರತದಲ್ಲಿ ಕೈಗಾರಿಕೆಗಳ ಅಭಿವೃದ್ಧಿ ಎಂಬುದನ್ನು ಕೈಗಾರಿಕೆಗಳ ಅಭಿವೃದ್ಧಿ ಎಂದು ಪರಿಷ್ಕರಿಸಿದ್ದಾರೆ. ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೈಗಾರಿಕೆಗಳ ಸ್ಥಾನ, ಒಕ್ಕಲುತನ ಮತ್ತು ಕೈಗಾರಿಕೆಗಳ ಅಭಿವೃದ್ಧಿ ಎಂಬ ಅಂಶಗಳನ್ನು ಕೈಬಿಡಲಾಗಿದೆ. ಕೈಗಾರಿಕಾ ನೀತಿ, ಯೋಜನೆಗಳಲ್ಲಿ ಕೈಗಾರಿಕೆಗಳ ಪ್ರಗತಿ ಎಂಬ ಅಂಶಗಳನ್ನು ಸೇರಿಸಲಾಗಿದೆ. ೭ನೇ ಅಧ್ಯಾಯವು ಭಾರತದಲ್ಲಿ ಕಾರ್ಮಿಕರ ಸಮಸ್ಯೆಗಳು ಎಂಬುದನ್ನು ಔದ್ಯೋಗಿಕ ಕಾರ್ಮಿಕರು ಎಂದು ಪರಿಷ್ಕರಿಸಲಾಗಿದೆ. ಕೈಗಾರಿಕಾ ಕಾರ್ಮಿಕರ ದಕ್ಷತೆ ಎಂಬ ಅಂಶವನ್ನು ಕೈಬಿಡಲಾಗಿದೆ. ಔದ್ಯೋಗಿಕ ವಿವಾದಗಳು, ಔದ್ಯೋಗಿಕ ವಿವಾದಗಳನ್ನು ಬಗೆಹರಿಸುವಿಕೆ ಎಂಬ ಅಂಶಗಳನ್ನು ಸೇರ್ಪಡೆ ಮಾಡಲಾಗಿದೆ. ಉಳಿದಂತೆ ಎಲ್ಲಾ ಅಂಶಗಳು ಮುಂದುವರಿಸಲಾಗಿದೆ. ೮ನೇ ಅಧ್ಯಾಯ 'ಭಾರತದ ಸಾರಿಗೆ ವ್ಯವಸ್ಥೆ' ಎಂಬುದು 'ಸಾರಿಗೆ ವ್ಯವಸ್ಥೆ' ಎಂದು ಪರಿಷ್ಕರಣೆ ಮಾಡಲಾಗಿದೆ. ಇದರಲ್ಲಿ ರಸ್ತೆ ಸಾರಿಗೆಯ ರಾಷ್ಟ್ರೀಕರಣ ಎಂಬ ಅಂಶವನ್ನು ಕೈಬಿಟ್ಟು ಉಳಿದ ಅಂಶಗಳನ್ನು ಮುಂದುವರಿಸಲಾಗಿದೆ. ೯ನೇ ಅಧ್ಯಾಯ ಭಾರತದ ವಿದೇಶಿ ವ್ಯಾಪಾರ ಎಂಬುದನ್ನು ವಿದೇಶಿ ವ್ಯಾಪಾರ ಎಂದು ಪರಿಷ್ಕರಿಸಲಾಗಿದೆ. ಇದರಲ್ಲಿ ಈ ಮೊದಲಿನ ಎಲ್ಲಾ ಅಂಶಗಳನ್ನು ಮುಂದುವರಿಸಲಾಗಿದೆ. ಇದರ ಜೋತೆಗೆ ವಿದೇಶಿ ವಾಣಿಜ್ಯ ಧೋರಣೆ ಮತ್ತು ರಾಜ್ಯ ವ್ಯಾಪಾರ ಕಾರ್ಪೋರೇಷನ್ ಎಂಬ ಎರಡು ಅಂಶಗಳನ್ನು ಹೊಸದಾಗಿ ಸೇರಿಸಿರುತ್ತಾರೆ. ೧೦ನೇ ಅಧ್ಯಾಯ ಭಾರತದ ಬ್ಯಾಂಕಿಂಗ್ ಪದ್ಧತಿ ಇರುವುದನ್ನು ಬ್ಯಾಂಕಿಂಗ್ ವ್ಯವಸ್ಥೆ ಎಂದು ಪರಿಷ್ಕರಣೆ ಮಾಡಿರುತ್ತಾರೆ. ಇದರಲ್ಲಿ ಹಣಕಾಸಿನ ಮಾರುಕಟ್ಟೆ, ಭಾರತದ ಸ್ಟೇಟ್ ಬ್ಯಾಂಕಿನ ಕಾರ್ಯಗಳು ಮತ್ತು ಭಾರತದ ರಿಝರ್ವ ಬ್ಯಾಂಕಿನ ಕಾರ್ಯಗಳನ್ನು ಸೇರಿಸುವುದರೊಂದಿಗೆ ಉಳಿದ ಎಲ್ಲಾ ಅಂಶಗಳನ್ನು ಮುಂದುವರಿಸಲಾಗಿದೆ.

೧೧ನೇ ಅಧ್ಯಾಯ ಸಾರ್ವಜನಿಕ (ಸರಕಾರದ) ಹಣಕಾಸು ಎಂಬುದು ಹಾಗೆ ಉಳಿಸಿಕೊಳ್ಳಲಾಗಿದೆ. ಇದರಲ್ಲಿ ಕೇಂದ್ರ ಸರಕಾರದ ಆಯ-ವ್ಯಯದ ಅಂದಾಜು ಪತ್ರಿಕೆ ಮತ್ತು ರಾಜ್ಯಸರಕಾರದ ಆಯ-ವ್ಯಯಪತ್ರಿಕೆ ಎಂಬ ಅಂಶಗಳನ್ನು ಕೈಬಿಡಲಾಗಿದೆ. ಉಳಿದ ಅಂಶಗಳು ಹಾಗೆಯೇ ಮುಂದುವರಿದಿವೆ. ಮುಂಗಡಪತ್ರವನ್ನು ಪ್ರತ್ಯೇಕವಾಗಿ ಪರಿಚಯಿಸಲಾಗಿದೆ. ಇದರಲ್ಲಿ ಆಯ-ವ್ಯಯ/ಮುಂಗಡ ಪತ್ರದ ಅರ್ಥ ಮತ್ತು ಅದರಲ್ಲಿ ಅಡಕವಾಗಿರುವ ಅಂಶಗಳನ್ನು ಪರಿಚಯಿಸಲಾಗಿದೆ. ಅಲ್ಲದೇ ೧೯೭೩-೭೪ ರಲ್ಲಿನ ಕೇಂದ್ರ ಸರಕಾರದ ಮುಂಗಡಪತ್ರದ ಅಂಕಿ-ಅಂಶಗಳು ಸಹಿತ ಇರುತ್ತವೆ.

೧೯೮೨-೮೩ ರಲ್ಲಿ ಪರಿಷ್ಕಾರಗೊಂಡ ಪಠ್ಯವು ೧೪ ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಭಾರತದ ಭೌತಿಕ (ಭೌಗೋಳಿಕ) ಲಕ್ಷಣಗಳು (Physical Features of India) ಎಂದಿರುತ್ತದೆ. ಇದರಲ್ಲಿ ಪ್ರಸ್ತಾವನೆ, ಭೌಗೋಳಿಕ ಅಂಶಗಳು, ಹವಾಗುಣ, ಭೂಗುಣ, ಬೆಳೆಗಳ ರಚನೆ, ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳು ಎಂಬ ಅಂಶಗಳಿರುತ್ತವೆ. ಈ ಅಧ್ಯಾಯದ ಎಲ್ಲಾ ಅಂಶಗಳು ಹೊಸದಾಗಿ ಸೇರಿಸಲ್ಪಟ್ಟ ಅಂಶಗಳಾಗಿರುತ್ತವೆ. ೨ನೇ ಅಧ್ಯಾಯ ಭಾರತದ ಆರ್ಥಿಕತೆಯ ಲಕ್ಷಣಗಳು (Characteristics of Indian Econamic) ಈ ಆಧ್ಯಾಯದ ಪೂರ್ಣ ಅಂಶಗಳೆಲ್ಲ ೧೯೭೨-೭೩ರ ಅವಧಿಯ ಪಠ್ಯಕ್ರಮದ ಅಂಶಗಳಾಗಿವೆ. ಅಧ್ಯಾಯದ ಶಿರ್ಷಿಕೆಯನ್ನೊಳಗೊಂಡು ಎಲ್ಲ ಯತಾವತ್ತಾಗಿದೆ. ೩ನೇ ಅಧ್ಯಾಯ ಭಾರತದ ನೈಸರ್ಗಿಕ ಸಂಪನ್ಮೂಲ (Natural Resource of India) ಹಾಗೆಯೆ ಇರುತ್ತದೆ. ಇದರಲ್ಲಿನ ಜಲ ಸಂಪನ್ಮೂಲ ಮತ್ತು ಮೀನುಗಾರಿಕೆ ಎಂಬ ಅಂಶಗಳನ್ನು ಕೈಬಿಡಲಾಗಿದೆ. ಹೊಸದಾಗಿ ನೈಸರ್ಗಿಕ ಸಂಪನ್ಮೂಲಗಳ ಪ್ರಕಾರಗಳು ಭಾರತವು ಬಡಜನರಿಂದ ಕೂಡಿದ ಶ್ರೀಮಂತ ದೇಶವಾಗಿದೆ ಎಂಬ ಅಂಶಗಳನ್ನು ಸೇರಿಸಲಾಗಿದೆ. ಉಳಿದ ಅಂಶಗಳು ಮುಂದುವರಿದಿವೆ. ೪ನೇ ಅಧ್ಯಾಯ ಭಾರತದಲ್ಲಿ ಆರ್ಥಿಕ ಯೋಜನೆಯ ಬದಲಿ ಭಾರತದ ಮಾನವ ಸಂಪನ್ಮೂಲ ಅಥವಾ ಭಾರತದ ಜನಸಂಖ್ಯೆ (Human Resources of India or Population of India) ಇರುತ್ತದೆ. ಇದರಲ್ಲಿ ಮಾನವ ಸಂಪನ್ಮೂಲದ ಅರ್ಥ, ಭಾರತದಲ್ಲಿ ಮಾನವ ಸಂಪನ್ಮೂಲದ ಪ್ರಾಮುಖ್ಯತೆ, ಕುಟುಂಬ ಯೋಜನೆ, ಭಾರತದಲ್ಲಿ ವೃತ್ತಿಪರ ಜನಸಂಖ್ಯೆಯ ವಿತರಣೆ, ಭಾರತದಲ್ಲಿ ಜನಶಕ್ತಿ ಯೋಜನೆ ಈ ಅಂಶಗಳನ್ನು ಸೇರಿಸಲಾಗಿದೆ. ಜನಸಂಖ್ಯೆಯ ಪ್ರವೃತ್ತಿಗಳು ಎಂಬ ಅಂಶವನ್ನು ಕೈಬಿಡಲಾಗಿದೆ. ಉಳಿದ ಅಂಶಗಳನ್ನು ಮುಂದುವರಿಸಲಾಗಿದೆ. ೫ನೇ ಅಧ್ಯಾಯವು ಒಕ್ಕಲುತನದ ಪ್ರಗತಿ ಬದಲಿ ಭಾರತದಲ್ಲಿ ಒಕ್ಕಲುತನ (ಕೃಷಿ) (Agriculture of India) ಎಂದಿದ್ದು, ಇದರಲ್ಲಿ ಈ ಹಿಂದಿನ ಎಲ್ಲ ಅಂಶಗಳು ಮುಂದುವರಿದಿವೆ. ಜೋತೆಗೆ ನೀರಾವರಿ ಪದ್ಧತಿ, ಮಿಶ್ರ ಸಾಗುವಳಿ ಪದ್ಧತಿ, ಒಕ್ಕಲುತನ ಕಾರ್ಮಿಕರು, ಪಂಚವಾರ್ಷಿಕ ಯೋಜನೆಯಗಳಲ್ಲಿ ಒಕ್ಕಲುತನದ ಬೆಳವಣಿಗೆ ಎಂಬ ಅಂಶಗಳನ್ನು ಸೇರಿಸಲಾಗಿದೆ. ೬ನೇ ಅಧ್ಯಾಯ ಭಾರತದ ಕೈಗಾರಿಕೆಗಳ ಬೆಳವಣಿಗೆ ಎಂದು ಕೈಗಾರಿಕೆಗಳ ಅಭಿವೃದ್ಧಿ ಬದಲಿ ಪರಿಷ್ಕರಿಸಲಾಗಿದೆ. ಇದರಲ್ಲಿ ಭಾರತದಲ್ಲಿ ಕೈಗಾರಿಕಾ ಬೆಳವಣಿಗೆಯ ಸಮಸ್ಯೆಗಳು, ದೊಡ್ಡ ಕೈಗಾರಿಕೆಗಳ

ಹಣಕಾಸಿನ ಮೂಲಗಳು, ಕೈಗಾರಿಕಾ ಅಭಿವೃದ್ಧಿಯಲ್ಲಿ ವಿದೇಶಿ ಬಂಡವಾಳದ ಪಾತ್ರ ಎಂಬ ಅಂಶಗಳನ್ನು ಸೇರಿಸಲಾಗಿದೆ. ಸಾರ್ವಜನಿಕ ಮತ್ತು ಖಾಸಗಿ ಕೈಗಾರಿಕೆಗಳು ಎಂಬ ಅಂಶವನ್ನು ಪರಿಷ್ಕರಿಸಿ ದೊಡ್ಡ ಕೈಗಾರಿಕೆಗಳು ಎಂದು ಐದು ಕೈಗಾರಿಕೆಗಳನ್ನು ಹಿಂದೆ ಇದ್ದ ಕೈಗಾರಿಕೆಗಳಿಂದ ಆಯ್ಕೆ ಮಾಡಿರುತ್ತಾರೆ. ಉಳಿದ ಅಂಶಗಳು ಮುಂದುವರಿದಿವೆ. ೭ನೇ ಅಧ್ಯಾಯ ಭಾರತದಲ್ಲಿ ಕೈಗಾರಿಕಾ ಕಾರ್ಮಿಕರು (Industrial Labour in India) ಎಂಬುದು ಔದ್ಯೋಗಿಕ ಕಾರ್ಮಿಕರು ಎಂಬುದರ ಬದಲಿ ಮಾಡಲಾಗಿದೆ. ಇದರಲ್ಲಿ ಕೈಗಾರಿಕಾ ಕಾರ್ಮಿಕರ ವಿಶೇಷ ಲಕ್ಷಣಗಳು, ಭಾರತದಲ್ಲಿ ಕೈಗಾರಿಕಾ ಕಾರ್ಮಿಕರ ದಕ್ಷತೆ, ಭಾರತದಲ್ಲಿ ಕಾರ್ಮಿಕ ಸಂಘಗಳು ಎಂಬ ಅಂಶಗಳನ್ನು ಸೇರ್ಪಡೆ ಮಾಡಿ ಹಿಂದಿನ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ೮ನೇ ಅಧ್ಯಾಯ ಭಾರತದಲ್ಲಿ ಸಾರಿಗೆ ವ್ಯವಸ್ಥೆ (Transport System in India) ಎಂದಿರುತ್ತದೆ. ಇದರಲ್ಲಿ ರಸ್ತೆ ಸಾರಿಗೆಯ ರಾಷ್ಟ್ರೀಕರಣ ಎಂಬ ಅಂಶ ಸೇರಿಸುವುದರೊಂದಿಗೆ ಉಳಿದ ಅಂಶಗಳನ್ನು ಮುಂದುವರಿಸಲಾಗಿದೆ. ೯ನೇ ಅಧ್ಯಾಯ ಭಾರತದ ವಿದೇಶ ವ್ಯಾಪಾರ (Foreign Trade of India) ಈ ಅಧ್ಯಾಯದಲ್ಲಿ ಹಿಂದಿನ ಎಲ್ಲ ಅಂಶಗಳು ಮುಂದುವರಿದಿವೆ. ಹೊಸದಾಗಿ ಸ್ವದೇಶಿ ಮತ್ತು ವಿದೇಶಿ ವ್ಯಾಪಾರಗಳಲ್ಲಿರುವ ವ್ಯತ್ಯಾಸ, ಭಾರತದ ನಿರ್ಯಾತ ವ್ಯಾಪಾರದ ಮಂದ ಬೆಳವಣಿಗೆಗೆ ಕಾರಣಗಳು ಮತ್ತು ಪರಿಹಾರೋಪಾಯಗಳು, ಭಾರತದ ಸಂದಾಯ ಬಾಕಿ ಎಂಬ ಅಂಶಗಳನ್ನು ಸೇರಿಸಲಾಗಿದೆ. ೧೦ನೇ ಅಧ್ಯಾಯ ಭಾರತದಲ್ಲಿ ಸಹಕಾರ ಚಳುವಳಿ (Co-operative Movement in India) ಈ ಅಧ್ಯಾಯವನ್ನು ಹೊಸದಾಗಿ ಸೇರಿಸಲಾಗಿದೆ. ಇದರಲ್ಲಿ ಸಹಕಾರ ಚಳುವಳಿಯ ಅರ್ಥ ಸಹಕಾರ ಸಂಘದ ಲಕ್ಷಣಗಳು, ಭಾರತದಲ್ಲಿ ಸಹಕಾರ ಚಳುವಳಿಯ ಬೆಳವಣಿಗೆ, ಭಾರತದಲ್ಲಿ ಸಹಕಾರ ಸಂಘಗಳ ವಿಧಗಳು, ಸಹಕಾರ ಚಳುವಳಿಯ ಗುಣ ದೋಷಗಳು ಎಂಬ ಅಂಶಗಳಿರುತ್ತವೆ. ೧೧ನೇ ಅಧ್ಯಾಯ ಈ ಮೊದಲಿನ ಭಾರತದಲ್ಲಿ ಬ್ಯಾಂಕಿಂಗ್ ಪದ್ಧತಿ ಎಂಬುದನ್ನು ಭಾರತದಲ್ಲಿ ಬ್ಯಾಂಕು ಹಾಗೂ ಹಣದ ಚಲಾವಣೆಯ ಪದ್ಧತಿ (Banking and Currency System in India) ಎಂಬುದಾಗಿ ಪರಿಷ್ಕರಿಸಿದ್ದಾರೆ. ಇದರಲ್ಲಿ ಪ್ರಸ್ತಾವನೆ, ಭಾರತದ ಹಣಕಾಸಿನ ಪೇಟೆಯ ದೋಷಗಳು, ಆಧುನಿಕ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಭಾರತದ ಹಣದ ಚಲಾವಣೆಯ ರೀತಿ ಈ ಅಂಶಗಳನ್ನು ಸೇರಿಸಿರುತ್ತಾರೆ. ಹಿಂದಿನ ಎಲ್ಲ ಅಂಶಗಳನ್ನು ಮುಂದುವರಿಸಿದ್ದಾರೆ. ೧೨ನೇ ಅಧ್ಯಾಯ ಸಾರ್ವಜನಿಕ ಹಣಕಾಸು (Public Finance)ಸಾರ್ವಜನಿಕ ಹಣಕಾಸಿನ ಅಭ್ಯಾಸವಸ್ತು, ಸಾರ್ವಜನಿಕ ಸಾಲ ಎಂಬ ಅಂಶಗಳನ್ನು ಸೇರಿಸಲಾಗಿದೆ. ಉಳಿದ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ೧೩ನೇ ಅಧ್ಯಾಯ ಭಾರತದಲ್ಲಿ ಯೋಜನೆಗಳು (Planning in India) ಎಂದಿರುತ್ತದೆ. ಇದರಲ್ಲಿ ಪ್ರಸ್ತಾವನೆ, ಆರ್ಥಿಕ ಯೋಜನೆಯ ಅರ್ಥ, ಆರ್ಥಿಕ ಯೋಜನೆಗಳ ಧ್ಯೇಯಗಳು, ಭಾರತದಲ್ಲಿ ಆರ್ಥಿಕ ಯೋಜನೆಯ ಉದಯ, ಪ್ರಥಮ ಪಂಚವಾರ್ಷಿಕ ಯೋಜನೆಯಿಂದ ಆರನೇಯ ಪಂಚವಾರ್ಷಿಕ ಯೋಜನೆಯವರೆಗಿನ ಅಂಶಗಳಿರುತ್ತವೆ. ಈ

ಅಧ್ಯಾಯ ಹೊಸದಾಗಿ ಸೇರಿದೆ. ೧೪ನೇ ಅಧ್ಯಾಯ ಭಾರತದ ರಾಷ್ಟ್ರೀಯಾದಾಯ (National Income of India) ಈ ಅಧ್ಯಾಯವು ಹೊಸದಾಗಿ ಸೇರಿಸಲ್ಪಟ್ಟಿದೆ. ಇದರಲ್ಲಿ ರಾಷ್ಟ್ರೀಯಾದಾಯದ ಅರ್ಥ, ರಾಷ್ಟ್ರೀಯಾದಾಯವನ್ನು ಅಳೆಯುವ ಪದ್ಧತಿಗಳು, ಭಾರತದ ರಾಷ್ಟ್ರೀಯ ಆದಾಯದ ಪ್ರಮುಖ ಲಕ್ಷಣಗಳು, ಭಾರತದಲ್ಲಿ ರಾಷ್ಟ್ರೀಯಾದಾಯ ಹಾಗೂ ತಲಾದಾಯಗಳಲ್ಲಿ ಆದ ಬದಲಾವಣೆ, ಭಾರತದಲ್ಲಿ ರಾಷ್ಟ್ರೀಯಾದಾಯ ಲೆಕ್ಕಚಾರ, ರಾಷ್ಟ್ರೀಯಾದಾಯವನ್ನು ಲೆಕ್ಕಾಚಾರ ಮಾಡುವಾಗ ಎದುರಿಸಬಹುದಾದ ತೊಂದರೆಗಳನ್ನು ಈ ಅಂಶಗಳು ಈ ಅಧ್ಯಾಯದಲ್ಲಿ ಸೇರಿರುತ್ತವೆ.

೧೯೯೬-೯೭ ನೇ ಸಾಲಿನಲ್ಲಿ ಪಠ್ಯ ಪರಿಷ್ಕರಣೆಗೆ ಒಳಪಟ್ಟಿತು. ಭಾರತದ ಅರ್ಥಶಾಸ್ತ್ರ ಎಂಬ ಶೀರ್ಷಿಕೆಯ ಪಠ್ಯವು ಒಂಭತ್ತು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಪ್ರಸ್ತಾವನೆ ಭಾರತದ ಆರ್ಥಿಕ ವ್ಯವಸ್ಥೆ ಎಂದಿರುತ್ತದೆ. ಇದರಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು, ಮುಂದುವರಿಯುತ್ತಿರುವ ರಾಷ್ಟ್ರವಾಗಿ ಭಾರತ ಮತ್ತು ಅಭಿವೃದ್ಧಿಗೆ ತೊಡಕಾಗಿರುವ ಅಂಶಗಳನ್ನು ಉಳಿಸಿಕೊಂಡು ಉಳಿದ ಅಂಶಗಳನ್ನು ಕೈಬಿಡಲಾಗಿದೆ. ಈ ಹಿಂದೆ ಇದು ೨ನೇ ಅಧ್ಯಾಯವಾಗಿತ್ತು. ೩ನೇ ಮತ್ತು ೪ನೇ ಅಧ್ಯಾಯಗಳಾಗಿದ್ದವುಗಳನ್ನು ಒಟ್ಟುಗೂಡಿಸಿ, ೨ನೇ ಅಧ್ಯಾಯ ರೂಪಿಸಲಾಗಿದೆ. ೨ನೇ ಅಧ್ಯಾಯದ ಶೀರ್ಷಿಕೆ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳು ಎಂಬುದಾಗಿದೆ. ಇದರಲ್ಲಿ ನೈಸರ್ಗಿಕ ಸಂಪನ್ಮೂಲಗಳ ಅರ್ಥ ಹಾಗೂ ವ್ಯಾಖ್ಯೆಗಳು, ಭೂ ಸಂಪನ್ಮೂಲಗಳು, ಭಾರತದಲ್ಲಿ ಅರಣ್ಯ ಸಂಪನ್ಮೂಲಗಳು, ಭಾರತದ ಜಲ ಸಂಪನ್ಮೂಲಗಳು, ಭಾರತದ ಖನಿಜ ಸಂಪತ್ತು, ಭಾರತದ ಶಕ್ತಿ ಸಂಪನ್ಮೂಲಗಳು, ಭಾರತದ ಆರ್ಥಿಕ ಅಭಿವೃದ್ಧಿಯಲ್ಲಿ ಮಾನವ ಸಂಪನ್ಮೂಲಗಳ ಪ್ರಾಮುಖ್ಯತೆ, ವೃತ್ತಿಗನುಸಾರವಾಗಿ ಭಾರತದ ಜನಸಮುದಾಯದ ಹಂಚಿಕೆ ಅಂಶಗಳನ್ನು ಉಳಿಸಿಕೊಂಡು ಉಳಿದ ಅಂಶಗಳನ್ನು ಈಗ ಕೈಬಿಡಲಾಗಿದೆ. ಅಲ್ಲದೆ ಪರಿಸರದ ಅಸುಂತಲನೆ ಎಂಬ ಅಂಶವನ್ನು ಈ ಅಧ್ಯಾಯದಲ್ಲಿ ಸೇರ್ಪಡೆ ಮಾಡಲಾಗಿದೆ. ೩ನೇ ಅಧ್ಯಾಯ ಭಾರತದಲ್ಲಿ ಕೃಷಿ ಎಂಬುದು ಮುಂದುವರಿದಿದ್ದು, ಇದರಲ್ಲಿ ಹಿಂದಿನ ಎಲ್ಲ ಅಂಶಗಳು ಮುಂದುವರಿದಿರುತ್ತವೆ. ಉಗ್ರಾಣ ಮಳಿಗೆಗಳು ಮತ್ತು ಕೃಷಿಯಲ್ಲಿ ತಾಂತ್ರಿಕತೆ ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿಯ ಪ್ರಗತಿ ೭, ೮ ಮತ್ತು ೯ನೇ ಪಂಚವಾರ್ಷಿಕ ಯೋಜನೆಗಳು ಎಂಬ ಅಂಶಗಳು ಸೇರಿಸಲ್ಪಟ್ಟಿವೆ. ೪ನೇ ಅಧ್ಯಾಯವು ಹಿಂದಿನ ೬ ಮತ್ತು ೭ನೇ ಅಧ್ಯಾಯಗಳನ್ನು ಸೇರಿಸಿದ್ದಾಗಿದೆ. ಅದು ಭಾರತದ ಕೈಗಾರಿಕೆಗಳ ಬೆಳವಣಿಗೆ ಮತ್ತು ಭಾರತದಲ್ಲಿ ಕೈಗಾರಿಕಾ ಕಾರ್ಮಿಕರು ಎಂದಿರುವುದು, ಅದನ್ನು ಕೈಗಾರಿಕೆ ಮತ್ತು ಕೈಗಾರಿಕಾ ಕಾರ್ಮಿಕರು ಎಂಬುದಾಗಿ ಪರಿಷ್ಕರಿಸಲಾಗಿದೆ. ಹಿಂದಿನ ಎರಡೂ ಅಧ್ಯಾಯಗಳ ಎಲ್ಲ ಅಂಶಗಳನ್ನು ಮುಂದುವರಿಸಿರುತ್ತಾರೆ. ೫ನೇ ಅಧ್ಯಾಯ ಹಿಂದಿನ ೮ನೇ ಮತ್ತು ೯ನೇ ಅಧ್ಯಾಯಗಳನ್ನು ಒಂದುಗೂಡಿಸಿ ಮಾಡಿದ್ದಾಗಿದೆ. ಸಾರಿಗೆ ಮತ್ತು ವ್ಯಾಪಾರ ಎಂಬುದನ್ನು ಪರಿಷ್ಕರಿಸಲ್ಪಟ್ಟಿದೆ. ಹಿಂದಿನ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ಜೋತೆಗೆ ಹಣದ ಅಪಮೌಲ್ಯ, ರಫ್ತು ಉತ್ತೇಜನ ಯೋಜನೆಗಳು ಎಂಬ ಅಂಶಗಳನ್ನು ಸೇರಿಸಲಾಗಿದೆ.

೬ನೆ ಅಧ್ಯಾಯ ಬ್ಯಾಂಕು ಹಾಗೂ ಹಣಕಾಸಿನ ವ್ಯವಸ್ಥೆ ಎಂಬುದಾಗಿರುತ್ತದೆ. ಈ ಹಿಂದೆ ಇದು ೧೧ನೇ ಅಧ್ಯಾಯವಾಗಿತ್ತು. ಇದರಲ್ಲಿ ಈ ಹಿಂದಿನ ಭಾರತದ ಬ್ಯಾಂಕಿನ ಪದ್ಧತಿಗಳು, ಭಾರತದ ಹಣಕಾಸಿನ ದೋಷಗಳು, ದೇಶಿಯ ಬ್ಯಾಂಕರರು ಈ ಅಂಶಗಳನ್ನು ಕೈಬಿಡಲಾಗಿದೆ. ನಬಾರ್ಡ್‌ನ್ನು ಸೇರಿಸಲಾಗಿದೆ. ಉಳಿದ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ೭ನೇ ಅಧ್ಯಾಯ ಈ ಹಿಂದೆ ೧೦ನೇ ಅಧ್ಯಾಯವಾಗಿತ್ತು. 'ಭಾರತದಲ್ಲಿ ಸಹಕಾರ ಚಳುವಳಿ' ಎಂಬುದಾಗಿರುವ ಇದರಲ್ಲಿ ಈ ಹಿಂದಿನ ಅಂಶಗಳನ್ನೆಲ್ಲಾ ಮುಂದುವರಿಸಿರುತ್ತಾರೆ. ಯಾವ ಬದಲಾವಣೆಯೂ ಇರುವುದಿಲ್ಲ. ೮ನೇ ಅಧ್ಯಾಯ ಭಾರತದಲ್ಲಿ ಬಡತನ. ಇದರಲ್ಲಿ ಪ್ರಸ್ತಾವನೆ, ಭಾರತದಲ್ಲಿ ಬಡತನದ ಮಾಪನ, ಭಾರತದಲ್ಲಿ ನಿರುದ್ಯೋಗ ಸಮಸ್ಯೆ, ಗ್ರಾಮೀಣ ಅಭಿವೃದ್ಧಿ ಹಾಗೂ ಬಡತನ ನಿರ್ಮೂಲನ ಎಂಬ ಅಂಶಗಳು ಸೇರಿರುತ್ತವೆ. ಹಿಂದಿನ ೧೨ನೇ ಅಧ್ಯಾಯ ಈಗ ೯ನೇ ಅಧ್ಯಾಯ ಸಾರ್ವಜನಿಕ ಹಣಕಾಸು. ಇದರಲ್ಲಿ ಹಿಂದಿನ ಪಠ್ಯದಲ್ಲಿರುವ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ಹಾಗೂ ಕೇಂದ್ರ ಸರಕಾರದ ಇತ್ತೀಚಿನ ಆಯ-ವ್ಯಯ ಪಟ್ಟಿಯನ್ನು ಸೇರಿಸಲಾಗಿದೆ.

೨೦೦೫-೦೬ ನೇ ಸಾಲಿನಲ್ಲಿ ಈ ಪಠ್ಯಕ್ರಮ ಪರಿಷ್ಕರಣೆಗೆ ಒಳಪಟ್ಟಿತು. ಇದರ ಶೀರ್ಷಿಕೆ ಭಾರತದ ಆರ್ಥಿಕ ಅಭಿವೃದ್ಧಿ (Econamic Development of India) ಎಂಬುದಾಗಿದೆ. ಇದು ೯ ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಪ್ರಸ್ತಾವನೆ ಎಂದು ಇರುತ್ತದೆ. ಇದರಲ್ಲಿ ಅಭಿವೃದ್ಧಿಯ ಮೂಲ ಪರಿಕಲ್ಪನೆಗಳು ಮತ್ತು ಸೂಚಕಗಳಿದ್ದು, ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿ, ಅವಿಶ್ರಾಂತ ಅಭಿವೃದ್ಧಿ, PQLI, HDI, SOLI ದತ್ತಾಂಶಗಳ ವಿಧಗಳು ಮತ್ತು ನಿರೂಪಣೆ, ರಾಷ್ಟ್ರೀಯ ಆದಾಯಗಳ ಬೆಳವಣಿಗೆ, ಆರ್ಥಿಕ ಸುಧಾರಣೆಗಳು ಸೇರಿರುತ್ತವೆ. ಹಿಂದಿನ ಭಾರತದ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು, ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಶೀಲರಾಷ್ಟ್ರಗಳು ಎಂಬ ಅಂಶಗಳನ್ನು ಮುಂದುವರಿಸಲಾಗಿದೆ. ಉಳಿದ ಅಂಶಗಳನ್ನು ಕೈಬಿಡಲಾಗಿದೆ. ೨ನೇ ಅಧ್ಯಾಯ ಮಾನವ ಸಂಪನ್ಮೂಲ ಅಭಿವೃದ್ಧಿ ಎಂದಿದೆ. ಇದರಲ್ಲಿದ್ದ ನೈಸರ್ಗಿಕ ಸಂಪನ್ಮೂಲಕ್ಕೆ ಸಂಬಂಧಿಸಿದ ಅಂಶಗಳನ್ನು ಬೇರೊಂದು ಅಧ್ಯಾಯದಲ್ಲಿ ಸೇರಿಸಿರುತ್ತಾರೆ. ಈ ಅಧ್ಯಾಯದಲ್ಲಿ ಈ ಹಿಂದಿನ ಮಾನವ ಸಂಪನ್ಮೂಲಕ್ಕೆ ಸಂಬಂಧಿಸಿದ ಅಂಶಗಳನಷ್ಟೇ ಮುಂದುವರಿಸಲಾಗಿದೆ. ಜೋತೆಗೆ ನಿರುದ್ಯೋಗ ಮತ್ತು ಬಡತನ ಸಮಸ್ಯೆ, ಉದ್ಯೋಗ ನಿರ್ಮಾಣ ಮತ್ತು ಬಡತನ ನಿರ್ಮೂಲನ ಕಾರ್ಯಕ್ರಮಗಳು ಶಿಕ್ಷಣ, ಆರೋಗ್ಯ ಎಂಬ ಅಂಶಗಳನ್ನು ಸೇರಿಸಲಾಗಿದೆ. ೩ನೇ ಅಧ್ಯಾಯ ಕೃಷಿ ಇದರಲ್ಲಿ ಹಿಂದಿನ ಅಂಶಗಳಲ್ಲಿ ಪರಿಷ್ಕರಣೆ ಮಾಡಿರುತ್ತಾರೆ. ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿಯ ಪ್ರಾಮುಖ್ಯತೆ, ಭೂ ಬಳಕೆ, ಭೂ ಸವೆತ, ನೀರಾವರಿಯಲ್ಲಿ ಜಲಸಂಪನ್ಮೂಲಗಳ ಸಂರಕ್ಷಣೆ, ಜಲನಯನ ನಿರ್ವಹಣೆ, ಮಳೆಕೋಯ್ಲು, ಸಾರ್ವಜನಿಕ ವಿತರಣಾವ್ಯವಸ್ಥೆ, ಸುಗ್ಗಿಪೂರ್ವ ಮತ್ತು ಸುಗ್ಗಿನಂತರದ ತಂತ್ರಜ್ಞಾನ, ಶ್ವೇತಕ್ರಾಂತಿ, ಹಳದಿಕ್ರಾಂತಿ ಮತ್ತು ನೀಲಿಕ್ರಾಂತಿ ಈ ಅಂಶಗಳು ಇದರಲ್ಲಿ ಇರುತ್ತವೆ. ೪ನೇ ಅಧ್ಯಾಯ ಕೈಗಾರಿಕಾ ಅಭಿವೃದ್ಧಿ ಎಂದಿರುತ್ತದೆ. ಈ ಹಿಂದಿನ ಪಠ್ಯಕ್ರಮದಲ್ಲಿ ಕೈಗಾರಿಕೆ ಮತ್ತು

ಕೈಗಾರಿಕಾ ಕಾರ್ಮಿಕರು ಎಂಬ ಅಂಶಗಳು ಒಂದೇ ಅಧ್ಯಾಯದಲ್ಲಿ ತರಲಾಗಿತ್ತು. ಈಗ ಪುನಃ ಪ್ರತ್ಯೇಕಿಸಿ ಪರಿಷ್ಕರಿಸಲಾಗಿದೆ. ಈ ಅಧ್ಯಾಯದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ಇದ್ದ ಎಲ್ಲ ಅಂಶಗಳನ್ನು ಮುಂದುವರಿಸಿರುತ್ತಾರೆ. ಆದರೆ ಸಾರ್ವಜನಿಕ, ಖಾಸಗಿ ಮತ್ತು ಸಂಯುಕ್ತ ರಂಗದ ಕೈಗಾರಿಕೆಗಳೆಂಬ ವಿಚಾರವನ್ನು ಇಲ್ಲಿ ಕೈಬಿಡಲಾಗಿದೆ. ಒಟ್ಟಾರೆ ಸಣ್ಣ, ಮಧ್ಯಮ ಮತ್ತು ಬೃಹತ್ ಕೈಗಾರಿಕೆಗಳೆಂದು ವರ್ಗೀಕರಿಸಲಾಗಿದೆ. ತಯಾರಿಕಾ ಮತ್ತು ಸೇವಾಕೈಗಾರಿಕೆಗಳನ್ನು ಪರಿಚಯಿಸಲಾಗಿದೆ. ೫ನೇ ಅಧ್ಯಾಯ ಕಾರ್ಮಿಕ ನೀತಿ ಎಂಬುದಾಗಿ ರೂಪಿಸಲಾಗಿದೆ. ಇದರಲ್ಲಿ ಕೃಷಿಕಾರ್ಮಿಕರು, ಕೈಗಾರಿಕಾಕಾರ್ಮಿಕರು, ಮಹಿಳಾ ಸಬಲೀಕರಣಯನ್ನುವ ಅಂಶಗಳನ್ನು ಅಳವಡಿಸಲಾಗಿದೆ. ಕೃಷಿಕಾರ್ಮಿಕರು–ಜೀತಪದ್ಧತಿ, ಬಾಲ ಕಾರ್ಮಿಕರು, ಕೃಷಿವೇತನ ಪ್ರವೃತ್ತಿಗಳನ್ನು ಒಳಗೊಂಡಿದೆ. ಕೈಗಾರಿಕಾಕಾರ್ಮಿಕರು ಹಿಂದಿನ ಅಂಶಗಳೇ ಮುಂದುವರಿದಿವೆ. ೬ನೇ ಅಧ್ಯಾಯ ಆರ್ಥಿಕ ಮೂಲ ಸೌಕರ್ಯಗಳು ಎಂದಿರುತ್ತದೆ. ಇದರಲ್ಲಿ ಸಾರಿಗೆ, ಹಣಕಾಸು ಮತ್ತು ಬ್ಯಾಂಕಿಂಗ್ ಪದ್ಧತಿ, ಸಹಕಾರ, ಶಕ್ತಿಯಮೂಲಗಳನ್ನು ಒಟ್ಟುಗೂಡಿಸಿ ಆರ್ಥಿಕ ಮೂಲ ಸೌಕರ್ಯವೆಂದು ಪರಿಷ್ಕರಿಸಿರುತ್ತಾರೆ. ಹಿಂದಿನ ಈ ೪ಅಂಶಗಳು ಪ್ರತ್ಯೇಕವಾಗಿ ಮತ್ತು ಮಿಶ್ರಣ ರೂಪದಲ್ಲಿ ಗೊತ್ತುಪಡಿಸಿದ ಅಂಶಗಳೆಲ್ಲವನ್ನೂ ಈ ಅಧ್ಯಾಯದಲ್ಲಿ ಮುಂದುವರಿಸಲಾಗಿದೆ. ಅಲ್ಲದೆ ಸಂಪರ್ಕ, ಬ್ಯಾಂಕಿಂಗ್ ವಲಯದ ಸುಧಾರಣೆಗಳು, ಇಂಧನದ ಮೂಲಗಳು ಎಂಬಂಥ ಅಂಶಗಳನ್ನು ಸೇರಿಸಲಾಗಿದೆ. ೭ನೇ ಅಧ್ಯಾಯ ವಿದೇಶಿ ವ್ಯಾಪಾರ ಎಂಬುದಾಗಿದೆ. ಈ ಹಿಂದೆ ೯ನೇ ಅಧ್ಯಾಯದಲ್ಲಿ ಸಾರಿಗೆ ಮತ್ತು ವ್ಯಾಪಾರವನ್ನು ಸೇರಿಕೊಂಡಿತ್ತು. ಅಲ್ಲಿ ಉಳಿದ ಎಲ್ಲ ಅಂಶಗಳನ್ನು ಈ ಅಧ್ಯಾಯದಲ್ಲಿ ಮುಂದುವರಿಸಲಾಗಿದೆ. ಜೊತೆಗೆ ವ್ಯಾಪಾರ ವಲಯದ ಸುಧಾರಣೆಗಳು ಎಂಬ ಅಂಶವನ್ನು ಸೇರಿಸಲಾಗಿದೆ. ಇದರಲ್ಲಿ ರಫ್ತು ಉತ್ತೇಜನ, ಆಮದು ಉದಾರೀಕರಣ, ವಿಶ್ವವಾಣಿಜ್ಯ ಸಂಘಟನೆ (WTO) ಒಳಗೊಂಡಿವೆ. ೮ನೇ ಅಧ್ಯಾಯ ಸಾರ್ವಜನಿಕ ಹಣಕಾಸು ಎಂದಿರುತ್ತದೆ. ಪರಿಷ್ಕರಿಸಿದ ಅಂಶಗಳೆಂದರೆ ರಾಜ್ಯಕೋಶ ನೀತಿ, ಮುಂಗಡ ಪತ್ರ–ಅದರ ಭಾಗಗಳು, ಸಾರ್ವಜನಿಕ ಆದಾಯ, ವೆಚ್ಚ, ಸಾಲ, ಮುಂಗಡ ಪತ್ರದ ಕೊರತೆಗಳು, ಕೋಶಿಯ ವಲಯದ ಸುಧಾರಣೆ ಎಂಬ ಅಂಶಗಳಿವೆ. ೯ನೇ ಅಧ್ಯಾಯ ಆರ್ಥಿಕ ಯೋಜನೆ ಎಂಬುದಿದೆ. ಇದರಲ್ಲಿ ಯೋಜನೆಯ ಅರ್ಥ, ಲಕ್ಷಣಗಳು ಮತ್ತು ಅಗತ್ಯತೆ, ಭಾರತದಲ್ಲಿ ಯೋಜನೆಯ ಸೂತ್ರೀಕರಣದ ಸಂಘಟನೆ, ಯೋಜನಾ ಆಯೋಗ ಮತ್ತು ರಾಷ್ಟ್ರೀಯ ಅಭಿವೃದ್ಧಿ ಮಂಡಳಿ, ೯ ಮತ್ತು ೧೦ ನೇ ಪಂಚವಾರ್ಷಿಕ ಯೋಜನೆ, ಕರ್ನಾಟಕದಲ್ಲಿ ಯೋಜನೆಯ ಸೂತ್ರೀಕರಣದ ಸಂಘಟನೆ, ರಾಜ್ಯ ಯೋಜನಾ ಮಂಡಳಿ ಎಂಬ ಅಂಶಗಳನ್ನು ಒಳಗೊಂಡಿದೆ. ಈ ಅಧ್ಯಾಯದ ಅಂಶಗಳು ಹೊಸದಾಗಿ ರೂಪಿಸಲ್ಪಟ್ಟಿವೆ.

೨೦೧೪–೧೫ನೇ ಸಾಲಿನಲ್ಲಿ ಪರಿಷ್ಕರಣಗೊಂಡ ಪಠ್ಯಕ್ರಮ ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ ಎಂಬ ಶಿರ್ಷಿಕೆ ಹೊಂದಿರುತ್ತದೆ. ಈ ಪಠ್ಯಕ್ರಮವು ಭಾಗ–ಎ ಸೂಕ್ಷ್ಮ ಅರ್ಥಶಾಸ್ತ್ರದಲ್ಲಿ ೬ ಮತ್ತು ಭಾಗ–ಬಿ ಸಮಗ್ರ ಅರ್ಥಶಾಸ್ತ್ರದ ೬ ಅಧ್ಯಾಯಗಳಿವೆ. ೧ನೇ ಅಧ್ಯಾಯ ಅರ್ಥಶಾಸ್ತ್ರದ ಪರಿಚಯವಿದ್ದು,

ಪೀಠಿಕೆ, ಅರ್ಥವ್ಯವಸ್ಥೆಯ ಪರಿಕಲ್ಪನೆ, ಮೂಲಭೂತ ಆರ್ಥಿಕ ಸಮಸ್ಯೆಗಳು, ಆರ್ಥಿಕ ಚಟುವಟಿಕೆಗಳ ಸಂಘಟನೆ, ವಾಸ್ತವಿಕ ಮತ್ತು ಮಾದರಿ ಅರ್ಥಶಾಸ್ತ್ರ, ನಿಗಮನ ವಿಧಾನ ಮತ್ತು ಅನುಗಮನ ವಿಧಾನದ ಅರ್ಥಶಾಸ್ತ್ರ, ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರದ ಪರಿಭಾವನೆಗಳು, ಸೂಕ್ಷ್ಮ ಅರ್ಥಶಾಸ್ತ್ರದ ಪ್ರಯೋಜನಗಳು, ಸೂಕ್ಷ್ಮ ಅರ್ಥಶಾಸ್ತ್ರದ ಮಿತಿಗಳು. ೨ನೇ ಅಧ್ಯಾಯ ಅನುಭೋಗಿಯ ವರ್ತನೆಯ ಸಿದ್ಧಾಂತ ಎಂದಿರುತ್ತದೆ. ಇದರಲ್ಲಿ ಪೀಠಿಕೆ, ತುಷ್ಟಗುಣದ ವಿಶ್ಲೇಷಣೆ, ಸಂಖ್ಯಾಸೂಚಕ ಮತ್ತು ಸ್ಥಾನದರ್ಶಕ ವಿಧಾನ, ತುಷ್ಟಗುಣದ ಪರಿಭಾವನೆಗಳು, ಅನುಭೋಗಿ ವರ್ತನೆಯ ಪರಿಕಲ್ಪನೆ, ಬಜೆಟ್ ರೇಖೆ ಮತ್ತು ಬಜೆಟ್ ರೇಖೆಗಳ ಗಣ, ಔದಾಸೀನ್ಯ ವಕ್ರರೇಖೆಯ ವಿಶ್ಲೇಷಣೆ–ಔದಾಸೀನ್ಯ ವಕ್ರರೇಖೆಯ ಅರ್ಥ ನಕ್ಷೆ ಮತ್ತು ಲಕ್ಷಣಗಳು, ಅನುಭೋಗಿಯ ಆದರ್ಶ ಆಯ್ಕೆ ಎಂಬ ಅಂಶಗಳಿರುತ್ತವೆ. ೩ನೇ ಅಧ್ಯಾಯ ಬೇಡಿಕೆಯ ವಿಶ್ಲೇಷಣೆ. ಇದು ಪಿಠೀಕೆ, ಬೇಡಿಕೆ–ಅರ್ಥ ಮತ್ತು ಅದರ ನಿರ್ಧಾರಕಗಳು, ಬೇಡಿಕೆ ಬಿಂಬಕ, ಬೇಡಿಕೆಯ ನಿಯಮ, ಸಾಮಾನ್ಯ ಸರಕುಗಳು ಮತ್ತು ಕೆಳದರ್ಜೆಯ ಸರಕುಗಳು, ಪೂರಕ ಸರಕುಗಳು ಮತ್ತು ಬದಲೀ ಸರಕುಗಳು ಬೇಡಿಕೆಯಲ್ಲಿನ ಪಲ್ಲಟಗಳು, ಬೇಡಿಕೆಯ ಸ್ಥಿತಿಸ್ಥಾಪಕತ್ವ, ಸ್ಥಿತಿಸ್ಥಾಪಕತ್ವದ ಪರಿಕಲ್ಪನೆಗಳು, ಬೆಲೆ ಬೇಡಿಕೆ ಸ್ಥಿತಿಸ್ಥಾಪಕತ್ವ, ಆದಾಯ ಬೇಡಿಕೆ ಸ್ಥಿತಿಸ್ಥಾಪಕತ್ವ, ಅಡ್ಡ ಬೇಡಿಕೆಯ ಸ್ಥಿತಿಸ್ಥಾಪಕತ್ವ ಎಂಬ ಅಂಶಗಳಿರುತ್ತವೆ. ೪ನೇ ಅಧ್ಯಾಯ ಉತ್ಪಾದನೆ ಮತ್ತು ವೆಚ್ಚ. ಇದು ಪೀಠಿಕೆ, ಉತ್ಪಾದನಾ ಬಿಂಬಕದ ಪರಿಕಲ್ಪನೆ, ಸಮ ಉತ್ಪನ್ನ ರೇಖೆಗಳು, ಸೀಮಾಂತದರದ ತಾಂತ್ರಿಕ ಬದಲೀಕರಣದರ ಒಟ್ಟು ಉತ್ಪನ್ನ, ಸರಾಸರಿ ಉತ್ಪನ್ನ ಮತ್ತು ಸೀಮಾಂತ ಉತ್ಪನ್ನದ ಪರಿಕಲ್ಪನೆಗಳು ಉತ್ಪಾದನೆಯ ಅಲ್ಪಾವಧಿ ಮತ್ತು ದೀರ್ಘಾವಧಿ ವಿಶ್ಲೇಷಣೆ, ಬದಲಾಗುವ ಪರಿಮಾಣದ ನಿಯಮ, ಪ್ರತಿಫಲಗಳ ಪ್ರಮಾಣ, ಉತ್ಪಾದನಾವೆಚ್ಚ, ವೆಚ್ಚದ ಪರಿಕಲ್ಪನೆ, ಅಲ್ಪಾವಧಿವೆಚ್ಚದ ವರ್ಗೀಕರಣ, ದೀರ್ಘಾವಧಿವೆಚ್ಚ, ವೆಚ್ಚದ ಇತರ ವಿಧಗಳು. ೫ನೇ ಅಧ್ಯಾಯ ಉದ್ಯಮ ಘಟಕ ಮತ್ತು ಪರಿಪೂರ್ಣ ಪೈಪೋಟಿ ಸಿದ್ಧಾಂತ. ಇದು ಪೀಠಿಕೆ, ಮಾರುಕಟ್ಟೆಯ ಅರ್ಥ, ಉದ್ಯಮ ಘಟಕ ಮತ್ತು ಕೈಗಾರಿಕೆ, ಮಾರುಕಟ್ಟೆಯ ಸಂರಚನೆ, ಪರಿಪೂರ್ಣ ಪೈಪೋಟಿಯ ಅರ್ಥ ಮತ್ತು ಲಕ್ಷಣಗಳು, ಆದಾಯ, ಒಟ್ಟುಆದಾಯ, ಸರಾಸರಿಆದಾಯ ಮತ್ತು ಸೀಮಾಂತ ಆದಾಯ, ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಒಟ್ಟುಆದಾಯ ಸರಾಸರಿಆದಾಯ ಮತ್ತು ಸೀಮಾಂತ ಆದಾಯಗಳ ನಡುವಿನ ಸಂಬಂಧ, ಪೂರೈಕೆ, ಉದ್ಯಮ ಘಟಕದ ಅಲ್ಪಾವಧಿ ಮತ್ತು ದೀರ್ಘಾವಧಿ ಪೂರೈಕೆಯ ರೇಖೆ, ಪೂರೈಕೆ ರೇಖೆಯ ನಿರ್ಧಾರಕಗಳು, ಪೂರೈಕೆ ನಿಯಮ, ಪೂರೈಕೆಯ ಬೆಲೆ ಸ್ಥಿತಿಸ್ಥಾಪಕತ್ವ, ಪರಿಪೂರ್ಣ ಪೈಪೋಟಿಯ ಸಮತೋಲನ. ೬ನೇ ಅಧ್ಯಾಯ ಪರಿಪೂರ್ಣ ಪೈಪೋಟಿಯ ಮಾರುಕಟ್ಟೆಗಳು. ಇದರಲ್ಲಿ ಪೀಠಿಕೆ, ಏಕಸ್ವಾಮ್ಯ ಏಕಸ್ವಾಮ್ಯ ಮಾರುಕಟ್ಟೆಯ ಲಕ್ಷಗಳು, ಒಟ್ಟು ಆದಾಯ, ಸರಾಸರಿ ಆದಾಯ ಮತ್ತು ಸೀಮಾಂತ ಆದಾಯ ಅಲ್ಪಾವಧಿ ಮತ್ತು ದೀರ್ಘಾವಧಿ ಸಮತೋಲನ, ಸ್ವಾಮ್ಯಯುತ ಪೈಪೋಟಿ, ಅರ್ಥ, ಲಕ್ಷಣಗಳು, ಅಲ್ಪಾವಧಿ ಸಮತೋಲನ ಕೆಲಜನಸ್ವಾಮ್ಯ–ಲಕ್ಷಣಗಳು, ದ್ವಿಜನಸ್ವಾಮ್ಯ–ಅರ್ಥ. ೭ನೇ ಅಧ್ಯಾಯ ಸಮಗ್ರ ಅರ್ಥಶಾಸ್ತ್ರ. ಇದು

ಸಮಗ್ರ ಅರ್ಥಶಾಸ್ತ್ರದ ಪರಿಕಲ್ಪನೆ, ಸಮಗ್ರ ಅರ್ಥಶಾಸ್ತ್ರದ ಉಗಮ, ಸಮಗ್ರ ಅರ್ಥಶಾಸ್ತ್ರದ ಸ್ವರೂಪ ಮತ್ತು ವ್ಯಾಪ್ತಿ, ಸಮಗ್ರ ಅರ್ಥಶಾಸ್ತ್ರದ ಮಿತಿಗಳು, ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರಗಳ ನಡುವಿನ ವ್ಯತ್ಯಾಸಗಳು. ೮ನೇ ಅಧ್ಯಾಯ ರಾಷ್ಟ್ರೀಯ ವರಮಾನದ ಲೆಕ್ಕಾಚಾರ. ಇದರಲ್ಲಿ ಪೀಠಿಕೆ, ರಾಷ್ಟ್ರೀಯ ವರಮಾನದ ಮೂಲಭೂತ ಪರಿಕಲ್ಪನೆಗಳು, ವರಮಾನದ ವೃತ್ತಾಕಾರದ ಪರಿಚಲನೆ, ಸಮಗ್ರ ಅರ್ಥಶಾಸ್ತ್ರದ ಕೆಲವು ಅನನ್ಯತೆಗಳು, ಒಟ್ಟು ದೇಶಿಯ ಉತ್ಪನ್ನ, ನಿವ್ವಳ ದೇಶಿಯ ಉತ್ಪನ್ನ, ಒಟ್ಟು ರಾಷ್ಟ್ರೀಯು ಉತ್ಪನ್ನ, ನಿವ್ವಳ ರಾಷ್ಟ್ರೀಯು ಉತ್ಪನ್ನ, ವ್ಯಕ್ತಿಗತ ವರಮಾನ, ವ್ಯಕ್ತಿಗತ ಖರ್ಚುಮಾಡಬಹುದಾದ ವರಮಾನ, ನಾಮರೂಪಿ ಮತ್ತು ನೈಜರಾಷ್ಟ್ರೀಯ ವರಮಾನ, ತಲಾ ವರಮಾನ, ರಾಷ್ಟ್ರೀಯ ವರಮಾನದ ಮಾಪನ ವರಮಾನ ವಿಧಾನ, ವೆಚ್ಚ ವಿಧಾನ, ಉತ್ಪನ್ನ ವಿಧಾನ ರಾಷ್ಟ್ರೀಯ ವರಮಾನ ಮಾಪನದಲ್ಲಿ ಉಂಟಾಗುವ ತೊಂದರೆಗಳು, ರಾಷ್ಟ್ರೀಯ ವರಮಾನ ಮತ್ತು ಕಲ್ಯಾಣ. ೯ನೇ ಅಧ್ಯಾಯ ಹಣ ಮತ್ತು ಬ್ಯಾಂಕ ವ್ಯವಹಾರ. ಇದರಲ್ಲಿ ಪೀಠಿಕೆ, ಹಣದವ್ಯಾಖ್ಯೆ ಮತ್ತು ಕಾರ್ಯಗಳು, ಹಣದಬೇಡಿಕೆ, ವ್ಯವಹಾರದ ಉದ್ದೇಶ, ಮುನ್ನೆಚ್ಚರಿಕೆಯ ಉದ್ದೇಶ, ಸಟ್ಟಾವ್ಯಾಪಾರದ ಉದ್ದೇಶ, ಹಣದ ಪೂರೈಕೆ, ಹಣದ ಪೂರೈಕೆಯ ಮಾಪನಗಳು, ವಾಣಿಜ್ಯ ಬ್ಯಾಂಕುಗಳುಅರ್ಥ ಮತ್ತು ಕಾರ್ಯಗಳು, ವಾಣಿಜ್ಯ ಬ್ಯಾಂಕುಗಳಿಂದ ಪತ್ತು ನಿರ್ಮಾಣ. ಕೇಂದ್ರ ಬ್ಯಾಂಕು ರಿಜರ್ವ್ ಬ್ಯಾಂಕಿನಅರ್ಥ ಮತ್ತು ಕಾರ್ಯಗಳು, ರಿಜರ್ವ್ ಬ್ಯಾಂಕಿನ ಹಣಕಾಸು ನೀತಿ, ಉದ್ದೇಶಗಳು ಮತ್ತು ಸಾಧನಗಳು. ೧೦ನೇ ಅಧ್ಯಾಯ ಅನುಭೋಗ ಮತ್ತು ಹೂಡಿಕೆ ಬಿಂಬಕ. ಇದರಲ್ಲಿ ಪೀಠಿಕೆ, ಅನುಭೋಗ, ಆದಾಯ, ಉಳಿತಾಯ ಮತ್ತು ಹೂಡಿಕೆಯ ಪರಿಕಲ್ಪನೆಗಳು, ಕೇನ್ಸ್‌ರವರ ಅನುಭೋಗ ಬಿಂಬಕ, ಸರಾಸರಿ ಅನುಭೋಗ ಪ್ರವೃತ್ತಿ, ಸೀಮಾಂತ ಅನುಭೋಗ ಪ್ರವೃತ್ತಿ, ಅನುಭೋಗ ಬಿಂಬಕದ ಮಹತ್ವ ಮತ್ತು ನಿರ್ಧಾರಕಗಳು, ಹೂಡಿಕೆ ಬಿಂಬಕದಅರ್ಥ, ಹೂಡಿಕೆಯ ವಿಧಗಳು ಮತ್ತು ನಿರ್ಧಾರಕಗಳು, ಗುಣಕ. ೧೧ನೇ ಅಧ್ಯಾಯ ಸರಕಾರದ ಮುಂಗಡ ಪತ್ರ ಮತ್ತು ಆರ್ಥಿಕತೆ. ಇದರಲ್ಲಿ ಪೀಠಿಕೆ, ಮುಂಗಡ ಪತ್ರ–ಅರ್ಥ, ವಿಧಗಳು, ಭಾಗಗಳು, ಕೋಶೀಯನೀತಿ–ಅರ್ಥ, ಉದ್ದೇಶಗಳು. ಕೋಶಿಯ ನೀತಿಯ ಸಾಧನಗಳು, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಆದಾಯ, ಸಾರ್ವಜನಿಕ ಸಾಲ, ಕೊರತೆ ಹಣಕಾಸು, ಮುಂಗಡ ಪತ್ರದ ಕೊರತೆಗಳು– ಅರ್ಥ ಮತ್ತು ವಿಧಗಳು. ೧೨ನೇ ಅಧ್ಯಾಯ ಮುಕ್ತ ಅರ್ಥವ್ಯವಸ್ಥೆ. ಇದರಲ್ಲಿ ಪೀಠಿಕೆ, ಮುಚ್ಚಿದ ಮತ್ತು ತೆರೆದ ಅರ್ಥವ್ಯವಸ್ಥೆಗಳು, ವ್ಯಾಪಾರದ ಮೂಲ ಪರಿಕಲ್ಪನೆಗಳು, ಏಕಪಕ್ಷೀಯ, ದ್ವಿಪಕ್ಷೀಯ ಮತ್ತು ಬಹುಪಕ್ಷಿಯ ವ್ಯಾಪಾರ. ವ್ಯಾಪಾರ ಬಾಕಿ ಮತ್ತು ಸಂದಾಯ ಬಾಕಿ. ವಿದೇಶಿ ವಿನಿಮಯ ಮಾರುಕಟ್ಟೆ–ಅರ್ಥ, ವಿನಿಮಯದರದ ನಿರ್ಧಾರ, ವಿನಿಮಯ ದರ ಪದ್ಧತಿಗಳು.

**ಪದವಿ ಪಠ್ಯ:** ಬಿ.ಎ. I ಪೇಪರ೧, ಆರ್ಥಿಕ ಸಿದ್ಧಾಂತ (Economic Theory) : ಇದು ಆರು ಅಧ್ಯಾಯಗಳನ್ನು ಒಳಗೊಂಡಿದೆ. ೧ನೇ ಅಧ್ಯಾಯ ಅರ್ಥಶಾಸ್ತ್ರದ ಸ್ವರೂಪ ಮತ್ತು ಮಹತ್ವ (Nature and Scope of Economic) : ಬಯಕೆಗಳು ಮತ್ತು ಸಂಪನ್ಮೂಲಗಳು, ಉತ್ಪಾದನೆಯ

ಮೂಲಭೂತ ಆಯ್ಕೆಯ ಸಮಸ್ಯೆಗಳು, ಅನುಭೋಗ, ಅರ್ಥವ್ಯವಸ್ಥೆಯ ವಿಧಗಳು, ವಿವಿಧ ಸ್ವರೂಪಗಳಲ್ಲಿನ ಸಮಸ್ಯೆಗಳು, ಬಂಡವಾಳ ಆರ್ಥಿಕವ್ಯವಸ್ಥೆ, ಸಮಾಜವಾದಿ ಆರ್ಥಿಕವ್ಯವಸ್ಥೆ, ಮಿಶ್ರ ಆರ್ಥಿಕವ್ಯವಸ್ಥೆ, ಮಾರುಕಟ್ಟೆಯಲ್ಲಿ ಬೆಲೆಯಂತ್ರದ ಪಾತ್ರ, ಮಿಶ್ರ ಮತ್ತು ನಿಯಂತ್ರಿತ ಆರ್ಥಿಕವ್ಯವಸ್ಥೆ, ವಾಸ್ತವಿಕ ಮತ್ತು ಮಾದರಿ ಅರ್ಥಶಾಸ್ತ್ರ, ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ, ಆರ್ಥಿಕ ಚಟುವಟಿಕೆಗಳ ಚಲನೆ, ಪ್ರಮುಖ ಪರಿಕಲ್ಪನೆಗಳು ಮತ್ತು ಅರ್ಥಶಾಸ್ತ್ರದಲ್ಲಿ ಚಲಕಗಳು, ರಾಷ್ಟ್ರೀಯ ಆದಾಯದ ಪರಿಕಲ್ಪನೆಗಳು ಮತ್ತು ಪರಿಭಾವನೆಗಳು, ರಾಷ್ಟ್ರೀಯ ಆದಾಯ ಮಾಪನ ಮಾಡುವಲ್ಲಿನ ತೊಡಕುಗಳು, ವಿಶೇಷವಾಗಿ ರಾಷ್ಟ್ರೀಯ ಆದಾಯದಲ್ಲಿ ಸೇರ್ಪಡೆಯಾಗದ ಸರಕು ಮತ್ತು ಸೇವೆಗಳು, ಭೌತಿಕ ಜೀವನ ಗುಣಮಟ್ಟ ಸೂಚಿ (PAQLI), ತಲಾ ಆದಾಯ ಹಾಗೂ ರಾಷ್ಟ್ರೀಯ ಕಲ್ಯಾಣ ಸೂಚಿಯಲ್ಲಿ ತಲಾ ಆದಾಯದ ಮಿತಿಗಳು, ಬಡತ ಮತ್ತು ಆದಾಯ ಹಂಚಿಕೆ, ಸಾಮಾಜಿಕ ಉತ್ಪಾದಕತೆಯ ಪರಿಕಲ್ಪನೆ, ನಿವ್ವಳ ಆರ್ಥಿಕ ಕಲ್ಯಾಣ (NEW). ೨ನೇ ಅಧ್ಯಾಯ ಅನುಭೋಗಿಯ ವರ್ತನೆ ಮತ್ತು ಬೇಡಿಕೆ ಸಿದ್ಧಾಂತ (Theory of Consumer Behaviour and Demand): ತುಷ್ಟಿಗುಣದ ವಿಶ್ಲೇಷಣೆ, ಅನುಭೋಗಿಯ ಸಮತೋಲನ, ಔದಾಸೀನ್ಯ ವಕ್ರರೇಖೆಗಳ ವಿಶ್ಲೇಷಣೆ, ಬೇಡಿಕೆಯ ನಿಯಮ, ಬೇಡಿಕೆಯ ಸ್ಥಿತಿಸ್ಥಾಪಕತ್ವ, ೩ನೇ ಅಧ್ಯಾಯ ಉತ್ಪಾದನೆಯ ನಿಯಮ (Law of Production) : ಉತ್ಪಾದನೆ, ಉತ್ಪಾದನೆಯ ಸ್ವರೂಪ ಮತ್ತು ಉತ್ಪಾದನೆಯ ಬಿಂಬಕ, ಸ್ಥಿರ ಮತ್ತು ಬದಲಾಗುವ ಉತ್ಪಾದನಾ ಆದಾಯಗಳು, ಬದಲಾಗುವ ಉತ್ಪಾದನೆಯ ನಿಯಮ, ಆಂತರಿಕ ಮತ್ತು ಬಾಹ್ಯ ಆರ್ಥಿಕತೆಗಳು, ವೆಚ್ಚದ ಪರಿಕಲ್ಪನೆ (ಅವಕಾಶ ವೆಚ್ಚವನ್ನು ಒಳಗೊಂಡಂತೆ). ಒಟ್ಟು ವೆಚ್ಚ, ಸರಾಸರಿ ವೆಚ್ಚ ಮತ್ತು ಸೀಮಾಂತ ವೆಚ್ಚಗಳ ಪರಸ್ಪರ ಆಂತರಿಕ ಸಂಬಂಧ, ಅಲ್ಪಾವಧಿ ಮತ್ತು ದೀರ್ಘಾವಧಿ ವೆಚ್ಚಗಳು, ಪೂರೈಕೆ ರೇಖೆಗಳು, ಮಾರುಕಟ್ಟೆಯಲ್ಲಿ ಬೇಡಿಕೆ ಮತ್ತು ಪೂರೈಕೆಗಳ ಸಮತೋಲನ. ೪ನೇ ಅಧ್ಯಾಯ ಬೆಲೆ ನಿರ್ಧಾರ (Price Determination) : ಮಾರುಕಟ್ಟೆ ರಚನೆಗಳು, ಸಮತೋಲನದ ಪರಿಕಲ್ಪನೆ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಬೆಲೆ ಮತ್ತು ಉತ್ಪಾದನೆ ನಿರ್ಧಾರಕಗಳು, ಏಕಸ್ವಾಮ್ಯ ಮಾರುಕಟ್ಟೆ, ಕೆಲಜನ ಸ್ವಾಮ್ಯ, ಬೆಲೆ ನಿಯಂತ್ರಣ ಮತ್ತು ಬೆಲೆ ನಿರ್ಧಾರದ ವ್ಯವಸ್ಥೆ. ೫ನೇ ಅಧ್ಯಾಯ ಸಂಪನ್ಮೂಲಗಳ ಮಾರುಕಟ್ಟೆ (Resource Market) : ಉತ್ಪಾದನಾಂಗಗಳ ಮಾರುಕಟ್ಟೆಯ ಸ್ವರೂಪ, ಉತ್ಪಾದನಾ ಬೆಲೆ ನಿರ್ಧಾರಕಗಳು, ಅಂಚಿನ ಉತ್ಪಾದನಾ ವಿತರಣೆಯ ಸಿದ್ಧಾಂತ, ಬಾಡಿಗೆ ಸಿದ್ಧಾಂತ, ಕೂಲಿ, ಬಡ್ಡಿ ಮತ್ತು ಲಾಭ. ೬ನೇ ಅಧ್ಯಾಯ ಆದಾಯ, ಉದ್ಯೋಗ ಮತ್ತು ಬೆಲೆ ಸಿದ್ಧಾಂತ, ಸಂಪ್ರದಾಯ ಪಂಥ ಮತ್ತು ಕೇನ್ಸ್ ಪಂಥ (Theory of Incom, Employment and Prices, Classics and Keynes): ಉದ್ಯೋಗ ಸಿದ್ಧಂತ, ಸಂಪ್ರದಾಯ ಪಂಥದ ಮಾದರಿ, ಮೂಲ ಲಕ್ಷಣಗಳು, ಸೇರವರ ಮಾರುಕಟ್ಟೆ ನಿಯಮ, ಬೆಲೆ ಕೂಲಿಯ ನಮ್ಯತೆ, ಉದ್ಯೋಗ, ಸಂಪ್ರದಾಯ ಪಂಥದ ಉದ್ಯೋಗ ಸಿದ್ಧಾಂತದ ವಿಮರ್ಶೆ. ಕೇನ್ಸ್‌ರವರ ಆದಾಯ ನಿರ್ಧಾರ ಸಿದ್ಧಾಂತ, ಅನುಭೋಗ ಮತ್ತು ಹೂಡಿಕೆಯ ಬಿಂಬಕಗಳು,

ಗುಣಕ ಮತ್ತು ಆದಾಯದ ಸಮತೋಲನ ಸ್ಥಿತಿ ಮತ್ತು ಉದ್ಯೋಗ, ನೈಜ ಪೂರ್ಣೋದ್ಯೋಗ ಅಳೆಯುವ ನೀತಿಗಳು, ಭಾರತದ ಆರ್ಥಿಕತೆಗೆ ಸಂಪ್ರದಾಯ ಪಂಥ ಹಾಗೂ ಕೇನ್ಸ್‌ರವರ ಪಂಥದ ಅನ್ವಯ ಅಥವಾ ಸಮಂಜಸತೆ. ಕೇನ್ಸ್‌ರವರ ಉದ್ಯೋಗ ಸಿದ್ಧಾಂತದ ವಿಮರ್ಶೆ, ವ್ಯಾಪಾರಿ ಚಕ್ರದಲ್ಲಿ ಗುಣಕ ಮತ್ತು ವೇಗೋತ್ಕರ್ಷ.

೧೯೯೬–೯೭ ರಲ್ಲಿ ಪರಿಷ್ಕೃತ ಬಿಎ–I ಪತ್ರಿಕೆ–೧ ಆರ್ಥಿಕ ಸಿದ್ಧಾಂತ (Economic Theory) ಜಾರಿಗೆ ಬಂದಿತು. ಇದು ಹಿಂದಿನ ಶಿರ್ಷಿಕೆಯೊಂದಿಗೆ ಆರು ಅಧ್ಯಾಯಗಳ ಬದಲಿಗೆ ಎಂಟು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಹಿಂದೆ ೧ನೇ ಅಧ್ಯಾಯ ಅರ್ಥಶಾಸ್ತ್ರದ ಸ್ವರೂಪ ಮತ್ತು ವ್ಯಾಪ್ತಿ (Nature and Scope of Economics) ಎಂದಿತ್ತು. ಈಗ ಅರ್ಥಶಾಸ್ತ್ರದ ಸ್ವರೂಪ ಮತ್ತು ಪರಿಕಲ್ಪನೆಗಳು (Nature of Economics and Concepts) ಎಂದು ಪರಿಷ್ಕರಣಗೊಂಡಿರುತ್ತದೆ. ಆರ್ಥಿಕ ಪದ್ಧತಿಗಳು, ವಾಸ್ತವಿಕ ಮತ್ತು ಮಾದರಿ ಅರ್ಥಶಾಸ್ತ್ರ, ಸೂಕ್ಷ್ಮ ಮತ್ತು ಸಮಗ್ರ ಅರ್ಥಶಾಸ್ತ್ರ, PQLI, PCI, ಯೋಗಕ್ಷೇಮ ಸೂಚಕ, ಬಡತನ, ಆದಾಯ ವಿತರಣೆ ಈ ಆಂಶಗಳನ್ನು ಕೈಬಿಟ್ಟು ಉಳಿದ ಅಂಶಗಳನ್ನು ಮುಂದುವರಿಸಿದ್ದಾರೆ. ೨ನೇ ಅಧ್ಯಾಯ ಹಿಂದೆ ಅನುಭೋಗಿ ವರ್ತನೆಯ ಸಿದ್ಧಾಂತ ಮತ್ತು ಬೇಡಿಕೆ (Theory of Consumer Behaviour and Demand) ಇರುವುದನ್ನು ಅನುಭೋಗಿ ವರ್ತನೆಯ ಸಿದ್ಧಾಂತ (Theory of Consumer Behaviour) ಎಂದು ಪರಿಷ್ಕರಿಸಲಾಗಿದೆ. ಉಳಿದಂತೆ ಹಿಂದಿನ ಅಧ್ಯಾಯಗಳಲ್ಲಿನ ಅಂಶಗಳನ್ನೆ ಮುಂದುವರಿಸಲಾಗಿದೆ. ೩ನೇ ಅಧ್ಯಾಯ ಉತ್ಪಾದನೆಯ ನಿಯಮ (Law of Productioin) ವನ್ನು ಬೇಡಿಕೆ ಮತ್ತು ಪೂರೈಕೆ (Demand and Suplly) ಎಂಬುದಾಗಿ ಪರಿಷ್ಕರಿಸಲಾಗಿದೆ. ಇದು ಹೊಸದಾಗಿ ಸೇರಿದೆ. ಬೇಡಿಕೆಯ ಪರಿಕಲ್ಪನೆ, ನಿಯಮ, ಆಕುಂಚ–ವಿಕಸನ, ಸ್ಥಿತಿಸ್ಥಾಪಕತ್ವ, ನಿರ್ಧರಿಸುವ ಅಂಶಗಳು, ಪೂರೈಕೆಯ ಅರ್ಥ, ನಿಯಮ, ಆಕುಂಚನ–ವಿಕಸನ, ನಿರ್ಧಾರಕಗಳು. ೪ನೇ ಅಧ್ಯಾಯ ಬೆಲೆ ನಿರ್ಧಾರಕ (Price Determination) ಇದ್ದದ್ದು ಉತ್ಪಾದನಾ ಸಿದ್ಧಾಂತ (Theory of Production) ಎಂದು ಪರಿಷ್ಕಾರವಾಗಿರುತ್ತದೆ. ಉತ್ಪಾದನೆಯ ಪರಿಕಲ್ಪನೆ, ಉತ್ಪಾದನೆಯ ವಿವಿಧ ನಿಯಮಗಳು, ಪ್ರತಿಫಲ ಪ್ರಮಾಣ, ಅಲ್ಪಾವಧಿ ಮತ್ತು ದೀರ್ಘಾವಧಿ ಉತ್ಪಾದನಾ ವೆಚ್ಚದ ವಕ್ರರೇಖೆಗಳು, ಅವಕಾಶ ವೆಚ್ಚ, ಆದಾಯದ ವಕ್ರರೇಖೆಗಳು. ೫ನೇ ಅಧ್ಯಾಯ ಸಂಪನ್ಮೂಲಗಳ ಮಾರುಕಟ್ಟೆ (Resource Market) ಇದ್ದದ್ದು ಉತ್ಪಾದನಾಯ ಬೆಲೆ ನಿರ್ಧಾರ (Product Pricing) ಎಂದು ಪರಿಷ್ಕಾರವಾಗಿದೆ. ಇಂದಿನ ೪ನೇ ಅಧ್ಯಾಯದಲ್ಲಿನ ಅಂಶಗಳೇ ಮುಂದುವರಿದಿರುತ್ತವೆ. ೬ನೇ ಅಧ್ಯಾಯ ಸಂಪನ್ಮೂಲಗಳ ಬೆಲೆ ನಿರ್ಧಾರ (Resource of Factor Pricing). ಈ ಅಧ್ಯಾಯವು ಹಿಂದಿನ ೫ನೇ ಆಧ್ಯಾಯ ಸಂಪನ್ಮೂಲಗಳ ಮಾರುಕಟ್ಟೆ (Resource Market)ನ್ನು ಪರಿಷ್ಕರಿಸಿ ಅದರಲ್ಲಿನ ಅಂಶಗಳನ್ನು ಮುಂದುವರಿಸಲಾಗಿದೆ. ೭ನೇ ಅಧ್ಯಾಯ ರಾಷ್ಟ್ರೀಯ ಆದಾಯದ ಲೆಕ್ಕಾಚಾರ (National Income Accounting). ರಾಷ್ಟ್ರೀಯ ಆದಾಯದ ಪರಿಕಲ್ಪನೆಗಳು, GDP,

GNP, NDP, NNP, NI, PCI ಆದಾಯದ ವಿತರಣೆ NEW, PQLI, ಮಾಪನದ ವಿಧಾನಗಳು ಮತ್ತು ಸಮಸ್ಯೆಗಳು. ೮ನೇ ಅಧ್ಯಾಯ ಉದ್ಯೋಗ ಮತ್ತು ಆದಾಯದ ಸಿದ್ಧಾಂತ (Theory of Income and Emplyoment). ಇದು ಹಿಂದಿನ ಪಠ್ಯಕ್ರಮದ ೬ನೇ ಅಧ್ಯಾಯ ಆದಾಯ, ಉದ್ಯೋಗ ಮತ್ತು ಬೆಲೆ ಸಿದ್ಧಾಂತ (Theory of Income, Employment and Price)ವನ್ನು ಪರಿಷ್ಕರಿಸಿ ಜಾರಿಗೆ ತರಲಾಗಿದೆ. ಅಲ್ಲಿರುವ ಅಂಶಗಳನ್ನು ಮುಂದುವರಿಸಲಾಗಿದೆ.

೨೦೦೪-೦೫ ರಲ್ಲಿ ಪಠ್ಯಕ್ರಮವನ್ನು ಪರಿಷ್ಕರಿಸಿ ಸೆಮೆಸ್ಟರ್ ಪದ್ಧತಿಗಳ ಮೂಲಕ ಜಾರಿಗೆ ತರಲಾಗಿದೆ. ಸೂಕ್ಷ್ಮ ಅರ್ಥಶಾಸ್ತ್ರ (Micro Economics) ಪ್ರಥಮ ಸೆಮೆಸ್ಟರ್ ಪತ್ರಿಕೆ-೧.೧ ಇದು ಏಳು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಆರ್ಥಿಕ ಸಿದ್ಧಾಂತಕ್ಕೆ ಪ್ರಸ್ತಾವನೆ (Intoduction to Economic Theory). ಹಿಂದೆ ಅರ್ಥಶಾಸ್ತ್ರದ ಸ್ವರೂಪ ಮತ್ತು ಪರಿಕಲ್ಪನೆಗಳು (Nature of Economics and Concepts) ಎಂಬುದು ಪರಿಷ್ಕರವಾಗಿದೆ. ಪೂರ್ವಕಲ್ಪನೆಗಳು, ಚಲಕಗಳು, ಬಿಂಬಕಗಳ ಸಂಬಂಧ, ಸರಳರೇಖೆ ಮತ್ತು ವಕ್ರರೇಖೆಗಳು, ಬಿಂಬಕಗಳು, ಅನನ್ಯತೆಗಳು, ಸಮೀಕರಣಗಳು, ಸಂಗ್ರಹ ಮತ್ತು ಪ್ರವಹಿಸು ಈ ಎಲ್ಲಾ ಅಂಶಗಳನ್ನು ಹಿಂದಿನ ಪಠ್ಯಕ್ರಮದಿಂದ ಕೈಬಿಡಲಾಗಿದೆ. ಅದರಲ್ಲಿನ ಉಳಿದ ಅಂಶಗಳನ್ನು ಮುಂದುವರಿಸಲಾಗಿದೆ. ೨ನೇ ಅಧ್ಯಾಯ ಅನುಭೋಗಿಯ ವರ್ತನೆಯ ಸಿದ್ಧಾಂತ (Theory of Consumer Behaviour), ೩ನೇ ಅಧ್ಯಾಯ ಬೇಡಿಕೆ ಮತ್ತು ಪೂರೈಕೆ ಸಿದ್ಧಾಂತ (Theory of Demand and Supply) ಮತ್ತು ೪ನೇ ಅಧ್ಯಾಯ ಉತ್ಪಾದನೆಯ ಸಿದ್ಧಾಂತ (Theory of Production) ಇವು ಹಿಂದಿನ ಪಠ್ಯಕ್ರಮದಲ್ಲಿನ ಅಂಶಗಳನ್ನು ಉಳಿಸಿಕೊಂಡು ಮುಂದುವರಿದಿವೆ. ೫ನೇ ಅಧ್ಯಾಯ ವೆಚ್ಚ ಮತ್ತು ಆದಾಯದ ವಿಶ್ಲೇಷಣೆ (Cost and Revenue Analysis). ಇದು ಹೊಸದಾಗಿ ಸೇರಿದೆ. ವೆಚ್ಚದ ವಿಧಗಳು, ಹಣರೂಪಿ ವೆಚ್ಚ, ನೈಜವೆಚ್ಚ, ಅವಕಾಶ ವೆಚ್ಚ, ಬದಲಾಗುವ ವೆಚ್ಚ, ಒಟ್ಟು ವೆಚ್ಚ, ಸರಾಸರಿ ಮತ್ತು ಸೀಮಾಂತವೆಚ್ಚ, ಅಲ್ಪಾವಧಿ ಮತ್ತು ದೀರ್ಘಾವಧಿ ವೆಚ್ಚದ ವಕ್ರರೇಖೆಗಳು, ಆದಾಯದ ವಿಶ್ಲೇಷಣೆ, ಒಟ್ಟು ಆದಾಯ, ಸರಾಸರಿ ಮತ್ತು ಅಂಚಿನ ವೆಚ್ಚದ ರೇಖೆಗಳು. ೬ನೇ ಅಧ್ಯಾಯ ಉತ್ಪಾದನಾ ಬೆಲೆ (Product Pricing) ಇದು ಹಿಂದಿನ ಪಠ್ಯಕ್ರಮದ ೫ನೇ ಅಧ್ಯಾಯವಾಗಿತ್ತು ಅಲ್ಲಿನ ಅಂಶಗಳನ್ನು ಮುಂದುವರಿಸಲಾಗಿದೆ. ೭ನೇ ಅಧ್ಯಾಯ ಉತ್ಪಾದನಾಂಗಗಳ ಬೆಲೆ (Factor Pricing)ಯು ಹಿಂದಿನ ೬ನೇ ಅಧ್ಯಾಯದ ಸಂಪನ್ಮೂಲ ಅಥವಾ ಉತ್ಪಾದನಾಂಗಗಳ ಬೆಲೆ (Resource of Factor Pricing)ನ್ನು ಪರಿಷ್ಕರಿಸಿ ಮುಂದುವರಿಸಲಾಗಿದೆ. II ನೇ ಸೆಮೆಸ್ಟರ ಸಮಗ್ರ ಅರ್ಥಶಾಸ್ತ್ರ (Macro Economics). ಇದು ಆರು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಪ್ರಸ್ತಾವನೆ (Introduction) ಇದನ್ನು ಹೊಸದಾಗಿ ಸೇರಿಸಲಾಗಿದೆ. ಸಮಗ್ರ ಅರ್ಥಶಾಸ್ತ್ರದ ಸ್ವರೂಪ, ವ್ಯಾಪ್ತಿ, ಪ್ರಮುಖ ಸಮಸ್ಯೆಗಳು ಮತ್ತು ಮಿತಿಗಳು. ೨ನೇ ಅಧ್ಯಾಯ ರಾಷ್ಟ್ರೀಯ ಆದಾಯದ ಲೆಕ್ಕಾಚಾರ (National Income Accounting) ಇದು ಹಿಂದಿನ ೭ನೇ ಅಧ್ಯಾಯ ಪರಿಷ್ಕಾರಗೊಂಡು

ಮುಂದುವರಿದಿರುತ್ತದೆ. ೩ನೇ ಅಧ್ಯಾಯ ಸಾಂಪ್ರದಾಯಿಕ ಉದ್ಯೋಗ ಸಿದ್ಧಾಂತ (Classical Theory of Employment) ಮತ್ತು ೪ನೇ ಅಧ್ಯಾಯ ಕೇನ್ಸರ ಅರ್ಥಶಾಸ್ತ್ರ (Keynesian Economics) ಈ ಎರಡೂ ಅಧ್ಯಾಯಗಳು ಹಿಂದಿನ ೮ನೇ ಅಧ್ಯಾಯ ಒಳಗೊಂಡಿರುವ ಅಂಶಗಳನ್ನು ಪರಿಷ್ಕರಿಸಿ ಮುಂದುವರಿಸಿದ್ದಾರೆ. ೫ನೇ ಅಧ್ಯಾಯ ವ್ಯಾಪಾರಿ ಚಕ್ರಗಳ (Business Cycles) ಇದು ಹೊಸದಾಗಿ ಸೇರಿರುತ್ತದೆ. ಅರ್ಥ, ಲಕ್ಷಣಗಳು, ಗುಣಕ ಮತ್ತು ವೇಗೋತ್ಕರ್ಷದ ನಡುವಿನವ್ಯತ್ಯಾಸ, ವ್ಯಾಪಾರಚಕ್ರದ ನಿಯಂತ್ರಣ, ಅತಿಪ್ರಸರಣ ಮತ್ತು ಅನಪ್ರಸರಣದ ಪರಿಕಲ್ಪನೆ ಮತ್ತು ಅಂತರ. ೬ನೇ ಅಧ್ಯಾಯ ನವಸಾಂಪ್ರದಾಯ ಪಂಥದ ಸಮಗ್ರ ಅರ್ಥಶಾಸ್ತ್ರ (New Classifical Macro Economics) SSES ಮತ್ತು ಅದರ ಸೈದ್ಧಾಂತಿಕ ಪ್ರಮಾಣ ವಿಮರ್ಶಾ ನಿರೀಕ್ಷೆಗಳು ಮತ್ತು ನೀತಿ ಉಪಸಂಹಾರ.

೨೦೧೦–೧೧ರಲ್ಲಿ ಬಿಎ–I ಸೆಮೆಸ್ಟರ ಪಠ್ಯಕ್ರಮವನ್ನು ಪರಿಷ್ಕರಿಸಿ ಜಾರಿಗೆ ತರಲಾಗಿದೆ. Iನೇ ಸೆಮೆಸ್ಟರ ಪತ್ರಿಕೆ–೧ ಸೂಕ್ಷ್ಮ ಅರ್ಥಶಾಸ್ತ್ರ (Micro Economics)ನ್ನು ಸೂಕ್ಷ್ಮ ಅರ್ಥಶಾಸ್ತ್ರದ ತತ್ವಗಳು (Principles of Micro Economics) ಎಂಬುದಾಗಿ ಪರಿಷ್ಕರಿಸಲಾಗಿದೆ. ಹಿಂದೆ ಏಳು ಅಧ್ಯಾಯಗಳಿದ್ದವು. ಈಗ ಐದು ಅಧ್ಯಾಯ ಗಳಿರುತ್ತವೆ. ೧ನೇ ಅಧ್ಯಾಯ ಆರ್ಥಿಕ ಸಿದ್ಧಾಂತಕ್ಕೆ ಪ್ರಸ್ತಾವನೆ (Introduction to Micro Economics) ಎಂದು ಪರಿಷ್ಕಾರವಾಗಿರುತ್ತದೆ. ಇದರಲ್ಲಿ ಹಿಂದಿನ ಅಂಶಗಳ ಜೋತೆಗೆ ಅರ್ಥಶಾಸ್ತ್ರವನ್ನು ಏಕೆ ಅಧ್ಯಯನ ಮಾಡಬೇಕು, ಸೂಕ್ಷ್ಮಅರ್ಥಶಾಸ್ತ್ರದ ಮಹತ್ವ ಸೇರಿರುತ್ತವೆ. ೨ನೇ ಅಧ್ಯಾಯ ಅನುಭೋಗಿಯ ವರ್ತನೆಯ ಸಿದ್ಧಾಂತಗಳು (Theories of Consumer's Behaviour) ಇದರಲ್ಲಿ ಮಾರ್ಷಲ್ಲರ ಮತ್ತು ಹಿಕ್ಕಿಸಿಯನ್ ಮಾರ್ಗದಲ್ಲಿ ಅನುಭೋಗಿ ಅಧಿಕತೃಪ್ತಿಯನ್ನು ಸೇರಿಸಿ ಹಾಗೆಯೆ ಮುಂದುವರಿಸಿರುತ್ತಾರೆ. ೩ನೇ ಅಧ್ಯಾಯ ಬೇಡಿಕೆ ಮತ್ತು ಪೂರೈಕೆ ಸಿದ್ಧಾಂತ (Theory of Demand and Supply) ಹಿಂದಿನ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. ೪ನೇ ಅಧ್ಯಾಯ ವೆಚ್ಚ ಮತ್ತು ಆದಾಯದ ವಿಶ್ಲೇಷಣೆ (Cost and Revenue Analysis) ಈ ಹಿಂದೆ ೫ನೇ ಅಧ್ಯಾಯವಾಗಿತ್ತು. ಆ ಅಂಶಗಳನ್ನೆ ಮುಂದುವರಿಸಲಾಗಿದೆ. ೫ನೇ ಅಧ್ಯಾಯ ಉತ್ಪಾದನೆ ಮತ್ತು ಉತ್ಪಾದನಾಂಗಗಳ ಬೆಲೆ (Product and Factor Pricing) ಇದು ಹಿಂದಿನ ೬ನೇ ಮತ್ತು ೭ನೇ ಅಧ್ಯಾಯಗಳನ್ನು ಪರಿಷ್ಕರಿಸಿ ಆ ಎಲ್ಲ ಅಂಶಗಳನ್ನು ಮುಂದುವರಿಸಲಾಗಿದೆ. IIನೇ ಸೆಮೆಸ್ಟರ ಸಮಗ್ರ ಅರ್ಥಶಾಸ್ತ್ರ (Macro Economics) ಇದ್ದದ್ದನ್ನು ಸಮಗ್ರ ಅರ್ಥಶಾಸ್ತ್ರದ ತತ್ವಗಳು (Principles of Macro Economics) ಎಂಬುದಾಗಿ ಪರಿಷ್ಕರಿಸಲಾಗಿದೆ. ಹಿಂದೆ ಆರು ಅಧ್ಯಾಯಗಳಿದ್ದವು. ಈಗ ಐದು ಅಧ್ಯಾಯಗಳಿವೆ. ೧ನೇ ಅಧ್ಯಾಯ ಪ್ರಸ್ತಾವನೆ (Introduction) ಇದ್ದುದ್ದು ಸಮಗ್ರ ಅರ್ಥಶಾಸ್ತ್ರಕ್ಕೆ ಪ್ರಸ್ತಾವನೆ (Introduction to Macro Economics) ಎಂಬುದಾಗಿ ಪರಿಷ್ಕಾರವಾಗಿದೆ. ಇದರಲ್ಲಿ ಸಮಗ್ರ ಅರ್ಥಶಾಸ್ತ್ರದ ವಿಧಗಳು, ಮೂಲ ಪರಿಕಲ್ಪನೆ, ಸಂಗ್ರಹ ಮತ್ತು ಪ್ರವಹಿಸು, ಅಲ್ಪಾವಧಿ ಮತ್ತು ದೀರ್ಘಾವಧಿ

ಸಮತೋಲನ, ಈ ಅಂಶಗಳನ್ನು ಸೇರಿಸಿರುತ್ತಾರೆ. ಜೋತೆಗೆ ೨ನೇ ಅಧ್ಯಾಯ ರಾಷ್ಟ್ರೀಯ ಆದಾಯದ ಲೆಕ್ಕಾಚಾರ (National Income Accounting)ನ್ನೂ ಸೇರಿಸಿದ್ದಾರೆ. ೨ನೇ ಅಧ್ಯಾಯ ಸಾಂಪ್ರದಾಯಿಕ ಉದ್ಯೋಗ ಸಿದ್ಧಾಂತ (Classical Theory of Employment) ಇದು ಹಿಂದೆ ೩ನೇ ಅಧ್ಯಾಯ ಇದ್ದದ್ದನ್ನು ಪರಿಷ್ಕರಿಸಿದ್ದಾರೆ. ೩ನೇ ಅಧ್ಯಾಯ ಕೇನ್ಸರವರ ಉದ್ಯೋಗ ಸಿದ್ಧಾಂತ (Keynesian Theory of Employment)ವು ಹಿಂದೆ ೪ನೇ ಅಧ್ಯಾಯ ಕೇನ್ಸರ ಅರ್ಥಶಾಸ್ತ್ರ (Keynesian Economics) ಎಂಬುದನ್ನು ಪರಿಷ್ಕರಿಸಿ ಮುಂದುವರಿಸಲಾಗಿದೆ. ೪ನೇ ಅಧ್ಯಾಯ ವ್ಯಾಪಾರಿ ಚಕ್ರ ಮತ್ತು ಹಣದ ಮೌಲ್ಯಸಿದ್ಧಾಂತಗಳು (Business Cycles and Value of Money) ಯು ಹಿಂದಿನ ೫ನೇ ಅಧ್ಯಾಯ (Business Cycles)ದ ಎಲ್ಲಅಂಶಗಳ ಜೋತೆಗೆ ಹೊಸದಾಗಿ, ಹಣದ ಮೌಲ್ಯಸಿದ್ಧಾಂತಗಳು, ಸೂಚಿ ಸಂಖ್ಯೆಗಳು, ಹಣದ ಪರಿಮಾಣಾತ್ಮಕ ಸಿದ್ಧಾಂತ, ಗುಣಾತ್ಮಕ ಹಣದ ಸಿದ್ಧಾಂತ ಸೇರಿಸಲಾಗಿದೆ. ೫ನೇ ಅಧ್ಯಾಯ ಸಮಗ್ರ ಆರ್ಥಿಕ ನೀತಿ (Macro Economic) ಹಣಕಾಸು ಮತ್ತು ಕೋಶಿಯ ನೀತಿ, ಗುರಿಗಳು ಮತ್ತು ಮಹತ್ವ ಈ ಅಧ್ಯಾಯವನ್ನು ಹೊಸದಾಗಿ ಸೇರಿಸಲಾಗಿದೆ.

ಬಿ.ಎ. II ಪೇಪರ೨, ಭಾರತದ ಆರ್ಥಿಕತೆ (Indian Economy): ಇದು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ೧ನೇ ಅಧ್ಯಾಯ ಭಾರತದ ಆರ್ಥಿಕತೆಯ ಸ್ವರೂಪ ಮತ್ತು ಪ್ರಮುಖ ಸಮಸ್ಯೆಗಳು (Nature and Main Problems of the Indian Economiy): ಸ್ವಾತಂತ್ರ್ಯ ಪೂರ್ವದ ಭಾರತದ ಆರ್ಥಿಕತೆ, ಪ್ರಮುಖ ಆರ್ಥಿಕತೆಯ ಲಕ್ಷಣಗಳು, ಅಭಿವೃದ್ಧಿಯ ಸೂಚಕಗಳು, ರಾಷ್ಟ್ರೀಯ ಆದಾಯದ ಅರ್ಥ, ಅಳತೆ (ಪ್ರಮಾಣ) ಸಂಯೋಜನೆ, ಪ್ರವೃತ್ತಿಗಳು ಹಾಗೂ ವಿತರಣೆ, ರಾಷ್ಟ್ರೀಯ ಆದಾಯದ ಮಿತಿಗಳು ಹಾಗೂ ರಾಷ್ಟ್ರೀಯ ಆದಾಯ ಅಳೆಯುವ ಪದ್ಧತಿಗಳು, ಬಡತನ ಮತ್ತು ನಿರುದ್ಯೋಗ, ಅಸಮಾನತೆ ಮತ್ತು ಪ್ರಾದೇಶಿಕ ಅಸಮತೋಲನ, ಜನಸಂಖ್ಯಾ ಹೆಚ್ಚಳದ ಸಮಸ್ಯೆಗಳು, ಜನಸಂಖ್ಯೆ ಮತ್ತು ಆರ್ಥಿಕ ಅಭಿವೃದ್ಧಿ, ಜನಸಂಖ್ಯಾ ನೀತಿ, ಜನಸಂಖ್ಯೆ ಮತ್ತು ಶ್ರಮ ಪೂರೈಕೆ(ಶಕ್ತಿ), ಉದ್ಯೋಗ ರಚನೆ, ವಯೋಮಾನ, ಲಿಂಗ, ಗ್ರಾಮೀಣ ಮತ್ತು ನಗರ ಸಂಯೋಜನೆ. ೨ನೇ ಅಧ್ಯಾಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ (Agriculture and Rural Development): ಭಾರತದ ಆರ್ಥಿಕತೆಯಲ್ಲಿ ಕೃಷಿಯ ಪಾತ್ರದ ಮಹತ್ವ, ಉತ್ಪಾದನಾ ಪ್ರವೃತ್ತಿ, ಉತ್ಪಾದನೆ ನಿರ್ಧರಿಸುವ ಅಂಶಗಳು, (ಎ) ಸಾಂಸ್ಥಿಕ ಅಂಶಗಳು: ಭೂ ಹಿಡುವಳಿ, ಭೂ ಸುಧಾರಣೆಗಳು, ಹಣಕಾಸು ಮತ್ತು ಮಾರುಕಟ್ಟೆವ್ಯವಸ್ಥೆ, (ಬಿ) ತಾಂತ್ರಿಕ ಅಂಶಗಳು : ಆದಾನಗಳು, ನೀರಾವರಿ ಸೌಲಭ್ಯ, ಶಕ್ತಿ, ರಸಗೊಬ್ಬರಗಳು, ಬೀಜಗಳು, ಯಂತ್ರಗಳಬಳಕೆ. ಹಸಿರುಕ್ರಾಂತಿ, ಗ್ರಾಮೀಣ ಬಡತನ ಮತ್ತು ನಿರುದ್ಯೋಗ, ಗ್ರಾಮೀಣ ಅಭಿವೃದ್ಧಿಕಾರ್ಯಕ್ರಮಗಳು, ವಿಶೇಷವಾಗಿ ಮಹಿಳೆಯರ ಮತ್ತು ಆರ್ಥಿಕ ಅಶಕ್ತತೆಯ ಸಮುದಾಯಗಳ ನ್ನೊಳಗೊಂಡಂತೆ. ಕಾಮು ದಾಸ್ತಾನು ಮತ್ತು ಸಾರ್ವಜನಿಕ ವಿತರಣಾ ವ್ಯವಸ್ಥೆ. ೩ನೇ ಅಧ್ಯಾಯ ಕೈಗಾರಿಕೆ ಮತ್ತು ವ್ಯಾಪಾರ (Industry and Trade) : ಕೈಗಾರಿಕಾ

ನೀತಿ ಮತ್ತು ಯೋಜನೆಗಳು, ಬೃಹತ್ ಕೈಗಾರಿಕೆಗಳಾದ ಸಕ್ಕರೆ ಕೈಗಾರಿಕೆ, ಬಟ್ಟೆ ಕೈಗಾರಿಕೆ, ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳ ಬೆಳವಣಿಗೆ ಹಾಗೂ ಸಮಸ್ಯೆಗಳು. ಕೈಗಾರಿಕಾ ಹಣಕಾಸು, ಕೈಗಾರಿಕಾ ವಿವಾದಗಳು, ಕಾರ್ಮಿಕ ಸಂಘಟನೆಯ ಚಳುವಳಿಗಳು, ಕಾರ್ಮಿಕ ನೀತಿ, ಆಮದು ಬದಲಿ ಮತ್ತು ರಫ್ತು ಹೆಚ್ಚಳ, ಸಂದಾಯ ಬಾಕಿ, ವಿದೇಶಿ ವ್ಯಾಪಾರದಲ್ಲಿ ಎಕ್ಸಿಮ್ ಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಪಾತ್ರ, ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಸಣ್ಣ ಕೈಗಾರಿಕೆಗ ಮಹತ್ವ, ಭಾರತದ ವಿದೇಶಿ ವ್ಯಾಪಾರದ ಇತ್ತೀಚಿನ ಪ್ರವೃತ್ತಿಗಳು, ಕಾರ್ಮಿಕ ಸಂಘಟನೆಯ ಸಹಕಾರ ಮತ್ತು ಮಾರ್ಗಸೂಚಿಗಳು. ೪ನೇ ಅಧ್ಯಾಯ ಮೂಲ ಸೌಕರ್ಯ (Infrastructures) : ಆರ್ಥಿಕ ಅಭಿವೃದ್ಧಿಯಲ್ಲಿ ಮೂಲ ಸೌರ್ಕಯದ ಪಾತ್ರ ಭೌತಿಕ ಮೂಲ ಸೌಕರ್ಯ : ಶಕ್ತಿಯ ಸಂಪನ್ಮೂಲ ಮತ್ತು ವಿಧಗಳು, ಸಾರಿಗೆ ಮತ್ತು ಸಂಪರ್ಕ, ಸಾಮಾಜಿಕ ಮೂಲ ಸೌಕರ್ಯ, ಶಿಕ್ಷಣ, ಆರೋಗ್ಯ, ಸಮತೋಲನ ಆಹಾರ. ೫ನೇ ಅಧ್ಯಾಯ ಹಣ ಮತ್ತು ಸಾರ್ವಜನಿಕ ಹಣಕಾಸು (Money and Public Finance) : ಹಣದ ಪೇಟೆ, ಬಂಡವಾಳ ಪೇಟೆ, ಭಾರತೀಯ ರಿಜರ್ವ್ ಬ್ಯಾಂಕ್, ವಾಣಿಜ್ಯ ಬ್ಯಾಂಕುಗಳು, ಇತರ ಹಣಕಾಸಿನ ಸಂಸ್ಥೆಗಳು, ಹಣಕಾಸುನೀತಿ, ಬೆಲೆಪ್ರವೃತ್ತಿ ಮತ್ತು ಬೆಲೆನೀತಿ, ಸಾರ್ವಜನಿಕ ವೆಚ್ಚದಹೆಚ್ಚಳ, ಆದಾಯದ ಮೂಲಗಳು, ಆದಾಯದ (ಕಂದಾಯ) ಪ್ರವೃತ್ತಿ, ತೆರಿಗೆ ಮತ್ತು ತೆರಿಗೆಯೇತರ ಆದಾಯ, ಸಾರ್ವಜನಿಕ ಸಾಲ, ಕೊರತೆ ಧನ ವಿನಿಯೋಗ, ಸರಕಾರದ ಕೋಶಿಯ ನೀತಿ. ಕೇಂದ್ರ ಮತ್ತು ರಾಜ್ಯ ಸರಕಾರಗಳ ಹಣಕಾಸಿನ ಸಂಬಂಧ, ಆರ್ಥಿಕತೆ ಸಮದುಗಿಸುವಲ್ಲಿನ ಸಮಸ್ಯೆಗಳು. ೬ನೇ ಅಧ್ಯಾಯ ಯೋಜನೆ ಮತ್ತು ಅಭಿವೃದ್ಧಿ (Planning and Development): ಭಾರತದ ಪಂಚವಾರ್ಷಿಕ ಯೋಜನೆಗಳು, ಪಂಚವಾರ್ಷಿಕ ಯೋಜನೆಗಳಲ್ಲಿನ ಗುರಿ–ಉದ್ದೇಶಗಳು, ಪ್ರಾಶಸ್ತ್ಯಗಳು, ಸಾಧನೆಗಳು ಮತ್ತು ಕೊರತೆಗಳು, ಸಂಪನ್ಮೂಲಗಳ ಅವಶ್ಯಕತೆಗಳು, ಭಾರತದ ಯೋಜನೆಗಳಲ್ಲಿ ಆಂತರಿಕ ಮತ್ತು ಬಾಹ್ಯ ಅಭಿವೃದ್ಧಿಗೆ ಸಂಘಟನೆ, ಸಾರ್ವಜನಿಕ ಮತ್ತು ಖಾಸಗಿ ವಲಯಗಳಿಗೆ ಆರ್ಥಿಕ ಸಂಬಂಧದ ಮಹತ್ವ. ೭ನೇ ಅಧ್ಯಾಯ ಕರ್ನಾಟಕದ ಆರ್ಥಿಕ ಸಮೀಕ್ಷೆ (Survery of the Karnataka Economy) : ಕರ್ನಾಟಕ ರಾಜ್ಯದ ಆರ್ಥಿಕತೆಯ ಒಂದು ವಿಸ್ತೃತ ಸಮೀಕ್ಷೆ, ನೈಸರ್ಗಿಕ ಸಂಪನ್ಮೂಲಗಳು, ಆದಾಯ, ಜನಸಂಖ್ಯೆ, ವಲಯವಾರು ಕರ್ನಾಟಕದ ಆರ್ಥಿಕ ಬೆಳವಣಿಗೆ, ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ, ಸಾರಿಗೆ, ಹಣ, ಬ್ಯಾಂಕು ಮತ್ತು ಸಾರ್ವಜನಿಕ ಹಣಕಾಸು ಇವುಗಳು ಸಮೀಕ್ಷೆ.

೧೯೯೭–೯೮ ರಲ್ಲಿ ಎರಡನೇ ವರ್ಷದ ಬಿಎ ತರಗತಿಯ ಪಠ್ಯಕ್ರಮ ಪರಿಷ್ಕಾರವಾಯಿತು. ಈ ಪತ್ರಿಕೆಯು ಹಿಂದಿನ ಪಠ್ಯಕ್ರಮಕ್ಕಿಂತ ಭಿನ್ನರೀತಿಯಲ್ಲಿ ರೂಪಿತವಾಗಿರುತ್ತದೆ. ಬಿಎ-II ಕಡ್ಡಾಯ ಪೇಪರ–೨ ಹಣ, ಬ್ಯಾಂಕು ಮತ್ತು ಸಾರ್ವಜನಿಕ ಹಣಕಾಸು (Money, Banking and Public Finance) ಇದು ಎಂಟು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ೧ನೇ ಅಧ್ಯಾಯ ಹಣದ:

ಮೂಲಭೂತ ಪರಿಕಲ್ಪನೆಗಳು ಮತ್ತು ಕಾರ್ಯಗಳು (Money : Basic Concepts and Functions): ಹಣದ ಪರಿಕಲ್ಪನೆ, ಹಣದ ಕಾರ್ಯಗಳು, ಹಣದ ವಿಧಗಳು, ಸಾಮಿಪ್ಯ ಹಣ, ಆಧುನಿಕ ಆರ್ಥಿಕ ಪದ್ಧತಿಯಲ್ಲಿ ಹಣದ ಪಾತ್ರ, ವ್ಯವಹಾರದ ಉದ್ದೇಶಗಳಿಗಾಗಿ ಮತ್ತು ಆಸ್ತಿಯ ಉದ್ದೇಶಗಳಿಗಾಗಿ ಹಣದ ಬೇಡಿಕೆ, ಹಣದ ಪೂರೈಕೆಯಲ್ಲಿ m1, m2, m3 ಪರಿಕಲ್ಪನೆಗಳು. ೨ನೇ ಅಧ್ಯಾಯ ಹಣಕಾಸಿನ ಸಿದ್ಧಾಂತ (Monetary Theory): ಹಣದ ಮೌಲ್ಯದ ಸಿದ್ಧಾಂತ, ಹಣದ ಮೌಲ್ಯವನ್ನು ಅಳೆಯುವ ಬದಲಾವಣೆಗಳು, ಸೂಚಿ ಸಂಖ್ಯೆಗಳು: ಅರ್ಥ ಮತ್ತು ರಚನೆ, ಸರಳ ಮತ್ತು ತೂಕಸೂಚಿ ಸಂಖ್ಯೆಗಳು, ಉಪಯೋಗ ಮತ್ತು ಮಿತಿಗಳು, ಹಣದ ಮೌಲ್ಯದ ಸಿದ್ಧಾಂತಗಳು, ಫೀಶರ್‌ರವರ ಬದಲಾವಣೆಯ ಸಮೀಕರಣ, ಕೇಂಬ್ರಿಜ್ ನಗದು ಸಮತೋಲನ ಮಾರ್ಗ, ಉಳಿತಾಯ ಮತ್ತು ಹೂಡಿಕೆ ಸಿದ್ಧಾಂತ, ಫ್ರಿಡ್‌ಮನ್‌ರ ಸಿದ್ಧಾಂತ. ೩ನೇ ಅಧ್ಯಾಯ ಬೆಲೆ ಸ್ಥಿರತೆ (Price Stability): ಅತಿಪ್ರಸರಣ: ಪರಿಕಲ್ಪನೆ, ವೆಚ್ಚ ತಳ್ಳಿಕೆ–ಅತಿಪ್ರಸರಣ, ಬೇಡಿಕೆ ಸೆಳೆತ ಅತಿಪ್ರಸರಣ, ಅತಿಪ್ರಸರಣ ಅಂತರ, ಕಾರಣಗಳು, ಪರಿಣಾಮಗಳು, ಪರಿಹಾರಗಳು. ಅನಪ್ರಸರಣದ ಅರ್ಥ, ಅನಪ್ರಸರಣದ ಅಂತರ, ಅತಿಪ್ರಸರಣ ಮತ್ತು ನಿರುದ್ಯೋಗ, ಫಿಲಿಪ್ಸ್‌ಕರ್ವ (Philips Curve) ಮತ್ತು ಅದರ ನೀತಿಯ ಅನ್ವಯ. ೪ನೇ ಅಧ್ಯಾಯ ಬ್ಯಾಂಕು (Banking): ಹಣದ ಮಾರುಕಟ್ಟೆ ಮತ್ತು ಬಂಡವಾಳ ಮಾರುಕಟ್ಟೆಗಳ ಅರ್ಥ ಮತ್ತು ಮಹತ್ವ, ವಾಣಿಜ್ಯ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕಿನ ಕಾರ್ಯಗಳು, ಪತ್ತು ನಿರ್ಮಾಣ, ಅಥಾವೆ ಪತ್ರಿಕೆಗಳ ಬದಲಾವಣೆ, ಒಂದು ಬ್ಯಾಂಕ ಹೂಡಿಕೆಯ ನೀತಿ ವಾಣಿಜ್ಯ ಬ್ಯಾಂಕುಗಳ ಸಿದ್ಧಾಂತಗಳು, ಶಾಖಾ ಬ್ಯಾಂಕಿಂಗ್, ಘಟಕ ಬ್ಯಾಂಕಿಂಗ್, ಮಿಶ್ರ ಬ್ಯಾಂಕಿಂಗ್‌ಗಳ ಪರಿಕಲ್ಪನೆಗಳು, ಅಭಿವೃದ್ಧಿ ಆರ್ಥಿಕತೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರ, ಬ್ಯಾಂಕೇತರ ಹಣಕಾಸಿನ ಸಂಸ್ಥೆಗಳು (Non Banking Financial Intermediaries -NBFI); ಅರ್ಥ, ವಿಧಗಳು, ಆರ್ಥಿಕ ಅಭಿವೃದ್ಧಿಯಲ್ಲಿ ಅವುಗಳ ಪಾತ್ರ, ಎಸ್.ಬಿ.ಎಫ್.ಡಿ. (NBFI) ಮತ್ತು ಹಣಕಾಸಿ ನೀತಿ. ೫ನೇ ಅಧ್ಯಾಯ ಕೇಂದ್ರ ಬ್ಯಾಂಕ್ (Central Banking): ಹಣಕಾಸು ನೀತಿಯ ಪರಿಕಲ್ಪನೆ, ಉದ್ದೇಶಗಳು ಮತ್ತು ಪತ್ತು ನಿಯಂತ್ರಣ ಪದ್ಧತಿಗಳು, ಗುಣಾತ್ಮಕ ಮತ್ತು ಪರಿಮಾಣಾತ್ಮಕ ಪದ್ಧತಿಗಳು, ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿಯಲ್ಲಿ ಕೇಂದ್ರ ಬ್ಯಾಂಕಿನ ಪಾತ್ರ. ೬ನೇ ಅಧ್ಯಾಯ ಸಾರ್ವಜನಿಕ ಆರ್ಥಿಕತೆಯ ಸ್ವರೂಪ ಮತ್ತು ಮಹತ್ವ (Nature and Scope of Public Economics): ಸಾರ್ವಜನಿಕ ಆರ್ಥಿಕತೆಯ ವ್ಯಾಖ್ಯೆ ಮತ್ತು ಸಾರ್ವಜನಿಕ ಹಣಕಾಸಿನ ಮಹತ್ವ, ಸಾರ್ವಜನಿಕ ಮತ್ತು ಖಾಸಗಿ ವಸ್ತುಗಳು, ಸಾರ್ವಜನಿಕ ಸರಕುಗಳ ಸಿದ್ಧಾಂತ. ೭ನೇ ಅಧ್ಯಾಯ ತೆರಿಗೆ (Taxation): ತೆರಿಗೆಯ ವ್ಯಾಖ್ಯೆ, ತೆರಿಗೆಯ ನಿಯಮ, ಪ್ರತ್ಯಕ್ಷ ಮತ್ತು ಪರೋಕ್ಷ ತೆರಿಗೆಗಳು, ತೆರಿಗೆ ಪದ್ಧತಿಗಳು: ಪ್ರಗತಿಪರ ತೆರಿಗೆಗಳು, ಪ್ರಮಾಣಾನುಗಣ, ಪುರೋಗಾಮಿ ತೆರಿಗೆ, ತೆರಿಗೆ ತತ್ವಗಳ ಸಿದ್ಧಾಂತಗಳು, ಲಾಭಗಳ ಮಾರ್ಗಗಳು ಮತ್ತು ತೆರಿಗೆಯ ಅರ್ಹತೆಯ ಮಾರ್ಗಗಳು, ತೆರಿಗೆ ಸಾಮರ್ಥ್ಯ, ತೆರಿಗೆ ಪ್ರಯತ್ನ, ತೆರಿಗೆ ಸ್ಥಿತಿಸ್ಥಾಪಕತೆ, ತೆರಿಗೆ ಪರ ಮತ್ತು ವಿರೋಧ ಪರಿಕಲ್ಪನೆಗಳು, ಸಾಂಪ್ರದಾಯಿಕ

